# ಪಾರ್ತಿಸುಬ್ಬನ ಯಕ್ಷಗಾನಗಳು



ಸಂಪಾದಕ

**ಕುಕ್ಕಿಲ ಕೃಷ್ಣಭಟ್ಟ**



ಕನ್ನಡ ಅಧ್ಯಯನ ಸಂಸ್ಥೆ

ಮೈಸೂರು ವಿಶ್ವವಿದ್ಯಾನಿಲಯ

**1975**

## ಸಮರ್ಪಣೆ

ಶ್ರೀ ಧರ್ಮಸ್ಥಳ ಕ್ಷೇತ್ರದ

ಧರ್ಮಾಧಿಕಾರಿಗಳಾದ

ಶ್ರೀ ವೀರೇಂದ್ರ ಹೆಗ್ಗಡೆಯವರಿಗೆ

ಭಕ್ತಿಪೂರ್ವಕ

ಹತ್ತು ಯಕ್ಷಗಾನ ಕೃತಿಗಳ ಜೊತೆಗೆ 'ಸಭಾಲಕ್ಷಣ' ಎಂಬ ಯಕ್ಷಗಾನ ಗ್ರಂಥವನ್ನೂ ಸೇರಿಸಿ ಇಲ್ಲಿ ಕೊಡಲಾಗಿದೆ. 'ಜನಪ್ರಿಯ' ಆವೃತ್ತಿಗಳಾಗಿ, ಸರಿಯಾಗಿ ಸಂಪಾದಿತವಾಗದೆ ಅಚ್ಚಾಗಿ ಮಾರುಕಟ್ಟೆಗಳಲ್ಲಿ ದೊರೆಯುತ್ತಿದ್ದ ಯಕ್ಷಗಾನ ಪ್ರತಿಗಳೇ ಹೆಚ್ಚು. ಈ ನಿಟ್ಟಿನಲ್ಲಿ ಪಾರ್ತಿ ಸುಬ್ಬನ ಯಕ್ಷಗಾನಗಳ ಈ ಸಂಪುಟ ಒಂದು ಹೊಸ ಅಧ್ಯಾಯ. ಮೊದಲಬಾರಿಗೆ ಹಲವು ಪ್ರತಿಗಳ ಆಧಾರದ ಮೇಲೆ ಯಕ್ಷಗಾನ ನಾಟಕಗಳನ್ನು ಸಂಪಾದಿಸಿ ಕೊಡುತ್ತಿರುವುದು ನಾನು ತಿಳಿದಮಟ್ಟಿಗೆ ಇದೇ ಮೊದಲು. ಪಾರ್ತಿಸುಬ್ಬನಂಥ ಪ್ರಮುಖ ಯಕ್ಷಗಾನ ಕವಿಯ ಕೃತಿಗಳೆಲ್ಲ ಒಂದೆಡೆ ದೊರೆಯುತ್ತಿರುವುದು ಗಮನಾರ್ಹ ವಿಷಯ ವಾಗಿದೆ.

ನಮ್ಮ ಯಕ್ಷಗಾನ ಕ್ಷೇತ್ರದ ಗಣ್ಯವಿದ್ವಾಂಸರಲ್ಲೊಬ್ಬರಾದ ಶ್ರೀ ಕುಕ್ಕಿಲ ಕೃಷ್ಣ ಭಟ್ಟರು ತಾವು ಅಪಾರ ಶ್ರಮದಿಂದ ಸಂಗ್ರಹಿಸಿದ ಪ್ರತಿಗಳನ್ನು ಆಧರಿಸಿ ಪಾರ್ತಿ ಸುಬ್ಬನ ಯಕ್ಷಗಾನ ಕೃತಿಗಳನ್ನು ಅತ್ಯಂತ ಸಮರ್ಥ ರೀತಿಯಲ್ಲಿ ಇಲ್ಲಿ ಸಂಪಾದಿಸಿಕೊಟ್ಟಿದ್ದಾರೆ. ಅನೇಕ ವರ್ಷಗಳ ಕಾಲ ಯಕ್ಷಗಾನ ಕ್ಷೇತ್ರದೊಡನೆ ನಿಕಟ ಸಂಬಂಧವನ್ನು ಇಟ್ಟು ಕೊಂಡಿದ್ದ ಅವರು ಆ ವಿಷಯದ ಮೇಲೆ ಅಧಿಕಾರವಾಣಿಯಿಂದ ಮಾತನಾಡಬಲ್ಲ ವಿದ್ವತ್ತು ಅನುಭವಗಳನ್ನು ಪಡೆದುಕೊಂಡಿದ್ದಾರೆ. ಅವರ ಆಳವಾದ ಸಂಶೋಧನೆ, ವಿದ್ವದ್ದೃಷ್ಟಿಗಳಿಗೆ ಅವರು 'ಪಾರ್ತಿ ಸುಬ್ಬನ ಯಕ್ಷಗಾನ' ಗ್ರಂಥಕ್ಕೆ ಬರೆದ ಪೀಠಿಕೆ ಒಳ್ಳೆಯ ನಿದರ್ಶನವಾಗಿದೆ.

ಶ್ರೀ ಕುಕ್ಕಿಲ ಕೃಷ್ಣಭಟ್ಟರು ಸಂಗೀತ ಶಾಸ್ತ್ರ ಹಾಗೂ ಛಂದಶ್ಶಾಸ್ತ್ರಗಳಲ್ಲಿ ವಿಶೇಷ ತಜ್ಞತೆಯನ್ನು ಪಡೆದವರು. ಯಕ್ಷಗಾನವನ್ನು ಶಾಸ್ತ್ರೀಯ ಪರಂಪರೆಯಲ್ಲಿ ಅನೇಕ ವರ್ಷ ಕಾಲ ಹಾಡಿಕೊಂಡು ಬಂದವರು. ಸಂಸ್ಕೃತ ವಿದ್ವಾಂಸರೂ ಆದ ಅವರು ಭರತನ ನಾಟ್ಯ ಶಾಸ್ತ್ರ ಅಭ್ಯಸಿಸಿ ಸಂಶೋಧನಾತ್ಮಕ ಲೇಖನಗಳನ್ನು ಪ್ರಕಟಿಸಿದ್ದಾರೆ. ಅವರ 'ಭಾರತೀಯ ಸಂಗೀತ ಶಾಸ್ತ್ರ' (೧೯೭೧) ಎಂಬ ಗ್ರಂಥ ಆ ಕ್ಷೇತ್ರದ ಒಂದು ಗಣ್ಯ ಕೃತಿಯಾಗಿದೆ. 'ಯಕ್ಷಗಾನ'ವನ್ನು ಕುರಿತ ಅವರ ವಿವೇಚನೆ, ವಿಶ್ಲೇಷಣೆಗಳು ಆ ಕ್ಷೇತ್ರದ ಮೇಲೆ ಹೊಸ ಬೆಳಕು ಚೆಲ್ಲುವುದರಲ್ಲಿ ಅನುಮಾನವಿಲ್ಲ. ಪಾರ್ತಿ ಸುಬ್ಬನಂಥ ಶ್ರೇಷ್ಠ ಕವಿಯ ಸಮಗ್ರ ಕೃತಿಗಳನ್ನು ಸಂಪಾದಿಸಿಕೊಟ್ಟ ಅವರು ಕನ್ನಡಿಗರ ಆದರಾಭಿಮಾನಗಳಿಗೆ ಪಾತ್ರರಾಗಿ ದ್ದಾರೆ.

ಜೀ. ಶಂ. ಪರಮಶಿವಯ್ಯ

# ವಿಷಯಸೂಚಿಕೆ

# ಮುನ್ನುಡಿ

ಕರ್ನಾಟಕದಲ್ಲಿ ಜಾನಪದ ಅಧ್ಯಯನದ ಬಗ್ಗೆ ಹೊಸ ಆಸಕ್ತಿ ಉತ್ಸಾಹಗಳು ತೋರಿಬರುತ್ತಿರುವುದು ಗಮನಾರ್ಹವಾದ ವಿಷಯ. ಶಾಸ್ತ್ರೀಯವಾದ ತಳಹದಿಯ ಮೇಲೆ ಜಾನಪದ ಸಂಗ್ರಹ, ಸಂಶೋಧನೆಗಳು ನೆಲೆಗೊಳ್ಳಬೇಕಾಗಿದೆ. ಸಂಸ್ಕೃತಿಯ ತಾಯಿಬೇರಾದ ಜಾನಪದದ ಬಗೆಗೆ ಭಾರತದಲ್ಲಿ ನಿರ್ಲಕ್ಷ್ಯವೇ ಹೆಚ್ಚಾಗಿದ್ದು ಈವರೆಗೆ ನಡೆದಿರುವ ಸಂಗ್ರಹಕಾರ್ಯ ತುಂಬ ಅಸಮಗ್ರ ಎನಿಸಿದೆ. ಉತ್ತರ ಭಾರತದ ಅನೇಕ ರಾಜ್ಯಗಳಲ್ಲಿ ಕೆಲವು ಜಾನಪದ ಪ್ರಕಾರಗಳಿಗೆ ಸಂಬಂಧಿಸಿದಂತೆ ಸಂಶೋಧನೆಗಳು ನಡೆದಿದ್ದರೂ ಸಮಗ್ರ ಜಾನಪದದ ಬಗೆಗೆ ವ್ಯಾಪಕವಾದ ಕಾರ್ಯ ಇನ್ನೂ ಆಗಬೇಕಾಗಿದೆ. 'ಭಾರತ ಜಾನಪದದ ತೌರು' ಎಂಬ ಅಂಶವನ್ನು ಪಾಶ್ಚಾತ್ಯ ಜಾನಪದ ವಿದ್ವಾಂಸರು ಒಪ್ಪಿಕೊಂಡರೂ ಸಂಗ್ರಹ, ಅಧ್ಯಯನಗಳು ಇನ್ನೂ ಸಮರ್ಪಕ ರೀತಿಯಲ್ಲಿ ವೈಜ್ಞಾನಿಕವಾಗಿ ಭಾರತದಲ್ಲಿ ಆಗಬೇಕಾಗಿದೆ ಎಂಬ ವಿಷಯವನ್ನೂ ಸ್ಪಷ್ಟಪಡಿಸಿದ್ದಾರೆ. ಜಾನಪದ ಕ್ಷೇತ್ರದಲ್ಲಿ ಕೈಯಾಡಿಸಿದ ಯಾವ ವಿದ್ವಾಂಸನಾದರೂ ಈ ಮಾತನ್ನು ಒಪ್ಪಿಕೊಳ್ಳಬೇಕಾಗಿದೆ.

ಜಾನಪದದ ಸಾಹಿತ್ಯಿಕ ಬಗೆ, ಭಾಷಿಕ ಬಗೆ, ವೈಜ್ಞಾನಿಕ ಬಗೆ, ಕ್ರಿಯಾತ್ಮಕ ಬಗೆಗಳಿಗೆ ಸಂಬಂಧಿಸಿದಂತೆ ಕತೆ, ಗೀತೆ, ಲಾವಣಿ, ಒಗಟು, ಗಾದೆ, ನಂಬಿಕೆ, ಸಂಪ್ರದಾಯ, ವೈದ್ಯ, ಅಡುಗೆ, ಉಡುಗೆ, ತೊಡುಗೆ, ವೃತ್ತಿ, ಮಾಟ, ಮಂತ್ರ, ನೃತ್ಯ, ನಾಟಕ, ಚಿತ್ರ, ಶಿಲ್ಪ, ಆಟ, ಕೂಟ, ನಡೆ, ನುಡಿ ಮುಂತಾಗಿ ಜನಪದಜೀವನದ ಎಲ್ಲ ಸ್ತರಗಳನ್ನೂ ಒಳಗೊಳ್ಳುವ ವಿಸ್ತಾರ, ವೈವಿಧ್ಯದ ಹಿನ್ನೆಲೆಯಲ್ಲಿ ಪರಿಶೋಧನೆ ಸಂರಕ್ಷಣೆಗಳು ನಡೆಯಬೇಕಾದುದು ಅತ್ಯಂತ ಆವಶ್ಯಕವಾದ ವಿಷಯವಾಗಿದೆ. ವಿಶ್ವವಿದ್ಯಾನಿಲಯಗಳಂತಹ ಶ್ರೇಷ್ಠ ಅಧ್ಯಯನ ಕೇಂದ್ರಗಳು ಈ ಕಾರ್ಯವನ್ನು ಕೈಗೊಂಡಾಗ ಮಾತ್ರ ಅದು ಸಾಕಷ್ಟು ಸಮರ್ಪಕವಾಗಿ, ಶಾಸ್ತ್ರೀಯವಾಗಿ, ಸುವ್ಯವಸ್ಥಿತವಾಗಿ ನಡೆಯಲು ಸಾಧ್ಯವಾಗುತ್ತದೆ. ಅನೇಕ ಪಾಶ್ಚಾತ್ಯ ವಿಶ್ವವಿದ್ಯಾನಿಲಯಗಳು ಜಾನಪದ ವಸ್ತು ಸಂಗ್ರಹಾಲಯ, ಸಂಶೋಧನಾಲಯ, ಅಧ್ಯಯನ ಕೇಂದ್ರಗಳ ವ್ಯವಸ್ಥೆಯನ್ನು ಎಷ್ಟೋ ವರ್ಷಗಳ ಹಿಂದೆಯೇ ಮಾಡಿವೆ ; ಶಾಲಾಕಾಲೇಜುಗಳಲ್ಲಿ ಜಾನಪದ ಅಧ್ಯಯನ ವಿಷಯಗಳಲ್ಲಿ ಒಂದಾಗಿ ಸ್ವೀಕೃತವಾಗಿದೆ.

ಕರ್ನಾಟಕದಲ್ಲಿ ಜಾನಪದ ಸಂಗ್ರಹ ಕಳೆದ ಶತಮಾನದಿಂದಲೇ ಆರಂಭವಾದರೂ ಗೀತೆ ಮತ್ತು ಗಾದೆಗಳಿಗೆ ಸಂಬಂಧಿಸಿದಂತೆ ಮಾತ್ರ ಆ ಕಾರ್ಯ ತಕ್ಕಮಟ್ಟಿಗೆ ಆಗಿದೆ.

ಜಾನಪದದ ಉಳಿದ ಪ್ರಕಾರಗಳತ್ತ ಯಾರೂ ವಿಶೇಷವಾದ ಆಸಕ್ತಿಯನ್ನು ಹರಿಸದೆ ಆ ಕ್ಷೇತ್ರದಲ್ಲಿ ಆಗಬೇಕಾದ ಕೆಲಸ ಅಪಾರವಾಗಿ ಉಳಿದಿದೆ. ಗೀತೆ, ಗಾದೆಗಳನ್ನೊಳಗೊಂಡಂತೆ ಜಾನಪದದ ಉಳಿದ ಎಲ್ಲ ಪ್ರಮುಖ ಪ್ರಕಾರಗಳ ವ್ಯಾಪಕವಾದ ಸಂಗ್ರಹಕಾರ್ಯ ತ್ವರಿತ ವಾಗಿ ಆಗಬೇಕಾಗಿದೆ.

ಕರ್ನಾಟಕದಲ್ಲಿ ಜಾನಪದ ಅಧ್ಯಯನಕ್ಕೆ ಒಂದು ಸ್ಥಿರವಾದ ಬುನಾದಿಯನ್ನು ಪ್ರಪ್ರಥಮವಾಗಿ ಹಾಕಿಕೊಟ್ಟ ಕೀರ್ತಿ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಗೆ ಸಲ್ಲಬೇಕು. ಜಾನಪದ ಸಂಬಂಧವಾದ ಚಟುವಟಿಕೆಗಳು ಇಲ್ಲಿ ಸಕ್ರಮವಾಗಿ ಆರಂಭವಾಗಿ ವ್ಯಾಪಕವಾದ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳಲಾಗಿದೆ. ಏಳು ವರ್ಷ ಗಳ ಹಿಂದೆಯೇ ಜಾನಪದವನ್ನು ಅಧ್ಯಯನ ವಿಷಯವನ್ನಾಗಿ ಕನ್ನಡ ಎಂ. ಎ. ತರಗತಿಗೆ ಅಳವಡಿಸಿದ್ದರ ಜೊತೆಗೆ ಕಳೆದ ನಾಲ್ಕು ವರ್ಷಗಳಿಂದ ಜಾನಪದ ಡಿಪ್ಲೊಮಾ ತರಗತಿ ಗಳನ್ನು ಸಹ ನಡೆಸಿಕೊಂಡು ಬರಲಾಗುತ್ತಿದೆ. ಜಾನಪದ ಸಂಶೋಧನೆ, ಜಾನಪದ ವಸ್ತುಸಂಗ್ರಹಾಲಯದ ಸ್ಥಾಪನೆಯ ಮೂಲಕ ಕನ್ನಡ ಅಧ್ಯಯನ ಸಂಸ್ಥೆ ಉತ್ತಮ ರೀತಿಯಲ್ಲಿ ಜಾನಪದ ಸಂವರ್ಧನ ಕಾರ್ಯವನ್ನು ಕೈಗೊಂಡಿದೆ. ಅಪೂರ್ವ ಜನಪದ ಗೀತೆ ಗಳನ್ನು ಧ್ವನಿಮುದ್ರಣ ಮಾಡಿ ಸಂರಕ್ಷಿಸಲಾಗುತ್ತಿದೆ. ಇದರ ಜೊತೆಗೆ ಇತರ ಸಂಗ್ರಹಕರು ಕೈಗೊಳ್ಳುವ ಜಾನಪದ ಸಂಬಂಧವಾದ ಸಂಶೋಧನೆಗಳಿಗೂ ವಿಶೇಷ ಪ್ರೋತ್ಸಾಹವನ್ನು ನೀಡಲಾಗುತ್ತಿದೆ. ಶಾಸ್ತ್ರೀಯ ಪ್ರಕಟಣೆಗಳಿಗೆ ಆದ್ಯಗಮನ ಕೊಡಲಾಗುತ್ತಿದೆ. ಇದೆಲ್ಲಕ್ಕೂ ಕಿರೀಟಪ್ರಾಯವಾಗಿ ಭಾರತದಲ್ಲಿಯೇ ಮೊದಲ ಸಲಕ್ಕೆ ಜಾನಪದ ಎಂ. ಎ. ತರಗತಿಗಳನ್ನು ೧೯೭೪–೭೫ ರಿಂದ ಪ್ರಾರಂಭಿಸಲಾಗಿದೆ.

'ಪಾರ್ತಿಸುಬ್ಬನ ಯಕ್ಷಗಾನಗಳು' ಜಾನಪದ ಮಾಲೆಯಲ್ಲಿ ಪ್ರಕಟವಾಗುತ್ತಿರುವ ಮುವ್ವತ್ತನೆಯ ಕೃತಿಯಾಗಿದೆ; ಯಕ್ಷಗಾನಗಳಿಗೆ ಸಂಬಂಧಪಟ್ಟ ಮೊದಲನೆಯ ಗ್ರಂಥ ವಾಗಿದೆ. ಪಾರ್ತಿಸುಬ್ಬನ ಯಕ್ಷಗಾನಗಳ ಪ್ರತಿಗಳನ್ನು ಕಲೆಹಾಕಿ, ಶಾಸ್ತ್ರೀಯವಾಗಿ ಸಂಪಾದಿಸಿಕೊಟ್ಟವರು ಈ ಕ್ಷೇತ್ರದ ಗಣ್ಯವಿದ್ವಾಂಸರಾದ ಶ್ರೀ ಕುಕ್ಕಿಲ ಕೃಷ್ಣಭಟ್ಟರು. ಈ ಬೃಹತ್ ಗ್ರಂಥವನ್ನು ಸಂಪಾದಿಸಿಕೊಟ್ಟ ಶ್ರೀಯುತರಿಗೆ ನಮ್ಮ ವಂದನೆಗಳು ಸಲ್ಲುತ್ತವೆ.

ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು–೬

**ಹಾ. ಮಾ. ನಾಯಕ**
ಪ್ರಧಾನ ಸಂಪಾದಕ

# ವಿಭಾಗ ಸಂಪಾದಕರ ಮಾತು

'ಯಕ್ಷಗಾನ ಬಯಲಾಟ' ನಮ್ಮ ಉನ್ನತ ಜನಪದ ನಾಟಕ ಪರಂಪರೆಯನ್ನು ಸಾರುವ ಅಪೂರ್ವ ಜನಪದ ಕಲೆಯಾಗಿದೆ. ಸಾಹಿತ್ಯ, ಸಂಗೀತ, ನೃತ್ಯ, ಚಿತ್ರ, ಶಿಲ್ಪ ಈ ಎಲ್ಲ ದೃಷ್ಟಿಗಳಿಂದಲೂ ಅಧ್ಯಯನ ಮಾಡಬಹುದಾದ ಈ ಸಂಕೀರ್ಣಕಲೆ ಕರ್ನಾಟಕದ ಕರಾವಳಿಯ ಭಾಗದಲ್ಲಿ ಸಾಕಷ್ಟು ಪರಿಷ್ಕಾರಗೊಂಡು ಬೆಳೆದಿದೆ. ಮಾತುಗಾರಿಕೆಯ ಮೋಡಿ, ವೇಷಭೂಷಣಗಳ ವಿಜೃಂಭಣೆ, ನೃತ್ಯ, ಗೀತಗಳ ಆಕರ್ಷಣೆ ಇವುಗಳಿಂದಾಗಿ ಈ ಭಾಗದ ಯಕ್ಷಗಾನ ಕಲೆ ತನ್ನದೇ ಆದ ವೈಶಿಷ್ಟ್ಯವನ್ನು ಸಾಧಿಸಿಕೊಳ್ಳಲು ಸಮರ್ಥ ವಾಗಿದೆ. ಕರ್ನಾಟಕದ ಈ ಕಲೆಯನ್ನು ಬಯಲು ಸೀಮೆಯಲ್ಲಿ ಮೂಡಲಪಾಯ ವೆಂದೂ, ಮಲೆನಾಡಿನ ಸೆರಗಿನಲ್ಲಿ ಘಟ್ಟದ ಕೋರೆ ಎಂದೂ, ಘಟ್ಟದ ಕೆಳಗೆ ಪಡುವಲ ಪಾಯವೆಂದೂ ಗುರುತಿಸಲಾಗುತ್ತದೆ. ಉತ್ತರ ಕರ್ನಾಟಕ ದಕ್ಷಿಣ ಕರ್ನಾಟಕಗಳೆರಡರ ರಲ್ಲಿಯೂ ಈ ಸಂಪ್ರದಾಯ ಒಂದೇ. ಉತ್ತರ ಕರ್ನಾಟಕದಲ್ಲಿ ಮಾತ್ರ ಅಲ್ಲಿನ ಸಣ್ಣಾಟ ಗಳ ಪ್ರಾಚುರ್ಯದಿಂದ ಈ ಕಲೆಯನ್ನು 'ಮೂಡಲಪಾಯ ದೊಡ್ಡಾಟ' ಎನ್ನಲಾಗಿದೆ.

ಮೂಡಲಪಾಯ–ಪಡುವಲಪಾಯಗಳ ಅಂತರ ಪ್ರಮುಖವಾಗಿ ಸಂಭಾಷಣೆಗೆ ಸಂಬಂಧಿಸಿದುದು. ಪಡುವಲಪಾಯದಲ್ಲಿ ಭಾಗವತರ ಹಾಡುಗಾರಿಕೆಗೆ ಪಾತ್ರಧಾರಿಯ ಮಾತು ವ್ಯಾಖ್ಯಾನರೂಪದಲ್ಲಿರುತ್ತದೆ. ಅಲ್ಲಿನ ಸಂಭಾಷಣೆ ಕವಿಕೃತವಾದುದಲ್ಲ; ವಿದನ ಪ್ರತಿಭೆ, ಅನುಭವ, ವಾಕ್ಚಾತುರ್ಯಗಳನ್ನವಲಂಬಿಸಿ ಕಲಾವಿದ ತಾನೇ ಮಾತಾಡು ತ್ತಾನೆ. ಈ ಮಾತುಗಾರಿಕೆಗೂ ಒಂದು ಪರಂಪರೆ ಇಲ್ಲದಿಲ್ಲ. ಪೂರ್ವ ಕಲಾವಿದರ ಮಾತಿನ ಸರಣಿ, ಗತ್ತು, ರೀತಿ, ನೀತಿಗಳನ್ನು ಮುಂದಿನ ಪೀಳಿಗೆ ಅನುಕರಿಸಿಕೊಂಡುಬರಲು ಸಾಧ್ಯ. ನಟನಿಗೆ ಮಾತುಗಾರಿಕೆಯ ಸ್ವಾತಂತ್ರ್ಯವಿರುವುದರಿಂದ ಇಲ್ಲಿ ಅನೇಕ ಸಂದರ್ಭಗಳಲ್ಲಿ ಔಚಿತ್ಯದ ಎಲ್ಲೆ ಮೀರಿದರೂ ಆಶ್ಚರ್ಯವಿಲ್ಲ.

ಮೂಡಲಪಾಯದ ಸಂಭಾಷಣೆ ಕಲಾವಿದನಿಗೆ ಕಡಿವಾಣ ಹಾಕುತ್ತದೆ. ಇಲ್ಲಿ ಪೂರ್ವಸಿದ್ಧವಾದ ಸಂಭಾಷಣೆ ಪ್ರತಿಗಳಲ್ಲೇ ಲಭ್ಯವಾಗುತ್ತದೆ. ಕಲಾವಿದ ಅದನ್ನು ಕಂಠ ಪಾಠ ಮಾಡಿಕೊಂಡು ರಂಗದ ಮೇಲೆ ಒಪ್ಪಿಸಬೇಕು, ಅಷ್ಟೆ. ಇಲ್ಲಿನ ಸಂಭಾಷಣೆಯಲ್ಲಿ ಕಾಣಬರುವ ಅಂತ್ಯಪ್ರಾಸ ಮೋಹ ಅನೇಕ ಸಂದರ್ಭಗಳಲ್ಲಿ ಕೃತಕವಾಗಿ ತೋರುತ್ತದೆ, ಅರ್ಥಹೀನವಾಗುತ್ತದೆ. ಪಡುವಲಪಾಯ – ಮೂಡಲಪಾಯಗಳ ಸಾಹಿತ್ಯದ ಈ ಪ್ರಮುಖ ವ್ಯತ್ಯಾಸವನ್ನು ಬಿಟ್ಟರೆ ಯಕ್ಷಗಾನ ಸಂಪ್ರದಾಯವೆಂಬುದು ಒಂದೇ ಎಂಬುದನ್ನು ಮರೆಯುವಂತಿಲ್ಲ. ಮೂಡಲಪಾಯದವರು ಬಾರಿಸುವ 'ಮುಖವೀಣೆ',

ಪಡುವಲಪಾಯದ ಚಂಡೆ, ತೆಂಕತಿಟ್ಟಿನ ಜಾಗಟೆ, ಬಡಗತಿಟ್ಟಿನ 'ತಾಳ'ಗಳ ಆಧಾರದ ಮೇಲೆ ಇವುಗಳು ವಿಭಿನ್ನ ಕಲೆಗಳೆನ್ನಲಾಗುವುದಿಲ್ಲ. ಈ ವಾದ್ಯವಿಶೇಷಗಳು ಬಾಹ್ಯ ಪರಿಕರಗಳಷ್ಟೆ. ಯಕ್ಷಗಾನದ ಜೀವಸೂತ್ರ 'ಮದ್ದಲೆ', ಎಲ್ಲ ಸಂಪ್ರದಾಯದಲ್ಲಿಯೂ ಸಾಮಾನ್ಯವಾದುದು ಎಂಬುದು ಇಲ್ಲಿ ಗಮನಾರ್ಹ.

ಯಕ್ಷಗಾನ ವೇಷಭೂಷಣಗಳಲ್ಲಿ ಬಡಗತಿಟ್ಟಿನ 'ಸಗಡಿ'ಯನ್ನು ಬಿಟ್ಟರೆ ಎದ್ದು ತೋರುವ ವ್ಯತ್ಯಾಸಗಳೇನೂ ಇಲ್ಲ. ಬೇರೆ ಬೇರೆಯ ವೈವಿಧ್ಯ ಆಕಾರಗಳಲ್ಲಿ ಕಿರೀಟ, ಭುಜಕೀರ್ತಿ, ಎದೆಹಾರ, ವೀರಗಾಸೆ, ನಡುಪಟ್ಟಿ, ಕೈಪಟ್ಟಿಗಳು ಎಲ್ಲ ಕಡೆಯೂ ಇವೆ. 'ಹನುಮನಾಯಕ' ಎಲ್ಲ ಸಂಪ್ರದಾಯಗಳಲ್ಲೂ ಕಂಡುಬರುತ್ತಾನೆ. ಭಾಗವತರು ಎಲ್ಲೆಡೆಯೂ ಅನಿವಾರ್ಯ. ಮೂಡಲಪಾಯದಲ್ಲಿ ಭಾಗವತರ ಜೊತೆಗೆ ಹಿಮ್ಮೇಳದವರು ಸೇರಿಕೊಳ್ಳುತ್ತಾರೆ, ಪಡುವಲಪಾಯದಲ್ಲಿ ಭಾಗವತರೊಬ್ಬರೇ ಹಾಡುತ್ತಾರೆ. ಮೂಡಲ ಪಾಯದಲ್ಲಿ ಭಾಗವತರು ಇತರರು ರಂಗದ ಎಡಬದಿಯಲ್ಲಿ ನಿಲ್ಲುತ್ತಾರೆ ; ಪಡುವಲಪಾಯ ದಲ್ಲಿ ರಂಗದ ಹಿಂಬದಿಯಲ್ಲಿ ಕೂರುತ್ತಾರೆ. ಇವೆಲ್ಲ ಪ್ರಾದೇಶಿಕ ವ್ಯತ್ಯಾಸಗಳಷ್ಟೇ ಎಂದು ಇಟ್ಟುಕೊಳ್ಳಬೇಕು.

ಕರ್ನಾಟಕ ಯಕ್ಷಗಾನ ಸಂಪ್ರದಾಯಗಳಲ್ಲಿ ಕಾಣಬರುವ ಮೇಲಿನ ಸ್ಥೂಲ ವ್ಯತ್ಯಾಸಗಳ ಜೊತೆಗೆ, ಯಕ್ಷಗಾನದ ಪ್ರತಿರೂಪವೇ ಆದ ಆಂಧ್ರದ ವೀಧಿನಾಟಕ, ತಮಿಳುನಾಡಿನ ತೆರುಕೂತ್ತುಗಳ ಜೊತೆಗೆ ಕೇರಳದ ಕಥಕ್ಕಳಿಯನ್ನೂ ತೌಲನಿಕ ಅಧ್ಯಯನಕ್ಕೆ ಒಳಪಡಿಸಬೇಕಾದ ಅಗತ್ಯವಿದೆ. ಏಕೆಂದರೆ ಇವೆಲ್ಲ ಯಾವುದೋ ಮೂಲ ದ್ರಾವಿಡ ಕಲೆಯಿಂದ ಕವಲೊಡೆದ ಭಿನ್ನ ಭಿನ್ನ ರೂಪಗಳಷ್ಟೆ. 'ಸಾಹಿತ್ಯ'ದ ಭಾಗ ವೊಂದನ್ನು ಹೊರತು ಉಳಿದ ಅಂಶಗಳಲ್ಲಿ ಒಂದು 'ದ್ರಾವಿಡ ಕಲೆ'ಯಾಗಿ ಇವುಗಳನ್ನು ನೋಡುವುದು ಅನಿವಾರ್ಯವಾಗಿದೆ.

ಯಕ್ಷಗಾನ ಬಯಲಾಟ ಒಂದು ನೃತ್ಯ ನಾಟಕ. 'ನಾಟಕ'ದ ಅಂಶ ಬಂದಾಗ, ಅದರ 'ಸಾಹಿತ್ಯ'ದ ಭಾಗ ಮುಖ್ಯವೆನಿಸುತ್ತದೆ. ಕರ್ನಾಟಕದಾದ್ಯಂತ ಯಕ್ಷಗಾನ ಪ್ರತಿಗಳು ದೊರೆಯುತ್ತವೆ. ಕೆಲವು ಕೃತಿಗಳಲ್ಲಿ ಕವಿ ಅಜ್ಞಾತನಾಗಿ ಉಳಿಯುತ್ತಾನೆ. ಕೆಲವರ ಕರ್ತೃ ಯಾರು ಎಂಬುದನ್ನು ಸ್ಪಷ್ಟವಾಗಿ ಗುರುತಿಸಬಹುದು. ಕರಾವಳಿಯ ಯಕ್ಷಗಾನ ಸಂಪ್ರದಾಯಕ್ಕೆ ಸಂಬಂಧಪಟ್ಟಂತೆ ಕವಿಗಳ ಹೆಸರು ಬಹುಮಟ್ಟಿಗೆ ಲಭ್ಯ ವಾಗುತ್ತಿರುವುದು ಒಂದು ಅಭಿಮಾನದ ವಿಷಯ.

ನಮ್ಮ ಯಕ್ಷಗಾನ ಚರಿತ್ರೆಯಲ್ಲಿ ಪಾರ್ತಿಸುಬ್ಬನ ಹೆಸರು ಅತ್ಯಂತ ಗಣ್ಯವಾದುದು. ಕರ್ನಾಟಕದ ಯಕ್ಷಗಾನ ಕಲೆಗೆ ಹೊಸ ಜೀವವನ್ನು ತುಂಬಿ ಬೆಳಸಿದ ಕೀರ್ತಿ ಅವನದು. ಶ್ರೇಷ್ಠ ಕವಿಯೂ ಆಗಿದ್ದ ಪಾರ್ತಿ ಸುಬ್ಬ ಅನೇಕ ಯಕ್ಷಗಾನ ಕೃತಿಗಳ ಕರ್ತೃವೂ ಆಗಿದ್ದಾನೆ. 'ಸಭಾಲಕ್ಷಣ'ವೆಂಬ ಯಕ್ಷಗಾನ ಲಕ್ಷಣಗ್ರಂಥದ ಕರ್ತೃವೂ ಆಗಿದ್ದಾನೆ. ಅವನು ರಚಿಸಿದ

# ಪೀಠಿಕೆ

ಭಾರತೀಯ ಸಂಸ್ಕೃತಿಯಲ್ಲಿ ಸಂಗೀತ, ನಾಟ್ಯ ಇವೆರಡೂ ದೇವರ ಕಲೆಗಳು ಎಂದೇ ಪರಿಗಣಿಸಲ್ಪಟ್ಟವೆ. ಹಾಡದ, ಕುಣಿಯದ ದೇವರೇ ನಮ್ಮಲ್ಲಿಲ್ಲವೆನ್ನಬಹುದು. ದೇವರೇ ಆ ಕಲೆಗಳ ಆರಾಧಕನು. ಆದುದರಿಂದ ದೇವರನ್ನು ಆ ಕಲೆಗಳ ಮೂಲಕ ಆರಾಧಿಸುವ ಸಂಪ್ರದಾಯವು ಬಹಳ ಹಿಂದಿನಿಂದಲೇ ನಡೆದುಬಂದಿದೆ. ಭರತಮುನಿಯು ತನ್ನ ಮೊದಲ ನಾಟ್ಯಪ್ರಯೋಗವನ್ನು ಪರಶಿವನ ಸೇವಾರ್ಥವಾಗಿ ಅವನ ಮುಂದೆ ಆಡಿ ತೋರಿಸಿದನಂತೆ. ಶೈವ ವೈದಿಕ ಧರ್ಮಗಳ ಪ್ರಾಬಲ್ಯವಿದ್ದ ಆ ಪೂರ್ವಕಾಲದಲ್ಲಿ ದೇವ ಸ್ಥಾನಗಳ ನಾಟ್ಯಾರಾಧನೆ ಸಂಸ್ಕೃತ ನಾಟಕಗಳ ಮೂಲಕ ನಡೆಯುತ್ತಿದ್ದರೆ, ಗೀತಾ ರಾಧನೆಗಾಗಿ 'ದೇಶಿಕಾರ' ಪ್ರಬಂಧ ಮತ್ತು 'ದೇವಾರ' ಪ್ರಬಂಧಗಳೆಂಬ ಗೀತವಿಶೇಷ ಗಳು ಪ್ರಸಿದ್ಧವಾಗಿದ್ದವು. ಇವು ದೇವಸ್ಥಾನಗಳ ಆರಾಧನಾರ್ಥವಾಗಿಯೇ ಇದ್ದಂಥವು ಎಂಬುದನ್ನು ಆ ಹೆಸರುಗಳೇ ಸೂಚಿಸುತ್ತವೆ. ದೇವಾಗಾರಪ್ರಬಂಧವೇ 'ದೇವಾರ' ಪ್ರಬಂಧ; ದೇಶಿಕಾಗಾರವೇ 'ದೇಶಿಕಾರ'—ಧವಳಾಗಾರ ಶಬ್ದವು 'ಧವಳಾರ' ಎಂದಾ ದಂತೆ. ಈ ಆರಾಧನಾ ಸಂಪ್ರದಾಯವು ಕ್ರಿ.ಶ. ಆರಂಭಕಾಲದಲ್ಲೇ ಕಾಶ್ಮೀರದಿಂದ ಕನ್ಯಾಕುಮಾರಿವರೆಗೆ ಸಮಗ್ರಭಾರತದಲ್ಲಿ ನಡೆದುಬಂದಿತ್ತು. ದ್ರಾವಿಡದೇಶದ ಶಿವಾ ಲಯಗಳಲ್ಲಿ ಹಾಡತಕ್ಕ 'ತೇವಾರಂ' ಶೈವಪ್ರಬಂಧಗಳು ಚಿರಪ್ರಸಿದ್ಧವಾದುವಷ್ಟೆ. ಹೀಗೆ ದೇವಾಲಯಗಳಲ್ಲಿ ಸಂಗೀತನಾಟ್ಯಾರಾಧನೆಗಾಗಿ ನಿಯೋಗಿಸಲ್ಪಟ್ಟವರೇ 'ಭಾಗವತರು.' ನಾಟ್ಯಶಾಸ್ತ್ರದ ವ್ಯಾಖ್ಯಾನದಲ್ಲಿ ಅಭಿನವಗುಪ್ತಾಚಾರ್ಯನು, 'ಭಾಗವತರು' ಎಂದರೆ 'ದೇವಲಕರು' ಎನ್ನುತ್ತಾನೆ; ದೇವಾಲಯಕ್ಕೆ ಅಂಟಿಕೊಂಡಿರುವವರು ಅಥವಾ ದೇವಾಲಯ ದಲ್ಲಿಯೇ ವಾಸಿಸಿಕೊಂಡಿರುವವರು ಎಂದು ಅರ್ಥ. ಈ ಭಾಗವತರುಗಳಲ್ಲಿ ವಿಶೇಷ ಪರಿ ನಿಷ್ಠಿತರಾದ ಒಂದು ವರ್ಗದವರು 'ಜೋಕ್ಷರು' ಎಂದು ಕರೆಯಲ್ಪಡುತ್ತಾರೆ ಎನ್ನುತ್ತಾನೆ. [ಭಾಗವತಾಃ=ದೇವಲಕಾಃ, ಯೇ ಏಕಾಂತಿಕಾ (ಏಕಾಯನಾ) ಇತಿ ಪ್ರಸಿದ್ಧಾಃ; ಜೋಕ್ಷಾಃ=ಭಾಗವತವಿಶೇಷಾಃ—ಭ. ನಾ.ಅ. ೧೭–೩೭,೩೮] ಏಕಾಂತಿಕರು ಅಥವಾ ಏಕಾಯನರು ಎಂದರೆ ಏಕಾಂತಸೇವಕರು,ಅನನ್ಯಭಕ್ತಿಯಿಂದ ಅನವರತವೂ ಸೇವೆಯಲ್ಲಿ ನಿರತರಾಗಿರುವವರು. ಜೋಕ್ಷರೆಂಬುವರು ಪ್ರಾಯಶಃ ಸಂಸ್ಕೃತ ನಾಟ್ಯಪ್ರಯೋಗಪ್ರವೀಣ ರೆಂದು ತಿಳಿಯಬಹುದಾಗಿದೆ. ಈ ಶಬ್ದವೇ ದ್ರಾವಿಡ (ತಮಿಳು), ಮಲೆಯಾಳ ಭಾಷೆಗಳಲ್ಲಿ 'ಜೋಕ್ಯರು' ಎಂಬ ತದ್ಭವ ರೂಪವನ್ನು ಪಡೆದಿದೆ. ಅಲ್ಲಿಯ ದೇವಾಲಯಗಳಲ್ಲಿ ಸಂಸ್ಕೃತನಾಟಕಗಳನ್ನು ಪ್ರಯೋಗಿಸುತ್ತಿದ್ದ 'ಅಂಬಲವಾಸಿ'ಗಳೇ (ದೇವಲಕರು)

'ಚೋಕ್ಯರು'. ಅವರು ದೇವಸ್ಥಾನಗಳಲ್ಲಿ ನಿಯತವಾಗಿ ನಡೆಸುತ್ತಿದ್ದ ಸಂಸ್ಕೃತ ನಾಟಕ ಪ್ರಯೋಗಕ್ಕೆ 'ಚೋಕ್ಯಾರ್‌ಕೂತ್ತು' ಎಂಬ ಹೆಸರು ದ್ರಾವಿಡ, ಕೇರಳಗಳಲ್ಲಿ ಪ್ರಸಿದ್ಧ ವಾಗಿದೆ. ಈ 'ಚೋಕ್ಯಾರ್‌ಕೂತ್ತಿ'ನ ವಿಚಾರವನ್ನು ತಮಿಳರ 'ಶಿಲಪ್ಪದಿಕಾರಂ' ಕಾವ್ಯದಲ್ಲಿಯೇ ಕಾಣುತ್ತೇವೆ.

ಅಂದಿಗೆ ದೇವತಾವಿಷಯಕವಾದ ಸಂಸ್ಕೃತ ನಾಟಕಗಳನ್ನು ರಚಿಸುವುದೆಂದರೆ ದೇವಸ್ಥಾನಗಳನ್ನು ಕಟ್ಟಿದಷ್ಟೇ ಶ್ರೇಯಸ್ಕರ ಹಾಗೂ ಕೀರ್ತಿಕರವಾದ ಪುಣ್ಯಕಾರ್ಯ ವೆಂಬ ನಂಬಿಕೆ ಇತ್ತು. ಆದ್ದರಿಂದಲೇ ಭಾಸಕವಿಯ ಕೀರ್ತಿಯನ್ನು ಬಾಣನು ತನ್ನ 'ಹರ್ಷಚರಿತೆ'ಯಲ್ಲಿ ಹೀಗೆ ಹೊಗಳಿದ್ದಾನೆ :

'ಸೂತ್ರಧಾರಕೃತಾರಂಭೈಃ ನಾಟಕೈರ್ಬಹುಭೂಮಿಕೈಃ ।
ಸಪತಾಕೈರ್ಯಶೋ ಲೇಭೇ ಭಾಸೋ ದೇವಕುಲೈರಿವ ॥'

ಉತ್ತರ ಕಾಲದಲ್ಲಿ ಕ್ರಮೇಣ ನಾಟ್ಯ–ಸಂಗೀತ ಇವೆರಡು ಆರಾಧನೆಗಳಿಗೂ ಅನುಕೂಲ ವಾಗುವಂತಹ 'ರಾಮಾಕ್ರೀಡ, ಹಲ್ಲೀಸ, ಶಿದ್ಗಕ, ರಾಸಕ, ಶಿಂಗಕ' ಇತ್ಯಾದಿ 'ಗೇಯ ಕಾವ್ಯ'ಗಳು ಅಥವಾ ಗೀತನಾಟಕಗಳು ಸಂಸ್ಕೃತದಲ್ಲಿ ರಚಿಸಲ್ಪಟ್ಟು ಈ ವಿನಿಯೋಗಕ್ಕೆ ಸಂದುವು. ಪದಾರ್ಥಾಭಿನಯಾತ್ಮಕವಾದ ನಾಟ್ಯಕ್ಕೆ ಸಲ್ಲುತ್ತಿದ್ದ ಇವು 'ಉಪರೂಪಕ' ಗಳೆಂದೂ ಪ್ರಸಿದ್ಧವಾಗಿದ್ದವು..ಅನಂತರಕಾಲದಲ್ಲಿ ನಮ್ಮಲ್ಲಿ ಸರ್ವತ್ರ ವೈಷ್ಣವ ಧರ್ಮವು ಪ್ರಬಲವಾಗುತ್ತಾ ದೇವಸ್ಥಾನಗಳಲ್ಲಿ ಆರಾಧನಾರ್ಥವಾಗಿ ವಿಷ್ಣುವಿನ ದಶಾವತಾರ ಮಾಹಾತ್ಮ್ಯಗಳನ್ನು ವರ್ಣಿಸುವ ಗೀತಪ್ರಬಂಧಗಳು ಸಂಸ್ಕೃತದಲ್ಲಿ ರಚಿಸಲ್ಪಟ್ಟವು. ಕ್ರಿ.ಶ. ೧೧ನೇ ಶತಮಾನದ ಪೂರ್ವಾರ್ಧದವನಾಗಿದ್ದ ಕಾಶ್ಮೀರದ ಸುಪ್ರಸಿದ್ಧ ಕವಿ ಕ್ಷೇಮೇಂದ್ರನು 'ದಶಾವತಾರಚರಿತ'ವೆಂಬ ಗೀತಪ್ರಬಂಧವನ್ನು ರಚಿಸಿ ಅದನ್ನು 'ಪೂಜಾ ಪ್ರಬಂಧ'ವೆಂದೇ ಕರೆದಿರುತ್ತಾನೆ :

'ವಿಷ್ಣೋಃ ಸ್ವಲ್ಪವಿಲೋಕಿತಾಕೃತಿಸುಧಾಸಂವರ್ಧಿತೋತ್ಕಂಠಯಾ ।
ಭಕ್ತ್ಯಾವ್ಯಕ್ತ ದಶಾವತಾರಸರಸಃ ಪೂಜಾಪ್ರಬಂಧಃ ಕೃತಃ ॥' (೧೦–೪೪)

ಈ ಪೂಜಾಪ್ರಬಂಧದಲ್ಲಿ ಕೃಷ್ಣಾವತಾರದ ಮಾಹಾತ್ಮ್ಯವು ಮಿಕ್ಕೆಲ್ಲವುಗಳಿಗಿಂತ ವಿಸ್ತಾರ ವಾಗಿಯೂ ಬಹಳ ರಸವತ್ತಾಗಿಯೂ ವರ್ಣಿಸಲ್ಪಟ್ಟಿದೆ. ಕೃಷ್ಣಬಲರಾಮರ ಬಾಲಕ್ರೀಡಾ ವಿನೋದ, ಯಮುನಾತೀರದ ಕುಂಜವನದಲ್ಲಿ ಶ್ರೀಕೃಷ್ಣಗೋಪಸ್ತ್ರೀಯರ, ವಿಶೇಷವಾಗಿ ವಿದಗ್ಧೆಯಾದ ರಾಧೆಯ ಪ್ರಣಯಕೇಲೀವಿಲಾಸಗಳನ್ನು ಅತ್ಯಂತ ಹೃದಯಂಗಮ ವಾಗಿ ನೃತ್ಯಯೋಗ್ಯವಾದ ಛಂದೋಗೀತವಿಧಾನಗಳಿಂದ ರಚಿಸಲ್ಪಟ್ಟ ಪ್ರಬಂಧವಿದು. ಅನಂತರ ಸ್ವಲ್ಪ ಕಾಲದಲ್ಲಿಯೇ ಜಯದೇವ ಕವಿಯು ಇದೇ ಶೈಲಿಯಲ್ಲಿ ರಾಧಾಮಾಧವರ ಪ್ರಣಯಕೇಲಿಗಳನ್ನೇ ಪ್ರಧಾನವಸ್ತುವನ್ನಾಗಿಸಿ 'ಗೀತಗೋವಿಂದ' ಅಷ್ಟಪದೀಪ್ರಬಂಧ

ಗಳನ್ನು ದೇವಸ್ಥಾನದ ನಾಟ್ಯಸೇವೆಗಾಗಿಯೇ ರಚಿಸಿದನು. ದಶಾವತಾರಸ್ತುತಿಯಿಂದಲೇ ಪ್ರಾರಂಭವಾಗುವ ಈ ಪೂಜಾಪ್ರಬಂಧವು ಶಿವದೇವಾಲಯಗಳಲ್ಲಿಯೂ ಶ್ರೀಕೃಷ್ಣನ ವಿಗ್ರಹ ಪ್ರತಿಷ್ಠೆಗೆ ಕಾರಣವಾಗಿದ್ದು ಸರ್ವತ್ರ ದೇವಸ್ಥಾನಗಳ ನಾಟ್ಯಾರಾಧನಕ್ಕೆ ಏಕೈಕ ಪ್ರಸಿದ್ಧಪ್ರಬಂಧವಾಗಿ ನಿಂತಿತು. ಅಂದಿನಿಂದ ನಮ್ಮ ಯಾವತ್ತೂ ನೃತ್ಯಪದ್ಧತಿಗಳು 'ಗೀತಗೋವಿಂದ' ದಲ್ಲಿರುವ ದಶಾವತಾರಸ್ತುತಿಪೂರ್ವಕವಾಗಿಯೇ ನಡೆಯುವ ಸಂಪ್ರದಾಯ ರೂಢಿಯಲ್ಲಿ ಬಂದಿದೆ. ಆಂಧ್ರದ 'ಕೂಚಿಪುಡಿ', ಕೇರಳದ 'ಕಥಕಳಿ' ಪ್ರಯೋಗಗಳು ಗೀತಗೋವಿಂದದ ಆ ಸ್ತುತಿಪದ್ಯಗಳಿಂದ ಪ್ರಾರಂಭವಾಗುತ್ತವೆ.

ಯಕ್ಷಗಾನಗಳಲ್ಲಿಯೂ ದಶಾವತಾರಸ್ತುತಿಗೆ ವಿಶೇಷ ಪ್ರಾಧಾನ್ಯವಿರುವುದನ್ನು ಕಾಣಬಹುದು. ಸಭಾಲಕ್ಷಣವೆಂಬ ಪೂರ್ವರಂಗವಿಧಿಯು ಕ್ಷೇಮೇಂದ್ರನ ದಶಾವತಾರ ಸ್ತುತಿ ಶ್ಲೋಕಗಳಿಂದಲೇ ಪ್ರಾರಂಭವಾಗುವುದು. ಆಮೇಲೆ ದಶಾವತಾರಸ್ತುತಿ ನೃತ್ಯ ನಡೆಯಬೇಕು, 'ಬಾಲಗೋಪಾಲರ' ನರ್ತನಕ್ಕೆ ದಶಾವತಾರಕೀರ್ತನೆ ಹಾಡಬೇಕು, ಕೋಡಂಗಿಗಳು "ಹತ್ತವತಾರ ಗೋವಿಂದ" ಎಂದು ಘೋಷಿಸುತ್ತಿರಬೇಕು. ಸ್ತ್ರೀವೇಷಗಳ ವೃಂದವನ್ನು ಕುಣಿಸಲಿಕ್ಕಿರುವ 'ಅವತಾರಸಂವಾದ'ವೆಂಬ ಪದ್ಯಗಳು ಬೇರೆ ಇವೆ. ಯಕ್ಷಗಾನ ಕವಿಗಳೂ ತಮ್ಮ ಗ್ರಂಥಗಳ ಆದಿ-ಅಂತ್ಯಗಳಲ್ಲಿ ದಶಾವತಾರ ಸ್ತುತಿಕೀರ್ತನೆಗಳನ್ನು ರಚಿಸಿರುವುದು ಸಾಮಾನ್ಯವಾಗಿದೆ. ಆದುದರಿಂದಲೇ ಇದಕ್ಕೆ ನಮ್ಮಲ್ಲಿ 'ದಶಾವತಾರ ಆಟ'ವೆಂದೂ ಹೆಸರಾಗಿರುವುದು.

'ಭಾಗವತರ ಆಟ'ವೆಂದೂ ಕರೆಯಲ್ಪಡುವ ಈ ಯಕ್ಷಗಾನಸಂಪ್ರದಾಯವಾದರೂ ದೇವಸ್ಥಾನಗಳಿಗೇ ಸಂಬದ್ಧವಾಗಿದ್ದುದು ಎಂಬುದನ್ನು ಊಹಿಸಿಕೊಳ್ಳಬಹುದಾಗಿದೆ. ಆಟ, 'ತಾಳಮದ್ದಳೆ' ಎಂಬ ಅದರ ಎರಡು ರೂಪಗಳೂ ದೇವಸ್ಥಾನಗಳಲ್ಲಿ ಪೂಜಾವಿಧಿಯಾಗಿ ನಡೆಯುತ್ತಿದ್ದ ನಾಟ್ಯಸೇವೆ ಮತ್ತು ಸಂಗೀತಸೇವೆಗಳಿಗೆ ಸಲ್ಲುತ್ತಿದ್ದವು. ಅದುಕಾರಣವೇ ನಮ್ಮಲ್ಲಿ ಹಾಗೂ ಆಂಧ್ರದಲ್ಲಿ ಹುಟ್ಟಿಕೊಂಡಿದ್ದ ಯಕ್ಷಗಾನ ಆಟದ ಮೇಳಗಳೆಲ್ಲ ಮೊದಲಿನಿಂದಲೂ ಒಂದೊಂದು ದೇವಸ್ಥಾನಗಳದೇ ಸೊತ್ತಾಗಿ ನಡೆದು ಬಂದಿವೆ. 'ತಾಳಮದ್ದಳೆಸೇವೆ'ಗಾಗಿ ಉಂಬಳಿ ಉತಾರಗಳನ್ನು ಕೊಟ್ಟಿದ್ದ ಪುರಾತನ ದಾಖಲೆಗಳು ನಮ್ಮ ದೇವಸ್ಥಾನಗಳಲ್ಲಿ ದೊರೆಯುತ್ತವೆ. ಬಳ್ಳಾರಿ ತಾಲೂಕಿನ ಸೋಮಸಮುದ್ರ ಎಂಬಲ್ಲಿರುವ ಲಕ್ಷ್ಮೀನಾರಾಯಣ ದೇವಾಲಯದಲ್ಲಿ ದೊರೆತ ಅಂಥ ಒಂದು ಶಾಸನವನ್ನು ಡಾ. ಶಿವರಾಮ ಕಾರಂತರು ತಮ್ಮ 'ಯಕ್ಷಗಾನ ಬಯಲಾಟ' ದ್ವಿತೀಯ ಮುದ್ರಣದ ಪರಿಶಿಷ್ಟದಲ್ಲಿ ಕೊಟ್ಟಿರುವುದನ್ನು ಕಾಣಬಹುದು—'ಲಕ್ಷ್ಮೀನಾರಾಯಣ ದೇವರಿಗೆ ಏಕಾದಶೀ ಜಾಗರ ಪಲ್ಲಕ್ಕಿಸೇವೆ ತಾಳಮದ್ದಲೆಯ ಸೇವೆಗಾಗಿ ಸಮರ್ಪಿಸಿದ ಕಾಡಾರಂಭ ಹೊಲ . . . .' ಎಂದು ಆ ಶಾಸನದ ವಾಕ್ಯವಿರುತ್ತದೆ. ಆಂಧ್ರದಲ್ಲಿಯೂ ಇಂತಹ ಪುರಾವೆಗಳು ದೊರೆತಿರುವುದನ್ನು ಕೇಳುತ್ತೇವೆ. ಯಕ್ಷಗಾನ ಕವಿಗಳು ಗ್ರಂಥಾರಂಭದಲ್ಲಿ ಬಹುವಿಧವಾಗಿ

ದೇವತಾಸ್ತುತಿಕೀರ್ತನೆಗಳನ್ನೂ, ಗ್ರಂಥಾಂತ್ಯದಲ್ಲಿ ತಪ್ಪದೆ ಮಂಗಳಾರತಿ 'ಧವಳಾರ' (ಸೋಬಾನೆ) ವನ್ನೂ ರಚಿಸಿರುವುದು ಪೂಜಾಪ್ರಬಂಧವೆಂಬುದಕ್ಕೆ ನಿದರ್ಶನವಾಗಿದೆ. ಪ್ರತಿಯೊಬ್ಬ ಕವಿಯೂ ತನ್ನ ಕೃತಿಗಳನ್ನು ಅಂಥ ಒಂದೊಂದು ದೇವಸ್ಥಾನಗಳ ದೇವರ ಅಂಕಿತದಲ್ಲಿ ರಚಿಸಿ ಆ ದೇವರಿಗೇ ಸಮರ್ಪಿಸಿರುವಂತೆ ಹೇಳಿಕೊಂಡಿರುತ್ತಾನೆ.

ದೇವಸ್ಥಾನಗಳ ನಿತ್ಯಪೂಜೆಯಲ್ಲಿ ಈ ಸೇವೆಗಳು ಸಂಕ್ಷಿಪ್ತವಾಗಿಯೂ, ಉತ್ಸವಾದಿಗಳು ನಡೆಯುವ ವಿಶೇಷದಿನಗಳಲ್ಲಿ ಪೂರ್ಣರೂಪದಿಂದಲೂ ನಡೆಯುತ್ತಿದ್ದವೆಂದು ಊಹಿಸಬಹುದು. ಆದುದರಿಂದಲೇ ರಾತ್ರಿ ಬೆಳಗನಕ ನಡೆಯುವ ಆಟವು ದೊಡ್ಡಾಟವೆಂದೂ, ರಂಗಸ್ಥಳದ ಆಟವೆಂದೂ, ಪ್ರಸಂಗದಾಟವೆಂದೂ ಕರೆಯಲ್ಪಡುವುದಾಗಿದೆ. ನಿತ್ಯಸೇವೆಯದು ಸಣ್ಣಾಟವಾಗಿದ್ದುದರಿಂದ, ಎಂದರೆ ಪ್ರಾಯಶಃ ಸ್ತುತಿಪದ್ಯಗಳಿಗಷ್ಟೇ ಕುಣಿಯಲ್ಪಡುವುದಾಗಿದ್ದುದರಿಂದ ಅದು ಪ್ರಸಂಗದಾಟವಲ್ಲ. ದೇವಸ್ಥಾನದ ಒಳಗೆ ನಡೆಯುವುದಾಗಿದ್ದು ರಂಗಸ್ಥಳದ ಆಟವಲ್ಲವೆಂಬುದೂ ಸರಿ. ಉತ್ಸವಾದಿ ಸಂದರ್ಭಗಳಲ್ಲಿ ದೇವಸ್ಥಾನದ ಹೊರ ಬಯಲಲ್ಲಿ (ಹೊಲ, ಗದ್ದೆ) ರಂಗಸ್ಥಳ ಹಾಕಿ ಇಡೀ ರಾತ್ರಿ ಆಡುವುದಾದ್ದರಿಂದ 'ಬೈಲಾಟ' ಅಥವಾ 'ಬಯಲಾಟ'ವೆಂಬ ಹೆಸರು ಬಂದಿರುವುದೂ ಸಹಜವಾಗಿದೆ. ಕ್ರಮೇಣ ಈ ನಿತ್ಯಸೇವೆಯು ದೇವಸ್ಥಾನಗಳಲ್ಲಿ ಲುಪ್ತವಾಗಿರುವುದಾದರೂ ಮೇಳದಾಟಗಳಲ್ಲಿ ಆ ಆಚಾರ ಉಳಿದಿರುವುದನ್ನು ಇಂದೂ ಕಾಣಬಹುದು. ಮೇಳವು ದೇವಸ್ಥಾನದಿಂದ ಹೊರಟು ಹೊರಸಂಚಾರಕ್ಕೆ ಹೋಗುವಾಗ ಆ ದೇವರ ಒಂದು ಪ್ರತಿಮೆಯನ್ನು ಜೊತೆಯಲ್ಲಿಯೇ ಕೊಂಡು ಹೋಗುವುದಲ್ಲದೆ ಆಟ ಸುರುವಾಗುವುದಕ್ಕೆ ಮೊದಲಾಗಿ, ಚೌಕಿಯಲ್ಲಿ ಆ ದೇವರನ್ನು ಪೂಜೆಗೆ ಇಡುವುದು ಸಂಪ್ರದಾಯವಾಗಿ ನಡೆದು ಬಂದಿದೆ. ಆ ದೇವರಿಗೆ ನಮಸ್ಕರಿಸಿಯೇ ಪಾತ್ರಗಳು ಬಣ್ಣ ಹಚ್ಚುವುದಕ್ಕೆ ಪ್ರಾರಂಭ ಮಾಡಬೇಕು. ವೇಷಗಳು ರಂಗಸ್ಥಳಕ್ಕೆ ಕಾಲಿಡುವ ಮೊದಲು ರಂಗದ್ವಾರದಲ್ಲಿ ಆ ದೇವರಿಗೆ ಮುಖ ಮಾಡಿ (ರಂಗಸ್ಥಳಕ್ಕೆ ಬೆನ್ನುಹಾಕಿ) ಸ್ವಲ್ಪ ಹೊತ್ತು ನಾಟ್ಯ ಮಾಡುವುದೂ ಆ ನಿತ್ಯಸೇವೆಯ ಅಂಶವೆಂಬುದನ್ನು ಊಹಿಸಬಹುದು. ಭಾಗವತರು ರಂಗಸ್ಥಳಕ್ಕೆ ಬರುವ ಮೊದಲು ಚೌಕಿಯಲ್ಲಿ ಆ ದೇವರಿಗೆ ಹೂ ಹಾಕಿ ನಮಸ್ಕಾರ ಮಾಡಿ ಹೊರಡಬೇಕು; ಆಟ ಮುಗಿದಮೇಲೆಯೂ ವೇಷಧಾರಿಗಳ ಸಮೇತ ಹೋಗಿ ಆ ದೇವರಿಗೆ ಮಂಗಳಾರತಿ ಮಾಡಿ ಮೇಳದವರೆಲ್ಲ ಪ್ರಸಾದಸ್ವೀಕರಿಸುವುದೂ ನಿಯಮವಾಗಿ ನಡೆದು ಬಂದಿದೆ.

ಹೀಗಿರುವುದರಿಂದ ಇದು ಪೂರ್ವಪರಂಪರೆಯಂತೆ ನಡೆದುಬಂದಿರುವ ಆರಾಧನಾ ಸಂಪ್ರದಾಯವೆಂಬುದರಲ್ಲಿ ಸಂದೇಹ ಕಾಣುವುದಿಲ್ಲ. ಯಕ್ಷಗಾನವೆಂಬ ಹೆಸರು ಬಂದಿರುವುದಾದರೂ ಅದೇ ಅರ್ಥದಲ್ಲಿ ಎಂದು ನ್ಯಾಯವಾಗಿ ತಿಳಿಯಬಹುದು. 'ಯಕ್ಷ' ಶಬ್ದಕ್ಕೆ ಪೂಜೆ ಅಥವಾ ಆರಾಧನೆ ಎಂಬುದೇ ನಿಜವಾದ ಅರ್ಥ. (ಯಕ್ಷ–ಪೂಜಾಯಾಂ. ಪಾಣಿನಿ; ಯಕ್ಷ್–To honour, Worship: Apte). 'ಗಾನ'ಶಬ್ದಕ್ಕೆ ಹಾಡತಕ್ಕ ಪ್ರಬಂಧವೆಂಬ

ಅರ್ಥ—ಭಾವಾರ್ಥದಲ್ಲಿ ಈ ಶಬ್ದಕ್ಕೆ 'ಹಾಡುವಿಕೆ' ಎಂಬ ಅರ್ಥವಾದರೆ ಕರ್ಮಾರ್ಥ ದಲ್ಲಿ 'ಹಾಡಲಿಕ್ಕಿರುವ ಪ್ರಬಂಧ' ಎಂಬ ಅರ್ಥ. ಸಂಗೀತಶಾಸ್ತ್ರಗ್ರಂಥಗಳಲ್ಲಿ ಗೇಯ ಪ್ರಬಂಧಗಳನ್ನು ಗಾನವೆಂದೇ ಕರೆದಿರುವುದಾಗಿದೆ. 'ಸಂಗೀತರತ್ನಾಕರ' ಗ್ರಂಥದಲ್ಲಿ ಶಾಙ್ಗ್ರ್ರದೇವನ ಈ ಲಕ್ಷಣ ಶ್ಲೋಕದಿಂದ ಅದು ಸ್ಪಷ್ಟವಾಗುವುದು :

'ಯತ್ತು ವಾಗ್ಗೇಯಕಾರೇಣ ರಚಿತಂ ಲಕ್ಷಣಾನ್ವಿತಂ ।
ದೇಶೀರಾಗಾದಿಷು ಪ್ರೋಕ್ತಂ ತದ್ ಗಾನಂ ಜನರಂಜನಂ ॥'
(ಪ್ರಬಂಧಾಧ್ಯಾಯ–೩)

ವಾಗ್ಗೇಯಕಾರರೆಂದರೆ ಸಂಗೀತಸಾಹಿತ್ಯಗಳೆಂಬ ಉಭಯವಿದ್ಯೆಗಳಲ್ಲಿ ರಚನಾ ಸಾಮರ್ಥ್ಯ ವುಳ್ಳವರು—ವಾಕ್ಯಕಾರರು ಮತ್ತು ಗೇಯಕಾರರು. ಅವರೇ ಉಭಯಕಾರರೆಂದೂ ಅದೇ ತದ್ಭವವಾಗಿ ರೂಢಿಯಲ್ಲಿ 'ಬಯಕಾರ'ರೆಂದೂ ಕರೆಯಲ್ಪಡುತ್ತಾರೆ. ಅಂಥವ ರಿಂದ ದೇಶಭಾಷೆಯಲ್ಲಿ ಸಂಗೀತಶಾಸ್ತ್ರೋಕ್ತ ದೇಶೀ ರಾಗ ತಾಳಗಳಲ್ಲಿ ರಚಿಸಲ್ಪಟ್ಟ ಪ್ರಬಂಧವು 'ಗಾನ' ಎಂದು ಕರೆಯಲ್ಪಡುತ್ತದೆ, ಎಂಬುದು ಮೇಲಿನ ಲಕ್ಷಣಶ್ಲೋಕದ ಅರ್ಥವಾಗಿದೆ. ಆದುದರಿಂದ 'ಯಕ್ಷಗಾನ'ವೆಂದರೆ ಶಾಸ್ತ್ರೀಯ ಸಂಗೀತದಲ್ಲಿ ಹಾಡತಕ್ಕ 'ಪೂಜಾಪ್ರಬಂಧ'ವೇ ಸರಿ. ದೇವರ ಪೂಜೆಗೆ ಉದ್ದಿಷ್ಟವಾದ್ದು ಎಂಬ ಅರ್ಥದಲ್ಲಿ 'ಯಕ್ಷ' ಶಬ್ದವು ಪೂರ್ವಪದವಾಗಿ ಸೇರಿದ ಇನ್ನೂ ಹೆಸರುಗಳನ್ನು ಸಂಸ್ಕೃತದಲ್ಲಿ ಕಾಣ ಬಹುದು—ಯಕ್ಷಗಂಧ, ಯಕ್ಷಕರ್ದಮ, ಯಕ್ಷಧೂಪ, ಯಕ್ಷಾಂದೋಲ ಇತ್ಯಾದಿ. 'ಯಕ್ಷಾಂದೋಲ'ವೆಂದರೆ ಇಂದ್ರೋತ್ಸವಕ್ಕೆ ವಿಶಿಷ್ಟವಾದ ಒಂದು ಸೇವಾನೃತ್ತವೆಂದು ಕಾವ್ಯಗಳಲ್ಲಿ ವರ್ಣಿಸಲ್ಪಟ್ಟಿದೆ. ದೀಪಾವಳಿ ಹಬ್ಬಕ್ಕೆ 'ಯಕ್ಷರಾತ್ರಿ' ಎಂಬ ಹೆಸರಾಗಿರು ವುದೂ ಬಹುಶಃ ಈ ಪೂಜಾರ್ಥದಲ್ಲೇ ಎಂದು ತೋರುವುದು. ಇಡೀ ರಾತ್ರಿ ಆಚರಿಸುವ ದೀಪಾರಾಧನೆ ಅದು. ಗೋಪೂಜೆ,ಲಕ್ಷ್ಮೀಪೂಜೆ, ಬಲಿಪೂಜೆ ಇವೆಲ್ಲ ಆರಾಧನೆಗಳು ನಡೆ ಯುವ ರಾತ್ರಿ–'ಯಕ್ಷರಾತ್ರಿ'. ಇನ್ನೂ ವಿಚಾರಿಸಿ ನೋಡಿದರೆ, ದೇವಾಂಶಸಂಭೂತರಾದ ಯಕ್ಷರಿಗೂ ಆ ಹೆಸರು ದೇವತೆಗಳ ಆರಾಧನೆಯಲ್ಲಿ ನಿರತರಾದವರು ಎಂಬುದರಿಂದಲೇ ಬಂದಿರುವುದು ಸಹಜವಾಗಿ ಕಾಣುವುದು. ಆದುದರಿಂದ 'ಯಕ್ಷಗಾನ'ವೆಂದರೆ ಪೂಜಾ ಪ್ರಬಂಧ. ಪ್ರಬಂಧವಾಚಕವಾಗಿಯೇ ಈ ಹೆಸರು ರೂಢಿಯಲ್ಲಿರುವುದೂ—ಪಂಚವಟಿ ಯಕ್ಷಗಾನ, ಕರ್ಣಾರ್ಜುನ ಯಕ್ಷಗಾನ, ಬಾಲಲೀಲೆ ಯಕ್ಷಗಾನ ಇತ್ಯಾದಿ. ಕವಿಗಳು ಯಕ್ಷಗಾನವೆಂದು ಕರೆದಿರುವುದು ಈ ಪ್ರಬಂಧಗಳನ್ನೇ. ಉದಾಹರಣೆಗಾಗಿ, ದೇವೀದಾಸ ನೆಂಬ ಕವಿ ಕನ್ನಡ 'ದೇವೀಮಹಾತ್ಮೆ' ಎಂಬ ಯಕ್ಷಗಾನದಲ್ಲಿ 'ಗ್ರಹಿಸಿಕೊಂಡಮಲ ದೇವೀಮಹಾತ್ಮ್ಯೆಗಳ । ವಿಹಿತಮನನಾಗಿ ವರಯಕ್ಷಗಾನಗಳ । ಕೂಡಿ ತಿಳಿದಂತೊರೆ ವೆನತಿಭಕ್ತಿಯಿಂದ ॥' ಎಂದಿರುತ್ತಾನೆ. ಇನ್ನೊಬ್ಬ ಕವಿ ಹಲಸಿನಹಳ್ಳಿ ನರಸಿಂಹಶಾಸ್ತ್ರಿ ಎಂಬುವನು 'ಸಿಂಧುಶಯನನ ದಯದಿ ಯಕ್ಷಗಾನವ ಗೈದೆ' ಎಂದು ತನ್ನ ರುಕ್ಮಾಂಗದ

ಚರಿತ್ರೆಯಲ್ಲಿಯೂ, ಚೆನ್ನಪ್ಪನೆಂಬ ವೀರಶೈವಕವಿ ತನ್ನ ಕೃತಿಯನ್ನು 'ಶರಣಲೀಲಾ ಯಕ್ಷಗಾನವ ವಿರಚಿಸಿದೆನು' ಎಂದೂ ಹೇಳಿಕೊಂಡಿರುತ್ತಾರೆ. 'ಯಕ್ಷಗಾನದಲ್ಲಿ ರಚಿಸಿದೆನು' ಎಂದರೂ 'ಯಕ್ಷಗಾನ ಪ್ರಬಂಧವಾಗಿ ರಚಿಸಿದೆನು' ಎಂಬರ್ಥವೇ ಸಹಜವಾದುದು. ರಚನೆ ಎಂಬುದು ಕೃತಿಗೆ ಅನ್ವಯಿಸುವುದು ಹೊರತು ಹಾಡುವಿಕೆಗಲ್ಲವಷ್ಟೆ? ಸಂಗೀತಶಾಸ್ತ್ರಕರ್ತರೂ ಈ ಹೆಸರನ್ನು ಪ್ರಬಂಧವಿಶೇಷವೆಂಬ ಅರ್ಥದಲ್ಲಿಯೇ ಬಳಸಿದ್ದಾರೆ, ಹೊರತು ಈಗ ಕೆಲವರು ಭಾವಿಸುತ್ತಿರುವಂತೆ ಗಾನವಿಶೇಷವೆಂಬ ಅರ್ಥದಲ್ಲಿ ಅಲ್ಲ. ಉದಾಹರಣೆಗಾಗಿ, ಕ್ರಿ. ಶ. ೧೬-೧೭ನೆಯ ಶತಮಾನದಲ್ಲಿ ತಂಜಾವೂರನ್ನಾಳಿದ ರಘುನಾಥ ನಾಯಕನ ಆಸ್ಥಾನ ವಿದ್ವಾಂಸನಾಗಿದ್ದ ಗೋವಿಂದ ದೀಕ್ಷಿತನು 'ಸಂಗೀತಸುಧಾ' ಎಂಬ ಶಾಸ್ತ್ರಗ್ರಂಥದಲ್ಲಿ ಆ ರಘುನಾಥನಾಯಕನ ಗ್ರಂಥರಚನೆಗಳನ್ನು ಹೊಗಳುತ್ತಾ—

'ಶ್ರೀರುಕ್ಮಿಣೀಕೃಷ್ಣ ವಿವಾಹಯಕ್ಷಗಾನಂ, ಪ್ರಬಂಧಾನಪಿ ನೈಕಭೇದಾನ್ ।
ನಿರ್ಮಾಯ ವಾಗ್ಭಿಃ ಪ್ರಣುತಾರ್ಥಭಾಗ್ಭಿರ್ವಿದ್ವತ್ಕವೀನಾಂ ವಿದಧಾಸಿ ಹರ್ಷಂ ॥'
(೧-೬೩)

ಎಂದಿರುತ್ತಾನೆ. ಪ್ರಬಂಧವಿಶೇಷವೆಂಬ ಅರ್ಥ ಇಲ್ಲಿ ಸ್ಪಷ್ಟ ತಾನೆ?

ಈ 'ಯಕ್ಷಗಾನ'ವು ಶಾಸ್ತ್ರೀಯ ಸಂಗೀತದಲ್ಲೇ ಹಾಡಲ್ಪಡತಕ್ಕದೆಂಬುದು ಪದ್ಯಗಳ ರಾಗತಾಳ ನಿರ್ದೇಶದಿಂದಲೇ ವ್ಯಕ್ತವಾಗುವುದು. ಸಂಪ್ರದಾಯವೂ ಅದೇ ಇದ್ದಿತ್ತೆಂಬುದಕ್ಕೆ ಆಧಾರವೂ ದೊರೆಯುವುದು. ಈಗ ೩೦೦ ವರ್ಷಕ್ಕೆ ಹಿಂದಿನವನಾದ ಆಂಧ್ರದ ಪ್ರಸಿದ್ಧ ಯಕ್ಷಗಾನಕವಿ ಆದಿಭಟ್ಟನಾರಾಯಣದಾಸನೆಂಬುವನು ಆ ಕುರಿತು ಹೀಗೆ ಹೇಳಿದ್ದಾನೆ—

'ಯಕ್ಷಗಾನಮುಗೂಡ ವಾಗ್ಗೇಯಕಾರಪ್ರಣೀತಮುಲೇ, ಶ್ರುತಿಲಯಾತ್ಮಕಮ್ಮೈ ರಾಗವೈವಿಧ್ಯಮು ಜಾತಿಮೂರ್ಛನಾಯುತಮ್ಮೈನ ಸ್ವರಾಲಾಪಯುಗಲಿಗಿನ ಗೇಯರಚನ'

ಅಂತೆಯೇ ಇದು ವೀಣಾದಿ ವಾದ್ಯದೊಂದಿಗೆ ಹಾಡಲ್ಪಡುತ್ತಿತ್ತು ಎಂಬುದನ್ನೂ ತಂಜಾವೂರಿನ ವಿಜಯರಾಘವನಾಯಕನ ಆಸ್ಥಾನಕವಿಯಾಗಿದ್ದ ಚೆಂಗಲ್ವಕಾಳಕವಿ ಎಂಬುವನು 'ರಾಧಾವಿಲಾಸ'ವೆಂಬ ತನ್ನ ಕಾವ್ಯದಲ್ಲಿ ವರ್ಣಿಸಿರುವುದನ್ನು ನೋಡಬಹುದು—

'ಯಕ್ಷಗಾನಂಬುನು ರಾವಣಹಸ್ತ, ಮುಡುಕು, ದಂಡೆಮೀಟಲು, (ಜೆಂಗುಲು) ಜೇಕಟ, ತಾಳಮುಲನು, ಜೋಲ, ಸುವ್ವಾಲ, ಧವಳಂಬುಲೇಲಲಮುರ, ಕೊಂದಜತಿವಲು ವಿನಿಪಿಂಚಿರಂದಮುಗನು'

[ರಾವಣಹಸ್ತ = ಇಪ್ಪತ್ತು ತಂತಿಗಳ ವೀಣೆ; ಮುಡುಕು = ಉಡುಕ್ಕೆ ಎಂಬ ಚರ್ಮವಾದ್ಯ; ದಂಡೆಮೀಟಲು = ವೀಣೆ; ಜೇಕಟ = ಜಾಕಟೆ.]

ಈ ರಚನೆಗಳು ಎಂದಿನಿಂದ ಪ್ರಾರಂಭವಾಗಿರಬೇಕು ಎಂದರೆ, ಅನಂತರ ವಿಜಯ

ನಗರ ಸಾಮ್ರಾಜ್ಯದ ಅಭ್ಯುದಯ ಕಾಲದಲ್ಲಿ, ನಮ್ಮ ವ್ಯಾಸಕೂಟ–ದಾಸಕೂಟಗಳ ಹಾಗೂ ವೀರಶೈವ ಹರದಾಸಕೂಟಗಳ ಪ್ರಭಾವದಿಂದ ಆಂಧ್ರಕರ್ಣಾಟಕಗಳ ದೇವಾಲಯ ಗಳಲ್ಲಿ ನಡೆಯುತ್ತಿದ್ದ ಸಂಗೀತ ನಾಟ್ಯಸೇವೆಗಳು ಸಂಸ್ಕೃತ ಪೂಜಾಪ್ರಬಂಧಗಳ ಬದಲು ದೇಶಭಾಷಾರಚನೆಗಳಲ್ಲಿ ನಡೆಯುವ ಸಂಪ್ರದಾಯ ಉಂಟಾಗಿತ್ತು. ಹಾಗೆ ದೇವರ ಕಥೆ ಗಳಲ್ಲಿ ನೂತನವಾಗಿ ರಚನೆಗೆ ಬಂದ 'ಪೂಜಾಪ್ರಬಂಧಗಳೇ' ಯಕ್ಷಗಾನಗಳು. ಈ ನಾಮ ಕರಣವಾದರೂ ಪ್ರಾಯಶಃ ಆಂಧ್ರದಲ್ಲೇ ಆದದ್ದಿರಬೇಕೆಂದು ತೋರುತ್ತದೆ ; ಏಕೆಂದರೆ ಈಗ ತಿಳಿದಿರುವಂತೆ, ನಮ್ಮಲ್ಲಿ ಯಕ್ಷಗಾನಗಳು ರಚನೆಗೊಳ್ಳುವುದಕ್ಕೆ ಮೊದಲೇ ಆಂಧ್ರದ ಕಾವ್ಯಗಳಲ್ಲಿಯೂ ಲಕ್ಷಣಗ್ರಂಥಗಳಲ್ಲಿಯೂ ಇದರ ಉಲ್ಲೇಖ ಕಂಡುಬರುತ್ತದೆ. ಕ್ರಿ.ಶ. ೧೫ನೇ ಶತಮಾನದ ಮೊದಲ ಭಾಗದಲ್ಲಿದ್ದವನಾದ ಆಂಧ್ರದ ಮಹಾಕವಿ ಶ್ರೀನಾಥನು ತನ್ನ 'ಭೀಮೇಶ್ವರಪುರಾಣ' ಎಂಬ ಕಾವ್ಯದಲ್ಲಿ 'ದ್ರಾಕ್ಷಾರಾಮ' ಶಿವಕ್ಷೇತ್ರದ ಭೀಮೇ ಶ್ವರ ದೇವರ ಮುಂದೆ ಯಕ್ಷಗಾನ ಸಂಗೀತಾರಾಧನೆ ನಡೆಯುತ್ತಿತ್ತೆಂದು ವರ್ಣಿಸಿದ್ದಾನೆ (ಆ. ೩-೬೩).

ಆಂಧ್ರದ ಪದಕವಿತಾಪಿತಾಮಹನೆಂದು ಪ್ರಖ್ಯಾತನಾದ ತಿರುಪತಿ ಅಣ್ಣಮಾ ಚಾರ್ಯನು (ಕ್ರಿ.ಶ. ೧೪೦೮-೫೦೦) ತನ್ನ 'ಸಂಕೀರ್ತನ ಲಕ್ಷಣ'ವೆಂಬ ಗ್ರಂಥದಲ್ಲಿ 'ಯಕ್ಷ ಗಾನ'ವೆಂಬುದು ಅನೇಕ ವಿಧದ ತಾಳದ ಪದ್ಯಗಳು ಹಾಗೂ ಕಂದ, ವೃತ್ತ, ದ್ವಿಪದಿ ಮೊದ ಲಾದ ಛಂದಸ್ಸುಗಳುಳ್ಳ ವಿಶಿಷ್ಟ ಗೇಯಪ್ರಬಂಧವೆಂಬ ವಿವರಣೆಯನ್ನು ಆ ಮೊದಲಿನ ಸಂಕೀರ್ತನಾಚಾರ್ಯರು ಕೊಟ್ಟಿರುವುದಾಗಿ ಹೇಳಿರುತ್ತಾನೆ. (ಈ ಗ್ರಂಥದ ತೆಲುಗು ಪ್ರತಿ ತಿರುಪತಿ ದೇವಸ್ಥಾನದಿಂದ ಪ್ರಕಾಶಿಸಲ್ಪಟ್ಟಿದೆ.)

ಆಂಧ್ರದ ಪ್ರಾಚೀನತಮ ಕಾವ್ಯಲಕ್ಷಣಗ್ರಂಥವೆನ್ನಲಾದ (ಕ್ರಿ.ಶ.೧೩೦೦–೧೪೦೦) 'ಲಕ್ಷಣ ದೀಪಿಕಾ' ಗ್ರಂಥದಲ್ಲಿ 'ಯಕ್ಷಗಾನಲಕ್ಷಣ'ವನ್ನು ಹೀಗೆ ಕೊಡಲಾಗಿದೆ — 'ಯಕ್ಷ ಗಾನಂಬುನನ್‌ವೆಲಯು, ಪದಂಬುಲು, ದರುವುಲು, ಏಲಲು, ಧವಳಂಬುಲು, ಮಂಗಲ ಹಾರತುಲು, ಶೋಭನಂಬುಲು, ನುಯ್ಯಾಲಜೋಲಲು, ಜಕ್ಕುಲರೇಕುಬದಮುಲು, ಚಂದ ಮಾಮುಸುದ್ದುಲು, ಅಷ್ಟಕಂಬುಲು, ಏಕಪದ, ದ್ವಿಪದ, ತ್ರಿಪದ, ಚತುಷ್ಪದಾಷ್ಟಪದುಲು, ನಿವಿಯಾದಿಗಾ ಗಲ್ಗು ನನ್ನಿಯು ಲಯಪ್ರಮಾಣಂಬುಲುನೊಪ್ಪಿ, ಮೃದುಮಧುರ ರಚನಲ ಪ್ರಸಿದ್ಧಂಬೈನ ಯವಿ ಮಧುರಗವಿತ್ವಂಬುಲು'–ಇಷ್ಟು ವಿಧದ ಲಯಬದ್ಧವಾಗಿ ಹಾಡತಕ್ಕ ಪದ್ಯಜಾತಿಗಳುಳ್ಳ ಪ್ರಬಂಧವಿಶೇಷವೇ ಯಕ್ಷಗಾನವೆಂಬ ತಾತ್ಪರ್ಯ. ಪ್ರಬಂಧ ರಚನೆಯು ಅಲ್ಲಿಂದ ಮೊದಲಾದ್ದೆಂಬುದಕ್ಕೆ ನಮ್ಮ ಯಕ್ಷಗಾನಗಳಲ್ಲೆಲ್ಲ ಕಂಡುಬರುವ 'ದ್ವಿಪದೀ'ಬಂಧವು ನ್ಯಾಯವಾದ ಕಾರಣವಾಗಿ ಕಾಣುವುದು. ದ್ವಿಪದಿಯು ಮೂಲತಃ ಆಂಧ್ರಛಂದಸ್ಸು ಹೊರತು ಕನ್ನಡದ್ದಲ್ಲ. ನಮ್ಮಲ್ಲಿ ಯಕ್ಷಗಾನಗಳಲ್ಲಷ್ಟೆ ಅದರ ಪ್ರಯೋಗವಿರುವುದು ವಿನಾ ಅನ್ಯತ್ರ ಅಪರೂಪವಾಗಿದೆ. ಇರಲಿ.

ತುಳುನಾಡಾಗಿದ್ದ ನಮ್ಮ ದಕ್ಷಿಣಕನ್ನಡದ ದೇವಸ್ಥಾನಗಳಲ್ಲಿ ಈ ನಾಟ್ಯಗೀತಾರಾಧನೆಗಳಲ್ಲಿ ನಿಯುಕ್ತರಾಗಿದ್ದವರೆಂದರೆ 'ಸ್ಥಾನಿಕ'ರೆಂಬ (ಶಿವಬ್ರಾಹ್ಮಣರು) ಒಂದು ಬ್ರಾಹ್ಮಣವರ್ಗ. ಪ್ರಾಯಶಃ ಅವರಿಗೆ ಈ ಹೆಸರು ದೇವಸ್ಥಾನಗಳಲ್ಲೇ ವಾಸವಾಗಿರುವವರು (ಅಂಬಲವಾಸಿಗಳು) ಎಂಬುದರಿಂದ ಬಂದುದಿರಬೇಕು. ಇವರ ಮೂಲಸ್ಥಾನ—ಒಂದು ಕಾಸರಗೋಡು ತಾಲೂಕಿನ ಕುಂಬಳೆ, ಇನ್ನೊಂದು ಘಾಟ (ಕುಕ್ಕೆ) ಸುಬ್ರಹ್ಮಣ್ಯ ಕ್ಷೇತ್ರ. ಈ ಎರಡು ಮೂಲದ ಪೀಳಿಗೆಯವರೇ ಆ ಸಮಾಜದಲ್ಲಿ ಕಾಣುತ್ತಾರೆ. ಇವರಲ್ಲಿ, ದೇವಸ್ಥಾನಗಳಲ್ಲಿ ಹಾಡುವುದಕ್ಕೆ ನಿಯುಕ್ತರಾಗಿದ್ದವರು 'ಪಾಟಾಳಿ'ಗಳೆಂದೂ, ಹಾಡುಗಳ ಅರ್ಥ ಹೇಳಲಿಕ್ಕಿದ್ದವರು 'ಪದಾರ್ಥಿ'ಗಳೆಂದೂ ಕರೆಯಲ್ಪಟ್ಟಿರುತ್ತಾರೆ. ಈ ಎರಡು ವರ್ಗದವರು ಮೊದಲಿನಿಂದಲೂ ಯಕ್ಷಗಾನಕ್ಕೆ ಹೆಸರಾದವರು; ಭಾಗವತರಾಗಿಯೂ, ವೇಷಧಾರಿ ಅರ್ಥಧಾರಿಗಳಾಗಿಯೂ, ಕವಿಗಳಾಗಿಯೂ ಖ್ಯಾತಿಗೆ ಬಂದವರು ಈಗಲೂ ಅನೇಕರಿದ್ದಾರೆ.

ಕಾಸರಗೋಡು ತಾಲೂಕಿನ ಕುಂಬಳೆ ಎಂಬುದು ತುಳುನಾಡಿನ ಅರಸರ ರಾಜಧಾನಿಯಾಗಿದ್ದ ಊರು. ಆ ಅರಸುಮನೆತನದ ಕುಲದೇವರು ಕಣಿಪುರದ ಗೋಪಾಲಕೃಷ್ಣ, ಇಷ್ಟದೇವರು ಮಡವೂರ ವಿಘ್ನೇಶ್ವರ. ಆ ರಾಜರಿಗೆ ಪಟ್ಟಾಭಿಷೇಕವಾಗುತ್ತಿದ್ದುದೂ ಆ ದೇವಸ್ಥಾನಗಳಲ್ಲಿ ಎಂದು ಚರಿತ್ರೆಯಿಂದ ತಿಳಿದುಬರುತ್ತದೆ ('ದಕ್ಷಿಣಕನ್ನಡದ ಚರಿತ್ರೆ' ಗಣಪತಿರಾವ್ ಐಗಳು, ಅಧ್ಯಾಯ ೩೩). ಸ್ಥಳಪುರಾಣದ ಪ್ರಕಾರ, ಅಲ್ಲಿ ಕಣ್ವ ಋಷಿಯು ತಪಸ್ಸು ಮಾಡಿಕೊಂಡಿದ್ದುದರಿಂದ 'ಕಣ್ವಪುರ'ವೆಂಬ ಹೆಸರು ಬಂತೆಂದೂ ಅದೇ ರೂಢಿಯಲ್ಲಿ 'ಕಣಿಪುರ'ವೆಂದಾಯಿತೆಂದೂ ಸಾಮಾನ್ಯವಾಗಿ ಊಹಿಸುತ್ತಾರೆ. ಆದರೆ ಮಲೆಯಾಳದಲ್ಲಿ 'ಕಣಿಪುರ' ಎಂದರೆ ವಿಷ್ಣುವಿನ ಅಥವಾ ಶ್ರೀಕೃಷ್ಣನ ನಾಟ್ಯಶಾಲೆ ಎಂಬ ಅರ್ಥವಿದೆ (ಕಣಿಪುರ=A theatre erected on Vishnu, ಮಲೆಯಾಳ-ಇಂಗ್ಲಿಷ್ ನಿಘಂಟು: ಡಾ. ಗುಂಡರ್ಟ್) ಹಿಂದಕ್ಕೆ ಆ ದೇವಸ್ಥಾನದ ಮುಂಭಾಗ ಅರ್ಧಾಂಶವು ನಾಟ್ಯಮಂಟಪ (ಕೂತ್ತಂಬಲ) ಆಗಿತ್ತೆಂದು ಅಲ್ಲಿಯ ಸ್ಥಳವಂದಿಗರೂ ಹೇಳುತ್ತಾರೆ; ಆ ಮಂಟಪಕ್ಕಿದ್ದವೆನ್ನಲಾದ ಶಿಲಾಸ್ತಂಭಗಳು ಅಲ್ಲೇ ಆಚೀಚೆ ಬಿದ್ದುಕೊಂಡಿರುವುದನ್ನು ನಾವೂ ಕಾಣಬಹುದಾಗಿದೆ. ಆ ನಾಟ್ಯಮಂಟಪದ ಸುತ್ತಲೂ ಇದ್ದಂಥವು ಎನ್ನಲಾದ ಬೇರೆ ಬೇರೆ ನಾಟ್ಯಭಂಗಿಯಲ್ಲಿರುವ ಆಳೆತ್ತರದ ಸ್ತ್ರೀವಿಗ್ರಹಗಳು ದೇವಸ್ಥಾನದ ಅಟ್ಟದಲ್ಲಿರುವುದನ್ನು ನೋಡಬಹುದು. ಆದುದರಿಂದ 'ಕಣಿಪುರ'ವೆಂಬ ಹೆಸರು ಮೂಲತಃ ಶ್ರೀಕೃಷ್ಣನ ನಾಟ್ಯಶಾಲೆ ಎಂಬ ನಿಜಾರ್ಥದಲ್ಲಿ ಆ ದೇವಸ್ಥಾನಕ್ಕೇ ಬಂದುದಿರಬೇಕೆಂದು ತೋರುವುದು. ಸ್ಥಳಪುರಾಣಕರ್ತರು ಅದನ್ನು 'ಕಣ್ವಪುರ'ವೆಂದು ಸಂಸ್ಕೃತೀಕರಿಸಿ ಹೊಸ ಅರ್ಥ ಕಲ್ಪಿಸಿದ್ದರೆ ಅದು ವಿಶೇಷವಲ್ಲ.

## ಕವಿ–ಕಾವ್ಯ ವಿಚಾರ

ಕುಂಬಳೆಯ ಕವಿ ಪಾರ್ತಿಸುಬ್ಬನು ಈ ಕಣಿಪುರ ಕೃಷ್ಣದೇವಸ್ಥಾನದಲ್ಲಿ ಪಾಟಾಳಿಯಾಗಿದ್ದವನೆಂದೂ ರಾಮಾಯಣಾದಿ ಅನೇಕ ಯಕ್ಷಗಾನಗಳನ್ನೂ ಸಭಾಲಕ್ಷಣ ಶಾಸ್ತ್ರಗ್ರಂಥವನ್ನೂ ರಚಿಸಿ, ಕೇರಳದ ಕಥಕ್ಕಳಿಯ ಆದರ್ಶದಿಂದ ತುಳುನಾಡಿನಲ್ಲಿ ಯಕ್ಷಗಾನದ ಶಾಸ್ತ್ರೀಯ ಸಂಪ್ರದಾಯವನ್ನು ರೂಢಿಗೆ ತಂದವನೆಂದೂ ಪ್ರತೀತಿಯಿದೆ. ಆ ಕುರಿತು ಪರಂಪರೆಯಿಂದ ಬಂದ ತಿಳಿವಳಿಕೆ ಏನಿತ್ತೆಂಬುದನ್ನು ದಕ್ಷಿಣಕನ್ನಡದ ಗಣ್ಯ ವಿದ್ವಾಂಸರನೇಕರು ಲೇಖನ ಭಾಷಣಗಳ ಮೂಲಕವೂ ಗ್ರಂಥರೂಪದಲ್ಲಿಯೂ ಈ ಶತಕಾರಂಭದಿಂದಲೇ ಪ್ರಕಾಶಕ್ಕೆ ತಂದಿರುತ್ತಾರೆ. ಕೀರ್ತಿಶೇಷರಾದ ಅಂಥ ಕೆಲವರ ಉಲ್ಲೇಖಗಳ ಸಾರಾಂಶ ಹೀಗಿದೆ—

ಶ್ರೀ ಗೋವಿಂದಪೈ, ಮಂಜೇಶ್ವರ—"ಯಕ್ಷಗಾನದ ಗುರುವೂ ಆಚಾರ್ಯನೂ ಆದ ಪಾರ್ತಿಸುಬ್ಬನೆಂದರೆ ಪಾರ್ವತಿಯ ಮಗ ಸುಬ್ಬನೇ ವಿನಾ ಅನ್ಯನಲ್ಲವೆಂದು ಬೇಕಾದಷ್ಟು ನಿಸ್ಪೃಷ್ಟವಿರುತ್ತದೆ. ಆತನು ಕುಂಬಳೆಯ ಪಾಟಾಳಿಗಳ ಮನೆತನದವನು. ಕುಂಬಳೆಯ ಬಯಲಾಟದ ಮೇಳದಲ್ಲಿ ಭಾಗವತನಾಗಿದ್ದನು. ತಿರುವಾಂಕೋಡು ರಾಜ್ಯದಲ್ಲಿ ವಿದ್ಯಾಭ್ಯಾಸ ಮಾಡಿದವನು. ಅಲ್ಲಿಯ ಕೂತ್ತುಕ್ಕಳಿಗಳ ಬಗೆಯವೇ ವೇಷಗಳನ್ನು ನಮ್ಮ ತುಳುನಾಡಿನ ಯಕ್ಷಗಾನದಲ್ಲಿ ರೂಪಿಸಿದವನು. ರಾಮಾಯಣದಲ್ಲಿ ಪಟ್ಟಾಭಿಷೇಕದಿಂದ ಇಂದ್ರಜಿತು ಕಾಳಗದವರೆಗಿನ ಯಕ್ಷಗಾನ ಪ್ರಸಂಗಗಳನ್ನಾದರೂ ಅವನು ರಚಿಸಿದ್ದೆಂಬ ನಿರ್ಣಯವಿದೆ. 'ಕೃಷ್ಣಬಾಲಲೀಲೆ' ಯೂ ಇವನ ರಚನೆಯೆಂದು ಪ್ರತೀತಿಯಿದೆ. ಯಕ್ಷಗಾನ ಆಟಗಳಿಗೆ ಮೂಲಾಧಾರವಾಗಿರುವ 'ಸಭಾಲಕ್ಷಣ'ವೆಂಬ ಉತ್ತಮ ಗ್ರಂಥವನ್ನು ಅವನೇ ರಚಿಸಿದವನೆಂದೂ ಹೇಳುತ್ತಾರೆ. ಅವನ 'ವಾಲಿಸುಗ್ರೀವ ಕಾಳಗ', 'ಕುಂಭಕರ್ಣ ಇಂದ್ರಜಿತು ಕಾಳಗ'ಗಳಂತೂ ಬಲು ಚಿಕ್ಕವು. ಮದವೂರು ಗಣಪತಿ ದೇವಸ್ಥಾನದಲ್ಲಿ ಈಗ ಸುಮಾರು ೧೬೫ ವರ್ಷಗಳ ಹಿಂದೆ ನಡೆದಿದ್ದ ಮೂಡಪ್ಪ ಸೇವೆಯಲ್ಲಿ ಭಾಗವಹಿಸಿದ್ದನೆಂಬುದಕ್ಕೆ ಅಲ್ಲಿಯ ಓಲೆಯಗರಿಯದೇನೋ ಪ್ರತಿಯಲ್ಲಿ ಇದ್ದುದನ್ನು ಕೇಳಿದ್ದೇನೆ"—(ಮದ್ರಾಸು ಆಕಾಶವಾಣಿಯ ಭಾಷಣ, ೧೯೪೯, ಲೇಖನ: 'ನವಭಾರತ', ಮಂಗಳೂರು, ೧೯೫೬; 'ಮಧುಪುರ'–ಗ್ರಂಥ, ಗೀತಾ ಪ್ರಕಾಶನ, ಕಾಸರಗೋಡು, ೧೯೬೩).

ಶ್ರೀ ಮುಳಿಯ ತಿಮ್ಮಪ್ಪಯ್ಯ, ಮಂಗಳೂರು — "ಪಾರ್ತಿಸುಬ್ಬನು ಪಾಟಾಳಿಗಳ ವಂಶಜನು. ಕುಂಬಳೆ ಅರಸರ ಆಶ್ರಯದಿಂದ ಕೇರಳದ ಕಥಕಳಿಯಲ್ಲಿ ಅಭ್ಯಾಸ–ಅನುಭವಗಳನ್ನು ಪಡೆದು ಬಂದವನು. ಯಕ್ಷಗಾನದ ಮೇಳದಲ್ಲಿ ಭಾಗವತನಾಗಿ ಕುಂದಾಪುರ ತಾಲೂಕಿನವರೆಗೂ ಸಂಚಾರ ಕೈಕೊಂಡಿದ್ದನು. ಅಲ್ಲಿಯ ಅಣೆಯ ಗುಡ್ಡೆಯ ವಿಘ್ನೇಶ್ವರನ ಮುಂದೆ ಒಂದು ಸ್ತುತಿಕೀರ್ತನೆಯನ್ನು ರಚಿಸಿ ಹಾಡಿದ್ದನು."

ಎಂದು 'ದಯಮಾಡೊ ವಿಘ್ನರಾಜ—ಸುಬ್ಬನ ಮೇಲೆ . . .' ಎಂಬ ಆ ಕೀರ್ತನೆಯನ್ನು ತಮ್ಮ ಗ್ರಂಥದಲ್ಲಿ ಉದ್ಧರಿಸಿ ಕೊಟ್ಟಿದ್ದಾರೆ ('ಪಾರ್ತಿಸುಬ್ಬ'-ಗ್ರಂಥ, ಮುದ್ರಿತ ೧೯೪೮).

ದಿ| ಬಡಕಬ್ಬೈಲು ಪರಮೇಶ್ವರಯ್ಯ, ಉಡುಪಿ ತಾಲೂಕು ಪೊಳಲಿ–"ಪಾರ್ವತಿಯ ಮಗ ಸುಬ್ಬನೇ ಪಾರ್ತಿಸುಬ್ಬ. ಕಣಿಪುರದ ಕೃಷ್ಣದೇವಾಲಯದ ಪಾಟಾಳಿಯಾಗಿದ್ದ ಅವನಿಂದಲೇ ತುಳುನಾಡಿನಲ್ಲಿ ಯಕ್ಷಗಾನವೆಂಬುದು ಉದಯಕ್ಕೆ ಬಂದುದಾಗಿದೆ. ಆತನು ತುಳುವಿನಲ್ಲಿಯೂ ಅನೇಕ ಕವಿತೆಗಳನ್ನು ರಚಿಸಿದ್ದನು. ಕಣಿಪುರದ ಕೃಷ್ಣನ ಅಂಕಿತವಿರುವ ಆ ಕೀರ್ತನೆಗಳನ್ನು ತುಳುಜನರ ಬಾಯಿಂದ ಇಂದೂ ಕೇಳಬಹುದು" ಎಂದು ತಾವು ೧೯೦೦ನೆಯ ಇಸವಿಯಲ್ಲಿ ಕಾರ್ಕಳದಲ್ಲಿ ಒಬ್ಬ ಭಿಕ್ಷುಕನು ಹಾಡುವುದನ್ನು ಕೇಳಿದ ತುಳು ಪದ್ಯವೊಂದನ್ನು ಸಂಗ್ರಹಿಸಿ ಕೊಟ್ಟಿದ್ದಾರೆ.—('ತುಳು ಕೃಷ್ಣಸಂಧಾನ'-ಗ್ರಂಥ, ಮುನ್ನುಡಿ, ಮುದ್ರಿತ ೧೯೨೮).

ದಿ| ಕವಿಭೂಷಣ ಕೆ.ಪಿ. ವೆಂಕಪ್ಪಶೆಟ್ಟಿ, ಬೆಳ್ತಂಗಡಿ — "ಕಣಿಪುರದ ಪಾರ್ತಿಸುಬ್ಬಕವಿಯೇ ತುಳುನಾಡಿನಲ್ಲಿ ಯಕ್ಷಗಾನವನ್ನು ಪ್ರಯೋಗಕ್ಕೆ ತಂದ ಮೂಲಪುರುಷನು. ಅದಕ್ಕೆ ಸೂತ್ರರೂಪದಂತಿರುವ ಸಭಾಲಕ್ಷಣವೆಂಬ ಕೈಪಿಡಿಯನ್ನೂ ರಾಮಾಯಣ ಯಕ್ಷಗಾನಗಳನ್ನೂ ರಚಿಸಿ 'ಯಕ್ಷಗಾನ ವಾಲ್ಮೀಕಿ' ಎಂದು ಬಿರುದಾಂಕಿತನಾಗಿದ್ದನು. ಮಲಬಾರಿನ ಕಥಕಳಿ ಪ್ರಯೋಗವನ್ನೇ ದಕ್ಷಿಣಕನ್ನಡದಲ್ಲಿ ಯಕ್ಷಗಾನವಾಗಿ ಪರಿವರ್ತಿಸಿದವನು. ಅವನ 'ಸಭಾಲಕ್ಷಣ' ಗ್ರಂಥದಲ್ಲಿ ಕಥಕ್ಕಳಿಯ ಮೂಲಮಾತೃಕೆಗಳಿರುತ್ತವೆ. ಕೀರ್ತಿಶೇಷರಾದ ಅನೇಕ ಮಂದಿ ದಕ್ಷಿಣಕನ್ನಡದ ಯಕ್ಷಗಾನಕವಿಗಳು ಅವನ ಕೃತಿಗಳನ್ನು ಮೇಲ್ಪಂಕ್ತಿಯಾಗಿಟ್ಟುಕೊಂಡು ಗ್ರಂಥರಚನೆ ಮಾಡಿದವರು—" ('ರಾಣಾ ರಾಜಸಿಂಹ' ಯಕ್ಷಗಾನಗ್ರಂಥ, ಮುದ್ರಿತ, ೧೯೩೧).

ದಿ| ಕವಿ ಪುಂಡೂರು ದಾಮೋದರಪುಣಿಂಚತ್ತಾಯ, ಕಾಸರಗೋಡು—"ಕನ್ನಡದಲ್ಲಿ ಯಕ್ಷಗಾನವನ್ನುಂಟುಮಾಡಿದ ಮತ್ತು ಅದರ ತಾಳ ಮೇಳ ನಿರ್ಣಯವಿರುವ 'ಸಭಾಲಕ್ಷಣ' ಗ್ರಂಥವನ್ನೂ ರಚಿಸಿದ ಪಾರ್ತಿಸುಬ್ಬನ ಜನ್ಮಸ್ಥಾನವು ಕುಂಬಳೆಯಲ್ಲಿ ಕೃಷ್ಣದೇವಸ್ಥಾನವಿರುವ ಕಣಿಪುರವಾಗಿರುತ್ತದೆ"—(ತುಳು 'ಕುಂಬಳಸೀಮೆಯ ಚರಿತ್ರೆ', ಪದ್ಯಗ್ರಂಥ, ಮುದ್ರಿತ, ೧೯೫೯).

ದಿ| ಬಿ. ರಂಗಪ್ಪಯ್ಯ, ಪುತ್ತೂರು—"ಕುಂಬಳೆಯಲ್ಲಿ ಹುಟ್ಟಿದವನಾದ ಯಕ್ಷಗಾನಕವಿ ಪಾರ್ತಿಸುಬ್ಬನೇ ರಾಮಾಯಣ ಕೃತಿಗಳನ್ನೂ ಶಾಸ್ತ್ರಗ್ರಂಥವಾದ 'ಸಭಾಲಕ್ಷಣ'ವನ್ನೂ ರಚಿಸಿ ಯಕ್ಷಗಾನವನ್ನು ಉದ್ಧರಿಸಿದವನು"—('ಯಕ್ಷಗಾನ ಪರಿಸ್ಥಿತಿ'-ಪದ್ಯಗ್ರಂಥ, ಮುದ್ರಿತ, ೧೯೫೯).

'ಕರ್ನಾಟಕ ಕವಿಚರಿತ್ರೆ'ಯಲ್ಲಿಯೂ(ಸಂಪುಟ ೩) ಈತನ ವಿಚಾರವಾಗಿ— ಪಾರ್ತಿ (ಪಾರ್ವತಿಯ) ಸುಬ್ಬಯ್ಯ. ಇವನು ಶಿವಬ್ರಾಹ್ಮಣ. ರಾಮಾಯಣಕ್ಕೆ ಸಂಬಂಧಪಟ್ಟ

ಹಲವು ಯಕ್ಷಗಾನಗಳನ್ನು ರಚಿಸಿದ್ದಾನೆ—'ಪುತ್ರಕಾಮೇಷ್ಟಿ', 'ಪಂಚವಟಿ', 'ವಾಲಿ ಸುಗ್ರೀವರ ಕಾಳಗ', 'ಉಂಗುರ ಸಂಧಿ', 'ಸೇತು ಬಂಧನ', 'ಅಂಗದಸಂಧಾನ', 'ಸಭಾ ಲಕ್ಷಣ'. ಇವನ ಸ್ಥಳ ಕುಂಭಕಣಿ ( ಕುಂಬೈಕಣಿಪುರ?): ಈತನು ಉಪಯೋಗಿಸಿರುವ ಅಂಕಿತ 'ಕಣಿಪುರ ಗೋಪಾಲಕೃಷ್ಣ' ಎಂದು ಕೊಡಲಾಗಿದೆ.

ವಿದ್ವಾನ್ ಕವಿ ಕೈಯಾರ ಕಿಞ್ಞಣ್ಣ ರೈಗಳವರು ಮೇಲೆ ಹೇಳಿದ 'ಮಧುಪುರ' ಗ್ರಂಥದಲ್ಲಿ (ಪುಟ ೩೧)—'ಕುಂಬಳೆ ಪಾರ್ತಿಸುಬ್ಬಕವಿಯು ತನ್ನ ಯಕ್ಷಗಾನ ಪ್ರಸಂಗಗಳ ಮೂಲಕವೂ ಪ್ರದರ್ಶನಗಳ ಮೂಲಕವೂ ಇಂತಹ ಒಂದು ಕಲಾಸಾಹಿತ್ಯ ವೈಖರಿಯನ್ನು ಪ್ರಚಾರ ಪಡಿಸಿದ್ದು ಮಾತ್ರವಲ್ಲ, ಆತನ ನಂತರ ಅದೇ ಹಾದಿ ಹಿಡಿದು ಅನೇಕ ಪ್ರತಿಭಾನ್ವಿತ ಯಕ್ಷಗಾನ ಪಟುಗಳು ಇಲ್ಲಿ ಕಲಾಸೇವೆ ಮಾಡಿದರು.' ಎಂದಿದ್ದಾರೆ

ಈಗ ಹದಿನಾಲ್ಕು ವರ್ಷಗಳ ಹಿಂದೆ (ತಾ. ೧೧-೧೨-೧೯೬೦) ಕುಂಬಳೆ ಊರಿನ ನಾರಂಪಾಡಿ (ನೀಲಂಗಳ) ಎಂಬಲ್ಲಿರುವ ಪಾಟಾಳಿ ಸುಬ್ಬರಾಯರ ಮಗ ಯಕ್ಷಗಾನ ನಿವೃತ್ತವೇಷಧಾರಿಗಳಾಗಿದ್ದ ರಾಮಯ್ಯ(ಪ್ರಾಯ ೬೫)ಎಂಬವರು ನಮ್ಮೊಡನೆ ಮುಖತಃ ಹೇಳಿದ ವಿಚಾರ ಹೀಗಿದೆ—"ಪಾರ್ತಿಸುಬ್ಬನು ನಮ್ಮ ವಂಶದ ಹಿರಿಯನು. ಅವನ ಪೀಳಿಗೆ ಯಲ್ಲಿ ಈಗ ನಮ್ಮದು ಒಂದೇ ಮನೆಯಿರುವುದು. ಕಣಿಪುರ ಕೃಷ್ಣದೇವಸ್ಥಾನದ ಒತ್ತಿನಲ್ಲಿ ನಮ್ಮ ಮೂಲದ ತರವಾಡು(ಕುಟುಂಬದ ಮನೆ)ಇದ್ದದ್ದು. ಆ ಹಿತ್ತಲಿಗೆ 'ಪಾರ್ತಿಸುಬ್ಬನ ಹಿತ್ತಲು' ಎಂದೇ ಕರೆಯುವ ರೂಢಿಯಾಗಿತ್ತು. ಎಂದರೆ ಅದು ಅವನ ಹೆಸರ ವರ್ಗದ್ದು. ಸುಮಾರು ಎಂಬತ್ತು-ತೊಂಬತ್ತು ವರ್ಷಗಳ ಹಿಂದೆ ಇರಬಹುದು, ಆ ಹಿತ್ತಲು ಕೂಡಲು ಶಾನುಭಾಗರ ಮನೆಯವರಿಗೆ ಹೋಗಿದೆ. ಪಾರ್ತಿಸುಬ್ಬನು ಕಥಕಳಿಯಲ್ಲಿ ಭಾಗವತ ನಾಗಿದ್ದನಂತೆ. ಅವನ ತಮ್ಮನು ಹನುಮಂತನ ವೇಷದಲ್ಲಿ ಪ್ರಸಿದ್ಧನಾಗಿದ್ದು ಅನಂತ ಶಯನ ಅರಸರಿಂದ ಮನ್ನಣೆ ಪಡೆದಿದ್ದನಂತೆ. ಸುಬ್ಬನು ರಾಮಾಯಣ ಪ್ರಸಂಗಗಳನ್ನಲ್ಲದೆ 'ಕೃಷ್ಣಚರಿತೆ'ಯನ್ನೂ 'ಐರಾವತ'ವನ್ನೂ ರಚಿಸಿದ್ದನು. ಕುಂಬೈಯಲ್ಲಿ ದಶಾವತಾರ ಮೇಳ ಅವನಿಂದ ಸುರುವಾದದ್ದಂತೆ."

ಉಡುಪಿಯ ಮಧ್ವಸಿದ್ಧಾಂತ ಗ್ರಂಥಾಲಯದವರು ಮುದ್ರಿಸಿ ಪ್ರಕಟಪಡಿಸಿರುವ ರಾಮಾಯಣ ಪ್ರಸಂಗಗಳಲ್ಲಿ 'ಕುಂಬಳೆಯ ಪಾರ್ತಿಸುಬ್ಬ ಕವಿಯಿಂದ ರಚಿತವಾದ್ದು' ಎಂದು ಕಾಣಿಸಿರುತ್ತಾರೆ-(ಪಂಚವಟಿ ವಾಲಿಸುಗ್ರೀವರ ಕಾಳಗ, ಐದನೆಯ ಮುದ್ರಣ, ೧೯೩೪).

ಕಾಸರಗೋಡು,ಕುಂಬಳೆ, ಮದವೂರು ಈ ಸ್ಥಳವಂದಿಗರನ್ನು ಕೇಳಿದಲ್ಲಿ ಎಲ್ಲರೂ ಇವೇ ಸಮಾಚಾರಗಳನ್ನು ಹೇಳುತ್ತಾರೆ. ಪಾರ್ತಿಸುಬ್ಬನ ಹಿತ್ತಿಲು ಅಲ್ಲಿ ಇರುವುದನ್ನು ತೋರಿಸುತ್ತಾರೆ. ಅದು ಕೂಡಲು ಮನೆತನದವರಿಗೆ ಹೋಗಿರುವ ಸಂಗತಿಯೂ ಅಲ್ಲಿ ಜನಜನಿತವಾಗಿದೆ. ಮದವೂರು ವಿಘ್ನೇಶ್ವರ ದೇವಸ್ಥಾನದ ಒಂದು ಜಲದ್ರೋಣಿಯಲ್ಲಿ 'ಪಾರ್ತಿಸುಬ್ಬನು ಕೊಟ್ಟ ಕಾಣಿಕೆ' ಎಂದು ಕೊರೆದ ಬರೆಹವಿರುತ್ತದೆ.

ಮೇಲಿನ ಹೇಳಿಕೆಗಳಲ್ಲಿ ಕಂಡುಬರುವ ವಿಚಾರಗಳಲ್ಲಿ ಕಲ್ಪಿತ ಅಥವಾ ಅತಿಶಯೋಕ್ತಿ ಇರುವುದಿಲ್ಲವೆಂಬುದು ಆತನ ಗ್ರಂಥಗಳನ್ನು ಪರಿಶೀಲಿಸಿದಲ್ಲಿ ವ್ಯಕ್ತವಾಗುವದು. 'ಸಭಾ ಲಕ್ಷಣ' ಎಂಬುದು ಯಕ್ಷಗಾನ ಆಟದಲ್ಲಿ ಮೊದಲಾಗಿ ನಡೆಯಲಿರುವ ಪೂರ್ವರಂಗ ವಿಧಿಯಾಗಿರುತ್ತದೆ. ದಕ್ಷಿಣೋತ್ತರ ಕನ್ನಡ ಜಿಲ್ಲೆಗಳ ಯಾವತ್ತೂ ದಶಾವತಾರ ಆಟಗಳು ಸಭಾ ಲಕ್ಷಣಪೂರ್ವಕವಾಗಿಯೇ ನಡೆಯುವಂಥವು. ಆ ಸಭಾಲಕ್ಷಣದಲ್ಲಿ ಮೊದಲು ಸ್ತುತಿಸಲ್ಪಡುವವನು ಈ. ಮದವೂರ ವಿಘ್ನೇಶ. ತಾಳಮದ್ದಳೆಯಲ್ಲಿಯಾದರೂ 'ಮುದದಿಂದ ನಿನ್ನ ಕೊಂಡಾಡುವೆನು ಅನವರತ ಮದವೂರ ವಿಘ್ನೇಶ ದೇವ ಜಗದೀಶ' ಎಂಬ ಆ ಸ್ತುತಿಪದ್ಯವನ್ನು ಹಾಡದೆ ಪ್ರಸಂಗ ಹೇಳುವ ಸಂಪ್ರದಾಯವಿಲ್ಲ. ಕೊನೆಯಲ್ಲಿಯೂ ಆ ವಿಘ್ನೇಶ್ವರನ ಸ್ತುತಿಯಿಂದಲೇ ಮಂಗಳವಾಗುವುದು. ಆದುದರಿಂದ ಈ 'ಸಭಾಲಕ್ಷಣ' ಗ್ರಂಥವು ಅಲ್ಲಿ ಯಕ್ಷಗಾನವನ್ನು ರಂಗಕ್ಕೆ ತಂದ ಮೊದಲ ಕೃತಿಯಾಗಿರುವುದರಲ್ಲಿ ಸಂದೇಹ ಕಾಣುವುದಿಲ್ಲ. ಆ ಸಭಾಲಕ್ಷಣ ಪ್ರಯೋಗದಲ್ಲಿ ರಾಮದೇವರ ಸ್ತುತಿಯೂ ಬಂದಿರುವುದಲ್ಲದೆ ರಾಮನ ವೇಷದ ಒಡ್ಡೋಲಗವೂ ಸಾಂಪ್ರದಾಯಿಕವಾಗಿ ನಡೆಯುವುದಿದೆ. ಆಡುವ ಪ್ರಸಂಗ ರಾಮಾಯಣದ್ದಲ್ಲವಾದರೂ ಸಭಾಲಕ್ಷಣದಲ್ಲಿ ಒಮ್ಮೆ ರಾಮನವೇಷ ಒಡ್ಡೋಲಗವಾಗಲೇಬೇಕು. ಆಗ ಹಾಡುವ ಪದ್ಯವೂ ಪಾರ್ತಿಸುಬ್ಬನ 'ಪುತ್ರಕಾಮೇಷ್ಟಿ' ಪ್ರಸಂಗದಲ್ಲಿ ದಶರಥನ ಒಡ್ಡೋಲಗಕ್ಕಿರುವ ಪದ್ಯವೇ ಆಗಿರುತ್ತದೆ. ಆ ರಾಮನ ವೇಷವನ್ನು ಕುಣಿಸುವಲ್ಲಿ 'ಪಂಚವಟಿ ಪ್ರಸಂಗ'ದ ಒಂದೆರಡು ಪದ್ಯಗಳು ಸಾಂಪ್ರದಾಯಿಕವಾಗಿ ಹಾಡಲ್ಪಡುತ್ತವೆ. ಆದುದರಿಂದ ಆ 'ರಾಮಾಯಣ'ವು ಸಭಾಲಕ್ಷಣದೊಂದಿಗೇ ರಂಗಕ್ಕೆ ಬಂದ ಮೂಲಕೃತಿಯಾಗಿರುವುದು ಸಂಭಾವ್ಯವೆಂದೇ ಹೇಳಬೇಕು. ಸಭಾಲಕ್ಷಣದ ಆ ರಾಮನ ಸ್ತುತಿಪದ್ಯಗಳಲ್ಲಿ, (ಕಥಕಳಿ ರಾಮಾಯಣದ ಕರ್ತೃ) ಬಾಲಕೇರಳವರ್ಮನೆಂಬ ರಾಜನಿಂದ ಸ್ತುತಿಸಲ್ಪಟ್ಟವನು ಎಂಬ ಮಾತು ಬರುತ್ತದೆ—'ವರದ ರಘುಕುಲ ಕಾಲವಾರಣಧ್ವಂಸಿ ವರ ವಂಚಿಬಾಲಕ ವೀರ ಕೇರಳವಿಭುಸ್ತುತ'. ಇದಲ್ಲದೆ ಇನ್ನೂ ಕೆಲವು ಮಲೆಯಾಳ ಪದ್ಯಗಳೂ ವಾಕ್ಯಗಳೂ 'ಸಭಾಲಕ್ಷಣ'ದಲ್ಲಿರುವುದನ್ನು ಮುಂದೆ ನೋಡಬಹುದು. ಅವುಗಳಲ್ಲಿ, 'ಮದಗಜವದನಂ ತಂ ವಿಘ್ನ ವಿಚ್ಛೇದದಕ್ಷಂ . . .' ಎಂಬ ವಿಘ್ನೇಶ ಸ್ತುತಿ ಶ್ಲೋಕವೂ 'ಪ್ರಾಪ್ತಾನಂತ ಘನಶ್ರಿಯಃ ಪ್ರಿಯತಮ ಶ್ರೀರೋಹಿಣೀಜನ್ಮನೋ । ವಂಚಿಕ್ಷ್ಮಾವರ ವೀರಕೇರಳವಿಭೋ . . . ' ಎಂಬ ವೃತ್ತವೂ ಕಥಕಳಿ ರಾಮಾಯಣ ಪ್ರಬಂಧಗಳ ಆರಂಭದಲ್ಲಿ ಇರುವುವೇ ಆಗಿರುತ್ತವೆ. ಇವೆರಡೂ ವೃತ್ತಗಳು ಪಾರ್ತಿಸುಬ್ಬನ ರಾಮಾಯಣ ಪ್ರಸಂಗಗಳ ಓಲೆ ಪ್ರತಿಗಳಲ್ಲಿ ಸೇರಿಕೊಂಡಿರುವುದು ಕಂಡು ಬರುತ್ತದೆ, ಪ್ರಸ್ತುತ ಸಂಪಾದನೆಯ ಆಕರಗ್ರಂಥಗಳ ಯಾದಿಯಲ್ಲಿ ಅಂಥವನ್ನು ಕಾಣಬಹುದು. ಸಭಾಲಕ್ಷಣದಲ್ಲಿರುವ 'ಹರಿಹರ ವಿಧಿನುತ ಅಮರಪೂಜಿತ . . .' ಎಂಬ ವಿಘ್ನೇಶಸ್ತುತಿಪದ್ಯವು ಕಥಕಳಿಯ 'ತೋಡಯಮಂಗಲ'ದಲ್ಲಿ ಇಂದಿಗೂ ತಪ್ಪದೆ

ಹಾಡಲ್ಪಡುವಂಥಾದ್ದಾಗಿದೆ. ಅಷ್ಟೇ ಅಲ್ಲ, ಕಥಕಳಿಯ ಮೂಲಪ್ರವರ್ತಕನಾದ ಬಾಲ ಕೇರಳವರ್ಮನೆಂಬ 'ಕೊಟ್ಟಾರಕ'ರದ ರಾಜನಿಂದ ರಚಿಸಲ್ಪಟ್ಟ ಆ ಮಲೆಯಾಳ ರಾಮಾಯಣ ಕೃತಿಗಳನ್ನು ಪರಿಶೀಲಿಸಿದಲ್ಲಿ, ಸುಬ್ಬನು ತನ್ನ ರಾಮಾಯಣ ಕೃತಿಗಳ ರಚನೆಯಲ್ಲಿ ಆ ಪ್ರಬಂಧಗಳನ್ನು ನೆರಳಂತೆ ಅನುಸರಿಸಿರುವುದು ವ್ಯಕ್ತವಾಗುವುದು. ಅದರ ಎಷ್ಟೋ ಪದ್ಯಗಳು ಇವನ ಕೃತಿಗಳಲ್ಲಿ ಯಥಾರೂಪದ ಅನುವಾದವಾಗಿಯೂ ಬಂದಿವೆ. ಕನ್ನಡಕ್ಕೆ ಅಪೂರ್ವವಾದ ಕೆಲವೊಂದು ಪದ್ಯರೂಪಗಳೂ ವೃತ್ತಬಂಧಗಳೂ ಅದರಲ್ಲಿದ್ದಂಥವನ್ನೇ ಈತನು ಬಳಸಿಕೊಂಡಿರುತ್ತಾನೆ. ಹೀಗೆ ಅವೆರಡು ರಾಮಾಯಣಗಳಲ್ಲಿರುವ ಸಮಾನ ಸಂದರ್ಭಗಳ ಒಂದೊಂದು ಪದ್ಯಗಳನ್ನು ಪ್ರಕೃತ ದಿಙ್ಮಾತ್ರ ಉದಾಹರಣೆಗಾಗಿ ಕೆಳಗೆ ಕೊಡಲಾಗಿದೆ—('ಆಟ್ಟಕ್ಕಥಕ್ಕಳ್' ಸಂ.ಕೆ. ಗೋಪಾಲಪಿಳ್ಳೆ ಬಿ.ಎ. ಶ್ರೀರಾಮವಿಲಾಸಂ ಪ್ರೆಸ್, ಕೊಲ್ಲಂ, ೧೯೫೪):

**ಪುತ್ರಕಾಮೇಷ್ಟಿಯಲ್ಲಿ**

ಕಥಕಳಿ—

ನೃಪತೇ ಮಹಾಭಾಗ ದಶರಥ ಸುಮತೇ ।
ಪುತ್ರಕಾಮೇಷ್ಟಿ ಚೆಯ್ದು ಕೊಂಡಿದಾನೀಂ ।
ಅತ್ರ ನಿನ್ಮನೋರಥಂ ಸಾಧಿಕ್ಕುಮಲ್ಲೊ ।
ಪುತ್ರರ್ ನಾಲುಪೇರುಂಡಾವುಂ ನಿನಕ್ಕುಡನೇ ।
ಚಿತ್ತಪೀಡಯಿನ್ನಿಯೆ ಸ್ವೈರಮಾಯ್‌ವಾಳಾಂ ॥

(ಪು. ೧೦೩, ಪಂಕ್ತಿ ೫–೯)

ಯಕ್ಷಗಾನ—

ನೃಪತೇ ಮಹಾರಾಜ ದಶರಥಸುಮತೇ ।
ಪುತ್ರಕಾಮೇಷ್ಟಿಯ ಮಾಡಿದ್ದರಿಂದಲೆ ।
ಅತ್ತ ನಿನ್ನ ಮನೋರಥ ಸಿದ್ಧಿಯಾಯ್ತು ।
ಪುತ್ರರು ನಾಲ್ವರುದಿಪರೀಗ ನೀ ಕೇಳು ।
ಚಿತ್ತಚಂಚಲ ಬಿಟ್ಟು ಸ್ಥಿರವಾಗಿ ಬಾಳಯ್ಯ ॥ (ಪು. ೧೬–ಪದ್ಯ ೬೫)

**ಸೀತಾಸ್ವಯಂವರದಲ್ಲಿ**

ಕಥಕಳಿ—

ತನ್ನಿಡಾಮಿದೆನ್ನುರಚ್ಚು ಪಿನ್ನೆ ಇಲ್ಲ ಎನ್ನು ಚೊಲ್ಕಿಲ್ ।
ಧನ್ಯಶೀಲ ಧರ್ಮದ್ರೋಹ ವನ್ನುಪೋಮಹೋ ॥ (೧೦೬–೩೦, ೩೧)

ಯಕ್ಷಗಾನ—

ಮುನ್ನ ಕೊಡುವೆನೆಂದು ಹೇಳಿ ಇನ್ನು ಇಲ್ಲವೆಂದೆನ್ನಲು ।
ಧನ್ಯಶೀಲ ಧರ್ಮದ್ರೋಹ ಬರುವುದಲ್ಲಯ್ಯಾ ॥ (೨೯–೧೨೬)

ಕಥಕಳಿ—

ಮಿತ್ರವಂಶಜಾತನಾಯ ದಶರಥನ್ ನೀ ।
ಸತ್ಯವಾದಿಯೆನ್ನು ತೋರ್ಞು ಇಂಜು ವನ್ನೇನ್ ॥ (೧೦೭-೧೩,೧೪)

ಯಕ್ಷಗಾನ—

ಮಿತ್ರವಂಶಜಾತನಾದ ಭೂಮಿಪಾಲ ನೀನು ।
ಸತ್ಯವಂತನೆಂದು ನಂಬಿ ಬಂದೆನಲ್ಲ ॥ (೨೮-೧೨೦)

ಕಥಕಳಿ—

ತನಯನೇಷ ರಾಮಚಂದ್ರನತಿಕಿಶೋರಮನುಜನಲ್ಲ ।
ಮನಸಿ ಕಾಣ್ಕ ತನಯಮೇನಮುರಗಶಾಯಿನಂ ॥ (೧೦೭-೨೮,೨೯)

ಯಕ್ಷಗಾನ—

ತನಯನಾದ ರಾಮಚಂದ್ರನತಿಕಿಶೋರಮನುಜನಲ್ಲ ।
ಮನದಿ ತಿಳಿಯೊ ಈತನೀಗ ಗರುಡವಾಹನ ॥ (೨೯-೧೨೭)

(ಮ) ವಿಚ್ಛಿನ್ನಾಭಿಷೇಕ-ಪಟ್ಟಾಭಿಷೇಕದಲ್ಲಿ

ಕಥಕಳಿ—

ಸಖಿ ನೀ ಚೊನ್ನದು ಕೇಟ್ಟು ಸಕಲವುಮರಿಂಞು ಞಾನ್ ।
ಸಹಿಯಾಯಿ ತೊಟ್ಟುಂತನ್ನೆ ಸಂತತಂ ಚಿಂತಿಕ್ಕುಂತೋರುಂ ॥
(೧೨೨-೨೪,೨೫)

ಯಕ್ಷಗಾನ—

ಸಖಿ ನೀ ಪೇಳಿದ ಮಾತು ಸಕಲವೂ ಲೇಸಾಯ್ತು ।
ಯುಕುತಿಯೇನಿದಕಿನ್ನು ಎನ್ನೊಳ್ ಪೇಳು ಕಂಡುದನ್ನು ॥ (೭೦-೪೦)

ಕಥಕಳಿ—

ಕಿಂತು ಕಾಂತನ್ ಮುನ್ನಂ ತವ ತನುವಲ್ಲೊ ರಂಡುವರಂ ।
ಎಂದಿನಿನ್ನು ಖೇದಿಕ್ಕುನ್ನು ಇನ್ನದಿನೇ ಚೋದಿಚ್ಚಾಲುಂ ॥ (೧೨೩-೩೦,೩೧)

ಯಕ್ಷಗಾನ—

ಹಿಂದೆ ಮೆಚ್ಚಿ ನಿನಗೆ ಆ ನರೇಂದ್ರ ಕೊಟ್ಟ ಮಾತೆರಡ ।
ಇಂದು ಕೇಳು ಕೊಟ್ಟಮೇಲೆ ಮುಂದೆ ಪೇಳು ಕಾರ್ಯ ಬಾಲೆ ॥
(೭೦-೪೨)

(ಮ) ಖರವಧಂ-ಪಂಚವಟಿಯಲ್ಲಿ

ಕಥಕಳಿ—

ರಾತ್ರಿಂಚರನಾಥನಾಯೊರುತ್ತನುಂಡವನ್ನು ತನ್ನೆ ।
ಹಸ್ತಂಗಳಿರುಪತ್ತುಂಡು ಪೋಲ್-ಅತ್ರಯುಮುಲ್ಲ ।
ಮಸ್ತಕಂಗಳುಂ ಪತ್ತುಂಡುಪೋಲ್—ಅವನ್ ಸ್ತ್ರೀಕ್ಕಳೆ ।

ಅತ್ತಲ್ ವರುತ್ತುನ್ನು ಪೋಲ್ ಸದಾ—ಈ ವಿಪಿನೇ ।
ಆವಾಸಂ ದುಷ್ಕರಂ ಪರಂ ॥ (೧೩೫–೨೮,೩೧)

ಯಕ್ಷಗಾನ—

ರಾತ್ರಿಂಚರನಾಥನಾಗಿ ಮತ್ತೊಬ್ಬ ಖಳನಿರುವನಂತೆ ।
ಮಸ್ತಕಂಗಳು ಹತ್ತುಂಟಂತೆ–ಅಷ್ಟಲ್ಲದವಗೆ ।
ಹಸ್ತಂಗಳಿಪ್ಪತ್ತು ಉಂಟಂತೆ–ಹೆಣ್ಣುಗಳೆಂಬ ।
ಪಿತ್ತ ತಲೆಗೇರಿಹುದಂತೆ—ಈ ವಿಪಿನದೊ ।
ಳಿರುವುದು ಕಷ್ಟ ರಾಘವ ॥ (೧೧೫–೨೯೫)

ಸೀತೆಯ ವಿರಹದಲ್ಲಿರುವ ಶ್ರೀರಾಮನ ಸಂತಾಪದ ಮಾತು

ಕಥಕಳಿ—

ಸಹಜಸೌಮಿತ್ರೇ । ಮಿಹಿರನಂಜಸಾ ।
ದಹನರಶ್ಮಿಯಾಲ್ । ಗಗನೇ ಕಾಣುನ್ನು ।
ಉಡಲಿಲೇರೆಯುಂ । ಚೂಡು ತೋನುನ್ನು ।
ವಿಟಪಿಮೂಲತ್ತಿಲ್ । ಝಡಿತಿ ಪೋಕ ನಾಂ ॥ (೧೫೪–೧೧,೧೨)

ಯಕ್ಷಗಾನ—

ಕಡು ಕಮಲಸಖಕಿರಣ । ಸುಡುತಿದೆ ಮೈಯಾವರಣ ।
ಗಿಡಮರನ ತಂಪಿನೊಳು । ಇಡು ಎನ್ನ ಮಮ ಸಹಜ ॥ (೧೬೬–೧೭೫)

ಕಥಕಳಿ—

ರಘುಪತೇ ವಿಭೋ । ರಜನಿಯಿಲಹೋ ।
ರವಿಯುದಿಕ್ಕುಮೋ । ರುಚಿರಭಾಷಣ ॥ (೧೫೪–೧೩)

ಯಕ್ಷಗಾನ—

ಇರುಳು ಮೂಡುವನೇ । ಸೂರ್ಯ, ಚಂದ್ರನ ।
ಕಿರಣವಲ್ಲವೇ । ನೋಡು ಅಣ್ಣಯ್ಯ ॥ (೧೬೭–೧೭೬)

(ಮೇಲಿನ ಎರಡು ಪದ್ಯಗಳನ್ನು ಕಥಕಳಿ ರಾಮಾಯಣಕಾರನು ಜಯದೇವ ಕವಿಯ ಸಂಸ್ಕೃತ 'ಪ್ರಸನ್ನರಾಘವ ನಾಟಕ'ದಿಂದ ಅನುವಾದಿಸಿದ್ದೆಂದು ತಿಳಿಯಬಹುದು. ಪ್ರಸನ್ನ ರಾಘವದಲ್ಲಿ ಆ ಶ್ಲೋಕ ಹೀಗಿದೆ—"ಸೌಮಿತ್ರೇ ನನುಸೇವ್ಯತಾಂ ತರುರಯಂ ಚಂಡಾಂಶುರುಜ್ಜೃಂಭತೇ । ಚಂಡಾಂಶೋರ್ನಿಶಿ ಕಾ ಕಥಾ ರಘುಪತೇ ಚಂದ್ರೋದಯಮುನ್ಮೀಲತಿ ।")

(ಮ) ವಾಲಿವಧ–ವಾಲಿಸಂಹಾರ

ಕಥಕಳಿ—

ವಿಶ್ವನಾಯಕ—ನಿಂಡೆ ವಾಕ್ಕಿನೆ,
ವಿಶ್ವಸಿಚ್ಚು ಞಾನ್—ಪೋರಿನೆಯ್ಕುಯಾಲ್ ॥ (೧೫೯–೨೭)

ಯಕ್ಷಗಾನ—

ವಿಶ್ವನಾಯಕ—ನಿನ್ನ ವಾಕ್ಯವ ।
ವಿಶ್ವಾಸವೆಂದು—ನಂಬಿದೆನಿಂದು ॥ (೧೭೭-೨೩೩ ಪಲ್ಲವಿ)

ಕಥಕಳಿ—

ಎನ್ನೆ ವೈರಿತನ್-ಮುನ್ನಿಲಾಕ್ಕಿ ನೀ ।
ನಿನ್ನು ಸ್ವೈರಮಾಯ್—ಚೆನ್ನು ನನ್ನಹೋ ॥ (೧೫೯-೩೦)

ಯಕ್ಷಗಾನ—

ಎನ್ನ ವೈರಿಯ—ಮುಂದೆ ನೂಡಿ ನೀ ।
ನಿಂದೆ ಸುಮ್ಮನೆ—ಕಂಡೆ ಚೆನ್ನನೆ ॥ (೧೭೭-೨೩೩)

ಕಥಕಳಿ—

ವಾಲಿತನ್ನೆಯುಂ—ನಿನ್ನೆಯುಂ ಕಂಡಾಲ್ ।
ಆಳುಭೇದಮಾಯ್—ತೋನ್ನುನ್ನಿಲ್ಲ ಹೋ ॥ (೧೫೯-೩೪)

ಯಕ್ಷಗಾನ—

ವಾಲಿಯ ನಿನ್ನ—ಕಾಣಲಿರ್ವರ ।
ಆಳುಭೇದವ—ಅರಿಯದಾದೆನು ॥ (೧೭೮-೨೩೫)

(ವು) ತೋರಣಯುದ್ಧಂ—ಉಂಗುರಸಂಧಿಯಲ್ಲಿ

ಕಥಕಳಿ—

ಈರೇಳುಮೂರು ಕರತ್ತಾಲ್ ಆರಾನ್ನಿನ್ನೆ ಪೂಣ್ಮಾನ್ ।
ಪಾರಂ ಕೊದಿ ಇಂಜುಂಡಲ್ಲೊ ನಾರೀರತ್ನಮೇ ॥ (೧೭೦-೧೭)

ಯಕ್ಷಗಾನ—

ಇಪ್ಪತ್ತೂ ತೋಳಲ್ಲಿ ತೆಗೆದಪ್ಪಿಕೊಂಬುದಕ್ಕೆ ।
ಅಲ್ಪಮನಸಲ್ಲ ಕೇಳೆ ಕರ್ಪೂರಸುಗಂಧಿ ॥ (೨೨೪-೧೬೭)

[ಇನ್ನೂ ನೂರಾರು ಪದ್ಯಗಳಲ್ಲಿ ಇಂತಹ ಸಮಾನಸಂವಾದವಿರುವುದನ್ನು ಹೋಲಿಸಿ ನೋಡಿಕೊಳ್ಳುವುದು.]

ಕನ್ನಡಕ್ಕೆ ಸಹಜವಲ್ಲದ ವೃತ್ತಗಳಿಗೆ ಉದಾಹರಣೆ—'ಪುತ್ರಕಾಮೇಷ್ಟಿ'ಯಿಂದ—

ಕಥಕಳಿ—

ದಶರಥನರಪಾಲನ್ ತಾನ್ ಚೊನ್ನದು ಕೇಟ್ಟ ಶೇಷಂ ।
ವಿಚಲಿತ ತರುಶೈಲಾಂತಂ ಲೋಲಭೂಮಂಡಲಂ ತಂ ।
ಅರುಣವದನರಶ್ಮಿಯುತಂ ಪ್ರೋಜ್ವಲದ್ವಹ್ನಿಸ್ವರೂಪಂ ।
ಕುಶಿಕಸುತಮುನೀಶನೇವಂ ಕೋಪಮುಂ ಪೂಂಡು ಚೊನ್ನಾನ್ ॥
(೧೦೭-೯-೧೨)

ಯಕ್ಷಗಾನ—

ದಶರಥನರಪಾಲ ಪೇಳ್ದುದಂ ಕೇಳುತಾಗ ।
ಎಸೆವರುಣಮುಖಾಕ್ರಾಂತಂ ತತ್ಸಭಾಮಧ್ಯದೊಳಗೆ ।
ಉಸಿರಿಡುತಂ ಭುಗಿಭುಗಿಲೆನುತಾಚಾರ್ಯನನ್ನೀಕ್ಷಿಸುತ್ತ ।
ಕುಶಿಕಜನತಿಕೋಪಾರೂಢಂ ತಾನಾಗಿರ್ದು ಪೇಳ್ದಂ ॥ (೨೭-೧೧೯)

ಇಂಥ ವೃತ್ತವಿಶೇಷಗಳು ಮೂಲತಃ ದ್ರಾವಿಡ ಛಂದಸ್ಸಿನಲ್ಲಿ ಇದ್ದಂಥವು. ಅಲ್ಲಿ ಅವಕ್ಕೆ 'ಅರುಶೀರಡಿಯ ಆಶಿರಿಯ ವಿರುತ್ತ'ಗಳೆಂದು ಹೆಸರು. ತಮಿಳು 'ಕಂಬರಾಮಾಯಣ'ದಲ್ಲಿದ್ದಂಥ ಈ ವೃತ್ತಗಳನ್ನು, ಅದನ್ನು ಅನುಸರಿಸಿದ ಕಥಕ್ಕಳಿಕಾರನು ಆ ಗಣ ನಿಯಮವನ್ನು ಒಂದಿಷ್ಟು ಶಿಥಿಲಗೊಳಿಸಿ ತನ್ನ ಕೃತಿಗಳಲ್ಲಿ ಪ್ರಯೋಗಿಸಿದ್ದಾಗಿದೆ ಎಂದು ವಿಮರ್ಶಕರು ಅಭಿಪ್ರಾಯಪಟ್ಟಿರುತ್ತಾರೆ. ("Attakkatha" by P. Krishnan Nayar) ಮತ್ತು ಇವು ಮಲೆಯಾಳ ಛಂದಸ್ಸಿನಲ್ಲಿ ಪ್ರಸಿದ್ಧವಾದ 'ಕೇಕಯ' ಎಂಬ ವೃತ್ತಕ್ಕೆ ಸಾಧಾರಣ ಸಮೀಪವಾಗುವುದೆನ್ನುತ್ತಾರೆ. ಪಾರ್ತಿಸುಬ್ಬನ 'ಸಭಾಲಕ್ಷಣ'ದಲ್ಲಿಯೂ ಇಂಥ ವೃತ್ತಗಳನ್ನು ಕಾಣಬಹುದು. ಅದರಲ್ಲಿ ಬರುವ ತಮಿಳು 'ಅರಿಪ್ಪಾವಿನಾಟ'ದ ಪದ್ಯಗಳಲ್ಲಿ ಅವೇ 'ಆಶಿರಿಯ' ವೃತ್ತಗಳಿರುತ್ತವೆ.

ಕಳೆದ ೧೯೬೧ನೇ ಇಸವಿಯಲ್ಲಿ ನಾನು ಕಂಡುಕೊಂಡಿದ್ದ ಮೇಲಿನ ವಿಚಾರಗಳನ್ನು ಅಂದೇ ನಾನು ಭಾಷಣಗಳಲ್ಲಿಯೂ ಲೇಖನ, ಗ್ರಂಥರೂಪದಲ್ಲಿಯೂ ಪ್ರಕಾಶಪಡಿಸಿದ್ದೆ. ಆ ಸಂದರ್ಭದಲ್ಲಿ ದಿ। ಮಂಜೇಶ್ವರ ಗೋವಿಂದಪೈಗಳವರು ಬರೆದು ಕಳುಹಿಸಿದ ಪತ್ರದ ಯಥಾಪ್ರತಿ ಕೆಳಗೆ ಕೊಟ್ಟಿದೆ :

ಮಂಜೇಶ್ವರ.
29–7–61

From
M. Govind Pai
Manjeshwar (South Kanara Dist.)

ಗೋವಿಂದಪೈ ಮಾಡುವ ನಮಸ್ಕಾರ.

ಹಲವು ದಿನಗಳಿಂದ ತೊಡಗಿರುವ ಗಾಳಿ ಮಳೆಯಿಂದಾಗಿ ಯಾವ ಕೆಲಸವನ್ನೂ ಕೈಯ್ಕೊಳ್ಳದೆ ಸುಮ್ಮನಿರಬೇಕಾಗಿ, ಕೊಂಚ ಅಶಕ್ತಿಯಿಂದ ವಿಶ್ರಮಿಸುತ್ತಿದ್ದ ನಾನು ನಿಮ್ಮ 'ಕುಂಬಳೆಯ ಪಾರ್ತಿಸುಬ್ಬಕವಿಯ ಕಾಲ ಮತ್ತು ಕರ್ತೃತ್ವದ ನಿರ್ಣಯ' ಎಂಬ ನಿಮ್ಮ ಪುಸ್ತಕವನ್ನು ಓದಿದ್ದರೂ ನಿಮಗೆ ಪತ್ರ ಬರೆಯಲಾರದಿದ್ದೆ. ದಯೆಮಾಡಿ ಕ್ಷಮಿಸುವುದು.

ಪಾರ್ತಿಸುಬ್ಬನು ಕುಂಬಳೆ ಸೀಮೆಯವನೇ ಎಂದೂ, ಆತನೇ ಯಕ್ಷಗಾನಕಲೆಯನ್ನು ಕೇರಳದಿಂದ ನಮ್ಮ ದಕ್ಷಿಣಕನ್ನಡ ಜಿಲ್ಲೆಯ ತುಳುನಾಡಿನಲ್ಲಿ ತಂದನೆಂದೂ ಸಿದ್ಧಪಡಿಸತಕ್ಕಂತೆ ನೀವು ಮುಂದಿರಿಸಿರುವ ದಾಖಲೆಗಳು ಒಪ್ಪತಕ್ಕವಾಗಿವೆ, ಗ್ರಹಣೀಯವಾಗಿವೆ. ಆ ವಿಷಯಗಳಲ್ಲಿ ಇನ್ನು ಸಂಶಯಪಡತಕ್ಕಂತೆ ವಿವೇಕಿ

ಗಳಿಗಾದರೂ ಎಡೆದೊರೆಯಲಾರದೆಂದು ನಾನು ನಂಬುತ್ತೇನೆ, ಹಾಗೂ ನಿಮ್ಮನ್ನು ಮನವಾರೆ ಅಭಿನಂದಿಸುತ್ತೇನೆ. ಶ್ರೀ ದೇವರು ನಿಮಗೆ ಒಳ್ಳೇದು ಮಾಡಲಿ ಎಂದು ಪ್ರಾರ್ಥಿಸುತ್ತೇನೆ.

(ಯಥಾಪ್ರತಿ) ಇತಿ ನಮಸ್ಕಾರ
(Sd.) M. Govind Pai

ಇನ್ನು ಸುಬ್ಬನ ರಚನೆಗಳ ಸಂಸ್ಕೃತವೃತ್ತಗಳಲ್ಲಿ ಛಂದಸ್ಸಿನ ಶೈಥಿಲ್ಯವನ್ನು, ಎಂದರೆ ಗುರುಲಘುದೋಷಗಳನ್ನು ಕಾಣುತ್ತೇವೆ—

'ಧಾತ್ರಿ(ೞ)ಗುತ್ತಮ ಕಣ್ವನಾಮಪುರದಿ(ೞ)ನಿಂತಿರ್ದ ಶ್ರೀಕೃಷ್ಣನ'

'ಎಂದಾರಾಯನ ಮಾತ ಕೇಳ್ದು ನೃಪತಿ(ೞ)ಸಂದೇಹಮಂ ಮಾಡುತ'

'ತಾರಾದೇವಿ ವಿವೇಕದಿಂದ ತಡೆದು(ದೂ)ತತ್ಕಾಂತಗಿಂತೆಂದಳು'

ಇತ್ಯಾದಿ.

ಇಂಥ ಛಂದೋಭಂಗವು ಕಥಕಳಿ ರಾಮಾಯಣ ಪ್ರಬಂಧಗಳಲ್ಲಿ ಸಾಮಾನ್ಯವಾಗಿ ಇರುವಂಥದ್ದೇ—

'ಇತ್ಥಂ ತತ್ಕಾಂತ ಚೊಲ್ಲುಂ ಮೊಳಿಕಳದರಿಕೆ(ೞ) ಕೇಟ್ಟುಡನ್ ಪಂಕ್ತಿಕಂಠನ್
ವಕ್ತ್ರಂ ತಾಳ್ತಿಟ್ಟು ಪೋಯಿ(ೞ) ನಿಜಭವನಮತಿ(ೞ) ಚಿತ್ರಜಾತ್ಯಾ
ಸಮೇತಃ'

'ಭೂಮಿಪಾಲಾಧಿಪಂಡೆ(ೞ) ದೇವಿಮಾರ್ ಪೀಡಯೆಲ್ಲಾಂ ।
ಮಾಮುನಿ(ೞ) ವಾಕ್ಕಿನಾಲೆ(ೞ) ಶಾಂತಮಾಕಿ(ೞ) ತದಾನೀಂ ॥'

ಇತ್ಯಾದಿ

ಮೇಲಿನ ಸಾಲುಗಳಲ್ಲಿ ಕಂಸಗಳ ಹಿಂದಿನ ಹ್ರಸ್ವಾಕ್ಷರಗಳನ್ನು ಕಂಸದೊಳಗೆ ಸೂಚಿಸಿದಂತೆ ದೀರ್ಘವಾಗಿ ಉಚ್ಚರಿಸದೆ ಹೋದಲ್ಲಿ ಛಂದೋಭಂಗವಾಗುವುದನ್ನು ಲಕ್ಷಿಸಬೇಕು.

ಇನ್ನು, ಸುಬ್ಬನು ತಿರುವಾಂಕೂರಿನಲ್ಲಿ ವಿದ್ಯಾಭ್ಯಾಸಗಳನ್ನು ಪಡೆದಿದ್ದನು ಎಂಬುದಕ್ಕೆ, ಆತನ 'ಸಭಾಲಕ್ಷಣ'ದಲ್ಲಿ ಬರುವ 'ಶರಣು ತಿರುವಗ್ರಶಾಲಿವಾಹಿನಿ . . . . ಶರಣು ಶಂಕರಿ . . . ದೇವರಡಿ ಪಣಿಕಾರಿಣಿ' ಎಂಬ ಅನ್ನಪೂರ್ಣೇಶ್ವರಿಯ ಸ್ತುತಿಯಲ್ಲಿ 'ತಿರುವಗ್ರ' ಎಂದು ಆತನು ತಿರುವಾಂಕೋಡನ್ನೇ ಹೇಳಿದ್ದಿರಬೇಕು (ಅಗ್ರ= ಕೋಡು)ಎಂಬಂತೆ ಹಿಂದೆ ಹೇಳಿದ ದಿ। ಕವಿಭೂಷಣ ವೆಂಕಪ್ಪಶೆಟ್ಟರು ಒಂದು ಲೇಖನದಲ್ಲಿ ತರ್ಕಿಸಿರುತ್ತಾರೆ— ('ಸಮರ್ಪಣೆ'–ಗ್ರಂಥ). ಇದೂ ಸಂಭಾವ್ಯವಾಗಿ ತೋರುವುದು. ದ್ರಾವಿಡ–ಕೇರಳಗಳಲ್ಲಿ 'ಅಯ್ಯೆ' ಎಂದು ಪೂಜಿಸಲ್ಪಡುವ ದುರ್ಗೆಯು 'ಶಾಲಿವಾಹಿನಿ' ಅಥವಾ ಶಾತ

ವಾಹಿನಿ ಎಂದೂ 'ಅಯ್ಯನ್ ಅಥವಾ ಅಯ್ಯನಾರ್' ಎಂಬ (ಹರಿಹರಾತ್ಮಜನೆನ್ನಲಾಗುವ) ದೇವರು (ಅಯ್ಯೆಯ ಮಗ ?) ಶಾತವಾಹನ ಅಥವಾ ಶಾಲಿವಾಹನನೆಂದೂ ಕರೆಯಲ್ಪಡುತ್ತಾರೆ ಎಂದು ತಿಳಿಯುವುದು.*

ಸುಬ್ಬನು ದೇವಸ್ಥಾನದ ಪಾಟಾಳಿಯಾಗಿದ್ದನು ಎಂಬುದಕ್ಕೆ, ಆತನ 'ಐರಾವತ' ಪ್ರಸಂಗದ (ಕೆ. ೨೫೫) ಓಲೆ ಪ್ರತಿಯಲ್ಲಿ (ಪು. ೫೯೦, ಟಿಪ್ಪಣಿ).ಅರ್ಜುನನು ಶ್ರೀಕೃಷ್ಣನನ್ನು ಸ್ತುತಿಸುವ ವಾಕ್ಯಗಳು ಸಾಧಕವಾಗಿ ಕಾಣುತ್ತವೆ. ಕುಂಬಳೆ ಕೃಷ್ಣದೇವಸ್ಥಾನದ ಪಾಟಾಳಿಗಳ ಸ್ತುತಿಪಾಠಗಳಲ್ಲಿ ಅವೇ ವಾಕ್ಯಗಳಿರುತ್ತವೆಯೆಂದು ಗೊತ್ತಾಗಿದೆ. ಅದಲ್ಲದೆ, ಅವನ ಪ್ರಸಂಗಗಳಲ್ಲಿ ಅಲ್ಲಲ್ಲಿ ಬರುವ ಸ್ತುತಿಪದ್ಯಗಳಲ್ಲಿ ವೈಷ್ಣವ ಆಳ್ವಾರುಗಳ 'ದಿವ್ಯಪ್ರಬಂಧ'ಗಳ ಭಾವವು ಪ್ರಾಯಿಕವಾಗಿ ಕಂಡುಬರುತ್ತದೆ. 'ದ್ರಾವಿಡವೇದ'ಗಳೆಂದು ಪ್ರಸಿದ್ಧವಾದ ಆ ಪ್ರಬಂಧಗಳು ವೈಷ್ಣವ ದೇವಾಲಯಗಳಲ್ಲಿ ನಿಯತವಾಗಿ ಹಾಡಲ್ಪಡುತ್ತಿದ್ದಂಥವು. ಸುಬ್ಬನ 'ಪಂಚವಟಿಪ್ರಸಂಗ'ದ ಕೊನೆಯಲ್ಲಿ ಖರದೂಷಣರ ವಧೆಯಾದನಂತರ ಶ್ರೀರಾಮನಿಗೆ ಮಂಗಳಾರತಿ ಮಾಡುವ ಈ ಒಂದು ಪದ್ಯವನ್ನು ಪರಿಶೀಲಿಸಿರಿ :

"ಹೃದಯಕಮಲವೆಂಬ ಹರಿವಾಣದೊಳು ದಿವ್ಯ
ಸದಮಲ ಭಕ್ತಿರಸದ ತೈಲದಿ ।
ಪದುಮನಾಭನ ನಾಮವೆಂಬ ಜ್ಯೋತಿಯ ತಂದು
ಮುದದಿಂದ ಜ್ಞಾನದಾರತಿಯೆತ್ತಿರೆ ॥" (ಪು. ೧೨೬-೩೬೬)

ಇದು, ಮುದಲಾಳ್ವಾರ್‌ಗಳೆಂದು ಪ್ರಸಿದ್ಧರಾದ ಮೂವರಲ್ಲಿ (ಪೊಯ್ಗೈಯಾಳ್ವಾರ್, ಬೂತತ್ತಾಳ್ವಾರ್, ಪೇಯಾಳ್ವಾರ್) ಬೂತತ್ತಾಳ್ವಾರ್ ಹಾಡಿದ 'ಇರಂಡಾಂ ತಿರುವಂದಾದಿ' ಎಂಬ ಪ್ರಬಂಧದ ಭಾವಾನುವಾದವಾಗಿದೆ ಎಂಬುದರಲ್ಲಿ ಸಂದೇಹವಿಲ್ಲ. ಆ ತಮಿಳು ಪ್ರಬಂಧ ಹೀಗಿದೆ—

"ಅಣ್ಪೇ ತಕಳಿಯಾಹ ಆರ್ವಮೇ ನೈಯಾಕ
ಇನ್‌ಪುರುಗು ಚಿಂತೈ ಇಡುತಿರಿಯಾ
ನನ್‌ಪುರುಗಿ, ಞಾನಚ್ಚುಡರ್ ವಿಳಕ್ಕೇಟ್ಟಿನೇನ್ ನಾರಣರ್ಕು
ಞಾನತ್ತಮಿಳ್ ಪುರಿಂದ ನಾನ್॥" ('ಭಕ್ತಿಪುಂಗಾ' ಯತಿ ರಾಜುಲುನಾಯ್ಡು ಬಿ. ಎ. ಪು. ೧೬)

(ಅಣ್ಪು= ಹೃದಯ, ಪ್ರೀತಿ ; ತಕಳಿ =ಹರಿವಾಣ; ಆರ್ವಮ್= ಭಕ್ತಿ ; ಚಿಂತೈ = ಧ್ಯಾನ; ಞಾನಚ್ಚುಡರ್= ಜ್ಞಾನದಾರತಿ).

---

* 'ಶಿಲಪ್ಪದಿಕಾರಂ' ವ್ಯಾಖ್ಯಾನ—ಪುಲಿಯೂರು ಕೇಶಿಕನ್

ಸುಬ್ಬನು ರಾಮಾಯಣ ಪ್ರಸಂಗಗಳಲ್ಲಿ, ಕಥಕಳಿ ರಾಮಾಯಣದಿಂದ ಹೇಗೋ ಹಾಗೆ ಕನ್ನಡ 'ತೊರವೆಯ ರಾಮಾಯಣ'ದಿಂದಲೂ ತೆಗೆದುಕೊಂಡ ಅಂಶಗಳು ಅಲ್ಲಲ್ಲಿ ಕಂಡುಬರುತ್ತವೆ. ಕಥಕಳಿ ರಾಮಾಯಣದಲ್ಲಿ ಇಲ್ಲದಿರುವ ಹಾಗೂ ಸಂಕ್ಷೇಪವಾಗಿರುವ ಭಾಗಗಳನ್ನು ವಿಸ್ತರಿಸುವಲ್ಲಿ ಆತನು 'ತೊರವೆಯನ್ನು ಅನುಸರಿಸಿದ್ದು ಕಾಣುವುದು. 'ಸೇತುಬಂಧನ' ಮತ್ತು 'ಅಂಗದಸಂಧಾನ' ಕಥಾಭಾಗಗಳು ಕಥಕಳಿಯಲ್ಲಿ ಬಹಳ ಸಂಕ್ಷೇಪವಾಗಿರುವಂಥವು. ಇದರಂತೆ ಸೀತಾಸ್ವಯಂವರ ಸಂದರ್ಭವೂ ಒಂದೆರಡೇ ಪದ್ಯ ವೃತ್ತಗಳಲ್ಲಿ ನಿವೃತ್ತಿಯಾಗುತ್ತವೆ. ಈ ಭಾಗಗಳಲ್ಲಿ ಸುಬ್ಬನ ಆಕರಗ್ರಂಥವು 'ತೊರವೆ ರಾಮಾಯಣ'ವೇ ಆಗಿದೆ. ಉದಾಹರಣೆಗಾಗಿ, ಕೆಳಗೆ ಕೊಟ್ಟಿರುವ ಸಂವಾದಿಪದ್ಯ ಗಳನ್ನು ಪರಿಶೀಲಿಸಬಹುದು—

ಸೇತುಬಂಧನ ಸಂದರ್ಭದಲ್ಲಿ ವಿಭೀಷಣನು ರಾವಣನಿಗೆ ನೀತಿಹೇಳುವ ಪದ್ಯವು 'ತೊರವೆರಾಮಾಯಣ'ದಲ್ಲಿ—

"ಅಣ್ಣ ಕೇಳೀತಗಳ ಮಾತಿನ
ಬಣ್ಣನೆಗಳಂತಿರಲಿ ಭೂಮಿಯ
ತಿಣ್ಣವನು ತಿದ್ದಲಿಕೆ ಹರಿ ನರನಾಗಿ ರೂಹಿಸಿದ ।
ಹೆಣ್ಣ ನೆವದಲಿ ನಮ್ಮನೆಲ್ಲರ
ಮಣ್ಣಿಗಿಕ್ಕುವ ಬಡಿದು ನಾವಿ
ನ್ನಣ್ಣದುರಿಯಲು ಬೇಡ ಸೀತೆಯನಿತ್ತು ಬದುಕೆಂದ ॥ " (೬೨-೨೧)

ಎಂದಿದ್ದರೆ, ಪಾರ್ತಿಸುಬ್ಬನ 'ಸೇತುಬಂಧನ'ದಲ್ಲಿ ಅದು ಅಷ್ಟತಾಳದ ಪದ್ಯವಾಗಿ ಹೀಗೆ ಬಂದಿದೆ —

'ಅಣ್ಣ ಕೇಳೀ ರಾಮಚಂದ್ರನೀ ಭೂಮಿಯ ।
ತಿಣ್ಣನಿಳುಹಲಾಗಿ ಅವತರಿಸಿದನೊಂದು ।
ಹೆಣ್ಣ ನೆವನ ಹಿಡಿದು—ನಮ್ಮೆಲ್ಲರ ।
ಮಣ್ಣಿಗಿಕ್ಕುವ ಬಡಿದು—ಈ ಕಾರ್ಯದೊ ।
ಳುಣ್ಣದುರಿವುದುಚಿತಗಳಲ್ಲವರಿದು ॥ (೨೫೫-೨೧)

ಅದೇ ಮುಂದಿನ ಇನ್ನೊಂದು ಪದ್ಯ ತೊರವೆಯಲ್ಲಿ—

'ನಿನಗೆ ನಾಚಿಕೆಯಾದಡದಕೇ
ನೆನಗೆ ನೇಮಿಸು ಭುವನಮಾತೆಯ
ಇನಕುಲೇಂದ್ರಂಗಿತ್ತು ಮನ್ನಿಸಿಕೊಂಡು ಬಹೆ ಬಳಿಕ ॥ (೬೨-೩೪)

ಎಂದಿರುವುದೇ ಸುಬ್ಬನ 'ಸೇತುಬಂಧನ'ದಲ್ಲಿ—

'ನಿನಗೆ ನಾಚಿಕೆಯಾದಡೆನಗಾದರರುಹಯ್ಯ ।
ವನದೊಳಿದ್ದವಳ ಕೊಂಡೊಯ್ವು ।

ಇನಕುಲಾಧಿಪಗಿತ್ತು ಈಗ ನಿಮ್ಮೊಳು ಮನ ।
ಮುನಿಸಿಲ್ಲದಂತೆ ಮಾಡುವೆನು ॥' (೨೬೦-೪೯)

ಎಂದು ಸಾಂಗತ್ಯದಲ್ಲಿ ಬಂದಿದೆ.

ಸೇತುಬಂಧನಕ್ಕಾಗಿ ಕಪಿಗಳು ಪರ್ವತಗಳನ್ನು ಕಿತ್ತು ತರುವ ಸಾಹಸದಲ್ಲಿ ಜಾಂಬವನು ಹಿಮವತ್‌ಪರ್ವತಕ್ಕೆ ಕೈಯಿಕ್ಕಿದ ವರ್ಣನೆ 'ತೊರವೆ ರಾಮಾಯಣ'ದ ಪದ್ಯ—

'ನೆಗಹಿ ಜೋಲುವ ಜೂಲುಗೂದಲ
ನಗಲಿಸುತ ನೋಡಿದನು ಕಂಡನು
ನಗಕುಲೇಂದ್ರನ ಶಿಶಿರಸಾಂದ್ರನ ಪಾರ್ವತೀಪಿತನ ।
ಹೊಗುವಡುತ್ತರಪಥಕೆ ಚೈತ
ನ್ಯಗಳು ನಮಗಿಲ್ಲವು ಸುವೃದ್ಧರು
ನಗುವವರು ನಗಲೆಮಗಿದೇ ಸಾಕೆಂದು ಮಂಡಿಸಿದ (೫-೪೧)

ಸುಬ್ಬನ ಸೇತುಬಂಧನದ ಪದ್ಯ—

'ನೆಗಹಿ ಜೋಲುವ ಜೂಲುಗೂದಲನಗಲಿಸಿ
ಮಿಗೆ ತುದಿವೊದಲ ನೋಡಿದರೆ ಅಜ್ಜಯ್ಯ ।
ನೆಗಹಲು ಚೈತನ್ಯವಿಲ್ಲ ವೃದ್ಧರು ನಾವು
ನಗುವವರ್ನಕ್ಕರೆ ನಗಲೆಮಗಿದೇ ಸಾಕು ॥ (೨೮೩-೧೭೨)

ಅಂಗದನು ಸಂಧಾನಕ್ಕೆ ಹೋಗುವ ವರ್ಣನೆ 'ತೊರವೆ'ಯಲ್ಲಿ—

'ತಡೆದ ಬಾಗಿಲು ಬಾಗಿಲುಗಳು
ಗ್ಗಡದ ಖಳರನು ಹೆಮ್ಮರದ ಹೆ
ಬ್ಬುಡದಲೆರಗುತ ಹೊಕ್ಕ— (೧೦-೨೮)

ಅದೇ ಸುಬ್ಬನ 'ಅಂಗದಸಂಧಾನ'ದಲ್ಲಿ—

'ತಡೆದ ಬಾಗಿಲ ಭಟರ ಮಂಡೆಯ
ಹೊಡೆದನಾ ನಂಕುಳಿನ ಮರನಲಿ
ಸಡಗರದೊಳೊಳಹೊಕ್ಕ—' (೫೧೨-೯೪)

ತೊರವೆಯ ಪದ್ಯ—

'ಬಲ್ಲೆನವ ನಿನ್ನಿಂದ ಬಾಯಲಿ
ಬಲ್ಲಿದನು ಬಾಯ್ಬಡಿಕತನದಲಿ ಬಗುಳಿ ಬಾಲವನು ।
ಕೊಳ್ಳಿಗಿಡಿಯಲಿ ಸುಡಿಸಿಕೊಂಡ—' (೧೦-೩೮)

ಸುಬ್ಬನ ಪದ್ಯ—

'ಬಾಲಮರ್ಕಟ ಕೇಳು ಬಾಯ್ಗೆ ಬಂದಂಥಾದ್ದ
ಹೇಳಿ ಹಿಂದೊಂದು ಮಂಗ।
ಬಾಲ ಸುಡಿಸಿಕೊಂಡು —' (೩೧೫-೧೦೭)

ತೊರವೆಯ ಪದ್ಯ—

'ಹೇಳಲೇನದನವನ ವಿಧಿಯನು
ಕೇಳಿತಿಲ್ಲವಲಾ ಕಪೀಂದ್ರನ
ಪಾಳಿಯವ ಹೊಗಗೊಡದೆ ಕಪಿಪೋತಗಳು ಜೊಬ್ಬಿರಿದು।
ಬಾಲಸುಡುಕನ ತೆರಪಲಾ ಕಪಿ
ಯೊಳಿಗವು ತನಗಾಯ್ತು ನಮ್ಮಾ
ಬಾಲವನು ನೀವ್ ಕೆಣಕಿ ನೋಡಿದಡರಿಯಬಹುದೆಂದ ॥ (೧೦-೩೯)

ಸುಬ್ಬನ 'ಅಂಗದಸಂಧಾನ'ದಲ್ಲಿ—

'ಕೇಳಲಿಲ್ಲವೆ ಬಂದ ಕಪಿಯ ಪೋತಗಳೆಲ್ಲ
ಬಾಲಸುಡುಕ ಛೀಯೆಂದು।
ಆಲಿಜೊಬ್ಬಿರಿದಟ್ಟಿ ಬದಲು ಬಂದವನೆನ್ನ
ಬಾಲವ ಕೆಣಕಿನೋಡಿ ॥' (೩೧೫-೧೦೮)

ತೊರವೆಯ ಪದ್ಯ—

'ನಿಳಯನಿಳಯದೊಳಿಕ್ಕಿದವು ಮು
ಚ್ಚಳ ನಿಶಾಚರಸತಿಯರಟ್ಟುಂ
ಜೊಲೆಗಳನು ನಂದಿಸಿದರಡಗಿಸಿದರುಡುವ ಸೀರೆಗಳ।' (೧೦-೨೭)

ಸುಬ್ಬನ ಪದ್ಯ—

'ಸೀರೆಗಳನಡಗಿಸಿದರೆಣ್ಣೆಯ
ದೂರದಲಿ ಬಚ್ಚಿಟ್ಟು ಬಂದರು
ನೀರ ಚಿಮ್ಮಿದರೊಲೆಗೆ ಹಿಂದಣ ಮಾರಿಗಂಜಿ।' (೩೧೧-೯೦)

ಹೀಗೆ 'ತೊರವೆ ರಾಮಾಯಣ'ದ ಇನ್ನಿತರ ಪದ್ಯಗಳಿಗೂ ಸಂವಾದಿಯಾಗಿ ದೊರೆಯುವ ಪಾರ್ತಿಸುಬ್ಬನ ಪದ್ಯಗಳಿಗಾದರೆ 'ಕಥಕಳಿ ರಾಮಾಯಣ'ದಲ್ಲಿ ಸಂವಾದವಿರುವುದಿಲ್ಲ. ಕೆಲವೊಂದು ಕಥಾಸಂದರ್ಭಗಳಲ್ಲಿಯೂ ಸುಬ್ಬನು ಪ್ರತ್ಯೇಕವಾಗಿ ಅವೆರಡೂ ಆಕರಗ್ರಂಥಗಳನ್ನು ಆಶ್ರಯಿಸಿರುತ್ತಾನೆ. ಅಲ್ಲಿಯೂ, ಯಾವ ಭಾಗವನ್ನು 'ತೊರವೆ'ಯಿಂದ ಸ್ವೀಕರಿಸುತ್ತಾನೋ ಅದು ಕಥಕಳಿ ಕೃತಿಯಲ್ಲಿ ಇರುವುದಿಲ್ಲ. ಉದಾಹರಣೆಗಾಗಿ

'ಉಂಗುರಸಂಧಿ'ಯಲ್ಲಿ ಹನುಮಂತನು ಲಂಕೆಗೆಂದು ಸಮುದ್ರವನ್ನು ಹಾರಿದವನು ಗುರಿ ಮೀರಿ ಲಂಕಾಪಟ್ಟಣದಿಂದ ಏಳುನೂರು ಯೋಜನ ಮುಂದೆ ತೃಣಬಿಂದುಮುನಿಪನ ಆಶ್ರಮಕ್ಕೆ ಬಂದಿಳಿದನೆಂದು 'ತೊರವೆ ರಾಮಾಯಣ'ದಲ್ಲಿರುವಂತೆಯೇ ಸುಬ್ಬನು ಗ್ರಹಿಸಿ ಕೊಂಡಿದ್ದಾನೆ. 'ಕಥಕಳಿ ರಾಮಾಯಣ'ದಲ್ಲಿ ಈ ವಿಚಾರವಿರುವುದಿಲ್ಲ. ಸುಬ್ಬನ ಪಂಚವಟಿ ಯಲ್ಲಿ ಕಾಣುವ ಶೂರ್ಪನಖಿಯ ಕುಚಚ್ಛೇದನದ ವಿಚಾರವನ್ನು ಆತನು 'ಕಥಕಳಿ ರಾಮಾಯಣ'ದಿಂದಲೇ ಸ್ವೀಕರಿಸಿದ್ದು ಹೊರತು 'ತೊರವೆ ರಾಮಾಯಣ'ದಲ್ಲಿ ಆ ಸಂಗತಿ ಇರುವುದಿಲ್ಲ. ಇನ್ನೂ ಇಂತಹ ಅನೇಕ ಕಥಾಸಂದರ್ಭಗಳಲ್ಲಿ ಇದು ನಿದರ್ಶನಕ್ಕೆ ಬರು ವುದು. ಮೇಲೆ ಉದಾಹರಿಸಿದ 'ಗಿಡಮರನ ತಂಪಿನೊಳು ಇಡು ಎನ್ನ ಮನು ಸಹಜ' ಎಂಬ ಪದ್ಯದಲ್ಲಿ ತೋರುವಂತೆ, ರಾಮನು ವಿರಹವ್ಯಥೆಯಿಂದ ಭ್ರಮಿಸುವ ಮಾತು ಗಳು 'ತೊರವೆ ರಾಮಾಯಣ'ದಲ್ಲಿ ಹಾಗೂ 'ವಾಲ್ಮೀಕಿ ರಾಮಾಯಣ'ದಲ್ಲಿ ಸಹ ಇರುವು ದಿಲ್ಲ. ಈ ಸಂದರ್ಭವನ್ನು ಸುಬ್ಬನು 'ಕಥಕಳಿ ರಾಮಾಯಣ'ದಿಂದ ಆರಿಸಿಕೊಂಡದ್ದೇ ಸಂಭಾವ್ಯವಾಗಿ ತೋರುವುದು. ಇದರಂತೆ ಪಟ್ಟಾಭಿಷೇಕಸಂದರ್ಭದಲ್ಲಿ 'ಹೊಕ್ಕಳು ಮಾಯದಿ ಹೃದಯವ ರಕ್ಕಸಿ ಕದಡಿದಳು ಕೈಕೆಯಂತಃಕರಣಂ' ಎಂಬ ವಿಚಾರವೂ ತೊರವೆ, ವಾಲ್ಮೀಕಿ ರಾಮಾಯಣಗಳಲ್ಲಿ ಕಂಡುಬರುವುದಿಲ್ಲವಾದ್ದರಿಂದ ಸುಬ್ಬನು ಅದನ್ನು ಕಥಕಳಿ ರಾಮಾಯಣದಿಂದಲೇ ತೆಗೆದುಕೊಂಡನೆಂದು ನಂಬಬೇಕಾಗುವುದು. ಅದರಲ್ಲಿ ಆ ವಾಕ್ಯ 'ಮಾನಸಂ ಮಂಥರಾ ಸಾ। ಸಾಕಮಕೋಪನೋಡೇ ನಿರ್ಮ ಮಂಥಾನುಕೂಲ್ಯಾತ್' ಎಂದಿರುತ್ತದೆ.

'ಪೂರ್ವಕಾಂಡ ರಾಮಾಯಣ'ದಲ್ಲಿ ಸುಬ್ಬನ ಪ್ರಸಂಗಗಳಿರುವುದು ಇಂದ್ರಜಿತು ವಿನ ವಧೆಯವರೆಗೆ ಮಾತ್ರ. ರಾವಣನ ವಧೆಯ ವಿಚಾರವು ಅಲ್ಲಿ ಬಂದಿರುವುದಿಲ್ಲ. 'ಕಥಕಳಿ ರಾಮಾಯಣ'ದಲ್ಲಿಯೂ ರಾಮರಾವಣರ ಯುದ್ಧದ ವರ್ಣನೆ ಇರುವುದೇ ಹೊರತು ರಾವಣನನ್ನು ವಧಿಸುವ ಕೊನೆಯ ಸಂದರ್ಭವಿರುವುದಿಲ್ಲವೆಂಬುದು ಗಮನಾರ್ಹ ವಾಗಿದೆ.

ರಾಮಾಯಣ ಉತ್ತರಕಾಂಡದ 'ಕುಶಲವರ ಕಾಳಗ' ಮತ್ತು ಭಾಗವತ ದಶಮ ಸ್ಕಂಧದ 'ಬಾಲಲೀಲೆ ಪ್ರಸಂಗಗಳು' ಇನ್ನಿಬ್ಬರು ಕವಿಗಳಿಂದ ರಚಿಸಲ್ಪಟ್ಟವೂ ನಮ್ಮಲ್ಲಿ ರೂಢಿಯಲ್ಲಿವೆ. ಈ ಕೃತಿಗಳೊಳಗೆ ಸುಬ್ಬನ ರಚನೆ ಯಾವುದೆಂಬ ವಿಷಯದಲ್ಲಿ ಅನೇಕರಿಗೆ ನಿರ್ಣಯವಿರುವುದಿಲ್ಲ. ವಿಚಾರ ಮಾಡಿ ನೋಡಿದಲ್ಲಿ ಕುಶಲವರ ಕಾಳಗದಲ್ಲಿ ಸುಬ್ಬನು ಲಕ್ಷ್ಮೀಶನ 'ಜೈಮಿನಿ ಭಾರತ'ದ ಪದ್ಯಗಳಿಂದ ಧಾರಾಳ ಸ್ವೀಕರಿಸಿದ್ದು ಕಂಡುಬರು ತ್ತದೆ. ಅನ್ಯಕರ್ತೃಕವಾದ 'ಕುಶಲವರ ಕಾಳಗ' ಹಾಗಿರುವುದಿಲ್ಲ. ಇದರಂತೆ ಶ್ರೀಕೃಷ್ಣ ಬಾಲಲೀಲೆ ಪ್ರಸಂಗಕ್ಕೆ ಸುಬ್ಬನು 'ಕೃಷ್ಣ ಚರಿತೆ' ಎಂದು ಹೆಸರಿಸಿರುವುದಲ್ಲದೆ ಅದರ ಪದ್ಯ ರಚನೆಯಲ್ಲಿ ಕನ್ನಡ ಭಾಗವತ ದಶಮಸ್ಕಂಧದ ಪದ್ಯಗಳನ್ನು ನೆರಳಂತೆ ಅನುಸರಿಸಿ

ಕೊಂಡು ಬಂದಿದ್ದಾನೆ. ಈ ಆಕರಗ್ರಂಥಗಳ ತುಲನಾತ್ಮಕ ಪರಿಶೀಲನದಿಂದ ಸುಬ್ಬನ ಈ ಕೃತಿಗಳು ಇಂಥವೇ ಎಂದು ನಿರ್ಣಯಿಸಲು ಸಾಧ್ಯವಿದೆ. ಉದಾಹರಣೆಗೆ ಈ ಕೆಳಗಿನ ಪದ್ಯಗಳನ್ನು ಪರಿಶೀಲಿಸಬಹುದು :—

'ಜೈಮಿನಿ ಭಾರತ'ದಲ್ಲಿ, ಸೀತೆಯನ್ನು ಕಾಡಿನಲ್ಲಿ ಬಿಟ್ಟುಬರುವ ಲಕ್ಷ್ಮಣನೊಡನೆ ಸೀತೆ ಹೇಳುವ ಮಾತಿನ ಪದ್ಯ—

'ಕಯ್ಯಾರೆ ಖಡ್ಗಮಂ ಕೊಟ್ಟು ತನ್ನರಸಿಯುಂ
ಹೊಯ್ಯೆಂದು ಪೇಳದಡವಿಗೆ ಕಳುಹಿಬಾರೆಂದ
ನಯ್ಯಯ್ಯೊ ರಾಘವಂ ಕಾರುಣ್ಯನಿಧಿಯೆಂದಳಲ್ದಳಂಭೋಜನೇತ್ರೆ ।'
(೧೯-೧೭)

ಅದೇ 'ಕುಶಲವರ ಕಾಳಗ'ದಲ್ಲಿ (ಸಾಂಗತ್ಯ)—

'ಕಯ್ಯಾರೆ ಖಡ್ಗವ ಕೊಟ್ಟು ತನ್ನರಸಿಯ
ಹೊಯ್ಯೆಂದು ಪೇಳದೆ ಬರಿದೆ ।
ಒಯ್ಯನೆ ಕಾಡೊಳು ಬಿಟ್ಟುಬಾರೆಂದನೆ
ಅಯ್ಯಯ್ಯೊ ರಾಮ ಕರುಣಾಳು' (೩೯೪-೯೭)

ಕುಶನ ಬಾಣದಿಂದ ರಾಮನು ಗಾಯವಡೆದ ವರ್ಣನೆ–'ಜೈಮಿನಿ ಭಾರತ'ದಲ್ಲಿ—

'ಪೊಕ್ಕವಂಬುಗಳೊಡಲೊಳಾತ್ಮಜರ ಮೇಲೆ ತನ
ಗಕ್ಕರುಂಟಿಲ್ಲೆಂಬುದಂ ನೋಳ್ಪೆನೆಂಬವೋಲ್' (೧೯-೩೫)

ಸುಬ್ಬನ ಪದ್ಯ—

'ಮಕ್ಕಳೊಡನೆ ರಾಮಚಂದ್ರದೇವಗೆ ಮನ ।
ದಕ್ಕರುಂಟೆಂಬುದನು ।
ಲೆಕ್ಕಿಪ ಬಗೆಯಂತೆ ಕುಶನಿಟ್ಟ ಶರ ಬಂದು ಹೊಕ್ಕಿತಂದೊಡಲೊಳಗೆ ।'
(೪೩೦-೩೦೭)

ಇನ್ನೂ ಇಂಥ ಪದ್ಯಗಳನ್ನು ವಾಚಕರು ಹೋಲಿಸಿ ನೋಡಿಕೊಳ್ಳುವುದು.

ಭಾಗವತ ದಶಮಸ್ಕಂಧದಲ್ಲಿ ಕಂಸನು ವಸುದೇವನಿಗೆ ಹೇಳುವ ಪದ್ಯ—

'ಕಂಡೆನಾನೀ ನಿನ್ನ ಸತ್ಯದ
ಗಂಡುಗಲಿತನದಿರವನೇತಕೆ
ಕೊಂಡುಹೋಗೀ ಶಿಶುವನಳಲಿಸಲೇಕೆ . . .' (ಸಂ. ೨-೧೨)

ಸುಬ್ಬನ 'ಕೃಷ್ಣಚರಿತೆ'ಯ ಪದ್ಯ—

'ಕಂಡನಾ ಖಳತಿಲಕ ಗಂಡುಗಲಿತನದಿರವ
ಕೊಂಡುಪೋಗೀ ಶಿಶುವ ದಂಡಿಸಲದೇಕೆ' (೪೫೮-೬೩)

ಗಗನವಾಕ್ಯವನ್ನು ಕೇಳಿ ಭೀತನಾದ ಕಂಸನ ಮಾತು—ಭಾಗವತದಲ್ಲಿ—

'ಸಾಲವನು ಶತ್ರುವನು ವಹ್ನಿ
ಜ್ವಾಲೆಯನು ರೋಗವನು ತತ್ತ
ತ್ಕಾಲದಲಿ ಕಡೆಗಳೆಯದಿರ್ದಡೆ ಬಳಿಕಸಾಧ್ಯವಲ' (೪—೪೮)

'ಕೃಷ್ಣಚರಿತೆ'ಯಲ್ಲಿ ಅದೇ ಮಾತು ಬಂದಿದೆ—

'ಸಾಲ ರೋಗಗಳು ಶತ್ರು ಮೀರಿದ ವಹ್ನಿ
ಜ್ವಾಲೆ ನಾಲ್ಕುವಕೆ ಹೆಚ್ಚು
ಕಾಲದೊಳಗೆ ಪರಿಹರಿಸದಿರ್ದಡೆ ಮುಂದೆ
ಕೀಳುವಡರಿದು ಚಾತುರ್ಯವುಳ್ಳವರಿಗೂ । (೪೫೫—೪೭)

ಚಂಡಿಕೆಯು ಕಂಸನಿಗೆ ಹೇಳುವ ಮಾತು—ಭಾಗವತದಲ್ಲಿ—

'ಎಲವೆಲವೊ ಖಳ ಕೇಳು ತನ್ನನು
ಮುಳಿದು ಕೊಲ್ವಡೆ ನಿನ್ನ ಗಂಟಲೊ
ಳಿಳಿವ ತುತ್ತೀ ನಿನಗೆ ತಾನೆಲೆ ಪಾಪಿ ನಿನ್ನಸುವ ।
ಕಳೆವ ಕಾಲಾತ್ಮಕನು ಧರೆಯಲಿ
ಬೆಳೆವುತೈದನೆ ಕೊಲ್ಲದಿರ . . .' (೮—೨೫)

'ಕೃಷ್ಣಚರಿತೆ'ಯಲ್ಲಿ ಅದೇ ಮಾತು—

'ಎಲೆ ಪಾಪಿ ಕೇಳು ನೀನೆನ್ನ ಕೊಲುವುದಕೆ ಗಂ
ಟಲೊಳಿಳಿವ ತುತ್ತಲ್ಲ ನಿನ್ನ ರಿಪು ಧಾತ್ರಿಯಲಿ
ಬೆಳೆವುತೈದನೆ ಕೊಲ್ಲದಿರ' (೪೭೮—೧೭೭)

ಪೂತನಿಯು ಬಾಲಕೃಷ್ಣನಿಗೆ ವಿಷದ ಮೊಲೆಯುಣಿಸುವುದು—ಭಾಗವತದಲ್ಲಿ—

'ಲೋಕಶಿಶುಗಳ ಕೊಂದ ಮೊಲೆಗೆಂ
ದಾ ಕಠೋರ ಕರಾಳ ವಿಷವನು
ಲೋಕನಾಥಂಗಿತ್ತಡಸುಸಹಿತುಣಲು ಬಸವಳಿದು ।
ಸಾಕು ಸಾಕೆಲೆ ಚಿಣ್ಣ ಬಿಡು ಬಿಡು
ಸಾಕು ಮಾಣೆಂದೆನುತ ರಕ್ಕಸಿ ನೂಕಿದಳು' (೫—೩೯)

'ಕೃಷ್ಣಚರಿತೆ'ಯಲ್ಲಿ—

'ಲೋಕಶಿಶುಗಳ ಕೊಂದ ಮೊಲೆಯನು
ತಾ ಕರಾಗ್ರದಿ ಪಿಡಿದು ಬಾಯ್ಗಿ
ಟ್ಟಾಕೆ ಪಲ್ಗಳೊಳೆಯುತುಂಡನು ಲೋಕನಾಥ ।

ಸಾಕು ಬಿಡು ಬಿಡು ಚಿಣ್ಣ ಎಂದೆರಡು ಕೈಯಿಂದ
ನೂಕಿದರೆ ಬಿಡದಡರುತುಣಲು ।' (೪೮೧–೧೯೧,೨)

ಗೊಲ್ಲಹೆಂಗಳು ಕೃಷ್ಣನ ಲೂಟಿಯನ್ನು ಗೋಪಿಗೆ ದೂರುವ ಮಾತು—ಭಾಗವತದಲ್ಲಿ—

'ಉಂಡದಕ್ಕಾರಳಲುವರು ನೆಲ
ನುಂಡು ಕೆಟ್ಟಿತು ಹಾಲುಮೊಸರನು
ಕಂಡ ದೆಸೆಗೀಡಾಡುವರು ನೀಡುವರು ಕಪಿಗಳಿಗೆ ।' (೮–೨೫)

'ಕೃಷ್ಣಚರಿತೆ'ಯಲ್ಲಿ—

'ಉಂಡದಕಳಲುವರಾರು—ನೆಲ
ನುಂಡು ಕೆಟ್ಟಿತು ಎಲ್ಲ ಪಾಲ್ಬೆಣ್ಣೆಮೊಸರು ।
ಕಂಡಕಡೆಯಲಿ ಚೆಲ್ಲುವರು—ಕಪಿ
ವಿಂಡುಗಳಿಗೆ ಮತ್ತೆ ಕರೆದು ಕೊಡುವರು ।' (೪೯೪–೨೫೭)

ಇನ್ನೂ ಇಂಥ ಪದ್ಯಗಳನ್ನು ಕಂಡುಕೊಳ್ಳುವುದು.

ಸುಬ್ಬನ ಐರಾವತ ಪ್ರಸಂಗದ ಪದ್ಯಗಳಿಗೆ ಇಂಥದೇ ಸಂವಾದವಿರುವುದನ್ನು ಕನ್ನಡ ಭಾರತ 'ಐರಾವತ ಸಂಧಿ'ಗಳಲ್ಲಿ ಕಾಣಬಹುದು—ಕುಂತಿಯು ಸಂತಾಪದಿಂದ ಮಕ್ಕಳೊಡನೆ ಹೇಳಿಕೊಳ್ಳುವ ಮಾತು— ಭಾರತದ ಐರಾವತ ಸಂಧಿಯಲ್ಲಿ—

'ಬಡತನಗಳಡಸಿದರೆ ಬಂಧುಗ
ಳೆಡಹಿ ಕಾಣರು ಮಗನೆ ಹೊಲೆಯಂ
ಗೊಡವೆಯಿರಲತಿ ಮನ್ನಿಸುವರೈ ಮನುಜನೀತಿಯಿದು ।
ಬಡವರಾಗಿನ್ನಿರಲು ಹಂಗಿನ
ಲೊಡಲ ಹೊರೆವದರಿಂದ ಪ್ರಾಣವ
ಬಿಡುವದೇ ಲೇಸೆಂದು ಕಂಬನಿದುಂಬಿದಳು ಕುಂತಿ ॥' (೧–೨೦)

ಸುಬ್ಬನ 'ಐರಾವತ'ದಲ್ಲಿ ಅದೇ ಮಾತು—

'ತನ್ನವನು ದಾರಿದ್ರರಾದರೆ ನೋಡರಯ್ಯ—ಗುಣದಲಿ
ಹೊನ್ನನುಳ್ಳೊಡೆ ಹೊಲೆಯನಾದರು ಮನ್ನಿಸುವರು ।
ಬಡವರಾಗಿನ್ನಿರಲು ಬಾರದು ಪೊಡವಿಯೊಳಗೆ—ಕೂಳಿಗೆ
ಒಡಲ ಹೊರುವುದರಿಂದ ಪ್ರಾಣವ ಬಿಡಲು ಲೇಸು ॥' (೫೩೦–೮೫,೮೬)

ಭಾರತ-ಐರಾವತದಲ್ಲಿ—

'ನಾರದ ಮುನೀಶ್ವರನೆದ್ದು ನುಡಿದನು
ನರನು ಕಂಭವನೆಚ್ಚು ಸಲಹಿದ ನಿನ್ನ ಜೀವನವ ।'

'ಸುರಪತಿಗೆ ನೆಡಲೆಂದು ಎಚ್ಚರೆ
ಸರಳು ನಿನಗಂಜುವುದೆ ?'

ಸುಬ್ಬನ 'ಐರಾವತ'ದಲ್ಲಿ—

'ನಿನ್ನ ಮೇಲೆ ಅಂಬೆಸೆದರೆ ಮಾಳ್ಪುದೇನು—ಆತ
ಪುಣ್ಯಕ್ಕೆ ಕಂಭಕ್ಕೆ ಬಾಣವೆಸೆದ ತಾನು ।
ಅಂಬು ಬಲ್ಲುದೇ ದೇವೇಂದ್ರನೆಂಬುದನ್ನ ?' (೫೪೦-೧೫೨)

ಇನ್ನು ಈ ರಾಮಾಯಣಾದಿ ಪ್ರಸಂಗಗಳೆಲ್ಲವೂ ಆತನವೇ ಕೃತಿಗಳೆನ್ನುವುದಕ್ಕೆ ಒಂದೇ ವಿಧದ ಪದರಚನೆಯುಳ್ಳ ಪದ್ಯಗಳು ಇವುಗಳೊಳಗೆ ಪರಸ್ಪರವಾಗಿ ಬಂದಿರುವುದನ್ನು ಕಾಣಬಹುದು.

ಕೃಷ್ಣ ಚರಿತೆ—

'ಚಾರು ಚರಿತ್ರೆ ಸದ್ಗುಣವಂತೆ ಶರಧಿಗಂ
ಭೀರೆ ಲಾವಣ್ಯಪಾರಾವಾರೆ ।
ವಾರಿಜವದನೆ ವಿರಾಜಿತೆ ಕೊರವಿ ಶೃಂ
ಗಾರವಾದಳು ಮುದ್ದು ಲಲಿತಾಂಗಿ ।
ಮುಕುರ ಕಪೋಲೆ ಮಂದಸ್ಮಿತೆ ಮೃದುಹಸ್ತೆ
ಮಕರಧ್ವಜನ ಚಿನ್ನದ ಬೊಂಬೆ ॥ (೪೬೨-೮೪, ೮೫)

ಕುಶಲವರ ಕಾಳಗ—

'ಚಾರುಚರಿತ್ರೆ ಚಂದ್ರಮುಖಿ ಚಂದನಗಂಧಿ
ವಾರಿಜನೇತ್ರೆ ವಾಸವಸ್ತೋತ್ರೆ ।
ಮೀರಿದ ಗುರುನಿತಂಬಿನಿ ಸೊಬಗಿನ ಸೋನೆ
ಮಾರನ ಮುಂಗೈಯರಗಿಣಿಯೆ ।
ಕನ್ನಡಿ ಕದಪು ಕಂಗಳನೋಟ ವರಳ್ಗಣ್ಣ
ಬಿನ್ನಾಣದಬಲೆ ಬಿಂಕದ ನಾರಿ ।
ಮನ್ಮಥನೆರಕದಚ್ಚಿನ ಬೊಂಬೆ . . .' (೩೮೬-೫೩,೫೪)

ಐರಾವತ—

'ಮುಕುರ ಕಪೋಲೆ ಚಂಪಕಮಾಲೆ ।
ಪನ್ನಂಗನಿಭವೇಣಿ ಸೊಬಗಿನ ಸಾಂಬ್ರಾಣಿ
ತನ್ನರಮನೆಯಿಂದ ಹೊರಟಳು ।
ಅಂಗಜಾತನ ಮದದಾನೆ ಶೃಂಗಾರ ಸೊಬಗಿನ ಸೋನೆ ॥'
(೫೮೧-೪೦೯-೪೧೩)

(ಮೇಲಿನ ಎಲ್ಲ ಪದ್ಯಗಳೂ 'ಸೊಬಗಿನ ಸೋನೆ' ಎಂಬ ಸಾಂಗತ್ಯಭೇದದಲ್ಲೇ ರಚಿಸಲ್ಪಟ್ಟಿವೆ ಎಂಬುದನ್ನು ಗಮನಿಸಿರಿ).

ಪಂಚವಟಿ—

'ತರಬೇಕು ತರುಣಿಯಳ—ಕಾಮನ ಮುಂಗೈ
ಯರಗಿಣಿಯಂತಿಹಳ ।
ಪನ್ನಂಗನಿಭವೇಣಿಯ ಪಂಕಜದೆಸಳ್
ಗಣ್ಣ ಕನ್ನಡಜಾಣೆಯ ।
ಹೊನ್ನ ಪುತ್ಥಳಿಬೊಂಬೆಯಂತೆ ರಾಮನ ಕಯ್ಯ
ಕನ್ನಡಿಕದಪಿನ ಕಡುಸುಪ್ರವೀಣೆಯ ॥' (೧೩೬-೧೬,೧೭)

ಕುಶಲವರ ಕಾಳಗ—

'ನಂಬಿಕೊಳ್ಳೆ ನಂಬಿಕೊಳ್ಳೆ ನಾರಿ ಕೇಳವ್ವ
ಹಂಬಲಿಸದಿರು ಮರಿದುಂಬಿಗುರುಳವ್ವ ।
ಠಕ್ಕಿನ ಮಾತಲ್ಲ ಕೇಳೆ ಚಿಕ್ಕ ಪ್ರಾಯದವ್ವ
ಅಕ್ಕರಿಂದಿಬ್ಬರು ಚಿಣ್ಣ ಮಕ್ಕಳಾಹರವ್ವ ॥' (೪೦೦-೧೨೮, ೯)

ಕೃಷ್ಣಚರಿತೆ—

'ಸೊಲ್ಲ ಕೇಳೆ ಸೊಲ್ಲ ಕೇಳೆ ಸೊಗಸುಗಾರವ್ವ
ಬಲ್ಲಿದ ಸುಜಾಣೆ ಮರಿಹುಲ್ಲೆಗಣ್ಣವ್ವ ।
ಏಳುಲೋಕದಪ್ಪ ನಿನ್ನ ಬಾಲನು ಕೇಳವ್ವ
ವೇಳೆಯೊಳವತರಿಸಿ ಖಳರ ಕೊಲ್ವನು ನೋಡವ್ವ ॥' (೪೭೨-೧೪೯,೧೫೦)

ಪಟ್ಟಾಭಿಷೇಕ—

'ಬಣ್ಣಗಾರರು ಬಂದು ನೆರೆದರು ಆಮೇಲೆ
ಮಣ್ಣಿನೊಡ್ಡರ ಕರೆಸಿದರು ।
ಚಿನ್ನದ ಕೆಲಸ ಕೆತ್ತಿಗೆಯ ಪಾಂಚಾಲರು
ಹನ್ನೊಂದು ನೂರು ಕೂಡಿದರು ॥' (೭೨-೫೦)

ಐರಾವತ—

'ಮಣ್ಣಿನೊಡ್ಡರು ಗೈವ ಮತ್ತೊಂದು ಕಡೆಯ
ಬಣ್ಣಗಾರರು ಬರೆವ ಚಿತ್ರಗಳ ಎಡೆಯ ।
ಪಾಂಚಾಲರಮರಿಸುವ ಬೊಂಬೆಗಳ ನಡುವೆ
ಕಾಂಚನದ ರೂಹುಗಳ ನಿಡುವದಕೆ ತಡವೆ ॥' (೫೪೭-೧೯೩, ೪)

**ಕೃಷ್ಣ ಚರಿತೆ—**

‘ಕೋಪದೊಳಿಹನೆಂಬ ಮಾತಿಗೆ ಮನದ ಸಂ
ತಾಪವು ಒಡಲೊಳುಪ್ಪಿರಿದು ।
ಆ ಪುಣ್ಯವಂತೆಯು ಕಂಡು ಏಕಾಂತದಿ
ತಾ ಪೇಳಿದನು ವೃತ್ತಾಂತಗಳ ॥’ (೪೬೦-೭೪)

**ಸೇತುಬಂಧನ—**

‘ಇಂತೆಂಬ ಮಗನ ಮಾತನು ಕೇಳಿ ಕೈಕಸೆ
ಸಂತಾಪ ಒಡಲೊಳುಪ್ಪಿರಿದು ।
ಅಂತರಂಗದಿ ಬಂದು ದಶಕಂಠನಿದಿರಲಿ
ನಿಂತುಕೊಂಡಬಲೆ ಪೇಳಿದಳು ॥’ (೨೬೧-೫೫)

**ಕೃಷ್ಣ ಚರಿತೆ—**

‘ಒಸಗೆ ಮಿಗೆ ರಂಜಿಸುತ ಬೇಗದಿ ಬಂದಳಾಗ—
ಪೂತನಿ ಬಂದಳಾಗ ।’ (೪೮೦-೧೮೬)

**ಕುಂಭಕರ್ಣಾದಿ ಕಾಳಗ—**

‘ಮೂರು ಲೋಕದೊಳಗೆ ರಂಜಿಸೆ ಬಂದನಾಗ—
ಸಮರಕೆ ನಿಂದನಾಗ ।’ (೩೫೯-೧೦೨)

**ಐರಾವತ—**

‘ಒಸಗೆ ರಂಜಿಸಿತು ರಾಜ್ಯದೊಳೆಲ್ಲ—ಭೇರಿ
ಒಸರೆ ಗಾಂಧಾರಿ ಪೂಜಿಸುವಳು ಗಜವೆಂಬ ।’ (೫೨೧-೩೪)

**ಕೃಷ್ಣ ಚರಿತೆ—**

‘ಬೇರು ಬಲ್ಲರಿಗೆಲೆಯ । ತೋರುವುದುಚಿತವೆ ಸಾರತ್ತ— ।

**ಅಂಗದಸಂಧಾನ—**

‘ಬೇರು ಬಲ್ಲವರಿಗೆ ಮರದೆಲೆಯನು ತಂದು
ತೋರುವರೆಲೆ ಮರುಳೆ ।’ (೩೦೮-೭೭)

**ಕೃಷ್ಣ ಚರಿತೆ—**

‘ಬೇರು ಕಡಿದಮೇಲೆ ಬೆಳೆವುದೆ ಗಿಡ ।’ (೪೫೪-೪೬)

**ಪಂಚವಟಿ—**

‘ಬೇರು ಕಡಿದಮೇಲೆ ವೃಕ್ಷ ಜಾರದೆ ನಿಲ್ಲುವುದುಂಟೆ ।’ (೧೩೯-೩೪)

ಕೃಷ್ಣ ಚರಿತೆ—

‘ಒಡಲು ಶಾಶ್ವತವಲ್ಲ ಕಂಸರಾಯಾ ಮಳೆ
ಹೊಡೆದ ನೀರ ನೆರೆಗಳಂತೆ— । (೪೫೬–೫೨)

ಪಟ್ಟಾಭಿಷೇಕ—

‘ನೆಲೆಯಿಲ್ಲ ತನುವಿದು ಮಳೆಕಾಲದಲಿ ತುಂಬಿ
ದ್ಹೊಳೆಯಲ್ಲಿ ನೆರೆ ಪುಟ್ಟುವಂತೆ ।’ (೧೦೦–೧೯೭)

ಪಟ್ಟಾಭಿಷೇಕ—

‘ಛಪ್ಪನ್ನ ದೇಶದ ಭೂಮಿಪಾಲರು ನಡೆ
ತಪ್ಪ ಸಂಭ್ರಮವೇನನೆಂಬೆ ।
. . . . . . . . . .
ಎಸೆವ ಬಿಡಾರವಿತ್ತವರವರಿಗೆ ಸತ್ಕ
ರಿಸುತುಪಚಾರ ಮಾಡಿಸಿದ ॥’ (೭೨–೫೫, ೫೬)

ಐರಾವತ—

‘ಛಪ್ಪನ್ನದೇಶದ ದೊರೆಗಳು ನಡೆ
ತಪ್ಪ ಸಂದಣಿಯೇನನೆಂಬೆ ।
ಒಪ್ಪುವ ಕುದುರೆದಂಡಿಗೆಯೊಳು
. . . . . . . .
ಬಂದಬಂದರಸುಗಳಿದಿರ್ಗೊಂಡು ಕರೆ
ತಂದು ಬಿಡಾರಗಳಿತ್ತು ಮನ್ನಣೆಗೊಂಡು ।’ (೫೨೧–೩೪, ೩೫)

ಐರಾವತ—

‘ಛಪ್ಪನ್ನದೇಶದೊಳಿರುವ ಭೂಕಾಂತರು ಬಂದಿರೇನ್ನೆ
ಬಂದರಸುಗಳ ಮನ್ನಿಸುತವರಿಗೆ ಬೇರೆ ಬೇರೆ ಬಿಡಾರಗಳನಿತ್ತು । ’
(೫೫೮–೨೬೭)

ಇವಲ್ಲದೆ ಈತನ ಕೃತಿಗಳಲ್ಲೆಲ್ಲ ಸಾಮಾನ್ಯವಾಗಿ ಬಂದಿರುವ ಕೆಲವೊಂದು ನಾಣ್ಣುಡಿಗಳು ಈ ಕೆಳಗಿನಂತಿವೆ—

“ಗಾಳಿ ಸಿಡಿಲು ಮಳೆ ಹೊಡೆಯಬೇಡೆಂದು ತಾ ತೋಳನೆತ್ತಿದರೆ ನಿಲ್ಲುವುದೆ ?”
“ನೆಲೆಯಲ್ಲ ತನುವಿದು ಮಳೆಗಾಲದಲಿ ತುಂಬಿದ್ಹೊಳೆಯಲ್ಲಿ ನೆರೆ ಪುಟ್ಟುವಂತೆ.”
“ಎಂದಿಗಾದರೊಂದು ದಿವಸ ಈ ದೇಹ ನಾಶಹೊಂದುವುದಿದು ಸಿದ್ಧ.”
“ಬೇರು ಕಡಿದಮೇಲೆ ವೃಕ್ಷ ಜಾರದೆ ನಿಲ್ಲುವುದುಂಟೆ ?”

"ನೆಚ್ಚಿ ಪರರ ಹೆಣ್ಣಿಗೆ ಮನಮೆಚ್ಚಿದಾತಗನ್ಮೃತ ವಿಷವು."
"ಅಳಿವ ಕಾಯವಿದೆಂದು ಹಾಳು ಕೇಳಿದರೆ ಉಳಿವುದೆ ಕುಲಕೀರ್ತಿ ?"
"ಸ್ವಾಮಿಕಾರ್ಯದ ಮೇಲೆ ಸತ್ತರೆ ಕಾಮಿತ ಕೈಗೂಡುವುದು."
"ಕಂಡದ್ದು ನುಡಿದರೆ ಕೋಪ ವೆಗ್ಗಳಿಸುವುದು."
"ಮಂಡೆ ಘಟ್ಯಾದರೆ ಮರಕೆ ಜೆಪ್ಪುವುದುಂಟೆ ?"
"ಹರಿಹರರ ತಮ್ಮೊಳಗೆ ಭೇದವಿಕ್ಕಿದರೆ ಧರೆಯ ಮನುಜರು ನರಕಗತಿ ಹೊಂದದಿಹರೆ ?"
"ಮರೆಹೊಕ್ಕು ಬಂದವರ ಕಾಯ್ವುದೇ ಬಿರುದು."
"ಅರಸುಗಳೊಳನ್ಯಾಯವಾದರೆ ಪರಿಹರಿಪರಿಲ್ಲ."
"ಕಳವೂ ಹಾದರವೂ ಮುದ್ದಲ್ಲ."
"ಕೂಳಿಗೆ ಒಡಲ ಹೊರುವುದಕಿಂತ ಬಾಳದಿರುವುದು ಲೇಸು."
"ಹೊನ್ನನುಳ್ಳೊಡೆ ಹೊಲೆಯನಾದರು ಮನ್ನಿಸುವರು."
"ಹಣವನುಳ್ಳವರಕುಲರಾದರೂ ಕುಲಜರವರು."
"ಹಾಳುಭಾವಿಗೆ ಕೋಪಿಸಿ ಹಾರಿದರೆ ದಡ ಹತ್ತಲರಿದು."
"ಉಂಬದಕೆ ಗತಿಯಿಲ್ಲದವರಿಗೆ ಡಂಭಕದ ಮಾತೇಕೆ ?"
"ಮರುಳೊಬ್ಬ ಬತ್ತಲೆ ಕುಣಿದಾಡಿದರೆ ಮಿಕ್ಕವರು ಕುಣಿದಾಡುವರೆ ?"
"ಊಳಿಗವ ಮಾಡುವರಿಗೂರ ಮಾತುಗಳೇಕೆ ?"
"ಹೇಳಬಂದವನೊಡನೆ ಹೆಣಗಾಟವೇಕೆ ?"
"ಹೆಮ್ಮಕ್ಕಳರ ನೀವು ಕೂಗಿಯಾಡಿದರಿಂದ ಬ್ರಹ್ಮನ ಲಿಖಿತ ತಪ್ಪುವುದೆ ?"
"ಕರ್ಮಬಂಧಗಳು ಕಟ್ಟೈಳಿವಾಗ ಧರ್ಮದೈವಗಳು ರಕ್ಷಿಪವೆ ?"
"ಬೇರು ಬಲ್ಲವರಿಗೆ ಮರದೆಲೆಯನು ತಂದು ತೋರುವರೆ ?"
"ಸಾರಿ ಕೊಂದರೆ ಪಾಪವಿಲ್ಲ."
"ಎಂದಿಗಾದರೀ ಶರೀರ ಎರವಿನ ಹಾರ."
"ಕಾಡಿನೊಳಗೆ ಹುಲಿಯಿರುವ ಸುದ್ದಿಯ ಕೇಳಿ ನಾಡಿಂದೊಕ್ಕಲು ತೆಗೆಯುವರೆ?"
"ಪಟ್ಟ ಪ್ರಮಾಣ ತಾರ್ಕಣೆ ಸಾಕ್ಷಿ ಇವು ನಾಲ್ಕು ದೃಷ್ಟ ಧರ್ಮಗಳು ರಾಜ್ಯದೊಳು."
"ಹುಲಿಯ ಮಕ್ಕಳು ಹೊಲಹುಲ್ಲ ಮೇಯುವವೇ ?"
"ಹಗೆಯುವರ ಕೂಡೆ ನಿಜವನು ಹೇಳದಿರು ಮಗನೆ."
"ಹಿತಶತ್ರುಗಳ ಕೂಡೆ ಅತಿಸ್ನೇಹ ಮಾಡದಿರು."
"ಅತ್ತು ಸಾವವರುಂಟೆ ಸತ್ತವರ ಕೂಡೆ."

"ಮೃಗವು ಹುಲಿಗಂಜಿ ಸಿಂಹದ ಬಾಯ ಹೊಗುವಂತೆ."
"ಸಾಲ ರೋಗ ಶತ್ರು ವಹ್ನಿಜ್ವಾಲೆಗಳ ಕಾಲದೊಳಗೆ ಪರಿಹರಿಸದಿದ್ದೊಡೆ ಮತ್ತೆ ಕೇಳುವೊಡರಿದು."
"ಕೊಂದವರಿಗೆ ಕೊಲೆ ತಪ್ಪದು."
"ಹುಟ್ಟಿಸಿದಾಗಲೆ ಮರಣವ ಕಟ್ಟಿಹುದಾ ವಿಧಿ ಫಣೆಯಲಿ."
"ಕೆಟ್ಟಾಮೇಲಲ್ಲದೆ ಮತಿ ಪುಟ್ಟದು ಜೀವರಿಗೆ."
"ಮುಳ್ಳೊನೆ ಕಾಲಿಗೆ ನೆಟ್ಟರೆ ಪಲ್ಲೊನೆ ಚುಚ್ಚುವುದೇತಕೆ ?"
"ಬೀಸಿದ ಕೈ ತಪ್ಪಿ ನಡೆದರೆ ಮುಂದೆ—ಸಾಸಿರ ಕಾಲವೆಂಬರು ಗಾದೆ ಹಿಂದೆ."
"ಕೊಂಡದ ನೆಲೆನೀರ ತಿಳಿದು ತಾ ಮೊದಲೇ, ಗುಂಡಿಯೊಳಗೆ ಬಿದ್ದು ಸಾವರೆ ಮರುಳೆ ?"
"ಮೊಳೆಯಲ್ಲಿ ಕಿಚ್ಚ ನಂದಿಸದಿರ್ದಡದು ಮತ್ತೆ ಬೆಳೆದಡೊಬ್ಬರನಿದಿರ್ಗೊಳದು."
"ಶ್ವಾನನ ಬಾಲದ ತ್ರಾಣ ತಗ್ಗಿಸಲೆಂದು ಕೋಣನ ಬಲಿಯ ಕೊಟ್ಟಂತೆ."
"ತನು ನಿತ್ಯವೆಂಬೆನೇ ತನು ನಿತ್ಯವಲ್ಲ, ಕನಸಿಲೊಡ್ಡಿದ ನೆಂಟತನದ ಸುಖವೆಲ್ಲ."
"ನಿತ್ಯವಲ್ಲದ ತನುವ ನೆರೆನಂಬಿ ಜಗದ ಸತ್ಯವನು ಕೆಡಿಸುವರು ಸಾಮಾನ್ಯ ಜನರು."
"ಬೆಟ್ಟದ ಮೊಸಳೆಯ ಜಲದಲಿ ತಂದು ಬಿಟ್ಟವನುಪಕಾರವರಿವುದೆ ಮುಂದು ?"
"ನೀತಿತಪ್ಪಿದ ಜನರೆ ನುಡಿವ (ನಡೆವ) ಭೂತಗಳು."
"ಬಲ್ಲಿದವರ ಕೂಡೆ ಬಡವರ್ಗೆ ಞಾಯ ಸಲ್ಲದು."
"ಆಪತ್ತು ಬಂದಾಗ ಅತಿಧೈರ್ಯವಿರಬೇಕು."
"ಪ್ರಾರಬ್ಧಶೇಷ ಮತಿಸೇರಿದಂತೊದಗುವುದು ಧಾರಿಣಿಯೊಳಿಹ ಜೀವರಿಗೆ ನಿದಾನಿಸಲು."

"ತಂಡೆತಾಯಿಗಳೆಂಬುದೊಂದು ಸ್ವಪ್ನವಿಚಾರ"
"ಭೂತಪಂಚಕದೇಹ, ಏತಕಿಷ್ಟರ ಮೋಹ."
"ಮೂರು ದಿನದ ಈ ಸಂಸಾರ ಶಾಶ್ವತವಲ್ಲ."

ಇಂತಹ ಎಷ್ಟೋ ನಾಣ್ಣುಡಿಗಳು ಸುಬ್ಬನ ಪ್ರಸಂಗಗಳಲ್ಲೆಲ್ಲಾ 'ಛಂದಕ್ಕೆ ಹೊಂದಿ' ಹಾಸುಹೊಕ್ಕಾಗಿ ಬಂದಿರುವುದನ್ನು ಕಾಣಬಹುದು. ಇವನ ಪ್ರತಿಯೊಂದು ಪ್ರಸಂಗವೂ ಕಣ್ವಪುರಿ ಕೃಷ್ಣನ ಅಂಕಿತವಿರುವ ಒಂದೊಂದು ವಾರ್ಧಿಕಷಟ್ಪದಿಯಲ್ಲಿ ಕೊನೆಗೊಳ್ಳುವುದೆಂಬುದನ್ನು ಲಕ್ಷಿಸಬೇಕು. 'ಅಂಗದಸಂಧಾನ'ದ ಕೊನೆಯ ಎರಡು ವಾರ್ಧಿಕಷಟ್ಪದಿಗಳಲ್ಲಿ, 'ಐರಾವತ'ದ ಕೊನೆಯ ನಾಲ್ಕು ಪದ್ಯಗಳಲ್ಲಿ ಮತ್ತು 'ಕೃಷ್ಣ ಚರಿತೆ'ಯ ಕೊನೆಯ ಎರಡು ಪದ್ಯಗಳಲ್ಲಿ ಈ ಅಂಕಿತವನ್ನಿಟ್ಟಿದ್ದಾನೆ. ಅಲ್ಲದೆ ಐರಾವತ,

ಕೃಷ್ಣಚರಿತೆ, ಸಭಾಲಕ್ಷಣಗಳ ಮಧ್ಯ ಮಧ್ಯ ಅನೇಕ ಪದ್ಯಗಳಲ್ಲಿ ಕಣ್ವಪುರಿ ಕೃಷ್ಣನ ಸ್ತುತಿಯಿರುವುದನ್ನು ಕಾಣಬಹುದು.—(ಪುಟ ೪೪೮, ಪದ್ಯ ೪ ; ೪೪೮–೫ ; ೪೮೩–೨೦೧ ; ೪೯೭–೨೭೬ ; ೪೯೭–೨೮೦ ; ೫೦೮–೩೩೩ ; ೫೦೯–೩೩೮ ; ೫೧೧–೩೪೮ ; ೫೧೨-೩೫೮, ೩೫೯ ; ೫೧೭–೫ ; ೫೨೭–೩೪೨ ; ೫೫೯–೨೧೬ ; ೬೦೦–೫೧೭, ೧೮೧೯ ; ೬೦೪–೭ ; ೬೩೨–೮ ; ೬೩೩–೧೪೪ ; ೬೩೬–೧೬೨, ೫ ; ೬೩೭–೧೬೭ ; ೬೪೩–೨೦೨ ಇತ್ಯಾದಿ). ರಾಮಾಯಣವನ್ನಾದರೂ ತಾನು ಕಣ್ವಪುರದಲ್ಲಿ ನೆಲೆ ನಿಂತಿರುವ ಕೃಷ್ಣನ ವರಪ್ರಸಾದದಿಂದಲೇ ರಚಿಸುವುದಾಗಿ ಪಟ್ಟಾಭಿಷೇಕದ ಆರಂಭಕ್ಕೆ ಹೇಳಿಕೊಂಡಿದ್ದಾನೆ. ಇದರಿಂದ ಆತನು ಆ ಶ್ರೀಕೃಷ್ಣನ ಪರಮಭಕ್ತನೆಂದು ವ್ಯಕ್ತವಾಗುವುದು.

ಮದವೂರ ವಿಘ್ನೇಶನನ್ನು ತನ್ನ ಇಷ್ಟದೇವತೆಯೆಂದು ಕೊಂಡಾಡಿದ್ದಾನೆ (ಐರಾವತ, ಪುಟ ೫೧೭–೫). ರಾಮಾಯಣ ಪುತ್ರಕಾಮೇಷ್ಟಿ ಆರಂಭಕ್ಕೂ ಕೊನೆಯ ಕುಶಲವರ ಕಾಳಗದ ಆರಂಭಕ್ಕೂ ವಿಘ್ನೇಶನ ಸ್ತುತಿಯಿದೆ. ಈ ಮಧುಪುರ ದೇವಸ್ಥಾನದ ಒಳಗಡೆ ಮುಖಮಂಟಪದ ಮುಚ್ಚಿಗೆಯಲ್ಲಿ ಪುತ್ರಕಾಮೇಷ್ಟಿ ಪ್ರಸಂಗದ ಪ್ರತಿಯೊಂದು ಕಥಾಸನ್ನಿವೇಶಗಳನ್ನು ಯಕ್ಷಗಾನ ವೇಷಗಳಲ್ಲಿ ರೂಪಿಸಿದ ಪುರಾತನ ಮರದ ಕೆತ್ತನೆಗಳನ್ನು ಕಾಣಬಹುದು (ಲೇಖನ–'ಮಧುರಸ್ಮೃತಿ', ಪುಟ ೧೪). ಆತನು ರಾಮಾಯಣದ ಮೊದಲ ಪ್ರಸಂಗವನ್ನು ರಚಿಸಿ ಈ ಮದವೂರು ವಿಘ್ನೇಶ್ವರನ ಮುಂದೆ ಮೊದಲ ಸೇವೆಯಾಟವಾಗಿ ಪ್ರಯೋಗಕ್ಕೆ ತಂದನೆಂದು ಪ್ರವಾದವಿದೆ. ಅಲ್ಲಿರುವ ಈ ಕೆತ್ತನೆಗಳನ್ನು ನೋಡಿದರೆ ಈ ಹೇಳಿಕೆಯು ಯಥಾರ್ಥವೆಂದು ತೋರುವುದು. ಇದೇ ದೇವಾಲಯದಲ್ಲಿರುವ ಜಲದ್ರೋಣಿಯೊಂದರಲ್ಲಿ 'ಪಾರ್ತಿಸುಬ್ಬನು ಕೊಟ್ಟ ಕಾಣಿಕೆ' ಎಂದು ಕೆತ್ತಿದ ಬರಹವಿರುವುದೂ ಆ ವಿಘ್ನೇಶ್ವರನು ಈತನ ಇಷ್ಟದೈವವೆಂಬುದನ್ನು ಸಮರ್ಥಿಸುತ್ತದೆ.(ಲೇಖನ–'ಮಧುರಸ್ಮೃತಿ' ಗ್ರಂಥ, ಪುಟ ೫೧).

ಇವನಿಗೆ ಪಾರ್ತಿಸುಬ್ಬನೆಂಬ ಹೆಸರಾಗಲು ಕಾರಣವೇನು, ಬಾಲ್ಯದಲ್ಲಿ ವಿದ್ಯಾಭ್ಯಾಸಕ್ಕೆ ಇವನಿಗೆ ಕೇರಳದ ಸಂಪರ್ಕ ಹೇಗುಂಟಾಯಿತು ಎಂಬ ಕುರಿತು ಹಿಂದಿನಿಂದ ಕೇಳಿಬಂದ ಐತಿಹ್ಯದಂತೆ—ಕಣಿಪುರ ಕೃಷ್ಣದೇವಸ್ಥಾನದ ಸೇವೆಯಲ್ಲಿ ನಿಯುಕ್ತಳಾಗಿದ್ದ ಪಾರ್ವತಿ ಎಂಬ ಒಬ್ಬ ಅವಿವಾಹಿತೆ ಹೆಂಗುಸು, ಕೇರಳದ ಯಾವುದೋ ದೇವಸ್ಥಾನದಲ್ಲಿ ಅರ್ಚಕನಾಗಿದ್ದ ಉಡುಪಿಯ ಬ್ರಾಹ್ಮಣನೊಬ್ಬನಲ್ಲಿ ಸಂಬಂಧವಿಟ್ಟುಕೊಂಡಿದ್ದವಳಿಗೆ ಆತನಿಂದ ಹುಟ್ಟಿದ ಮಗನೇ ಪಾರ್ತಿಸುಬ್ಬನು ; ಆ ಬ್ರಾಹ್ಮಣನೇ ಇವನನ್ನು ತನ್ನೊಂದಿಗೆ ಕರೆದುಕೊಂಡು ಹೋಗಿ ತಿರುವಾಂಕೋಡಿನಲ್ಲಿ ವಿದ್ಯಾಭ್ಯಾಸವನ್ನು ಕೊಡಿಸಿದನು. ಈ ಐತಿಹ್ಯವು ೧೯೪೮ನೇ ಇಸವಿಯಲ್ಲಿ ಮಂಗಳೂರಿನ 'ಕಲಾ' ಎಂಬ ಮಾಸಪತ್ರಿಕೆ ಸಂ. ೧, ಸಂಚಿಕೆ ೨, ಪುಟ ೩೨–೩೫ರಲ್ಲಿ ಪ್ರಕಟವಾಗಿತ್ತು.

ಅವಿವಾಹಿತ ಸ್ತ್ರೀಯರು ಈ ರೀತಿ ಉತ್ತಮ ಕುಲದ ಬ್ರಾಹ್ಮಣರ 'ಸಂಬಂಧ'ದಲ್ಲಿ

ಸಂತಾನವನ್ನು ಪಡೆಯುವುದು, ಕೇರಳೀಯ ಸಂಸ್ಕೃತಿಗೆ ಹೊಂದಿಕೊಂಡಿದ್ದ ಆ ಊರಲ್ಲಿ ಹಿಂದಕ್ಕೆ ರೂಢಿಯಲ್ಲಿದ್ದ ಸಾಮಾಜಿಕ ಸಂಪ್ರದಾಯವಾಗಿದೆ. ಅದರಿಂದ ಜಾತಿಗೆ ಕಳಂಕ ವುಂಟಾಗುತ್ತಿದ್ದಿಲ್ಲ. ಈತನು ರಾಮಾಯಣ ಪಟ್ಟಾಭಿಷೇಕ ಆರಂಭದ ಒಂದು ಪದ್ಯದಲ್ಲಿ ತಂದೆಯ ಹೆಸರೆತ್ತದೆ, ತಾನು 'ಪಾರ್ವತೀನಂದನ'ನೆಂದು ಮಾತ್ರ ಹೇಳಿಕೊಂಡಿರುವುದ ರಿಂದ ಮೇಲಿನ ಐತಿಹ್ಯದಲ್ಲಿ ಸತ್ಯಾಂಶವಿದೆಯೆಂದು ಊಹಿಸಬಹುದಾಗಿದೆ. ಪಟ್ಟಾಭಿಷೇಕ ದಲ್ಲಿರುವ ಆ ಪದ್ಯ ಹೀಗಿದೆ—ಪಡಿಯಚ್ಚು ಚಿತ್ರ ೩ ನೋಡಿ. (ಮೈಸೂರು ವಿ.ವಿ.ಕ.ಅ. ಸಂಸ್ಥೆಯ ಲಿಖಿತ ಗ್ರಂಥಭಂಡಾರದಲ್ಲಿರುವ ಕೆ. ೧೪೬ನೇ ಓಲೆಗ್ರಂಥ, 'ಪಂಚವಟ ರಾಮಾಯಣ')

ದಾತ್ರೀಗುತ್ತಮ ಕಣ್ವನಾಮಪುರದಿ ನಿಂತಿರ್ಪ ಶ್ರೀಕೃಷ್ಣನ
ತತ್ಪಾದಾಂಬುಜ ದಿವ್ಯನಾಮವರದಿಂ ಯೀ ಪಾರ್ವತೀನಂದನಂ
ಬತ್ತೀಸಾಕೃತಿ ತಾಳರಾಗನಿಧದಿಂ ರಾಮಾಯಣಂ ಪೇಳ್ವುದ
ಭಕ್ತಿಧ್ಯಾನದಿ ಕೇಳ್ದು ಪುಣ್ಯ ಕಥೆಯಂ ಸಂತೋಷಮಂ ಮಾಳ್ಪುದು ।

'ಬತ್ತೀಸಾಕೃತಿ ರಾಗತಾಳವಿಧದಿಂ ರಾಮಾಯಣಂ ಪೇಳ್ವುದ' ಎಂಬ ಮಾತು ಮುಖ್ಯವಾದ್ದು. ಈ ಪ್ರತಿಜ್ಞೆಯನ್ನು ಆತನು ರಾಮಾಯಣದಲ್ಲಿ ಎರಡನೆಯದಾದ ಪಟ್ಟಾಭಿಷೇಕದ ಆರಂಭಕ್ಕೆ ಮಾಡಿರುವುದಾದ್ದರಿಂದ, ಮೊದಲನೆಯ ಪುತ್ರಕಾಮೇಷ್ಟಿ ಯನ್ನು ಪ್ರಾರಂಭಿಸುವಾಗ ಆತನಿಗೆ ಸಮಗ್ರರಾಮಾಯಣವನ್ನು ರಚಿಸುವ ಸಂಕಲ್ಪ ಇದ್ದಿರಲಿಲ್ಲವೆಂದೂ ಊಹಿಸಬಹುದು. ಇದು ಸಂಭವನೀಯವಾಗಿಯೂ ಕಾಣುವುದು. ಎಂದರೆ, ಪುತ್ರಕಾಮೇಷ್ಟಿಯು ಪ್ರಾಯಶಃ ಆತನ ಪ್ರಥಮ ಪ್ರಯತ್ನದ ಮೊದಲ ಯಕ್ಷ ಗಾನ. ಆದ್ದರಿಂದಲೇ ಅದರಲ್ಲಿ ನೂರಕ್ಕೆ ತೊಂಬತ್ತರಷ್ಟು ಪದ್ಯಗಳು ಕಥಕಳಿ 'ರಾಮಾ ಯಣಂ, ಪುತ್ರಕಾಮೇಷ್ಟಿ' ಪದ್ಯಗಳ ಯಥಾತಥಾ ಅನುವಾದಗಳಾಗಿ ಬಂದಿವೆ. ಅದೇ ರಾಗ, ಅದೇ ತಾಳದ ಸಮಾನಬಂಧಗಳಲ್ಲಿ ಈ ಪ್ರಸಂಗವನ್ನು ರಚಿಸಿದ್ದಾನೆ. ಪಟ್ಟಾಭಿಷೇಕದಿಂದ ಮುಂದೆ ಮುಂದೆ ಈ ಪ್ರಮಾಣವು ಕಡಿಮೆಯಾಗುತ್ತ ಬಂದಿದೆಯಲ್ಲದೆ ಆತನ ಸ್ವಂತ ಪ್ರತಿಭೆಯು ಕ್ರಮಶಃ ವಿಕಾಸಗೊಂಡಿರುವುದನ್ನೂ ಮುಂದಿನ ಪ್ರಸಂಗಗಳಲ್ಲಿ ಕಾಣಬಹುದಾಗಿದೆ. ಉಂಗುರಸಂಧಿಯಲ್ಲಿ ಅಂಥ ಪದ್ಯಗಳು ಭಾವಾನುವಾದವಾಗಿ ಬಂದಿರುವುದಾದರೆ ಸೇತುಬಂಧನ, ಅಂಗದ ಸಂಧಾನಗಳಲ್ಲಿ ಕಥಕಳಿಯ ಅಂಶವಿರುವುದು ತೀರ ಕಡಿಮೆ.

ಆತನು ಹೇಳುವಂತೆ ಬತ್ತೀಸ ರಾಗತಾಳವಿಧಾನವೆಂಬುದು ನಮ್ಮ ಕರ್ನಾಟಕ ಸಂಗೀತದ ಪೂರ್ವಸಂಪ್ರದಾಯದಲ್ಲಿ ಪ್ರಸಿದ್ಧವಾಗಿದ್ದುದು. "ದ್ವಾತ್ರಿಂಶದ್ರಾಗಸಂಮಿಶ್ರಂ ದ್ವಾತ್ರಿಂಶತ್ತಾಲಲಾಲಿತಂ । ಶುದ್ಧ ಸಾಲಗ ಸಂಕೀರ್ಣೈಸ್ತ್ರಿವಿಧಂ ಚಾಪಿ ಕಥ್ಯತೇ॥" ಎಂದು ಪುರಾತನ ಸಂಗೀತಶಾಸ್ತ್ರಗ್ರಂಥಗಳಲ್ಲಿ ಕಾಣುವ ೩೨ ರಾಗಗಳ ವರ್ಗೀಕರಣವೂ

ದ್ವಾತ್ರಿಂಶತ್ತಾಲಗಳ ಪ್ರಬಂಧರಚನೆಯೂ, ಲಕ್ಷ್ಯದಲ್ಲಿ ಅವುಗಳಿಗಿದ್ದ ಪ್ರಾಶಸ್ತ್ಯವೂ ವೆಂಕಟಮುಖಿಯ (ಕಾಲ ೧೬೫೦) ೭೨ ಮೇಳಕರ್ತ ರಾಗಪದ್ಧತಿ ಉಂಟಾಗುವ ಹೊತ್ತಿಗೇ ಕ್ಷೀಣವಾಗುತ್ತ ಬಂದಿದ್ದು ಆಮೇಲಂತೂ ಸಂಪೂರ್ಣ ನಿರ್ನಾಮವಾಗಿದೆ. ಇದರಿಂದ ಸುಬ್ಬನ ಕಾಲವು ಏನಿದ್ದರೂ ೧೮ನೇ ಶತಕದ ಆರಂಭಕ್ಕಿಂತ ಹಿಂದೆಯೇ ಇದ್ದಿರಬೇಕೆಂಬುದ ರಲ್ಲಿ ಸಂದೇಹವಿಲ್ಲ. ಆತನ ಪ್ರಸಂಗಗಳಲ್ಲಿ ಮೇಳಕರ್ತ ಜನಕ ರಾಗಗಳಾಗಲಿ, ಆ ಪದ್ಧತಿ ಯಲ್ಲಿ ಅನಂತರ ರೂಢಿಗೆ ಬಂದಿರುವ ಜನ್ಯರಾಗಗಳಾಗಲಿ ಇಲ್ಲದಿರುವುದೂ ಇದನ್ನು ಸಮರ್ಥಿಸುತ್ತದೆ. ರಾಮಾಯಣ ಪ್ರಸಂಗಗಳ ಹಳೆಯ ಓಲೆಯ ಪ್ರತಿಗಳಲ್ಲಿರುವ ಪ್ರಕಾರ ಆ ೩೨ ರಾಗಗಳು ಹೀಗಿವೆ :

| | | |
|---|---|---|
| ೧. ನಾಟಿ | ೧೨. ಕಾಪಿ | ೨೩. ಆನಂದಭೈರವಿ |
| ೨. ಭೈರವಿ | ೧೩. ವರಾಳಿ | ೨೪. ನೀಲಾಂಬರಿ |
| ೩. ಘಂಟಾರವ | ೧೪. ಪುನ್ನಾಗವರಾಳಿ | ೨೫. ಮಾರವಿ |
| ೪. ಕಾಂಭೋಜಿ | ೧೫. ಕೇದಾರಗೌಳ | ೨೬. ಆಹರಿ (ಆಹೇರಿ) |
| ೫. ಶಂಕರಾಭರಣ | ೧೬. ರೇಗುಪ್ತಿ | ೨೭. ಮಧ್ಯಮಾವತಿ |
| ೬. ತೋಡಿ | ೧೭. ಮೋಹನ | ೨೮. ವೃಂದಾವನ ಸಾರಂಗ |
| ೭. ಎರುಕಲ ಕಾಂಭೋಜಿ | ೧೮. ಆಂದೋಳಿ | ೨೯. ದ್ವಿಜಾವಂತಿ |
| ೮. ನಾದನಾಮಕ್ರಿಯೆ | ೧೯. ನವರೋಜು | ೩೦. ಫರಜು |
| ೯. ಕಲ್ಯಾಣಿ | ೨೦. ಗೌಳಮುಲಹರಿ | ೩೧. ಬೇಗಡೆ |
| ೧೦. ಪಂತುವರಾಳಿ | ೨೧. ಸಾವೇರಿ | ೩೨. ಸೌರಾಷ್ಟ್ರ |
| ೧೧. ಗೌಳಿಪಂತು | ೨೨. ಕುರಂಜಿ | |

ಇವುಗಳಲ್ಲಿ 'ಕಾಪಿ' ರಾಗಕ್ಕೆ 'ದೇಶಿ' ಹಾಗೂ 'ದೇಶಿಕಾಪಿ' ಎಂದೂ ಕರೆಯುವ ರೂಢಿ ಇತ್ತು. ಆನಂದಭೈರವಿಯನ್ನು ಆನಂದ ನೀಲಾಂಬರಿಯೆಂದೂ ಕರೆಯಲಾಗಿದೆ. ಹಾಗೂ ಮಧ್ಯಮಾವತಿ ರಾಗಕ್ಕೇ 'ಮಧುಮಾಧವಿ' ಎಂಬ ಹೆಸರೂ ಶಾಸ್ತ್ರದಲ್ಲಿರುತ್ತದೆ. ಈ ರಾಗಗಳು ಮಧ್ಯಕಾಲದ ಸಂಗೀತಶಾಸ್ತ್ರಕರ್ತರಾದ, ಎಂದರೆ ವೆಂಕಟಮುಖಿಯಿಂದ ಪೂರ್ವದ ಪುಂಡರೀಕ ವಿಠಲ, ರಾಮಾಮಾತ್ಯ, ದಾಮೋದರ ಪಂಡಿತ ಮೊದಲಾದವರ ಗ್ರಂಥಗಳಲ್ಲಿ ತೋರುವಂತೆ ಪೂರ್ವಪ್ರಸಿದ್ಧ ಮೇಳರಾಗ ಹಾಗೂ ಅವುಗಳ ಜನ್ಯವರ್ಗಗಳಲ್ಲಿ ಸೇರಿರುವಂಥವು. 'ಮೇಳಕರ್ತ'ಗಳ ಅನಂತರ ಈ ರಾಗಗಳ ಸ್ವರವಿಧಾನಗಳು ಸ್ವಲ್ಪ ಮಟ್ಟಿಗೆ ವ್ಯತ್ಯಾಸಗೊಂಡಿವೆ ಎಂಬುದನ್ನು ಲಕ್ಷಿಸಬೇಕು. ಅಲ್ಲದೆ, ಸುಬ್ಬನ ಕೃತಿಗಳಲ್ಲಿ ಕಾಣುವ ರಸಾನುಗುಣವಾದ ರಾಗನಿರ್ದೇಶವನ್ನು ಪರಿಶೀಲಿಸಿದಲ್ಲಿ ಅದು ಪುಂಡರೀಕ ವಿಠಲನ ರಾಗಲಕ್ಷಣಗಳನ್ನು ಅನುಸರಿಸಿದ್ದಂತೆ ಕಾಣುವುದು.

ಪ್ರಚಲಿತ ಸಂಗೀತದ ಸಪ್ತತಾಳಗಳೂ,ಅವುಗಳೊಳಗಿನ ಜಾತಿಭೇದಗಳೂ ಪೂರ್ವದಲ್ಲಿದ್ದುದಕ್ಕಿಂತ ಭಿನ್ನವ್ಯವಸ್ಥೆಯನ್ನು ಹೊಂದಿಕೊಂಡಿವೆ. ಸುಬ್ಬನ ಯಕ್ಷಗಾನದ ತಾಳಗಳಾದರೆ ಪೂರ್ವಸಂಪ್ರದಾಯದಲ್ಲಿರುವಂಥವು. ಆ ೩೨ ತಾಳಭೇದಗಳು,ಮಾತ್ರಾಗಣನೆಯಲ್ಲಿ ಈಗಿನ ಸಪ್ತತಾಳಗಳೊಳಗೆ ಅಡಕಗೊಳ್ಳುವುವಾದರೂ ಗುರುಲಘುವಿನ್ಯಾಸಗಳಲ್ಲಿ ಭಿನ್ನಸ್ವರೂಪಗಳನ್ನು ಪಡೆದಿರುತ್ತವೆ. ಎಂದರೆ, ಆ ತಾಳಗಳ ಪ್ರತಿಯೊಂದು ಗುರು,ಲಘು, ದ್ರುತಗಳೂ ಸಶಬ್ದ ಕ್ರಿಯೆಗಳಿಂದಲೇ (ಪೆಟ್ಟುಗಳಿಂದ) ನಿರೂಪಿಸಲ್ಪಡುವಂಥವು ; ಆದ್ದರಿಂದ ಮಾತ್ರಾ ಸಂಖ್ಯೆ ಒಂದೇ ಆಗಿದ್ದರೂ ಗುರು–ಲಘು ವಿನ್ಯಾಸಗಳನ್ನು ಹೊಂದಿಕೊಂಡು ಪೆಟ್ಟುಗಳು ಭಿನ್ನಕ್ರಮದಲ್ಲಿ ಬೀಳುವುದರಿಂದ ತಾಳದ ಸ್ವರೂಪಗಳು ಬೇರೇ ಆಗುತ್ತವೆ. ಸಂಗೀತರತ್ನಾಕರಾದಿ ಶಾಸ್ತ್ರಗ್ರಂಥಗಳಲ್ಲಿ ಆ ಒಂದೊಂದು ಸ್ವರೂಪಗಳೂ ಬೇರೆ ಬೇರೆ ಹೆಸರಿನ ತಾಳಭೇದಗಳಾಗಿ ಪರಿಗಣಿಸಲ್ಪಟ್ಟಿರುವುದನ್ನು ಕಾಣಬಹುದು. ಪಾರ್ತಿಸುಬ್ಬನು ಹೇಳುವ 'ಬತ್ತೀಸ ರಾಗ'ಗಳೆಂದರೆ ಅಂಥ ೩೨ ದೇಶೀ ತಾಲಭೇದಗಳಾಗಿವೆ. ಕುಂಬಳೆ ಸಂಪ್ರದಾಯದ ಯಕ್ಷಗಾನದಲ್ಲಿ ಅವು ಇಂದಿಗೂ ಉಳಿದು ಬಂದಿರುವುದನ್ನು ಲಕ್ಷಿಸಬಹುದು. ಆ ಪ್ರಕಾರ ಚತುರಸ್ರ ಏಕತಾಳದಲ್ಲಿ ಅಡಕವಾಗುವ, ಹಾಗೂ ಏಕತಾಳವೆಂದೇ ಕರೆಯಲ್ಪಟ್ಟಿರುವ ಭೇದಗಳು ೮, ತ್ರಿವುಡೆಯಲ್ಲಿ ೪, ಜಂಪೆಯಲ್ಲಿ ೫, ಅಷ್ಟತಾಳದಲ್ಲಿ ೪, ರೂಪಕದಲ್ಲಿ ೩, ಮಟ್ಟೆಯಲ್ಲಿ ೫ ರಂತಿರುವುವಲ್ಲದೆ ಆದಿತಾಳ, ಚೌತಾಳ (ಇವು ೧೬ ಅಕ್ಷರಕಾಲದವು), ತ್ರಿತ್ರೈತಾಳ ( ಮೂರೂವರೆ ಮಾತ್ರಾ ಕಾಲ) ಎಂಬ ಮೂರು ವಿಶಿಷ್ಟ ರೂಪಗಳು ಸೇರಿ ಒಟ್ಟು ೩೨ ತಾಳಗಳಾಗುವುವು. ಆ ಒಂದೊಂದಕ್ಕೂ ಬೇರೆ ಬೇರೆ ಸಂಗೀತಶಾಸ್ತ್ರಗಳಲ್ಲಿ ಕೊಟ್ಟಿರುವ ಪರ್ಯಾಯನಾಮಗಳ ಸಮೇತ ಈ ಕೆಳಗೆ ಪಟ್ಟಿ ಮಾಡಿಕೊಡಲಾಗಿದೆ.

## ಸುಬ್ಬನ ಬತ್ತೀಸ ತಾಳಗಳು

ಏಕತಾಳ—

| | | |
|---|---|---|
| ೧ | \| | ತಿಲಕ, ನಂದನ, ರಾಸ, ಆದಿತಾಲ, ಕಂದರ್ಪ |
| ೨ | oo | ಪಂಚಮತಾಲ |
| ೩ (ಉಡಾಪಿ) | \|oo (oo\|) | ಇಡಾವಾನ್, ತೃತೀಯತಾಲ, ಪ್ರತಿತಾಲ, ಶಂಖತಾಲ |
| ೪ | S \|\| (\|\| S) | ಉತ್ಸಾಹ, ಭಗಣಮಟ್ಟೆ |
| ೫ | ’\| o (o ’\|) ; | ಶೇಖರತಾಲ |
| ೬ | \|ooS (Soo\|) | ಪರಿಕ್ರಮ, ವೀರವಿಕ್ರಮ |

| | | |
|---|---|---|
| ೭ | ỉ ỉoo (ooỉỉ) | ಉತ್ಸವತಾಲ |
| ೮ | S | ಅಮರಪ್ರತಿಮಂಠ |

ತ್ರಿವುಡೆ ತಾಳ—

| | | |
|---|---|---|
| ೧ (ನಿಧಾನ) | loooolooloo | ಮುಕ್ತಮಣಿದಾಮ |
| ೨ (ತುರಿತ) | ỉloo (oolỉ) | ಮಂಠಿಕಾ |
| ೩ | loool | ಸಿಂಹಲೀಲ, ಚಂಡತಾಲ |
| ೪ | Ś oo (oo Ś) | ದರ್ಪಣತಾಲ, ಮಕರಂದ |

ಜಂಪೆತಾಳ—

| | | |
|---|---|---|
| ೧ (ನಿಧಾನ) | lool oooo (oooolool ; ool ooool) | ವರ್ಣಮಂಠ |
| ೨ (ತುರಿತ) | lol | ತುರಗಲೀಲ, ಬದ್ಧಾಪಣ |
| ೩ | looo (oool) | ಸಾರಸತಾಲ, ಗೌರೀತಾಲ, ಚತುಸ್ತಾಲ |
| ೪ | llo (oll) | ಚತುರ್ಥತಾಲ |
| ೫ | l ỉ (ỉ l) | ಚಾರುತಾಲ, ಹಂಸಲೀಲ, ಶೇಖರ |

ಅಷ್ಟತಾಳ—

| | | |
|---|---|---|
| ೧ | ỉ S (S ỉ) | ಶಿವತಾಲ, ಶಿವನಂದನ |
| ೨ | l l ỉ (ỉ l l) | ನಿಸ್ಸಾರು, ವಿಚಾರಪ್ರತಿಮಂಠ |
| ೩ | Ś Ś ll (ll Ś Ś) | ರತಿಲೀಲ, ಕೋಕಿಲಪ್ರಿಯ |
| ೪ | S l S S (SSlS) | (ತ್ರಿವುಡೆ ಅಷ್ಟತಾಳ) |

ರೂಪಕತಾಳ—

| | | |
|---|---|---|
| ೧ | loooo (ooool) | ವರ್ಣತಾಲ, ಪ್ರಬಂಧತಾಲ |

೨ ||oo (oo||) ವರ್ಣತಾಲ, ಯತಿತಾಲ

೩ | S (S |) ರತಿತಾಲ

ಮಟ್ಟೆತಾಳ—

೧ |oo| ತಾರಪ್ರತಿಮಂಠ, ವಿಶಾಲನಿಸ್ಸಾರು

೨ oooo| (ooo|o) ಪಂಚಘಾತ ಮಟ್ಟೆ

೩ |o|o'S (|o|'| |o) ವರ್ಧನತಾಲ

೪ o| (|o) ಆನಂದನಿಸ್ಸಾರು, ಯತಿಲಗ್ನ

೫ |' ಲಘುಶೇಖರ, ಕುಂತಲ

ಆದಿತಾಳ |oooooo| oo| oo (oo|oo|oooooo|)

ಚೌತಾಳ '|ooo|oo'|ooo ಮರ್ಮತಾಳ, ಬ್ರಹ್ಮತಾಳ

ತಿತ್ರಿತ್ರೈ ooo' (ooo°) ನರ್ತನತಾಲ, ಅಂತರಕ್ರೀಡ

(|= ಲಘು, ೨ ಅಕ್ಷರಕಾಲ; S= ಗುರು, ೪ ಅಕ್ಷರಕಾಲ; o= ದ್ರುತ, ಒಂದಕ್ಷರ ಕಾಲ ; (,) = ವಿರಾಮಚಿಹ್ನೆ. ಈ ಚಿಹ್ನೆ ಯಾವುದಕ್ಕೆ ಇಡೆಯೋ ಅದರ ಅರ್ಧಕಾಲ, ಮತ್ತು ಕೆಲವು ಸಂದರ್ಭಗಳಲ್ಲಿ ಸಾಮಾನ್ಯವಾಗಿ .ಒಂದಕ್ಷರಕಾಲವೆಂದೂ ಪರಿಗಣಿಸಲ್ಪಡುತ್ತದೆ)

ಹೀಗೆ ಶಾಸ್ತ್ರಸಿದ್ಧವಾದ 'ಬತ್ತೀಸಾಕೃತಿ'—ಮೂವತ್ತೆರಡು ಸ್ವರೂಪಗಳುಳ್ಳ ರಾಗ ಮತ್ತು ತಾಳಗಳಲ್ಲಿ ತಾನು ರಚಿಸಿದ 'ಕನ್ನಡ ಯಕ್ಷಗಾನಗಳನ್ನು', 'ಭೂಮಿಯೊಳು ರಾಗ ತಾಳವನರಿತು ಪಾಡಿದರೆ' (ಪು.೩೩೭–೨೨೭) ಆ ಮಹಾ ಕಣ್ವಪುರ ಕೃಷ್ಣ ಸಲಹುವನೆಂದೆನ್ನುವ ಈತನು ಬರಿಯ ಪಾಟಾಳಿಯಲ್ಲ, ಗಾಂಧರ್ವಶಾಸ್ತ್ರದ ಲಕ್ಷ್ಯಲಕ್ಷಣಗಳನ್ನು ಬಲ್ಲವನಾಗಿದ್ದ ಹಿರಿಯ ವಾಗ್ಗೇಯಕಾರನೇ ಸರಿ. ಆತನಿಂದುಳಿದುಬಂದ ಈ ವಿಶುದ್ಧ ಕರ್ಣಾಟ ಸಂಗೀತದ ಉನ್ನತ ಶಾಸ್ತ್ರೀಯ ಸಂಪ್ರದಾಯವನ್ನು ಇಂದು 'ಜಾನಪದ'ಕ್ಕೆ ತಳ್ಳುತ್ತಿರುವುದು ವ್ಯಸನಾಸ್ಪದ.

## ಕಾಲದ ವಿಚಾರ

ಮೊದಲೇ ಹೇಳಿದಂತೆ ರಾಗ ತಾಳಗಳ ದೃಷ್ಟಿಯಿಂದ ಈತನು ೧೮ನೇ ಶತಮಾನಕ್ಕೆ ಹಿಂದಿನವನಿರಬೇಕು. ಹಾಗೂ ಕಥಕಳಿ ರಾಮಾಯಣಕ್ಕಿಂತ ಈಚಿನವನಿರಬೇಕೆಂಬುದರಲ್ಲಿ

ಸಂಶಯವಿಲ್ಲ. ಈಗ ನಮಗೆ ದೊರೆತಿರುವ ಎರಡು ಗ್ರಂಥಪ್ರತಿಗಳೂ ಇವನನ್ನು ಆ ಮಧ್ಯದವನೆಂದೇ ತೋರಿಸುತ್ತವೆ. (೧) ಮೈಸೂರು ವಿ.ವಿ.ಕ. ಅಧ್ಯಯನ ಸಂಸ್ಥೆಯ ಲಿಖಿತ ಗ್ರಂಥಭಂಡಾರದಲ್ಲಿರುವ K-೨೦೧ ನೇ 'ಕುಶಲವರ ಕಾಳಗ', ಇದು ಪ್ರತಿಯಾದ ಕಾಲ ಪರಿಧಾವಿ ಸಂ| ಚೈತ್ರ ಬಹುಳ ೧೨ ಭಾರ್ಗವ ವಾರ, ಸ್ವಾಮಿ ಕಣ್ಣುಪಿಳ್ಳೆಯವರ 'ಎಫ ಮರಿ'ಯಲ್ಲಿ ತಾ.೧೭-೪--೧೬೧೨ ಕ್ಕೆ ಸರಿಯಾದುದು.(೨) ಅದೇ ಸಂಸ್ಥೆಯ K-೨೯೫ ನೇ 'ಐರಾವತ', ಪ್ರತಿಯಾದ ಕಾಲ ಪರಿಧಾವಿ ಸಂ| ಮಾರ್ಗಶಿರ ಬ. ೭ ಭಾನುವಾರ, 'ಎಫಮರಿ'ಯಲ್ಲಿ ತಾ. ೧-೧೨-೧೬೭೨ಕ್ಕೆ ಸರಿಯಾದ್ದು. ಇದರ ಒಂದು ಗರಿಯಲ್ಲಿ ಬರೆದಿರುವ 'ಗಜಗೌರೀಸಂಕಲ್ಪ'ದ ಕಾಲ (ಪು.೫೯೦ ಟಿ.) ಪಿಂಗಳ ಸಂ| ಭಾದ್ರಪದ ಶು. ೩ ಭಾನುವಾರ. ಇದು ತಾ. ೨೪-೮-೧೬೧೭ ನೇ ಭಾನುವಾರ ಆಗುವುದು. ಈ ಸಂಕಲ್ಪ ಮಂತ್ರವನ್ನು ನ್ಯಾಯವಾಗಿ ಕವಿಯೇ ಬರೆದಿರಬೇಕಾದ್ದು ಸಹಜವಾದುದರಿಂದ, ಅದು, ಆ ಪ್ರಸಂಗ ರಚನೆಯ ಕಾಲವೆಂದೆಣಿಸಿದರೆ ತಪ್ಪಾಗದು. ಹಾಗೂ ಸಂಭವತಃ ಇದು ಆತನ ಕೊನೆಯ ಕೃತಿಯೆಂದೆಣಿಸಿದಲ್ಲಿ,ಅವನ ಯಕ್ಷಗಾನ ಕವಿತೆಗಳು ಕ್ರಿಸ್ತ ವರ್ಷ ೧೫೯೦ ರಿಂದ ೧೬೨೦ ರ ವರೆಗೆ ನಡೆದಿವೆ ಎಂದು ಸ್ಥೂಲವಾಗಿ ನಿರ್ಣಯಿಸಬಹುದು.

ಕಥಕಳಿ ರಾಮಾಯಣ ಪ್ರಬಂಧಗಳ ರಚನೆ ಕೊಲ್ಲಂ ವರ್ಷ ೭೩೮-೭೪೨ (ಕ್ರಿ.ಶ. ೧೫೬೩-೬೭)ರ ಅವಧಿಯಲ್ಲಿ ನಡೆದಿರಬೇಕೆಂದು ಮಲೆಯಾಳ 'ಭಾಷಾಚರಿತ್ರ' (By P. Govinda Pillai, Revised Edition, National Bookstall, Kottayam, ೧೯೬೫) ಪು. ೧೯೬-೧೯೭ ರಲ್ಲಿ ಸಾಧಾರವಾಗಿ ಪ್ರತಿಪಾದಿಸಲಾಗಿದೆ—ಅದರ ಕರ್ತೃ ಕೊಟ್ಟಾರಕರದ ರಾಜನು ಗ್ರಂಥಾರಂಭಕ್ಕೆ, ತಾನು ರೋಹಿಣೀ ನಕ್ಷತ್ರಜನ್ಮನಾದ ವಂಚಿ ರಾಜ ಕೇರಳವರ್ಮನ ಅಳಿಯನೆಂದೂ ಶಂಕರಕವಿಯ ಶಿಷ್ಯನೆಂದೂ ಹೇಳಿಕೊಂಡಿರುವ ಆಧಾರದ ಮೇಲೆ :

> "ಪ್ರಾಪ್ತಾನಂತ ಘನಶ್ರಿಯಃ ಪ್ರಿಯತಮ ಶ್ರೀ ರೋಹಿಣೀ ಜನ್ಮನೋಃ
> ವಂಚಿಕ್ಷ್ಮಾವರ ವೀರಕೇರಳವಿಭೋಃ ರಾಜ್ಞಃ ಸ್ವಸೋಃ ಸೂನುನಾ
> ಶಿಷ್ಯೇಣ ಪ್ರವರೇಣ ಶಂಕರಕವೇಃ ರಾಮಾಯಣಂ ತನ್ಯತೇ" (ಪು ೩ ನೋಡು)

ಮದ್ರಾಸು ಪ್ರಾಚ್ಯವಿದ್ಯಾ ಸಂಶೋಧನಸಂಸ್ಥೆಯಲ್ಲಿ ಪ್ರಾಧ್ಯಾಪಕರಾಗಿದ್ದ ವ್ಯಾಕರಣ ಸಾಹಿತ್ಯ ಶಿರೋಮಣಿ ಪಿ. ಕೃಷ್ಣನ್ ನಾಯರ್ ಇವರು ತಮ್ಮ 'ಆಟ್ಟಕಥಾ ಅಥವಾ ಕಥಕಳಿ' ಎಂಬ ಗ್ರಂಥದಲ್ಲಿ, ಕೊಲ್ಲಂ ಗಣಪತಿ ದೇವಸ್ಥಾನದಲ್ಲಿರುವ ಶಿಲಾಶಾಸನದ ಪ್ರಕಾರ ಆ ರಾಜನು ರಾಮಾಯಣ ಪ್ರಬಂಧಗಳನ್ನು ರಚಿಸಿ, ಕೊಲ್ಲಂ ವರ್ಷ ೬೭೨ (ಕ್ರಿ. ೧೪೯೭) ರಲ್ಲಿ ಆ ದೇವಸ್ಥಾನದಲ್ಲಿ ಮೊದಲಾಗಿ ಪ್ರಯೋಗಕ್ಕೆ ತಂದಿರುವುದಾಗಿ ತಿಳಿಸಿದ್ದಾರೆ. ಇದು ಸಪ್ರಮಾಣವಾಗಿದೆಯೆಂದು 'ಕಥಕಳಿಪ್ರಕಾರಂ' (Kathakali Prakaram by Panniseril Nanu Pillai, Kottayam, 1965) ಎಂಬ ಗ್ರಂಥದಲ್ಲಿ ಸವಿಮರ್ಶವಾಗಿ ಸಮರ್ಥಿಸಲಾಗಿದೆ.

ಮೊದಲು ಪಾರ್ತಿಸುಬ್ಬನ ಕಾಲನಿರ್ಣಯಕ್ಕೆ ಪ್ರಾಮಾಣಿಕ ಆಧಾರ ದೊರೆಯದಿದ್ದುದರಿಂದ, ಈಗ. ಸು. ೧೫೦ ವರ್ಷಕ್ಕೆ ಹಿಂದೆ ಆ ಕಣಿಪುರದಲ್ಲಿದ್ದ ಅದೇ ಹೆಸರಿನ ಇನ್ನೊಬ್ಬ ವ್ಯಕ್ತಿಯೇ ಈತನೆಂಬ ತಪ್ಪು ತಿಳಿವಳಿಕೆ ಸಾಕಷ್ಟು ಹಿಂದಿನಿಂದಲೇ ರೂಢಮೂಲವಾಗಿತ್ತು. ಇದಕ್ಕೆ ಕಾರಣವೆಂದರೆ, ಮಧೂರು (ಮದವೂರು) ಗಣಪತಿ ದೇವಸ್ಥಾನದಲ್ಲಿ ೧೮೩೭ ನೇ ಇಸವಿಯ ಪಿಂಗಳ ಸಂವತ್ಸರದಲ್ಲಿ ನಡೆದಿದ್ದ ಮೂಡಪ್ಪಸೇವೆ ಎಂಬ ಉತ್ಸವಕ್ಕೆ ಸಂಬಂಧಪಟ್ಟ ಒಂದು ಲೆಕ್ಕದ ದಾಖಲೆ. ಅದರಲ್ಲಿ, ಉತ್ಸವದ ಬೇರೆ ಬೇರೆ ವಿನಿಯೋಗಕ್ಕೆ ಹಾಗೂ ಬ್ರಾಹ್ಮಣ ಭೋಜನಕ್ಕೆ ಬೇಕಾಗುವ ದವಸಧಾನ್ಯಾದಿಗಳ ವಿವರ ಮತ್ತು ಬೇರೆ ಬೇರೆ ಕ್ರಿಯಾಭಾಗಗಳನ್ನು ನಡೆಸುವ ಬಗ್ಗೆ ಸೀಮೆಯೊಳಗಿನ ಯಾವ ಯಾವ ಗ್ರಾಮಗಳಿಂದ ಎಷ್ಟೆಷ್ಟು ಜನರು ಬರತಕ್ಕದ್ದು ಎಂಬ ವಿವರಗಳನ್ನು ಪ್ರತ್ಯೇಕ ಕಲಮುಗಳಲ್ಲಿ ಬರೆಯಲಾಗಿದೆ. ವಿನಿಯೋಗಗಳ ವಿವರ ಬರೆದಿರುವ ಮೊದಲ ಕಲಮಿನ ಶಿರೋಲೇಖನ ಸಮೇತ, ಕೆಲಸಕಾರ್ಯಗಳಿಗೆ ಬರತಕ್ಕವರ ಪೈಕಿ ಕಣಿಪುರ ಪಾರ್ತಿಸುಬ್ಬನ ಹೆಸರಿರುವ ನಾಲ್ಕನೆಯ ಕಲಮಿನ ಮೊದಲ ಭಾಗವನ್ನು ಕೆಳಗೆ ಪಡಿಯಚ್ಚಿನಲ್ಲಿ ಕೊಡಲಾಗಿದೆ. (ಒದಗಿಸಿ ಕೊಟ್ಟವರು— ದಿ| ಕೂಡಲು ಈಶ್ವರ ಶ್ಯಾನುಭೋಗರು)

ಚಿತ್ರ ೪-೨ (ಒಂದನೇ ಕಲವು)

ಯದಾಸ್ತು ಮದ ಊರ್‍ರ ಶ್ರೀ ಮಹಾ
ಗಣಪತ್ತಿ ದೇವರ ಸಂನ್ನಿದಿಯಲ್ಲು
ಆಗುವಂತ್ತ ಮೂಡಪ್ಪದ ಲೆಖ್ಖ—
ಪ್ರಾಕು ಲೆಖ್ಖ ದಾಖಿಲೆ ಪ್ರಕಾರ್‍ರ ಪಿಂಗಳ ಸಂ
ವತ್ಸರದಾ ವಯಿಶಾಖ ಬ ೪ಯು ಆದಿತ್ಯ
ವಾರ್‍ರ ದಿವ್ಸ ನಡವ ಬಗೆ ಬರದ ಲೆಖ್ಖದ
ನಖಲು—
ಗಣಪತ್ತಿಯಿಡುವದು
ಮೆಲಾಗ್ರ ಹಚ್ಚುವಲ್ಲಿ ಬಡಗ ಅಂಬಲದಲು
ಯಿಡುವ ಗಣಪತ್ತಿ ೧೮ ವಿವರ—

ಚಿತ್ರ ೪-೧ (ನಾಲ್ಕನೆಯ ಕಲವು)

ಸ್ಥಾನಿಕರು ಮೆಲಾಗ್ರಕೆ ಹಚ್ಚುವ ಬಗ್ಗೆ—
ಬ್ರಾಂಹರ ಯೆಂಜಿಲುತ್ತೆಗವ ಬಗ್ಗೆ—
ಬಂಟರಿಗೆ ಯಿಕ್ಕುವ ಬಗೆ ಸಹಾ—
ಪೆರಡಾಲ ಅಪ್ಪಯನ (ಅಪಯ್ಯನ ?) ಮುಖಾಂತ್ರ
ಜನ ೬೦ರ್‍ರ ವಿವರ್‍ರ—

ವಿವರ—

ಕುಂಬಳೆ ಮಾಗಣೆಯಿಂದ—

ಕಣಿಪುರದಿಂದಾ ಪಾರ್ತಿಸುಬ್ಬ ಜ೧—

ಬಡಗಕ್ರುಪಾ (ಷ್ಣಾ ?) ಜ೧ ಬಂಡಾರಿಕುಂನ್ಯಂಣಜ ೧

ಕೆಡಿಕಾವಿನ ಕ್ರುಷ್ನಾಜ೧ ಕೊಡಿಯಂಪೆ ಲಿಂಗ ೧

ಇಚಿಲಂಪಾಡಿ ರಗುವ ಜ೧ ಶಡಂಬಾರ್‍ರಿಯಿಶ್ರ ೧

ಕಿದೂರ ಯಿಶ್ರ ಅಂ । ಜ ೮

ಅಂಗಡಿಮೊಗರ್‍ರು

ಪುತ್ತಿಗೆಯಿಶ್ರ ೧ ದೆಲಂಪಾಡಿ ಸುಬ್ಬಜ ೧

ಮುಗುವಿನ ಕ್ರುಷ್ನಾ ೧ ಬಜಕೂಡಲ ಸುಬ್ಬಜ ೧

ಕಾಟುಕುಕ್ಕೆ ವಿಷ್ಣುಜ ೧ ಅಂ । ಜ ೫

ಮೊಗ್ರಾಲಿಂದಾ

ಕಾಂಗುಳಿ ಕಾರುಮಾರ ಸುಬ್ಬ ಜ ೧

ಯಿಶ್ರ ಭಂಡಾರಿ ಜ೧ ಅಂ । ಜ ೨

ಅನಂತಪುರ ಜ ೩ ರ ವಿವರ್‍ರ ಸಂಕ್ಯ ಭಾಗೋತ್ತ್ರಜ ೧

ಪಾ । ಸುಬ್ಬನ ಯಿಶ್ರ ೧ ಬಡಗಕ್ರುಷ್ಣಜ ೧ ಅಂ । ಜ ೩

ಶಿರುವಾಗಿಲು ಜ ೧

ಕುದ್ರೆಪ್ಪಾಡಿ ಯಿಶ್ರಭಂಡಾರಿ ಜ ೧

ಅಂ । ಜ ೭

ಇಲ್ಲಿ ಕಾಣುವ ಪಿಂಗಳ ಸಂವತ್ಸರದ ಆ ದಿನವು ೧೭೭೭ನೆಯ ಇಸವಿ ಮೇ ತಿಂಗಳ ತಾ. ೧೪ನೇ ಭಾನುವಾರಕ್ಕೆ ಸರಿಯಾದದ್ದು. ಪ್ರಾಕು ದಾಖಲೆಯ ಪ್ರಕಾರ ಬರೆದ ಲೆಕ್ಕದ ನಕಲು ಎಂದಿದ್ದರೂ ಪಿಂಗಳ ಸಂವತ್ಸರದಲ್ಲಿ ನಡೆವ ಬಗ್ಗೆ ಬರೆದ ಲೆಕ್ಕವೆಂದಿರುವುದರಿಂದ, ಉತ್ಸವದ ವಿನಿಯೋಗದ ವಿವರಗಳ ಮಟ್ಟಿಗೆ ಪ್ರಾಕು ದಾಖಲೆಯಲ್ಲಿದ್ದದ್ದನ್ನೆ ಬರೆದುದಿರ ಬೇಕು ಹೊರತು ಕೆಲಸಕ್ಕೆ ಬರಬೇಕಾದ ಜನರ ಹೆಸರು ಉತ್ಸವ ನಡೆದ ಆ ಪಿಂಗಳ ಸಂವತ್ಸರದಲ್ಲಿ ಇದ್ದವರದೇ ಆಗಿರಬೇಕಲ್ಲದೆ ಪೂರ್ವಕಾಲದವರ ಹೆಸರನ್ನು ಬರೆದಿಡಲು ನ್ಯಾಯವಿಲ್ಲ. ಆದ್ದರಿಂದ ಇಲ್ಲಿ ಕಾಣುವ ಕಣಿಪುರ ಪಾರ್ತಿಸುಬ್ಬನು ಆ ಕಾಲದಲ್ಲಿದ್ದವ ನೆಂಬ ನಂಬಿಕೆಯುಂಟಾದುದು ಸಹಜವೇ ಆಗಿದೆ.

ಇದಕ್ಕೆ ಶಾಮೀಲಾಗಿ ಕಾಣುವ, ೧೮೩೭ನೆಯ ಇಸವಿಯ ಒಂದು ಕೋರ್ಟು ದಾಖಲೆಯನ್ನು ಅದೇ ಕೂಡಲು ಈಶ್ವರ ಶಾನುಭಾಗರು ಪ್ರಕಟಪಡಿಸಿದ್ದರು. ಅದರ ಪ್ರಕಾರ ಕಣಿಪುರ ಪೇಟೆಯಲಿದ್ದ ಮಾನುದಾಸನೆಂಬವನ ತಮ್ಮ ಪಾರ್ತಿಸುಬ್ಬಣ್ಣನೆಂಬ

ವನು ತನ್ನ ಬಾಬ್ತು 'ಮಾಸುದಾಸ ಎಂಬ ವರ್ಗದ' ಒಂದು ಹಿತ್ತಿಲನ್ನು ಆ ಕೂಡಲು ಮನೆಯ ಪೂರ್ವಿಕರಾದ ಪಾಡಿ ವೆಂಕಟೇಶ ಶ್ಯಾನುಭಾಗನ ಮಗ ಲಿಂಗಪ್ಪ ಎಂಬವನಿಗೆ ೧೮೦೬ನೆಯ ಇಸವಿ ವ್ಯಯ ಸಂವತ್ಸರದಲ್ಲಿ ಇಳಿದಾವಾರ್ರ (ಭೋಗ್ಯ) ಮಾಡಿಕೊಟ್ಟಿರು ತ್ತಿದ್ದ. ಆ ಸಂಬಂಧ ನಡೆದ ಕೋರ್ಟು ವ್ಯವಹರಣೆಯಲ್ಲಿ ಆ ಹಿತ್ತಿಲು, ವಾದಿಯಾಗಿದ್ದ ಲಿಂಗಪ್ಪನ ಸ್ವಾಧೀನ ಹೋಗಿತ್ತು. ಇದರಿಂದ, ಮೇಲೆ ಕಾಣಿಸಿದ ಮೂಡಪ್ಪದ ಲೆಕ್ಕ ದಲ್ಲಿರುವ ಪಾರ್ತಿಸುಬ್ಬನೇ ಈ ಪಾರ್ತಿಸುಬ್ಬಣ್ಣ ಹಾಗೂ ಅವನೇ ಕವಿಪಾರ್ತಿಸುಬ್ಬನೆಂಬ ನಂಬಿಕೆ ಮತ್ತೆ ಬಲಪಟ್ಟಿತು—ಕವಿ ಪಾರ್ತಿಸುಬ್ಬನದೆಂದೇ ಪ್ರಸಿದ್ಧವಾಗಿದ್ದ ಒಂದು ಹಿತ್ತಿಲು ಕೂಡಲು ಮನೆಯವರಿಗೆ ಹೋಗಿದ್ದಿತ್ತೆಂಬುದರಿಂದ.

ಆದರೆ, ಆಮೇಲೆ ಸ್ವಲ್ಪ ಸಮಯ ದಾಟಿ ಅದೇ ಕೂಡಲು ಈಶ್ವರ ಶ್ಯಾನುಭಾಗರು, ತಮ್ಮಲ್ಲಿದ್ದ ಹಳೆಯ ದಾಖಲೆಗಳನ್ನೆಲ್ಲ ಶೋಧಿಸಿ ನೋಡಿದ್ದಲ್ಲಿ ಮೇಲಿನ ಕೋರ್ಟು ದಾಖಲೆಯ ಮೂಲಕ ಲಿಂಗಪ್ಪನಿಗೆ ಬಂದ ಹಿತ್ತಿಲಿಗೆ 'ಮಾಸುದಾಸನ ಹಿತ್ತಿಲು' ಎಂಬ ಹೆಸರಿದ್ದುದೆಂದೂ 'ಪಾರ್ತಿಸುಬ್ಬನ ಹಿತ್ತಿಲು' ಬೇರೇ ಇದೆಯೆಂದೂ, ಅದನ್ನು ಪಾಟಾಳಿ ಸುಬ್ಬಯ್ಯನೆಂಬವನು ಆ ಲಿಂಗಪ್ಪಯ್ಯನ ತಮ್ಮ ಪಾಡಿ ಸುಬ್ರಾಯ ಶ್ಯಾನುಭಾಗನಿಗೆ ಆವಾರ್ರ ಮಾಡಿಕೊಟ್ಟದ್ದೆಂದೂ ಕಾಣುವ ಇನ್ನೆರಡು ದಾಖಲೆಗಳು ದೊರಕಿರುವುದನ್ನು ತಿಳಿಸಿದರು. ಪಾರ್ತಿಸುಬ್ಬನ ಹಿತ್ತಿಲಿನ ಕುರಿತ ದಾಖಲೆ ಇದು.

ಚಿತ್ರ ೩

. . . ಕ್ರುತ್ತು ಸಂ । ರ ಮಾಗಶುಶೀಲ್ಲು ಶ್ರಿಮುತ್ತೂ
. . . ಸುಬ್ಬಯ ಶ್ಯಾನುಭವರಿಗೆ – ಕಣಿಪು
. . . ಟಾಳಿ ಸುಬ್ಬಯನು ಬರಸಿಗೊಟ್ಟ ರಸಿದಿ
. . . ನೆಂದ್ರೆ ನಿಂಮಿಂದ ಯಿಾ ಸಂ । ಕ್ಕೆ ನಿಮಗೆ ನಾ
. . . ನು ಆರುಪ್ರ ವಾರಕ್ಕೆ ಕೊಟ್ಟ ಪಾರ್ತಿಸುಬ್ಬನ
. . . ತ್ತಿಲ ಕಟ್ಟು ಕಡಿಬಾಬ್ತು ಬರತಕ್ಕ ೦॥ =
ಅಡೊಬೆಳೆಯ್ಯು ಯಿಾತ್ತಿತ್ತಿಯಲ್ಲು ನಗದು
ನಿಲು ಕೊಟ್ಟಪ್ರಕಾರ ನನಗೆ ಬಂತ್ತುಯಂತ
ಬರ್ಸಿ ಕೊಟ್ಟರ್ಸಿದಿ ಬಗ್ಯೆ—ಪ ಸುಬಯನ ರುಜು
ಯಿಾ ಬಗ್ಯೆ ಸಾಕ್ಷಿ—ಕಾಸ್ರಗೊಡ ವೆಂಕಟಶ್ಯಾನ
ಮ । ಸುಬ್ರಾಯನ ಸಾಕ್ಷಿ ಕಿದೂರ ಅ । ಮ । ಯಿಾ
ಶ್ವರನ ಸಾಕ್ಷಿ

(ಕಟ್ಟುಕಡಿ ಎಂದರೆ ಆವಾರ್ರಕ್ಕೆ ಕೊಟ್ಟ ಆಸ್ತಿಯ ಉತ್ಪತ್ತಿಯಲ್ಲಿ ಬಡ್ಡಿಯ ಅಂಶ ಕಳೆದು ಉಳಿಕೆ ಬರತಕ್ಕ ಹಣ).

ಇದರಲ್ಲಿ ಕಾಣುವ ಸುಬ್ಬಯ ಶ್ಯಾನುಭೋಗನೆಂದರೆ, ಹಿಂದಿನ ಕೋರ್ಟು ದಾಖಲೆಯಲ್ಲಿ ಕಾಣುವ ಪಾಡಿ ವೆಂಕಟೇಶ ಶ್ಯಾನುಭಾಗನ ಮಗ, ಹಾಗೂ ಆ ಲಿಂಗಪ್ಪಯ್ಯನ ತಮ್ಮ. ಈ ಸುಬ್ಬಯ್ಯ ಶಾನುಭಾಗನು ೧೮೬೦ನೆಯ ಇಸವಿಯವರೆಗೆ ಜೀವಿಸಿದ್ದನೆಂದು ತಿಳಿಯುವುದು. ಮೊದಲ ಒಂದೆರಡಕ್ಷರಗಳ ಭಾಗ ತುಂಡು ಹೋಗಿರುವ ಮೇಲಿನ ರಶೀದಿಯಲ್ಲಿ ಕಾಣುವ 'ಕೃತು' ಸಂವತ್ಸರವೆಂಬುದು ಶುಭಕೃತು ಅಥವಾ ಶೋಭಕೃತು ಇಲ್ಲವೆ ವಿರೋಧಿಕೃತು ಸಂವತ್ಸರವಾಗಿರಬೇಕೆಂಬುದರಲ್ಲಿ ಸಂದೇಹವಿಲ್ಲ. ಹಾಗೂ ಅದು ಕಳೆದ ಇಸವಿ ೧೮೪೩ನೇ ಶುಭಕೃತು, ೧೮೪೪ನೇ ಶೋಭಕೃತು ಅಥವಾ ೧೮೫೧ನೇ ವಿರೋಧಿಕೃತು ಸಂವತ್ಸರಗಳಲ್ಲಿ ಒಂದಾಗಿರಬೇಕೆಂದೂ ನಿರ್ಣಯವಾಗುವುದು. ಆದ್ದರಿಂದ ಆರ್ವಾರ ಮಾಡಿಕೊಟ್ಟ ಪಾಟಾಳಿ ಸುಬ್ಬಯ್ಯನೆಂಬುವನು, ಹಿಂದೆ ಹೇಳಿದಂತೆ ಪಾರ್ತಿಸುಬ್ಬನ ವಂಶೀಯನಾದ ನಾರಂಪಾಡಿ ರಾಮಯ್ಯನವರ ತಂದೆ ಪಾಟಾಳಿ ಸುಬ್ಬಯ್ಯನೇ ಆಗಿರುವುದು ಸಂಭವನೀಯವಾಗಿ ಕಾಣುವುದು. ಪಾರ್ತಿಸುಬ್ಬನ ವಂಶೀಯನಾಗಿದ್ದುದರಿಂದ ತಾನೇ ಅವನಿಗೆ ಆ ಹಿತ್ತಲಿನ ಅಧಿಕಾರ ಬಂದಿರಬೇಕು.

ಮಾನುದಾಸನ ಹಿತ್ತಿಲಿಗೆ ಸಂಬಂಧಪಟ್ಟ ದಾಖಲೆ ಎಂಬುದು ಆ ಹಿತ್ತಿಲಿನ ಬಗ್ಗೆ ಬರಕೊಟ್ಟ ಒಂದು ಗೇಣಿಚೀಟು. ಅದರಲ್ಲಿ ಕಾಣುವ ವಿಚಾರ ಹೀಗಿದೆ—

"ಪರಿಧಾವಿ ಸಂವತ್ಸರದ ಆಷಾಢ ಶು. ೯ರಲ್ಲು ಶ್ರೀಮತು ಪಾಡಿ ಸುಬ್ಬಯ್ಯ ಶಾನುಭಾಗರ ಅಣ್ಣನ ಚಿ. (ಮಗ) ಸುಬ್ರಾಯಶಾನುಭಾಗರಿಗೆ ಕಣಿಪುರ ಅಣ್ಣು ಮಗ ವೆಂಕಟೇಶನು ಬರೆಸಿಕೊಟ್ಟ ಗೇಣಿಚೀಟಿನ ಕ್ರಮವೆಂತೆಂದ್ರೆ— ನಿಮ್ಮ ಚಿಕ್ಕತಂದೆ ಸುಬ್ಬಯ್ಯ ಶಾನುಭಾಗರಿಗೆ ಗ. ೨||೦ಕ್ಕೆ ಬರಕೊಟ್ಟ ಪತ್ರಲೆಕ್ಕದ ಹೊರ್ತು ಬೇರೆ ಈ ವರ್ಷಕ್ಕೆ ನಿಮ್ಮಿಂದ ಚಾಲುಗೇಣಿಗೆ ಗೆಯ್ಯುವರೆ ಮಾಡಿಕೊಂಡ ಕಣಿಪುರ ದೇವಸ್ಥಾನದ ತೆಂಕಪಾರ್ಶ್ವದಲ್ಲು ಇರುವ ಮಾನುದಾಸನಹಿತ್ತಿಲನ್ನು ಗೇಣಿಗೆ ಗೆಯ್ಯುವರೆ ಮಾಡಿಕೊಂಡು ಕೊಡುವರೆ ಮಾಡಿದ ಗೇಣಿ ರೂ. ಗ. ||೧|೦ ಅರ್ಧಣ ಹಾಗವು . . . . . (ಮಲೆಯಾಳ ಬರಹದಲ್ಲಿ) ವೆಂಕಟೇಶನ ರುಜು. ಕಿದೂರು ಈಶ್ವರಯ್ಯನ ಸಾಕ್ಷಿ."

ಹೀಗಿರುವುದರಿಂದ ಕೋರ್ಟು ದಾಖಲೆಯ ಪಾರ್ತಿಸುಬ್ಬಣ್ಣನೆಂಬುವನು ಕವಿ ಪಾರ್ತಿಸುಬ್ಬನಲ್ಲವೆಂಬುದು ಮತ್ತೆ ದೃಢವಾಯಿತು. ಮೂಡಪ್ಪದ ಲೆಕ್ಕದ ಪಟ್ಟಿಯಲ್ಲಿ ಕಾಣುವ ಜನರ ಹೆಸರುಗಳೂ ಪ್ರಾಕು ದಾಖಲೆಯಲ್ಲಿ ಇದ್ದುದನ್ನೇ ಬರೆದಿಟ್ಟದ್ದೆಂದಾದ ಪಕ್ಷದಲ್ಲಿ ಅಲ್ಲಿ ಕಾಣುವ ಕಣಿಪುರದ ಪಾರ್ತಿಸುಬ್ಬನು ನಿಜವಾದ ಕವಿಪಾರ್ತಿಸುಬ್ಬನಾಗಿರಬಹುದು. ಅದಲ್ಲದೆ ಹೋದಲ್ಲಿ ಆತನು ಇನ್ನೂರು ವರ್ಷಗಳ ನಂತರ ಆ ಕಣಿಪುರದಲ್ಲಿದ್ದ ಸ್ಥಾನಿಕ ವರ್ಗದ ಇನ್ನೊಬ್ಬ ಪಾರ್ತಿಸುಬ್ಬನೇ ಸರಿ. ಹೀಗೆ ಒಂದೇ ಹೆಸರಿರುವವರು ಕಾಲಾಂತರದಲ್ಲಿ ಒಂದೇ ಸ್ಥಳದಲ್ಲಿ ಇರಲಾರರೆಂದೇನೂ ಇಲ್ಲ. ಹಾಗೂ ಪಾರ್ತಿಸುಬ್ಬನೆಂಬ ಹೆಸರಾಗಬೇಕಿದ್ದರೆ ಆ ವ್ಯಕ್ತಿಯು ಪಾರ್ತಿ ಎಂಬುವಳ ಮಗನೇ ಆಗಬೇಕೆಂದೂ

ಇಲ್ಲ; 'ಪಾರ್ತಿ'ಯನ್ನು 'ಸಂಬಂಧ'ಕ್ಕೆ ಇಟ್ಟುಕೊಂಡವನಿಗೂ ಆ ಹೆಸರು ಬೀಳಬಹುದು. ಹಾಗೆ ಅಜ್ಜಮ್ಮನ ಮಾಲಿಂಗ, ಅಮ್ಮಣ್ಣಿ ರಾಮು, ಬಾಲಕ್ಕನ ಗೋವಿಂದ ಇತ್ಯಾದಿ ಹೆಸರಾದವರು ಆ ಊರಿನಲ್ಲಿ ಬೇರೆ ಎಷ್ಟೋ ಮಂದಿ ಇದ್ದರು, ಇದ್ದಾರೆ. ಅದೇನಿದ್ದರೂ ಪಾರ್ತಿಸುಬ್ಬನ ಹೆಸರಿನ ಒಂದು ಹಿತ್ತಿಲು ಇದ್ದಿತ್ತೆಂಬುದೂ ಅದು ಕೂಡಲು ಮನೆಯವರಿಗೆ ಹೋಗಿತ್ತೆಂಬುದೂ ಆತನು ಸ್ಥಾನಿಕ ಹಾಗೂ ಪಾಟಾಳಿಯಾಗಿದ್ದನೆಂಬುದೂ ಮೇಲಿನ ಕಟ್ಟುಕಡಿರಶೀದಿಯಿಂದ ನಿರ್ಣಯವಾಗುವುದು. ಹಿಂದೆ ಕೊಟ್ಟ ಮೂಡಪ್ಪದ ದಾಖಲೆಯು, ದಿ। ಗೋವಿಂದಪ್ಪೈಗಳ ಹೇಳಿಕೆಯಲ್ಲಿ 'ಓಲೆಗರಿಯದೇನೋ' ಎಂದಿರುವುದಾದರೆ, (ಮಾಯಿಪಾಡಿ) ಸಿರಿಬಾಗಿಲು ವೆಂಕಪ್ಪಯ್ಯನೆಂಬವರು ಪಾರ್ತಿಸುಬ್ಬನ ಹೆಸರಿರುವ ಆ ಲೆಕ್ಕವು ಕಡತದಲ್ಲಿ ಬರೆದಿದ್ದುದನ್ನು ತಾವು ನೋಡಿರುವುದಾಗಿ ಹೇಳಿದ್ದಿದೆ—(ಲೇಖನ 'ಮಧುರಸ್ಮೃತಿ', ಗ್ರಂಥ, ಪು. ೫೧-೫೨, ಗೀತಾ ಪ್ರಕಾಶನ, ಕಾಸರಗೋಡು, ೧೯೬೫) ಮೇಲೆ ಪಡಿಯಚ್ಚಿನಲ್ಲಿ ಕೊಟ್ಟಿರುವುದು (ಚಿತ್ರ ೪-೧; ೪-೨) ಆ ಓಲೆಯದೋ ಕಡತದ್ದೋ ಪಟ್ಟಿಯಿಂದ ಕೂಡಲು ಶ್ಯಾನುಭಾಗರು ಕಾಗದದಲ್ಲಿ ತೆಗೆದು ಬರೆದಿಟ್ಟ ಪ್ರತಿಯಾಗಿರಬೇಕು.

## ಗ್ರಂಥ ಸಂಪಾದನೆಯ ಕುರಿತು

ಪಾರ್ತಿಸುಬ್ಬನ 'ಕೃಷ್ಣ ಚರಿತೆ' ಎಂಬುದು ಇದುವರೆಗೆ ಸಮಗ್ರವಾಗಿ ಅಚ್ಚಾಗದೆ ಇರುವ ಯಕ್ಷಗಾನ. ಉಡುಪಿ ಮಧ್ವಸಿದ್ಧಾಂತ ಗ್ರಂಥಾಲಯದವರು ಕಳೆದ ೧೯೩೦ನೇ ಇಸವಿಯಲ್ಲಿ ಇದರ ಪೂರ್ವಾರ್ಧ ಸ್ವಲ್ಪಾಂಶವನ್ನು (ಪೂತನಾಮೋಕ್ಷದವರೆಗೆ) 'ಶ್ರೀಕೃಷ್ಣ ಬಾಲಲೀಲೆ' ಎಂಬ ಹೆಸರಿನಿಂದ ಮುದ್ರಿಸಿದ್ದರು. ಅದರಲ್ಲಿ ಅನ್ಯಕರ್ತೃತವಾದ ಇನ್ನೆರಡು ಬಾಲಲೀಲೆಗಳ ಪದ್ಯಗಳು ಮಧ್ಯಮಧ್ಯ ಸೇರಿಕೊಂಡಿವೆಯಲ್ಲದೆ ಕೊನೆಯಲ್ಲಿ ಉಡುಪಿಕೃಷ್ಣನಿಗೆ ಒಂದು ಮಂಗಳಪದ್ಯವೂ ಪ್ರಕ್ಷಿಪ್ತವಾಗಿ ಬಂದಿದೆ. ಇದರಿಂದಲಾಗಿ ಆ ಪ್ರಸಂಗವೇ ಅನ್ಯಕರ್ತೃಕವೆಂಬ ಭ್ರಾಂತಿಯು ತಿಳಿದೋ ತಿಳಿಯದೆಯೋ ಕೆಲವರಲ್ಲಿ ಹುಟ್ಟಿಕೊಂಡಿದೆ. ಸುಬ್ಬನ ಈ ಪ್ರಸಂಗಕ್ಕಾದರೆ 'ಕೃಷ್ಣ ಚರಿತೆ' ಎಂಬ ಹೆಸರಿರುವುದನ್ನು ಈ ಓಲೆಪ್ರತಿಯಿಂದ ತಿಳಿಯಬಹುದು.

ಚಿತ್ರ ೧

(ದಿ। ಬಲಿಪ ನಾರಾಯಣ ಭಾಗವತರು ಒದಗಿಸಿಕೊಟ್ಟ ಓಲೆಗ್ರಂಥದ ಮೊದಲಗರಿ.)

ಶ್ರೀ ಗೋಪಾಲಕೃಷ್ಣಾಯನಮಃ । ಕೃಷ್ಣ ಚರಿತೆ ಬರೆಯುವುದಕ್ಕೆ ಶುಭಮಸ್ತು ॥
ಶ್ರೀ ಗೋಪಾಲಮಶೇಷ ಭಕ್ತವರದಂ ಶಾಂತಂ ಯಶೋದಾರ್ಭಕಂ ।
ನಾಗಾರಾತಿಸುವಾಹನಂ ನಗಧರಂ ಕ್ಷೀರಾಬ್ಧಿ ಜಾತಾಧವಂ ।
ವಾಗೀಶಾದ್ಯಮ ರೌಘಸನ್ನುತಪದಂ ಗೋಪಾಂಗನಾ ವೇಷ್ಟಿತಂ ।
ಯೋಗೀಂದ್ರಾರ್ಚಿತ ಪಾದಪದ್ಮಯುಗಳಂ ವಂದೇ ಸರೋಜಾಂಬಕಂ ॥

ಜಯ ಗೋಪಿಕಾನಂದ ಜಯಗೋಪ ಜನವೃಂದ ಜಯಸಚ್ಚಿದಾನಂದ
ಜಯತು ಗೋವಿಂದ ||

ನಂದಗೋಪಕುಮಾರ ನವನೀತಪರಚೋರ |
ಸಿಂಧುಕನ್ಯಾರಮಣ ಸರಸಿರುಹಚರಣ ||

ಇಂದ್ರಾದಿ ಸುರನಮಿತ ಈಶಸಖ ಮಹಿಮಯುತ ಸುಂದರಾತ್ಮಕ ವರ್ಣ
ಸಕಲ ಗುಣಪೂರ್ಣ ||

ಕಂಸದೈತ್ಯವಿನಾಶ ಕಮಲನೇತ್ರ ವಿಲಾಸ ನೀಂ ಸಕಲ ಸುರಸೇವ್ಯ
ನತಜನೋದ್ಭಾವ್ಯ ||

ಅದಲ್ಲದೆ, ಇದರ ೫ ನೇ ಪದ್ಯ (ಪು. ೪೮೮)ದಲ್ಲಿ ಕವಿಯೇ 'ಪರಮವೈಷ್ಣವ ಶುಕಾ ಚಾರ್ಯಮುನಿ ವದನಸರಸಿರುಹದಿಂದೊಗೆದ ಶ್ರೀಕೃಷ್ಣಚರಿತವನು ನಾ ವಿರಚಿಸುವೆ' ಎಂದಿರುತ್ತಾನೆ.

ಸಮಗ್ರವಾದ ಈ 'ಕೃಷ್ಣಚರಿತೆ'ಯನ್ನೂ ರಾಮಾಯಣದಲ್ಲಿ ಪಟ್ಟಾಭಿಷೇಕದಿಂದ ಅಂಗದಸಂಧಾನವರೆಗಿನ ಐದು ಪ್ರಸಂಗಗಳನ್ನೂ ಈಗ ನಲುವತ್ತು ವರ್ಷಗಳಷ್ಟು ಹಿಂದೆಯೇ ನಾನು ಕಂಠಪಾಠ ಮಾಡುವುದಕ್ಕಾಗಿ ಶುದ್ಧಪಾಠ ಶೋಧಿಸಿ ಸಂಪಾದಿಸಿಕೊಂಡಿದ್ದೆ. ಅದಕ್ಕಾಗಿ ಅಂದು ಸಂಗ್ರಹಿಸಿದ್ದ ಓಲೆ ಗ್ರಂಥಗಳು ಮತ್ತೆ ಕೈತಪ್ಪಿಹೋದವು. ಹಾಗೆ ನಾನು ಬರೆದಿಟ್ಟಿದ್ದ ಹಸ್ತಪ್ರತಿಯಲ್ಲದೆ, ಪ್ರಸ್ತುತ ಸಂಪಾದನೆಗಾಗಿ ಮತ್ತೆ ಸಂಗ್ರಹಿಸಿದ ಮುಖ್ಯ ಆಕರ ಗ್ರಂಥ ಪ್ರತಿಗಳವಿವರ ಹೀಗಿದೆ.

## ಓಲೆ ಗ್ರಂಥಗಳು

೧. ಐರಾವತ, ಗಜಗೌರೀವ್ರತಸಂಕಲ್ಪ ಮಂತ್ರವಿರುವುದು (ಪಿಂಗಳ ಸಂ| ಭಾ. ಶು. ೩ ಭಾನುವಾರ), ಸಮಗ್ರ, ಸಭಾಲಕ್ಷಣ ಪದ್ಯಗಳ ಸಮೇತ, ಪರಿಧಾವಿ ಸಂ| ಮಾರ್ಗಶಿರ ಬ. ೭ ಭಾನುವಾರ ಬರೆದು ಮುಗಿದಂಥಾದ್ದು—ಮೈ.ವಿ.ವಿ.ಕ.ಅ.ಸಂ. K–೨೯೫.

೨. ಐರಾವತ, ಸಂಕ್ಷಿಪ್ತ, ಮೊದಲ ೪೬ ಗರಿಗಳಲ್ಲಿ ಅನ್ಯಕರ್ತೃಕವಾದ 'ಕುಶ ಲವರ ಕಥೆ' ಇರುತ್ತದೆ. ಈಶ್ವರ ಸಂ| ಮಾಘ ಬ. ೭ರಲ್ಲು ಬರೆದು ಮುಗಿದದ್ದು— ಮೈ. ವಿ.ವಿ.ಕ.ಅ.ಸಂ. K–೧೦೩.

೩. ಕುಶಲವರ ಕಾಳಗ, ಸಮಗ್ರ, ಪರಿಧಾವಿ ಸಂ| ಚೈತ್ರ ಬ. ೧೨ ಭಾರ್ಗವವಾರ ದಲ್ಲು ಬರೆದು ಮುಗಿಸಿದ ಪ್ರತಿ—ಮೈ.ವಿ.ವಿ.ಕ.ಅ.ಸಂ. K–೨೦೧.

೪. ರಾಮಾಯಣ ಪಟ್ಟಾಭಿಷೇಕದಿಂದ ಉಂಗುರಸಂಧಿ ಕೊನೆಯವರೆಗೆ ಸಮಗ್ರ ವಾಗಿರುವ ಗ್ರಂಥ. ಮಲಯಾಳ ಕಥಕಳಿ ರಾಮಾಯಣದ ಮೊದಲ ಸ್ತುತಿಪದ್ಯಗಳಿಂದ ಆರಂಭವಾಗುವುದು, ಸ್ವಲ್ಪಾಂಶ ಸಭಾಲಕ್ಷಣ ಸಮೇತ— ಮೈ. ವಿ. ವಿ. ಕ. ಅ. ಸಂ. K–೧೪೬.

೫. ಪಂಚವಟಿ ವಾಲಿಸಂಹಾರ, ಸಮಗ್ರ, ಮೈ.ವಿ.ವಿ.ಕ.ಅ.ಸಂ. K–೫೫೫.

೬. ಪುತ್ರಕಾಮೇಷ್ಟಿ—ಸೀತಾಕಲ್ಯಾಣ, ಸಮಗ್ರ, 'ಕುಂಬಳೆ ರಾಯಪ್ಪನಾಯ್ಕರಿಗೆ ಬರೆದುಕೊಟ್ಟದ್ದು' ಎಂದಿದೆ, ಸ್ವಲ್ಪಾಂಶ ಸಭಾಲಕ್ಷಣ ಸೇರಿದೆ, ಒದಗಿಸಿಕೊಟ್ಟವರು–ಸಿರಿಬಾಗಿಲು ವೆಂಕಪ್ಪಯ್ಯ, ಕಾಸರಗೋಡು.

೭. ಪಟ್ಟಾಭಿಷೇಕ—ಪಂಚವಟಿ, ಸಮಗ್ರ, ಪದ್ಯಸಂಖ್ಯೆ ೩೮೦—ಸಿರಿಬಾಗಿಲು ವೆಂಕಪ್ಪಯ್ಯ ಕಾಸರಗೋಡು.

೮. ಪಂಚವಟಿ— ವಾಲಿಸಂಹಾರ, ಉಂಗುರಸಂಧಿ, ಸೇತುಬಂಧನ, ಅಂಗದ ಸಂಧಾನ ಮತ್ತು ಕುಂಭಕರ್ಣಾದಿಕಾಳಗ ಸಮಗ್ರವಾಗಿರುವ ಸಂಪುಟ—ಸಿರಿಬಾಗಿಲು ವೆಂಕಪ್ಪಯ್ಯ ಕಾಸರಗೋಡು.

೯. ಪಂಚವಟಿಪ್ರಸಂಗ, ಸುಗ್ರೀವ ಸಖ್ಯದವರೆಗೆ ಮಾತ್ರ—ಸಿರಿಬಾಗಿಲು ವೆಂಕಪ್ಪಯ್ಯ, ಕಾಸರಗೋಡು.

೧೦. ಐರಾವತ, ಸಮಗ್ರ, ಮೊದಲ ಒಂದು ಗರಿಯಲ್ಲಿ ಪಾರ್ತಿಸುಬ್ಬನ ಐರಾವತವೆಂದು ಬರೆದಿದೆ—ಕೊಟ್ಟವರು ದಿ| ಬಲಿಪನಾರಾಯಣ ಭಾಗವತ.

೧೧. ಕೃಷ್ಣಚರಿತೆ, ಸಮಗ್ರ, ಪದ್ಯಸಂಖ್ಯೆ ೧೪೩, ಅಂಗೀರಸ ಸಂ| ಭಾದ್ರಪದ ಶು. ೬ರಲ್ಲು ಬರೆದದ್ದು— ದಿ| ಬಲಿಪನಾರಾಯಣ ಭಾಗವತ.

೧೨. ಪಟ್ಟಾಭಿಷೇಕ—ಪಂಚವಟಿ, ಸಮಗ್ರ, ಪದ್ಯಸಂಖ್ಯೆ ೩೭೭, ವಿಳಂಬಿ ಸಂ| ಪುಷ್ಯ ಶು. ೨ರಲ್ಲು ಬರೆದು ಮುಗಿಸಿದ್ದು—ನಾರಂಪಾಡಿ ವೆಂಕಟೇಶಯ್ಯನವರಲ್ಲಿ ದೊರೆತ ಪ್ರತಿ, ಕಾಸರಗೋಡು ತಾಲೂಕು.

೧೩. ಪಟ್ಟಾಭಿಷೇಕ—ಪಂಚವಟಿ, ಸಮಗ್ರ,—ಕಾಸರಗೋಡು ತಾಲೂಕು ಪೆರ್ಲ ಮಾಗಣೆ, ಜೇರ್ಕಪ್ಪೆ ದೇವಸ್ಥಾನದಲ್ಲಿ ದೊರೆತ ಪ್ರತಿ.

೧೪. ಸಭಾಲಕ್ಷಣ, ಸಮಗ್ರ, ಕಟ್ಟುಹಾಸ್ಯಗಳ ಮಾತುಕತೆ ಸಮೇತ, ಮಲೆಯಾಳ ಕಥಕಳಿ ರಾಮಾಯಣದ 'ವಂದನಶ್ಲೋಕ'ಗಳಿರುವಂಥಾದ್ದು, ೨೦೨ ಗರಿಗಳ ಗ್ರಂಥ—ದಿ| ಕೂಡಲು ಈಶ್ವರ ಶ್ಯಾನುಭೋಗ.

೧೫. ಸಭಾಲಕ್ಷಣ, ಅಸಮಗ್ರ, ಕಾಸರಗೋಡು ತಾಲೂಕು ಕಾಟುಕುಕ್ಕೆ ದೇವಸ್ಥಾನದ ಪ್ರತಿ—ದಿ| ಬಲಿಪನಾರಾಯಣ ಭಾಗವತ.

## ಕಾಗದದ ಹಸ್ತಪ್ರತಿಗಳು

೧. ಪುತ್ರಕಾಮೇಷ್ಟಿ—ಸೀತಾ ಕಲ್ಯಾಣ.

೨. ಉಂಗುರಸಂಧಿ.

೩. ಸೇತುಬಂಧನ.

೪. ಅಂಗದಸಂಧಾನ.

೫. ಕುಂಭಕರ್ಣಾದಿಕಾಳಗ.

೬. ಕುಶಲವರ ಕಾಳಗ.

೭. ಕೃಷ್ಣಚರಿತೆಯ ಪೂರ್ವಾರ್ಧ 'ಕೃಷ್ಣಾವತಾರ', ಪೂತನಾಮೋಕ್ಷದವರೆಗೆ.

೮. ಐರಾವತ, ಅಸಮಗ್ರ.

೯. 'ಸಭಾಲಕ್ಷಣ ಸಂಗೀತದ ಬೂಕು,' ಅಸಮಗ್ರ, ೧೮೪೯ನೇ ವಿಕಾರಿ ಸಂ। ಮಾರ್ಗಶಿರ ಬ. ೩೦ರಲ್ಲು ವಿಷ್ಣುಮಂಗಲದ ಈಶ್ವರ ಬರೆದದ್ದು. ನಂ.೧ರಿಂದ ೮ರ ವರೆಗಿನ ಪ್ರತಿಗಳನ್ನು ಕೂಡಲು ಗ್ರಾಮದ ವಿಷ್ಣುಮಂಗಲ ವೆಂಕಟೇಶಯ್ಯ ಬರೆದದ್ದು, ೧೮೪೯-೧೯೦೧.

೧೦. ಪಂಚವಟಿ—ವಾಲಿಸಂಹಾರ, ಉಂಗುರಸಂಧಿ, ಸಮಗ್ರ, ಮೈ.ವಿ.ವಿ.ಕ.ಅ. ಸಂ. KB-೩೬೭.

೧೧. ಪುತ್ರಕಾಮೇಷ್ಟಿ—ಸೀತಾಕಲ್ಯಾಣ, ವಾಲಿಸುಗ್ರೀವರ ಕಾಳಗ, ಚೂಡಾಮಣಿ, ಸೇತುಬಂಧನ, ಕುಂಭಕರ್ಣ ಇತ್ಯಾದಿ ಕಾಳಗಗಳಿರುವ ಸಂಪುಟ. ಮೊದಲ ೭೬ ಪುಟಗಳಲ್ಲಿ "ನಗರಾಖ್ಯ ಪಟ್ಟಣದ ವಿಠಲನ ಮಗ ಸುಬ್ಬಯ್ಯನು"ರಚಿಸಿದ ರಾವಣೋದ್ಭವ ಪ್ರಸಂಗವಿರುವುದು—ಕ.ಅ.ಸಂ. KB-೩೫೩.

೧೨. ವಾಲಿಸುಗ್ರೀವರ ಕಾಳಗ, ಸಮಗ್ರ—KB-೫೯೧.

೧೩. ಪಟ್ಟಾಭಿಷೇಕ—ಪಂಚವಟಿ, ವಾಲಿಸಂಹಾರ, ಚೂಡಾಮಣಿ, ಸಮಗ್ರ—KB-೩೬೦.

೧೪. ಐರಾವತ, ಸಮಗ್ರ, ಪದ್ಯಸಂಖ್ಯೆ ೫೨೨, ಹಾಳೆಗಳಲ್ಲಿ ೧೮೮೩ನೇ ಇಸವಿಯ ಮೊಹರುಗಳಿವೆ—KB-೪೦೧.

೧೫. ಐರಾವತ, ಅಸಮಗ್ರ— KA-೧೦೭.

೧೬. ಉಂಗುರಸಂಧಿ, ಸೇತುಬಂಧನ, ಅಂಗದಸಂಧಾನ, ಸಮಗ್ರ, ೧೮೮೭-೮ರಲ್ಲಿ ಬರೆಯಲ್ಪಟ್ಟದ್ದು— ದ. ಕ. ಪುತ್ತೂರು ತಾಲೂಕು ಕೆದಿಲಗ್ರಾಮದ ಬಡೆಕಿಲ ವೆಂಕಟರಮಣಭಟ್ಟರ ಪುಸ್ತಕ.

೧೭. ಸೇತುಬಂಧನ, ಅಂಗದಸಂಧಾನ, ಸಮಗ್ರ, ಗಿರಿಮನೆ ಭಾಗವತ ರಾಮಭಟ್ಟರ ಪುಸ್ತಕ, ಒದಗಿಸಿಕೊಟ್ಟವರು—ದಿ। ಬಡೆಕಿಲ ಭೀಮಭಟ್ಟ.

೧೮. ಕುಶಲವರ ಕಾಳಗ, ಸಮಗ್ರ, ವಿಟ್ಲಸೀಮೆ ಗುರಿಕಾರ ದಿ। ಭಾಗವತ ನೆಡ್ಲೆ ಕೇಶವಭಟ್ಟರ ಪುಸ್ತಕ, ೧೯೦೧ನೇ ಇಸವಿಯಲ್ಲಿ ಬರೆದದ್ದು. ಕೊಟ್ಟವರು— ಚೆಂಡೆ ಮದ್ದಳೆಗಾರ ನೆಡ್ಲೆ ಗುರಿಕಾರ ನರಸಿಂಹಭಟ್ಟ, ವಿಟ್ಲ ದ. ಕ.

## ಅಚ್ಚಿನ ಪ್ರತಿಗಳು

೧. ಅಯೋಧ್ಯಾಕಾಂಡ— ಅರಣ್ಯಕಾಂಡ (ಪಟ್ಟಾಭಿಷೇಕ-ಪಂಚವಟಿ)—ವಾಜಪೇಯಂ ಗೋವಿಂದಯ್ಯ, ವಿಚಾರದರ್ಪಣ ಮುದ್ರಾಕ್ಷರಶಾಲೆ, ಬೆಂಗಳೂರು, ೧೮೯೫.

೨. ಅದೇ, ೧೯೨೯.

೩. ಕಂಸಾಸುರನ ಕಥೆ—ಇದರ ಮೊದಲ ಸಂಧಿ ಪಾರ್ತಿಸುಬ್ಬನ 'ಕೃಷ್ಣಚರಿತೆ'ಯ ಪೂರ್ವಾರ್ಧವಾಗಿದೆ, ಅದೇ, ೧೮೯೫.

೪. ಸುಂದರಕಾಂಡ—ವಾಜಪೇಯಂ ಕೃಷ್ಣಯ್ಯ, ಬೆಂಗಳೂರು, ೧೮೯೪.

೫. ಸೇತುಬಂಧನ, ಅದೇ.

೬. ಐರಾವತ—ಪ್ರ. ಬಿ. ಆದಿನಾರಾಯಣಶೆಟ್ಟಿ, ಮೈಸೂರು.

೭. ಪಂಚವಟಿ—ವಾಲಿಸುಗ್ರೀವರ ಕಾಳಗ—ಮಧ್ವಸಿದ್ಧಾಂತ ಗ್ರಂಥಾಲಯ, ಉಡುಪಿ, ಪ್ರಥಮ ಮುದ್ರಣ, ೧೯೨೮(?)

೮. ಪಂಚವಟಿ_ವಾಲಿಸುಗ್ರೀವರ ಕಾಳಗ—'ಕುಂಬಳೆ ಪಾರ್ತಿಸುಬ್ಬ ಕವಿಯಿಂದ ವಿರಚಿತವಾದ' ಎಂದಿದೆ. ಅದೇ, ೫ ನೆಯ ಮುದ್ರಣ, ೧೯೩೧.

೯. ಪುತ್ರಕಾಮೇಷ್ಟಿ-ಸೀತಾಕಲ್ಯಾಣ, ಅದೇ, ಪ್ರಥಮ ಮುದ್ರಣ, ೧೯೩೧.

೧೦. ಅದೇ, ನಾಲ್ಕನೆಯ ಅಚ್ಚು, ೧೯೫೮.

೧೧. ಶ್ರೀರಾಮಪಟ್ಟಾಭಿಷೇಕ, ಅದೇ, ಆರನೇ ಅಚ್ಚು, ೧೯೫೬.

೧೨. ಸೇತುಬಂಧನ, ಅದೇ, ಪ್ರಥಮ ಮುದ್ರಣ, ೧೯೩೦.

೧೩. ಸೇತುಬಂಧನ, ಅದೇ, ನಾಲ್ಕನೆಯ ಅಚ್ಚು, ೧೯೫೨.

೧೪. ಅಂಗದಸಂಧಾನ, ಅದೇ, ಆರನೆಯ ಅಚ್ಚು, ೧೯೫೨.

೧೫. ಕುಂಭಕರ್ಣನ ಕಾಳಗ, ಅದೇ, ಪ್ರಥಮ ಮುದ್ರಣ, ೧೯೩೦.

೧೬. ಶ್ರೀಕೃಷ್ಣ ಬಾಲಲೀಲೆ (ಅಸಮಗ್ರ), ಪ್ರಥಮ ಮುದ್ರಣ, ೧೯೩೦.

೧೭. ಐರಾವತ ಪ್ರಸಂಗ, ನಾಲ್ಕನೆಯ ಅಚ್ಚು, ೧೯೫೧.

೧೮. ಕುಶಲವರ ಕಾಳಗ, ದ್ವಿತೀಯ ಮುದ್ರಣ, ೧೯೫೦.

೧೯. ಚೂಡಾಮಣಿ. ಪ್ರ. ಆರ್. ವಿಟ್ಟಪ್ಪ ಶೆಣೈ, ಕಾರ್ಕಳ, ದ.ಕ.

ಇವುಗಳಲ್ಲಿರುವ ಪ್ರತಿಯೊಂದೂ ಪಾಠಭೇದಗಳನ್ನು ಗ್ರಂಥಕ್ರಮವಾಗಿ ಕೊಡಲಿಲ್ಲ. ಪ್ರಾರಂಭದಲ್ಲಿ ಆ ಪ್ರಯತ್ನ ಮಾಡಿ ನೋಡಿದಲ್ಲಿ ಮೂಲಕ್ಕಿಂತ ಟಿಪ್ಪಣಿ ಉದ್ದ ಬೆಳೆಯುವ ಸ್ಥಿತಿ ಬಂದುದರಿಂದ ಅದನ್ನು ಕೈಬಿಡುವುದು ಅನಿವಾರ್ಯವಾಯಿತು. ಹಾಗೂ ತಜ್ಞ ವಿದ್ವಾಂಸರ ಸಲಹೆಯಂತೆ ಈ ಹಾಡುಗಬ್ಬದಲ್ಲಿ ಅಂಥ ಪರಿಶೋಧನೆ ಅನವಶ್ಯಪ್ರಯಾಸ ವೆಂದೂ ಭಾವಿಸಲಾಯಿತು. ಆದುದರಿಂದ ಅರ್ಥವ್ಯತ್ಯಾಸ ಕಂಡುಬರುವ ಭಿನ್ನಪಾಠಗಳ

ನ್ನಷ್ಟೇ ಪ್ರಕೃತ ಟಿಪ್ಪಣಿಯಲ್ಲಿ ಕೊಟ್ಟಿದ್ದಾಗಿದೆ. ಓಲೆ ಗ್ರಂಥಗಳಲ್ಲಿರುವ ಪಾಠಾಂತರವನ್ನು (ಓ), ಕಾಗದ ಹಸ್ತಪ್ರತಿಗಳಲ್ಲಿರುವುದನ್ನು (ಕಾ), ಅಚ್ಚಿನ ಪ್ರತಿಗಳಲ್ಲಿರುವುದನ್ನು (ಅ) ಎಂಬ ಸಂಕೇತಾಕ್ಷರಗಳಿಂದ ಸೂಚಿಸಲಾಗಿದೆ. ಪ್ರಕ್ಷಿಪ್ತ ಹಾಗೂ ಇತರ ಗ್ರಂಥಗಳ ಪದ್ಯ ಗಳೆಂದು ಖಚಿತವಾದುವುಗಳನ್ನು ಕಳೆದುಬಿಡಲಾಗಿದೆ. ಸಂದೇಹಾಸ್ಪದವಾದವುಗಳನ್ನು ಗ್ರಂಥಪಾಠದಲ್ಲಿ [ ] ಕಂಸಗಳೊಳಗೂ ಅಡಿಟಿಪ್ಪಣಿಯಲ್ಲಿಯೂ ಕೊಟ್ಟಿದೆ. ಗ್ರಂಥ ಪಾಠವು ಓಲೆಪ್ರತಿಗಳದ್ದೇ ಆಗಿದೆ. ಅಪೂರ್ವ, ಕ್ಲಿಷ್ಟ, ಹಾಗೂ ಇತರಭಾಷಾಪದಗಳ ಪಟ್ಟಿಗೆ ಶಬ್ದಕೋಶವನ್ನು ಪರಿಶಿಷ್ಟದಲ್ಲಿ ಕೊಡಲಾಗಿದೆ.

ತಾಳದ ಹೆಸರುಗಳ ಮುಂದೆ ಕೊಟ್ಟಿರುವ ಸಂಖ್ಯೆಗಳು ಆಯಾ ತಾಳನಿರೂಪಣೆ ಯಲ್ಲಿರುವ ಭಿನ್ನಪ್ರಕಾರಗಳನ್ನು (ಪೂರ್ವಪ್ರಸಿದ್ಧ ತಾಳಭೇದಗಳನ್ನು) ಸೂಚಿಸುತ್ತವೆ; ಅವುಗಳ ಗುರುಲಘು ವಿನ್ಯಾಸಗಳನ್ನು ಹಿಂದೆ ಕೊಟ್ಟಿರುವ ಪಟ್ಟಿಯಲ್ಲಿ ನೋಡಿ ಕೊಳ್ಳುವುದು.

ಪದ್ಯಪಾದಗಳಲ್ಲಿ ವಿಂಗಡವಾಗಿ ಹಾಕಿರುವ (।) ಈ ನೇರ ಗೆರೆಗಳು ತಾಳದ ಆವರ್ತನೆಗಳನ್ನು ಸೂಚಿಸುತ್ತವೆ. ಆವರ್ತನೆಯ ಮೊದಲ ಘಾತವು (ಪೆಟ್ಟು) ಗೆರೆಯ ಮುಂದಿನ ಅಕ್ಷರಕ್ಕೆ ಬೀಳತಕ್ಕದ್ದು. ಪಾದದಲ್ಲಿ ಅಲ್ಲಲ್ಲಿ ಕೊಟ್ಟಿರುವ (,) ಈ ವಿರಾಮ ಸಂಜ್ಞೆ ಸಾಮಾನ್ಯವಾಗಿ ಒಂದು ಹ್ರಸ್ವಾಕ್ಷರಕಾಲವನ್ನು ಸೂಚಿಸುತ್ತದೆ. ಗೆರೆಯ ಮುಂದೆ ಈ ಸಂಜ್ಞೆ ಇದ್ದಲ್ಲಿ ಪೆಟ್ಟಿನ ನಂತರ ಅಕ್ಷರ ಉಚ್ಚರಿಸಬೇಕೆಂದು ತಿಳಿಯತಕ್ಕದ್ದು. ಅಕ್ಷರಗಳ ಮುಂದೆ ಈ ಸಂಜ್ಞೆ ಇರುವಲ್ಲಿ ಆ ಅಕ್ಷರವನ್ನು ಮಾತ್ರಾಕಾಲದಷ್ಟು ದೀರ್ಘ ಉಚ್ಚರಿಸಬೇಕೆಂದು ಅರ್ಥ.

ತಾಳದ ಗೆರೆಗಳ ಮಧ್ಯ (—) ಈ ಅಡ್ಡಗೆರೆ ಇರುವಲ್ಲಿ ಆಯಾ ತಾಳದ ಆವರ್ತನೆಗೆ ಬೇಕಾಗುವಷ್ಟು ಉದ್ದ ಎಳೆಯಬೇಕು ಅಥವಾ ಕಾಲಯಾಪನೆ ಮಾಡಬೇಕೆಂದರ್ಥ.

ಕೆಲವು ಪದ್ಯಗಳಲ್ಲಿ ತಾಳದ ಗೆರೆಯಿಂದ ಗೆರೆಗೆ ಎರಡು ಆವರ್ತನಗಳೂ ಬರುವು ದುಂಟು. ಅಂಥ ಸಂದರ್ಭಗಳನ್ನು ಊಹಿಸಿಕೊಳ್ಳಬೇಕಷ್ಟೆ, ಅಥವಾ ಸಂಪ್ರದಾಯಜ್ಞ ರಿಂದ ತಿಳಿದುಕೊಳ್ಳಬೇಕು. ಒಂದೇ ಪದ್ಯದ ಚರಣಗಳಲ್ಲಿಯಾದರೂ ಸಂದರ್ಭಾನುಸಾರ ತಾಳದ ಗತಿ ಭಿನ್ನವಾಗಬಹುದು. ಅಂಥವನ್ನು ಸಂಪ್ರದಾಯದಿಂದಲೇ ತಿಳಿದುಕೊಳ್ಳ ಬೇಕಾಗುವುದು. ಅಷ್ಟತಾಳ, ರೂಪಕತಾಳಗಳ ಪದ್ಯಗಳಲ್ಲಿ ಗುರು–ಲಘು ಅಕ್ಷರಗಳನ್ನು ಉಚ್ಚರಿಸುವ ಕಾಲವು ನಿಯತಮಾತ್ರಾಪ್ರಮಾಣದಲ್ಲಿರುವುದಿಲ್ಲ, ಎಂದರೆ ಲಘುವಿನ ಎರಡರಷ್ಟು ಗುರು ಎಂಬಂತೆ ಸಾಪೇಕ್ಷವಾಗಿರುವುದಿಲ್ಲ ಎಂದರ್ಥ. ಅಕ್ಷರಗಳನ್ನು ತಾಳಕ್ಕೆ ಹೊಂದುವಂತೆ ತಕ್ಕಷ್ಟು ಉದ್ದ–ಗಿಡ್ಡಮಾಡಿ ಉಚ್ಚರಿಸಬೇಕಾಗುವುದು. ಪಟ್ಟೆತಾಳದ ವಿಶೇಷಪ್ರಕಾರಗಳಲ್ಲಿಯೂ ಅಂಥ ವಿಷಮ ಬರುವುದುಂಟು. ಹಿಂದೆ ಕೊಟ್ಟ ಪಟ್ಟಿಯಲ್ಲಿ ಅವುಗಳ ಗುರು ಲಘು ವಿನ್ಯಾಸವನ್ನು ಪರಿಶೀಲಿಸಿ ಊಹಿಸಿಕೊಳ್ಳಬಹುದು.

## ಧನ್ಯವಾದಗಳು

ಸತ್ಯ, ಧರ್ಮ, ಸಂಸ್ಕೃತಿಗಳನ್ನು ತುಳುನಾಡಿನಲ್ಲಿ ಉಳಿಸಿ ಬೆಳೆಸಿಕೊಂಡು ಬಂದ ಪುಣ್ಯಕ್ಷೇತ್ರ ಧರ್ಮಸ್ಥಳ. ಪಾರ್ತಿಸುಬ್ಬನಿಂದ ಕುಂಬಳೆಯಲ್ಲಿ ಉದಯಕ್ಕೆ ಬಂದ ಯಕ್ಷಗಾನವು ಕುಡುಮದಲ್ಲಿ ಉಚ್ಛ್ರಾಯಕ್ಕೆ ಬಂದಿತು. ಕ್ರಿಸ್ತವರ್ಷ ೧೮೧೨ರಷ್ಟು ಹಿಂದಕ್ಕೇ,ಅಂದಿನ ಕುಮಾರ ಹೆಗ್ಗಡೆಯವರು ಇಲ್ಲಿಯ ದಶಾವತಾರ ಮೇಳವನ್ನು ತಾವೇ ತಮ್ಮೊಂದಿಗೆ ಕೊಂಡೊಯ್ದು ಮೈಸೂರೊಡೆಯರ ಆಸ್ಥಾನದಲ್ಲಿ ಪ್ರತಿಷ್ಠೆಗೊಳಿಸಿದ್ದರೆಂದರೆ, ಯಕ್ಷಗಾನದ ಮೇಲೆ ಅವರಿಗಿದ್ದ ಪ್ರೀತ್ಯಾಸಕ್ತಿಗಳನ್ನು ಊಹಿಸಿಕೊಳ್ಳಬಹುದು. ಅದೇ ಆದರ, ಔದಾರ್ಯ, ಆಶ್ರಯಗಳು ನಿರಂತರವಾಗಿ ನಡೆದುಬಂದಿವೆ; ಇಂದಿನ ಧರ್ಮಾಧಿಕಾರಿಗಳಾದ ಶ್ರೀ ವೀರೇಂದ್ರ ಹೆಗ್ಗಡೆಯವರು ವಿಶೇಷ ಶ್ರದ್ಧೆಯಿಂದ ಮುನ್ನಡೆಯಿಸುತ್ತಿದ್ದಾರೆ. ಪಾರ್ತಿಸುಬ್ಬನೇ ಸಭಾಲಕ್ಷಣದ ಆರಂಭಕ್ಕೆ ಇಲ್ಲಿಯ ಶ್ರೀ ಮಂಜುನಾಥಸ್ವಾಮಿಯನ್ನು ಸ್ತುತಿಸಿದ್ದಾನೆ. ಅದೇ ಭಕ್ತಿಯನ್ನು ಮುಂದಿಟ್ಟು!ಆತನ ಕೃತಿಗಳ ಈ ಸಂಪುಟವನ್ನು ಶ್ರೀ ವೀರೇಂದ್ರ ಹೆಗ್ಗಡೆಯವರಿಗೆ ಸಮರ್ಪಿಸಿ ಕೃತಾರ್ಥನಾಗುವೆನೆಂದು ಈ ಸಂಪಾದನೆಗೆ ತೊಡಗಿದಂದೇ ಸಂಕಲ್ಪಿಸಿಕೊಂಡಿದ್ದೆ.

ಹೀಗೆಂಬ ನನ್ನ ಪ್ರಾರ್ಥನೆಯನ್ನು ಮನ್ನಿಸಿ ಈ ಕಿರುಗಾಣಿಕೆಯನ್ನು ಸಂತೋಷದಿಂದ ಕೈಕೊಳ್ಳುವುದಾಗಿ ಒಪ್ಪಿಗೆಯಿತ್ತು ಅನುಗ್ರಹಿಸಿದ ಶ್ರೀ ವೀರೇಂದ್ರ ಹೆಗ್ಗಡೆಯವರಿಗೆ ಈ ಗ್ರಂಥವನ್ನು ಭಕ್ತಿಪೂರ್ವಕ ಸಮರ್ಪಿಸಿದ್ದೇನೆ, ಹಾಗೂ ವಂದನಪೂರ್ವಕ ಧನ್ಯವಾದಗಳನ್ನು ಸಮರ್ಪಿಸುತ್ತೇನೆ.

ಈ ಪ್ರಯತ್ನಕ್ಕೆ ನಾನು ಕೈಹಚ್ಚಿ ಹತ್ತಕ್ಕೆ ಮೇಲ್ಪಟ್ಟು ವರ್ಷಗಳು ಸಂದವು. ಈ ಸುದೀರ್ಘಾವಧಿಯಲ್ಲಿ ನೂರಾರುಮಂದಿ ಹಿರಿಯರಿಂದ–ಕಿರಿಯರಿಂದ ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ನೆರವು ಪಡೆದಿರುತ್ತೇನೆ. ಅಂಥವರೆಲ್ಲರಿಗೂ ನನ್ನ ವಿನಮ್ರ ಕೃತಜ್ಞತೆಗಳನ್ನು ಸಮರ್ಪಿಸುತ್ತೇನೆ.

ವಿಶೇಷವಾಗಿ, ಆರಂಭದಲ್ಲೇ ನನ್ನೊಂದಿಗೆ ಊರೂರು ಸುತ್ತಿ ಗ್ರಂಥಸಂಗ್ರಹಣ ಕಾರ್ಯದಲ್ಲಿಯೂ, ಆಯಾ ಸ್ಥಳವಂದಿಗರಿಂದ ಅನುಭವಗಳನ್ನು ಕೇಳಿ ಟಿಪ್ಪಣಿಮಾಡಿಕೊಳ್ಳುವುದರಲ್ಲಿಯೂ ಶ್ರಮವಹಿಸಿ ಸಹಕಾರವನ್ನಿತ್ತ ಸನ್ಮಿತ್ರ ಶ್ರೀ ಅಮೃತ ಸೋಮೇಶ್ವರ ಎಂ.ಎ. ಇವರಿಗೆ ನನ್ನ ಮೊದಲ ಕೃತಸ್ಮರಣೆ ಸಲ್ಲುತ್ತದೆ.

ಅಂತೆಯೇ ಸುಬ್ಬನ ಪ್ರಸಂಗಗಳ ಅಮೂಲ್ಯವಾದ ಅನೇಕ ಓಲೆ ಪ್ರತಿಗಳನ್ನು ಆ ಊರೊಳಗಿಂದ ಸಂಗ್ರಹಿಸಿ ಒದಗಿಸಿಕೊಟ್ಟವರಾದ ಶ್ರೀ ಸಿರಿಬಾಗಿಲು (ವ್ಯಾಪ್ಪಾಡಿ) ವೆಂಕಪ್ಪಯ್ಯನವರ ಉಪಕಾರ ಹೆಚ್ಚಿನದು.

ಹೀಗೆ ಪರಿಶ್ರಮದಿಂದ ಸಂಶೋಧಿಸಿ ಸಂಪಾದಿಸಿದ್ದಾದರೂ ಅಚ್ಚುಹಾಕಿಸುವುದಕ್ಕೆ ಬಗೆಯಿಲ್ಲದೆ ಮೂಲೆಗಿಟ್ಟಿದ್ದ ಈ ಹಸ್ತಪ್ರತಿಯ ಸಂಪುಟಕ್ಕೆ, ಮೈಸೂರು ವಿಶ್ವವಿದ್ಯಾನಿಲ

ಯದ ಕನ್ನಡ ಅಧ್ಯಯನಸಂಸ್ಥೆಯ ದಾರಿಕಾಣಿಸಿದವರಾದ ಶ್ರೀ ಜಿ.ಟಿ. ನಾರಾಯಣ ರಾಯರ ಉಪಕಾರವನ್ನು ಎಂದೂ ಮರೆಯುವಂತಿಲ್ಲ.

ಹಿರಿಯ ಕವಿಯ ಶ್ರೇಷ್ಠ ಯಕ್ಷಗಾನಗಳ ಈ ಲಿಖಿತವನ್ನು ಗೌರವದಿಂದ ಬರಮಾಡಿ ಕೊಂಡು ಆಸಕ್ತಿಯಿಂದ ಪ್ರಕಾಶಕ್ಕೆ ತಂದಿರುವ ಮೈಸೂರು ವಿ.ವಿ.ಕ. ಅಧ್ಯಯನಸಂಸ್ಥೆಯ ನಿರ್ದೇಶಕ ಡಾ. ಹಾ. ಮಾ. ನಾಯಕರಿಗೆ ನಾನು ಚಿರಋಣಿಯಾಗಿರುತ್ತೇನೆ.

ಹಾಗೂ ಸೂಕ್ತವಿಧಾನದಲ್ಲಿ ಈ ಗ್ರಂಥವನ್ನು ಅಚ್ಚುಗೊಳಿಸುವ ಸಂಪೂರ್ಣ ಆರ ಭಾರವನ್ನು ವಹಿಸಿ ನಿರ್ವಹಿಸಿದವರಾದ ಕನ್ನಡ ಅಧ್ಯಯನ ಸಂಸ್ಥೆಯ ರೀಡರ್ ಶ್ರೀ ಪ್ರಧಾನ್ ಗುರುದತ್ತರವರಿಗೂ, ಹಸ್ತಪ್ರತಿಯನ್ನು ಪರಿಶೀಲಿಸಿ ಈ ಸಂಪಾದನೆಯ ಯಶಸ್ವಿತೆಗೆ ಕಾರಣಭೂತರಾದ ವಿಭಾಗ ಸಂಪಾದಕ ಡಾ. ಜೀ. ಶಂ. ಪರಮಶಿವಯ್ಯ ನವರಿಗೂ ನನ್ನ ಆತ್ಮೀಯ ಧನ್ಯವಾದಗಳನ್ನು ಸಮರ್ಪಿಸುತ್ತಿದ್ದೇನೆ.

ಕೊನೆಯದಾಗಿ, ಯಕ್ಷಗಾನಕ್ಕೆ ಇದೇ ಮೊದಲೆಂಬ ವಿಧಾನದಲ್ಲಿ ತಾಳಾನುಗುಣ ವಾಗಿ ಸಿದ್ಧಪಡಿಸಿದ ಈ ಉದ್ಗ್ರಂಥವನ್ನು ವಿಶೇಷ ಶ್ರದ್ಧೆಯಿಂದ ಅಂದವಾಗಿ ಮುದ್ರಿಸಿ ಕೊಟ್ಟಿರುವ 'ಶಕ್ತಿ ಪ್ರೆಸ್ಸಿ'ನ ಒಡೆಯ ಶ್ರೀ ರಾ. ವೆಂ. ಶ್ರೀನಿವಾಸಮೂರ್ತಿಗಳಿಗೆ ಹಾಗೂ ಅವರ ಚಿ|| ಶ್ರೀ ಮೋಹನಮೂರ್ತಿ ಅವರಿಗೆ ನನ್ನ ಸಾದರದ ಕೃತಜ್ಞತೆಗಳು ಸಲ್ಲುತ್ತವೆ.

4A, 'ಸುದರ್ಶನ', 4ನೇ ಮೇನ್,
ಜಯನಗರ, ಮೈಸೂರು–9
1–3–1975

**ಕುಕ್ಕಿಲ ಕೃಷ್ಣಭಟ್ಟ**
ವಿಟ್ಲ ಪಡ್ನೂರು, ಕೋಡಪದವು, ದ.ಕ.

# ಪುತ್ರಕಾಮೇಷ್ಟಿ-ಸೀತಾಕಲ್ಯಾಣ

## ಪ್ರಸಂಗದ ಕಥಾಸಾರ

ಮಕ್ಕಳಿಲ್ಲದೆ ಇದ್ದ ದಶರಥ ಮಹಾರಾಜನು ವಸಿಷ್ಠ ಮುನಿಯ ಉಪದೇಶದಂತೆ ಋಷ್ಯಶೃಂಗ ಮುನಿಯನ್ನು ಕರೆತಂದು ಪುತ್ರಾರ್ಥವಾಗಿ ಯಜ್ಞವನ್ನು ಮಾಡಲು ಆರಂಭಿಸುತ್ತಾನೆ. ದೇವತೆಗಳು ದಶಕಂಠನ ಬಾಧೆಯನ್ನು ಸಹಿಸದೆ ಮಹಾವಿಷ್ಣುವನ್ನು ಪ್ರಾರ್ಥಿಸಲು ವಿಷ್ಣುವು ತಾನು ದಶರಥನಿಗೆ ಮಗನಾಗಿ ಜನಿಸಿ ರಾವಣಾದಿಗಳನ್ನು ಸಂಹರಿಸುವುದಾಗಿ ಅವರಿಗೆ ಅಭಯಕೊಡುತ್ತಾನೆ. ಯಜ್ಞವು ಪೂರ್ತಿಯಾಗಲು ಯಜ್ಞೇಶ್ವರನು ಪ್ರತ್ಯಕ್ಷನಾಗಿ ದೇವತೆಗಳು ಕೊಟ್ಟ ಪಾಯಸ ಪಾತ್ರೆಯನ್ನು ದಶರಥನಿಗೆ ತಂದುಕೊಡು

ಂದನ್ನು
ಪಡೆ
ಬಂದು
ಅಲ್ಲಿ
ರಾಮ
ತ್ರನು
ೊಂಡು
ತ್ತಾನೆ.
ವಾಹ
ಧ್ಯದಲ್ಲಿ
ಸುರಿದು

### ಸೂಚನೆ

ಪೀಠಿಕೆ ಪುಟ I ಮತ್ತು Ii ರಲ್ಲಿ ವಿವರಣೆ ಕೊಟ್ಟಿರುವ ಪ್ರಕಾರ ಮೂಡಪ್ಪದ ಲೆಖ್ಖದ ಪಟ್ಟಿಯ ಚಿತ್ರ ೪ (೧) ರಲ್ಲಿ 'ಸ್ಥಾನಿಕರು ಮೇಲಾಗ್ರಕೆ ಹಚ್ಚುವ ಬಗ್ಗೆ . . . ಕಣಪುರದಿಂದಾ ಪಾರ್ತಿಸುಬ್ಬ ಜನ ೧__' ಎಂದಿರುವ ಭಾಗವು ಬ್ಲಾಕ್ ಮಾಡಿಸುವಾಗ ಪ್ರಮಾದವಶಾತ್ ಬಿಟ್ಟು ಹೋಗಿರುವುದಕ್ಕಾಗಿ ವಿಷಾದಿಸುತ್ತೇವೆ. ಆ ಭಾಗವು ಸಮಗ್ರವಾಗಿರುವ ಚಿತ್ರದ ಪ್ರತಿ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿದೆ. ಅದನ್ನು ಯಾರು ಬೇಕಾದರೂ ಪರಿಶೀಲಿಸಬಹುದು.

ಅನುಗ್ರಹಿಸಿ [illegible]

# ಪುತ್ರಕಾಮೇಷ್ಟಿ-ಸೀತಾಕಲ್ಯಾಣ

## ಪ್ರಸಂಗದ ಕಥಾಸಾರ

ಮಕ್ಕಳಿಲ್ಲದೆ ಇದ್ದ ದಶರಥ ಮಹಾರಾಜನು ವಸಿಷ್ಠ ಮುನಿಯ ಉಪದೇಶದಂತೆ ಋಷ್ಯಶೃಂಗ ಮುನಿಯನ್ನು ಕರೆತಂದು ಪುತ್ರಾರ್ಥವಾಗಿ ಯಜ್ಞವನ್ನು ಮಾಡಲು ಆರಂಭಿಸುತ್ತಾನೆ. ದೇವತೆಗಳು ದಶಕಂಠನ ಬಾಧೆಯನ್ನು ಸಹಿಸದೆ ಮಹಾವಿಷ್ಣುವನ್ನು ಪ್ರಾರ್ಥಿಸಲು ವಿಷ್ಣುವು ತಾನು ದಶರಥನಿಗೆ ಮಗನಾಗಿ ಜನಿಸಿ ರಾವಣಾದಿಗಳನ್ನು ಸಂಹರಿಸುವುದಾಗಿ ಅವರಿಗೆ ಅಭಯಕೊಡುತ್ತಾನೆ. ಯಜ್ಞವು ಪೂರ್ತಿಯಾಗಲು ಯಜ್ಞೇಶ್ವರನು ಪ್ರತ್ಯಕ್ಷನಾಗಿ ದೇವತೆಗಳು ಕೊಟ್ಟ ಪಾಯಸ ಪಾತ್ರೆಯನ್ನು ದಶರಥನಿಗೆ ತಂದುಕೊಡುತ್ತಾನೆ. ದಶರಥನು ಪತ್ನಿಯರಿಗೆ ಪಾಯಸವನ್ನು ಹಂಚಿಕೊಡಲು ಅವರು ಅದನ್ನು ಸೇವಿಸಿ ಗರ್ಭಿಣಿಯರಾಗಿ ರಾಮ, ಲಕ್ಷ್ಮಣ, ಭರತ, ಶತ್ರುಘ್ನರೆಂಬ ಮಕ್ಕಳನ್ನು ಪಡೆಯುತ್ತಾರೆ. ಇವರು ಬೆಳೆದು ವಿದ್ಯಾವಂತರಾಗಲು ವಿಶ್ವಾಮಿತ್ರಮುನಿಯು ಬಂದು ತನ್ನ ಯಜ್ಞರಕ್ಷಣೆಗಾಗಿ ರಾಮ ಲಕ್ಷ್ಮಣರನ್ನು ಕರೆದೊಯ್ಯುತ್ತಾನೆ. ಹಾಗೂ ಅಲ್ಲಿ ಯಜ್ಞಕಂಟಕರಾಗಿದ್ದ ತಾಟಕಿ ಸುಬಾಹು ಮುಂತಾದ ದುಷ್ಟ ದಾನವರನ್ನು ರಾಮ ಲಕ್ಷ್ಮಣರು ಸಂಹರಿಸುತ್ತಾರೆ. ಯಜ್ಞವನ್ನು ನಿರ್ವಿಘ್ನವಾಗಿ ಪೂರೈಸಿದ ವಿಶ್ವಾಮಿತ್ರನು ರಾಮಲಕ್ಷ್ಮಣರನ್ನು ಸೀತಾ ಸ್ವಯಂವರಕ್ಕಾಗಿ ಜನಕರಾಯನಲ್ಲಿಗೆ ಕರೆದುಕೊಂಡು ಹೋಗುತ್ತಾನೆ. ಅಲ್ಲಿ ರಾಮನು ಹರಧನುಸ್ಸನ್ನು ಮುರಿದು ಸೀತೆಯನ್ನು ವರಿಸುತ್ತಾನೆ. ಲಕ್ಷ್ಮಣನಿಗೂ ಭರತಶತ್ರುಘ್ನರಿಗೂ ಜನಕರಾಯನ ತಮ್ಮನ ಮಗಳಂದಿರೊಡನೆ ವಿವಾಹವಾಗುತ್ತದೆ. ಅಲ್ಲಿಂದ ಪತ್ನೀಸಮೇತರಾಗಿ ಅಯೋಧ್ಯೆಗೆ ಹೋಗುವ ಮಾರ್ಗಮಧ್ಯದಲ್ಲಿ ಪರಶುರಾಮನು ಇದಿರಾಗಿ ತಡೆಯಲು ರಾಮನು ಯುದ್ಧದಲ್ಲಿ ಆತನ ಗರ್ವವನ್ನು ಮುರಿದು ಅನುಗ್ರಹಿಸಿ ಕಳುಹಿಸಿದನು ಎಂಬಲ್ಲಿಗೆ ಈ ಪ್ರಸಂಗಕ್ಕೆ ಮಂಗಲವಾಗುವುದು.

**ಪ್ರಕರಣಗಳು**

೧. ಪುತ್ರಕಾಮೇಷ್ಟಿ
೨. ಪುತ್ರೋತ್ಪತ್ತಿ
೩. ಮಖಸಂರಕ್ಷಣೆ
೪. ಸೀತಾಸ್ವಯಂವರ

**ಭೂಮಿಕೆಗಳು**

ದಶರಥ
ಸುಮಂತ್ರ
ವಸಿಷ್ಠಮುನಿ
ವಿಶ್ವಾಮಿತ್ರ ಮುನಿ
ರಾಮ
ಲಕ್ಷ್ಮಣ
ಜನಕರಾಯ
ಸುಮತಿರಾಜ
ಗೌತಮ ಋಷಿ
ಸುಬಾಹು
ಮಾರೀಚ
ಕುಶಧ್ವಜ
ಪರಶುರಾಮ

ಕೌಸಲ್ಯೆ
ಕೈಕೆ
ಸುಮಿತ್ರೆ
ಅಹಲ್ಯೆ
ತಾಟಕಿ
ಸೀತೆ

ರಾಕ್ಷಸರು
ದೂತರು

# ಪುತ್ರಕಾಮೇಷ್ಟಿ-ಸೀತಾಕಲ್ಯಾಣ

## ಪ್ರಸಂಗಪೀಠಿಕೆ

### ೧. ಮಾಲಿನೀ ವೃತ್ತ

*ಮದಗಜವದನಂ ತಂ ವಿಘ್ನವಿಚ್ಛೇದದಕ್ಷಂ ।
ಸರಸಿಜಭವಜಾಯಾಂ ಭಾರತೀಂ ಸೋಮವಿಭಾಶಂ ।
ನಿಶಿಚರಕುಲಕಾಲಂ ರಾಘವಂ (ಜಾನಕೀಂಚ) ಜಾನಕೀಶಂ ।
ಪ್ರತಿದಿನನುತಿಭಕ್ತ್ಯಾ ನೌಮಿ ವಾಲ್ಮೀಕಿಮಾರ್ಯಂ ॥

### ೨. ಶಾ. ವೃ.

*ಪ್ರಾಪ್ತಾನಂತಘನಶ್ರಿಯಃ ಪ್ರಿಯತಮಶ್ರೀರೋಹಿಣೀಜನ್ಮನೋ ।
ವಂಚಿಕ್ಷ್ಮಾವರ ವೀರಕೇರಳವಿಭೋ ರಾಜ್ಞಃ ಸ್ವಸೋಃ ಸೂನುನಾ ।
ಶಿಷ್ಯೇಣ ಪ್ರವರೇಣ ಶಂಕರಕವೇ ರಾಮಾಯಣಂ ವರ್ಣ್ಯತೇ ।
ಕಾರುಣ್ಯೇನ ಕಥಾಗುಣೇನ ಕವಯಃ ಕುರ್ವಂತು ತಾಂ ಕರ್ಣಯೋಃ ॥ ]§

### ೩. ನಾಟ ರಾಗ–ಜಂಪೆ ತಾಳ ೩

ಜಯತು ಗೌ । ರಿಯ ಕುವರ । ಜಯಸಕಲ । ವಿಘ್ನಹರ ।
ಜಯಸುಜನ । ಮಂದಾರ । ಜಯಸುರೋ । ದ್ಧಾರ ॥ ॥ ಪ ॥
[1]ಕಮನೀಯ । ಗುಣರಾಜ । ಕಂಜಬಾಂ । ಧವತೇಜ[1] ।
ಕುಮುದಕು । ಟ್ಮಲದಂತ । ಕುಂದಛವಿ । ಯಂಥ ।
ರಮಣೀಯ । ಕರರೂಪ । ರಕ್ಷಿಸೆ । ನ್ನನುಗಣಪ ।
ನಮಿಪೆನಾ । ಬಲಬಂದು । ಹೇ ದಯಾ । ಸಿಂಧು ॥ ೧

---

1 ರಮಣೀಯ ಗುಣರೂಪ । ಕಂಜಬಾಂಧವ ಪ್ರತಾಪ । (ಕಾ)

* ಈ ಎರಡು ವೃತ್ತಗಳೂ ಕೊಟ್ಟಾರಕರತ ಮಹಾರಾಜನ ಕೇರಳದ ಕಥಕಳಿ ರಾಮಾಯಣ ಪುತ್ರಕಾಮೇಷ್ಟಿಯ ಆರಂಭದಲ್ಲಿರುವವು. ಪಾರ್ತಿಸುಬ್ಬನ ಪಟ್ಟಾಭಿಷೇಕ ಹಾಗೂ ಪಂಚವಟಿ ಪ್ರಸಂಗಗಳ ಆರಂಭಕ್ಕೂ ಈ ವೃತ್ತಗಳು ಕೆಲವು ಓಲೆ ಪ್ರತಿಗಳಲ್ಲಿರುತ್ತವೆ.

§ ಶ್ರೀರಾಮಂ ದಿವಿಜೌಘಸನ್ನುತಪದಂ ಸೀತಾಮನೋಹ್ಲಾದಕಂ
ಕಾರುಣ್ಯಾಂಬುಧಿ ಭಕ್ತವತ್ಸಲಹರಿಂ ಕೌಸಲ್ಯಗರ್ಭೋದ್ಭವಂ
ಮಾರೀಚಾದಿ ಸಮಸ್ತ ದೈತ್ಯಮಥನಂ ಮಹಾ ಪ್ರತಾಪಾನ್ವಿತಂ
ವೀರಂ ಪಾವನಪುಣ್ಯನಾಮಚರಿತಂ ವಂದೇ ಸದಾ ರಾಘವಂ ॥ (ಕಾ)
(ಅನ್ಯ ಕರ್ತೃಕವಾದ ಪುತ್ರಕಾಮೇಷ್ಟಿಯ ಆರಂಭಕ್ಕೂ ಈ ವೃತ್ತವಿದೆ)

ಬಾಲೇಂದು । ಶೇಖರಾ । ಬಲುದುರಿತ । ಸಂಹಾರ ।
ಮೂಲೋಕ। ಸಂಚಾರ । ಮುನಿಜನೋ । ದ್ಧಾರ ।
[1]ನೀಲಾಚ । ಲೋತ್ತುಂಗ । ನಿಖಿಲದೇ । ವಾಸಂಗ[1] ।
ಪಾಲಿಸೋ । ಮಂಗಲವ । ಪರಮಗುರು । ಜನವ ॥ ೨

ವರವೀವ । ಧಾತಾರ । ವಾರ್ಧಿಸಮ । ಗಂಭೀರ ।
ಮೆರೆವ ಮೋ । ಹನಕಾಯ । ಮೋದಕ । ಪ್ರಿಯ ।
ಸುರಪಾಲ । ಕನರಕ್ಷ । ಸಕಲದೇ । ವಾಧ್ಯಕ್ಷ ।
ವರದ ಮಧು । ಪುರವಾಸ । ಶರಣು ವಿ । ಘ್ನೇಶ ॥ ೩

೪. ಕಂದ

ಗಜವದನ ಗೌರಿ ಶಾರದೆ
[2]ಅಜಹರಿ ಶಿವರಂಘ್ರಿಯುಗಳಕಭಿವಂದಿಸುತ[2] ।
ಸುಜನಂ ವಾಲ್ಮಿಕ ಮುನಿಪನ
ಭಜಿಸುತ ರಾಮಾಯಣವನು ಪೇಳುವೆ ಮುದದಿ ॥ ೪

೫. ದ್ವಿಪದೆ

ಪರಶಿವನ ಪಾದಕ್ಕೆ ಪೊಡಮಟ್ಟು ನಿಂದು ।
ಗಿರಿಜೆ ಹರಿಕಥೆ [3]ಗಧಿಕವಾವುದೆನಲಂದು[3] ॥ ೫

ರಾಮಾಯಣಾಮೃತವು ರಮಣೀಯಕರವು ।
ಭಾಮಿನೀಮಣಿ ಕೇಳು ಬಹುಸೌಖ್ಯ[4]ಕ[4]ರವು ॥ ೬

ಎನಲಾಗಿ ಈ ಕಥೆಯ ಎನಗೆ ಪೇಳೆನಲು ।
ಘನಮಹಿಮ ರಾಮಾಯಣವನೊರೆಯುತಿರಲು ॥ ೭

ಇತ್ತ ಬದರಿಯೊಳೋರ್ವ ಚೋರ ವ್ಯಾಧಂಗೆ ।
ಉತ್ತಮಶ್ಲೋಕ ಮುನಿವರರ ದಯವಾಗೆ ॥ ೮

---

1 ನೀಲಾಜಮುತ್ತುಂಗ ನೀಲಾಜ ಮುಕ್ತಾಂಗ (ಓ ಕಾ) 2 ಅಜರಂಘ್ರಿ ಸರೋಜ ಯುಗಳ (ಕಾ) 3 ಅಧಿಕವಾಹುದೆನಲೆಂದು (ಕಾ) 4 ತ (ಕಾ)

ಪರಮತಪಸಿಗೆ ಮೆಚ್ಚಿ ಪರಮೇಷ್ಠಿ ಬಂದು ।
ಕರುಣಿಸಲು ವಾಲ್ಮೀಕಿ ಋಷಿಯಾದನೆಂದು ॥ ೯

ವರಕ್ರೌಂಚಪಕ್ಷಿಯನು ಕಂಡು ಚಿಂತಿಸುತ ।
ಇರುತಿರಲು ಸುರಮುನಿಪ ನಾರದನು ಬರುತ ॥ ೧೦

ನಾರದನ ಚರಣಕ್ಕೆ ನಮಿಸಿ ನಿಂದಿರುವ ।
ಸೀರೇರುವಾಲಿಗಳ ವಾಲ್ಮಿಕನ ಕರವ ॥ ೧೧

ಪಿಡಿದು ರಜತಾದ್ರಿಯೊಳು ಪಾರ್ವತಿಗೆ ಪ್ರಿಯದಿ ।
ಮೃಡನುಸುರ್ದ ರಾಮಾಯಣವ ಪೇಳ್ದ ಮುದದಿ ॥ ೧೨

ಕೇಳಿ ವಾಲ್ಮೀಕಿ ಮುನಿ ಕುಶಲವರಿಗಂದು ।
ಪೇಳ್ವ ಮನನಾಗಿರಲು ಬಾಲಕರು [1]ಬಂದು[1] ॥ ೧೩

ನಮ್ಮ ಪೂರ್ವಜರೆಂತು ಜನಿಸಿದರು ಜೀಯ ।
[2]ಎ[2]ಮ್ಮನರುಹೆನೆ ಪೇಳ್ದನಾಗ ಮುನಿರಾಯ ॥ ೧೪

೬. ಮಧ್ಯಮಾವತಿ ರಾಗ—ತ್ರಿಪುಟ ತಾಳ ೩

ಬ್ರಹ್ಮನಿಂದ ಮ । ರೀಚಿ ಕಶ್ಯಪ । ಸೂರ್ಯ ಮನುವಾ । ಕುಕ್ಷಿಯು ।
ಧರ್ಮಯುತನು ವಿ । ಕುಕ್ಷಿ ಇಕ್ವಾಕು । [3]ಕುಲದಿ ರಾಯ[3]ರ । ಪುತ್ರಮ–।
ರಾಮಕೇಳು ॥ ೧೫

ಅಜಕುಮಾರ ಸು । ಧೀರಮಂಗಲ । ತ್ರಿಜಗರಕ್ಷಕ । ನೆನಿಸುತ ।
ಸುಜನವಂದಿತ । ನಾದ ದಶರಥ । ನೃಪತಿಲಕ ನೆಸೆ । ದಿರ್ದನು–।
ಸುಂದರಾಂಗ ॥ ೧೬

ಭಾಸುರಾಂಗದ । ದಶರಥೇಂದ್ರಗೆ । ಕೌಸಲ್ಯಾ ಸ್ತ್ರೀ । ರತ್ನವ ।
ಆ ಸುಮಿತ್ರೆಯ । ಕೈಕಾದೇವಿಯ । ನೀಶ ಮದುವೆಯ । ರಚಿಸಿದ–।
ಚಂದದಿಂದ ॥ ೧೭

---

1 ಕಂಡು (ಕಾ) 2 ಗ (ಕಾ) 3 ರಾಜದಿಳೀಪ (ಕಾ)

ಒಂದು ದಿನದಿ ಸು | ಮಂತ್ರ ಕೌಸಲೆ | ಇಂದೀವರಾಕ್ಷಿ ಸು | ಮಿತ್ರೆಯೂ |
ಮಂದಗಮನದ | ಕೈಕೆ ಸಹಿತಾ | ನಂದದಿಂದಲಿ | ಬಂದನು |
ದಶರಥೇಂದ್ರ || ೧೮

## ಒಡ್ಡೋಲಗದ ಪದ್ಯ

[ಕೌಸಲ್ಯೆ, ಸುಮಿತ್ರೆ, ಕೈಕೆ ಮತ್ತು ಸುಮಂತ್ರನೊಂದಿಗೆ ದಶರಥನ ಒಡ್ಡೋಲಗದ ಪ್ರವೇಶ]

೭. ನವರೋಜು ರಾಗ—ಏಕತಾಳ ೭ ಮತ್ತು ೩

ದೇವದೇವ– | ದಯಾಸಾಂದ್ರ– | ಭಾವಿಪೆನಾ– | ಮುದದಿಂದ– || ಪ ||

ನಂಬಿದವರಾ– | ನಂದದಿಂದ– | ಬೆಂಬಿಡದೆ– | ಪೊರೆವಧೀರ— || ಅ. ಪ. ||

ಕರುಣನಿಧೇ | ಕರಿವರದ | ಉರಗಶಯನ | ಗರುಡರಥ |
ಮುರಮಥನ | ಸಿರಿಯರಸ | ಪೊರೆಎನ್ನ | ಗುರುರಾಯ || ೧೯

ಕುಂದರದನಾ | ನಂದಶರಧೇ | ಚಂದ್ರಕೋಟಿ | ಸುಂದರಾಂಗ |
ಇಂದೀವರಾಕ್ಷ | ಇಂದ್ರರಕ್ಷ | ವಂದಿಸುವೆ ಗೋ | ವಿಂದಸಲಹೋ || ೨೦

೮. ಮತ್ತೇಭ

ಇನವಂಶಾಬ್ಧಿ ಅಯೋಧ್ಯೆಯೊಳ್ ದಶರಥಂ ಒಡ್ಡೋಲಗಂಗೊಟ್ಟು ತಾ |
ಮನಕಂದುತ್ತ ಸುಮಂತ್ರ ಮಂತ್ರಿಮುಖಮಂ ನೋಡುತ್ತಲಿರ್ಪಾಗಳಾ |
ಅನುವಿಂ ಬಂದ ವಸಿಷ್ಠರಿಂಗೆರಗುತಾ ಮಾತಾಡುವಾ ಭಕ್ತಿಯಿಂ |
ಜನಪಾಲಾಗ್ರಣಿ ತನ್ನ ಕಾರ್ಯದಿರವಂ ಪೇಳುತ್ತಲಿಂತೆಂದನು || ೨೧

೯. ಘಂಟಾವರ ರಾಗ—ಜಂಪೆ ತಾಳ ೩

ದಶರಥ—

ವರಮುನೀ | ಶ್ವರದೇವ | ಪರಮಗುರು | ವೆ– | || ಪ ||

ಪರಮೇಷ್ಠಿ | ಯ ಕುವರ | ಎನ್ನ ರ | ಕ್ಷಿಸು ತಂದೆ |
ಕರವ ಮುಗಿ | ಯುವೆನೊಂದು | ಮಾತನೀ | ಕೇಳು || ೨೨

ವಸಿಷ್ಠ—

ಸಕಲನೃಪ । ಶೇಖರ । ಕೋಸಲಪ । ತೇ ॥ ಪ ॥

ಹೇಳೆನ್ನ । ಭೂಪಾಲ । ನಿನ್ನಮನ । ದಿರವ ಸುರ ।
ಪಾಲನಿಗೆ । ಸಮಧೀರ । [1]ಭೂ[1]ಲೋಕ । ತಿಲಕ ॥ ೨೩

ದಶರಥ—

ಮಕ್ಕಳಿ । ಲ್ಲದರಿಂದ । ಮಾನಸದೊ । ಳಿಂದು ನಾ ।
ಕಕ್ಕುಲಿತೆ । ಗೊಳುತ ಬಲು । ದುಃಖಿಸುವೆ । ನಯ್ಯ ॥ ೨೪

ಅಶ್ವಮೇ । ಧವ ರಚಿಸಿ । ಅಮರ ಕುಲ । ಗಳಿಗೆಲ್ಲ ।
[2]ಐಶ್ವರ್ಯ[2] । ಮಾಡಿದರೆ । ಆಗದೇ । ನಯ್ಯ ॥ ೨೫

ವಸಿಷ್ಠ—

ಅರಿತೆ ನಿ । ನ್ನಯ ಮನವ । ಧರಣಿಪಾ । ಲಾಗ್ರಣಿಯೆ ।
ತರಿಸು ಬೇ । ಕಾದುದನು । ತಡವಮಾ । ಡದಿರು ॥ ೨೬

ತುರಗಮಂ । ಬಿಡುನೃಪತಿ । ದೀಕ್ಷೆಯಂ । ಆಚರಿಸು ।
ಹರಿಣಾಕ್ಷಿ । ಯರ ಸಹಿತ । ನಾಗಿ ತೊಡ । ಗಯ್ಯ ॥ ೨೭

೧೦. ಕಂದ

ಇಂತೆಂದಾ ಮುನಿ ಪೇಳಲ್
ಸಂತೋಷದಿ ಮುನಿಗಳೊಡನೆ ಕರಕೊಳುತಾಗ ।
ಮಂತ್ರಿ ಸುಮಂತ್ರನ ಕರಪಿಡಿ
ದಂತಸ್ಥದ ಭವನದೆಡೆಗೆ ನರಪತಿ ಬಂದಂ ॥ ೨೮

೧೧. ತೋಡಿ ರಾಗ—ಏಕ ತಾಳ ೪

ದಶರಥ—

ವಾರಿಜಗಂ । ಧಿ ವಯ್ಯಾರೆ । ನೀರೆ ಮೊಗವ । ತೋರೆ ।
ಮಾರನ ಮ । ದ್ದಾನೆ ಎನ್ನ । ಮಾನಿನಿ ಕೌ । ಸಲ್ಯೆ ॥ ೨೯

---

1 ಮೂ (ಅ) 2 ಆಶ್ಚರ್ಯ (ಅ)

[1]ಪುತ್ರರಿಲ್ಲ | ವೆಂದು ಬಲು | ಚಿಂತೆಯಿಂದ | ಕಮಲ |
ಪುತ್ರಜಾತಂ | ಗೆ ನಾಪೇಳೆ | ಮುಖನ ನೀವಾ | ಡೆಂದ[1] || ೩೦

ಕೌಸಲ್ಯೆ—

ಒಳ್ಳಿತಾಯಿ | ತು ಭೂಪಾಲ | ಫುಲ್ಲಶರನ | ರೂಪ |
ನಲ್ಲ ನಮಗೆ | ಪೇಳಿದ್ದೀಗ | ಕಲ್ಯಾಣದ | ಕಾರ್ಯ || ೩೧

ದಶರಥ—

[2]ನೀ ಕೇಳಿದೆ | ಏನೆ ಕೈಕೆ | ನಿನ್ನ ಮನವ | ದೇನೆ |
ಏಕಾಂತವೇ | ತಕೆ ಇನ್ನು | ಯಜ್ಞ ವಿರಚಿ | ಸುವೆನು[2] || ೩೨

ಕೈಕೆ—

ಭೂಕಾಂತರೊ | ಳಗೆಲ್ಲ·ಗು | ಣಾಢ್ಯ ಎನ್ನ | ಕಾಂತ |
ಶ್ರೀಕಾಂತ ದಯ | ಮಾಡುವನು | ಮಾಡು ಯಜ್ಞ | ವನ್ನು || ೩೩

ಚಂದವಾಯ್ತು | ರಮಣ ರಚಿಸು | ಇಂದೇ ಕ್ರತುವ | ಜವದಿ |
ಕಂದನನ್ನು | ಪಡೆದು ನಿತ್ಯಾ | ನಂದಗೊಳುವೆ | ಮನದಿ || ೩೪

ದಶರಥ—

ನಿನ್ನ ಮನವ | ದೇನೆ ಕನ್ಯಾ | ರನ್ನಳೆ ಸು | ಮಿತ್ರೆ |
[3]ಎನ್ನೊಡನೆ | ದೀಕ್ಷೆಯಿಂದ | ಇರಬೇಕಾಯಿ | ತಲ್ಲೆ[3] || ೩೫

---

೮

1 ತರಳರಿಲ್ಲವೆಂದು ಹಲಬುತಿರೆ ವಿಧಾತ್ರಸೂನು |
ಬರುತ ಮುಖಮಾಡೆಂದನದಕೆ ನೀನೆನ್ನುವದೇನು | (ಅ)

2 ಏನೆ ಕೈಕೆ ಪ್ರತಿಪರಾಜ್ಞೆಯಿಂದ ಮುಖವಗೈವೆ |
ಮಾನಿನೀ ಮಣಿ ನಿನ್ನ ಮನದಿ ಮಾಳ್ಪುದು ನಿರ್ಧರವೇ ? || (ಕಾ)

3 ಪಸ್ನಂಗವೇಣಿಯು ಬೇಗ ಪೇಳೆ ಚಾರುಗಾತ್ರೆ (ಅ)

ಸುಮಿತ್ರೆ—

[1]ಎಲ್ಲ ಕಾಮ | ಕಲೆಯಬಲ್ಲ | ಮುದ್ದು ಪ್ರೌಢ | ನಲ್ಲ |
ಇನ್ನು ತಡವ | ದೇಕೆ ಕ್ರತುವ | ನಾಚರಿಸುವ | ಬೇಗ[1] || ೩೬

ವಚನ || [2]ಇಂತು ಸತಿಯರು ಪೇಳುತ್ತಿರಲಾಗಿ ಸುಮಂತ್ರನು ಏನೆಂದನು ಎಂದರೆ[2]—

೧೨. [3]ಪಂತುವರಾಳಿರಾಗ[3]—ಏಕತಾಳ ೩

ಸುಮಂತ್ರ—

ಭೂಪಾ | ಲಮಣೀ | ಕೇಳಿದೆ | ಏನ್ನೈ |
ದೇವ ಮು | ನಿಯು ಪೇ | ಳಿದುದಂ | ಪೇಳುವೆ || ಪ ||

ಸೂರ್ಯಾ | ನ್ವಯದೊಳ | ಗುದಿಸಿದ | ದಶರಥ |
ಧಾರಿಣಿ | ಯಂ ಪಾ | ಲಿಸುವಾ | ಸಮಯದಿ || ಅ. ಪ. ||

ಸುತ[4]ರಿ | ಲ್ಲದೆ[4] ನ್ನೈ | ಭಾಂಡುಕ | ವರಮುನಿ |
ಸುತಕಾ | ಮೇಷ್ಟಿಯ | ಮಾಡಿದ | ಡಂದು |
ಸುತರಾ | ಗುವರೆಂ | ದಾ ಮುನಿ | ಪೇಳಿದ |
ನದರಿಂ | ದಾತನ | ಕರೆಸಲು | ಬೇಕು || ೩೭

ವಚನ || ಆ ಮಾತಿಗೆ ದಶರಥನೃಪಾಲನು ಸುಮಂತ್ರನೊಡನೆ ಏನೆಂದನು ಎಂದರೆ—

೧೩. [5]ಭೈರವಿ ರಾಗ[5]—ಜಂಪೆ ತಾಳ ೧

ದಶರಥ—

ಚಿಂತೆಯನು | ಪರಿಹರಿಸು | ಮಂತ್ರಿಕುಲ | ತಿಲಕನೆ ಸು |
ಮಂತ್ರ ಮುಂ | ದೇನೆಂದ | ಡಿಂತೆಂದ | ನಾಗ || ೩೮

---

1 ಎಲ್ಲ ಸ್ಮರನತಂತ್ರವನ್ನು ಬಲ್ಲೆಡೆರೆಯನಿಂತು |
ಸುಲಭವೇನೆ ಸುರತವಾಡದೆ ಸುತರ ಪಡೆವದೆಂತು ||
ದಶರಥ—ನಳಿನಾಕ್ಷಿ ಕೇಳ್ ಮದನ ಸುಖದಿ ನಲಿದರಿಂದಲೇನೆ |
ಖಳಸಂ ಹರನ ಕೃಪೆಯಾಗಬೇಕು ಯಜ್ಞ ಮುಖದಿ ತಾನೆ || (ಕಾ)

2 ಇಂತು ಪೇಳ್ದ ಕಾಂತೆಯರ ಮಾತಂ ಕೇಳ್ದ ದಶರಥನೃಪತಿ ಸುಮಂತ್ರನಂ ಕಂಡು ಮುನಿಗಳಿಂದ ಮುಖದೊಳ್ ಮಕ್ಕಳಾಗುವುದೇ ಏನೆಂದು ಪೇಳಲ್ಕಾ ಮಂತ್ರಿ ಬಳಿಕೆಂದಂ (ಅ)

3 ಸವ್ಯಾ ಏಕತಾಳ (ಅ) 4 ಸುತಹೀನರು (ಅ) 5 ಘಂಟಾರವ (ಓ)

ಪಾರ್ಶ್ವಕ (?) || ಉಚಿತದಿಂದರ್ಧಾಂಗಿಯರು ನುಡಿಯಲಾ ಕುಂಭ ಕುಚಯುಗಳೆಯರನು

ಸುಮಂತ್ರ—

ಪುತ್ರ ಕಾ । ಮೇಷ್ಟಿಯನು । ಋತ್ವಿಜರ । ಕರೆಸೀ ಧ ।
ರಿತ್ರಿಯಲಿ । ಮಾಡಿಸೈ । ಶಾಸ್ತ್ರವಿಧಿ । ಯಿಂದ ॥ ೩೯

ದಶರಥ—

ಆಗಲಾ । ಗಲಿಮಂತ್ರಿ । ಏ ಗುಣಾ । ಢ್ಯನೆ ಯಜ್ಞ ।
ಸಾಗಬೇ । ಕಾದಡದ । ಕೇನು ಸ । ನ್ನಾಹ ॥ ೪೦

ಸುಮಂತ್ರ—

ರೋಮಪಾ । ದನಪುತ್ರಿ । ಯನುಮುದದಿ । ಮದುವೆಯಾ ।
ದಾ ಮಹಾ । ಋಷ್ಯಶೃಂ । ಗಾಖ್ಯಬರ । ಬೇಕು ॥ ೪೧

ದಶರಥ—

ಜನಪಾಲ । ನಲ್ಲಿಗಾ ! ಮುನಿಬಂದಿ । ರುವನೇಕೆ ।
ವನದಿಂದ । ನಡೆ[1]ತಂದ[1] । ಅನುವ ಪೇಳ್ । ಮುಂದೆ ॥ ೪೨

ವಚನ ॥ ಆ ಮಾತಿಗೆ ಸುಮಂತ್ರನು ದಶರಥನೊಡನೆ ಏನೆಂದನು ಎಂದರೆ—

೧೪. ದ್ವಿಪದೆ

ಸುಮಂತ್ರ—

ರೋಮಪಾದನು [2]ಪೂರ್ವ[2]ದೊಳಗೆ ಯಜ್ಞವನು ।
ತಾ ಮಾಡಲಾ ಸುರಪ ಮಳೆಯ ತಡಸಿದನು ॥ ೪೩

---

ಮನ್ನಿಸಿ ಬಳಿಕಾ ಭೂಮಿಪಂ ಸಚಿವನಾಗಿಹ ಸುಮಂತ್ರನೊಳುಪೇಳ್ದಂ— ಘಂಟಾರವ–ಜಂಪೆ ॥ ಮಂತ್ರಿ ಕುಲತಿಲಕನೇ ಕೇಳಯ್ಯ । ನಿನ್ನೊಡನೆ ಪೇಳುವೆನು ಮುನಿಪೇಳ್ದ ನುಡಿಯ ॥ ಋಷಿ ತಾನೇನೇ ಮದಕೊಟ್ಟನೆನಗೇ ಪುತ್ರಕಾಮೇಷ್ಟಿಯನು ನಡೆಸಬೇಕೆಂದು ॥ ಅದರಿಂದಲಿದಕ್ಕೆ ಬೇಕಾದ ಸನ್ನಾಹವ ತರಿಸೈಯ ಬೇಗ ॥ ರಾಯ ಬಿಡುಚಿಂತೆಯನು ಈ ಕ್ಷಣದಿ ವಸ್ತುಗಳ । ಜೋಡಣೆಯಮಾಡಿ ರಾಜ್ಯಾಧಿಪರಿಂಗೆ ಲೇಖನವ ಬರೆದು ಕರೆಸುವೆನು ಈಗ ॥ ರೋಮಪಾದನ ಪುತ್ರಿಯನು ಮದುವೆಯಾದ ಋಷ್ಯಶೃಂಗಾಖ್ಯ ಬರಬೇಕಲ್ಲ (ಕಾ)

1 ನಡೆತಾಹಡನುವ (ಓ) 2 ಲೋಕ (ಓ)

ಚಿಂತಿಸಲು ನಾರದನು ಚಿತ್ತೈಸಿ ಬಂದು ।
ನಿಂತಾಕ್ಷಣದಿ ಭೂಪ ಪೊಡಮಟ್ಟನೆಂದು ॥ ೪೪

ವರ ವಿಭಾಂಡುಕಪುತ್ರ ಋಷ್ಯಶೃಂಗಾಖ್ಯ ।
ತೆರಳಿ ಬಂದರೆ ನಮ್ಮ ರಾಷ್ಟ್ರದಲಿ ಸೌಖ್ಯ ॥ ೪೫

ಎಂದೆನಲು, ಹೇಗವನ ಬರವ ಹೇಳಯ್ಯ ।
ಇಂದುಮುಖಿಯರ ಕಳುಹಿ ಕರೆಸೆನಲು ರಾಯ ॥ ೪೬

ವಾರಾಂಗನೆಯರನೆಲ್ಲ ವನಕೆ ಕಳುಹಿದನು ।
ನೀರೆಯರ ಋಷ್ಯಶೃಂಗಾಖ್ಯ ನೋಡಿದನು ॥ ೪೭

ವಚನ ॥ ಆಗಳಾ ಅಗಣಿತದ ನಾರಿಯರ್ಬೈದಿದರದೆಂತೆನೆ—

೧೫. ಪಂತುವರಾಳಿ ರಾಗ—ಏಕತಾಳ ೪

ಸುಮಂತ್ರ—

,ತರುಣಿಯ । ರ್ಬೈದಿದ ।, ರಾ ವನ- । -ಕೆ ಮುನಿ ।
,ವರನವು । ರುಳುಮಾಡಿ ।, -ಕರೆವುದ- । ಕೆ-॥ ॥ ಪ ॥

,[1]ಮುನಿಯವೇ । ಷವನಾಂತು । ವನದೊಳ । ಗೆಲ್ಲರು[1] ।
,ಘನಕುಚ । ದ್ವಯಗಳ ।, ತೋರಿಸು । ತ- ।
,[2]ಕುಣಿಯುತ । ಲಿರಲಾಗ ।, ಘನತಪ । ವನುಬಿಟ್ಟು ।
,ಮುನಿಪ ವ । ನಿತೆಯರ । ನೀಕ್ಷಿಸು । ತ-[2] ॥ ೪೮

,ನಮಗೆ ಒಂ । ದೇಕೋಡು । ನಿಮಗೆ ದ್ವ । ಯಗಳುಂಟು ।
,ಅಮಮ ಮ । ಹಾಮುನಿ । ವರರೆನ । ಲು- ।
,ಕಮಲ ವ । ದನೆಯರು ।, ಭ್ರಮರಕುಂ । ತಳೆಯರು ।
,[3]ಚಮರದ । ವೊಲು ಬೀ । ಸುತಹೊದ್ದು[3] । ತಾ-॥ ೪೯

---

1 ತನುವ ಸಿಂಗರಿಸುತ್ತ ನೀರೆಯರೆಲ್ಲರು (ಅ) । 2 ಘನವಾದ ತಪವ ಬಿಟ್ಟಾಕ್ಷಣ ಮುನಿಪತಿ । ವನಿತೆಯರುಗಳನೀಕ್ಷಿಸುತಿದ್ದನಾಗ ॥ (ಓ) 3 ಚೌರಿಯ ಹಾಯಾಗಿ ಬೀಸುತ್ತ (ಕಾ)

,ಕರದಲಿ । ಕಜ್ಜಾಯ ।, ಗಳನೀಡ । ಲಾ ಮುನಿ ।
,ವರನದ । ಭಕ್ಷಿಸಿ ।, [1]ತಕ್ಕೈಸಿ । ದ ।
,ಗುರುಕುಚ । ಗಳಮುಟ್ಟಿ । ತಪನನೆ । ಲ್ಲವಬಿಟ್ಟು[1] ।
[2]ಬರುತಿರ್ದ । ಭೂಪ ದೀ । ಕ್ಷೆಯಕೊಂಡ । ಬಳಿಗೆ[2] ॥ ೫೦

೧೬. ಕಂದ

ಫುಲ್ಲಾಸ್ತ್ರನ ಬಾಧೆಯೊಳಾ
ಬಲ್ಲಿದ ಮುನಿ ರೋಮಪಾದಭೂಮಿಪ ನೆಡೆಗಂ ।
ನಿಲ್ಲದೆ ಬರಲಾ ಮಗಳಂ
ಕಲ್ಯಾಣವ ರಚಿಸಿ ಯಜ್ಞಕಾರಂಭಿಸಿದಂ ॥ ೫೧

[3] ವಚನ ॥ ಈ ಪ್ರಕಾರ ಆ ರೋಮಪಾದ ನರೇಶ್ವರನಲ್ಲಿ ಋಷ್ಯಶೃಂಗ ಮುನೀಶ್ವರಂ ಬಂದಿಹನವನ ನೀನೀಕ್ಷಣದಿಂ ಕರೆಸೆಂದನು—[3]

೧೭. ಮತ್ತೇಭ

ದಶರಥ—

ವರಮಂತ್ರೀಶ್ವರ ನೆಂದಡಾ ದಶರಥಂ ಆನಂದದಿಂ ಮಿಂದು ಭೂ ।
ಸುರಶ್ರೇಷ್ಠಾದ್ಯರ ನಂದಿಸುತ್ತ ಮುನಿಯಂ ಕರೆತಂದು ಸುಮೂಹೂರ್ತದಿ ।
ಸುರನಾಥಾದ್ಯರು ಮೆಚ್ಚುವಂತೆ ಮುಖವಂ ತಾ ಮಾಳ್ಪೆನೆಂದಾಗಳಾ ।
ನರನಾಥಾಗ್ರಣಿ ಕೀರ್ತಿಯಾಹ ಪರಿಯಂ ವೃಂದಾರಕರ್ಕೇಳಲು ॥ ೫೨

---

1 ತಕ್ಕೈಸುತ । ಘನಜಘನೆಯರ ಮದವನೆಲ್ಲ ನಿಲಿಸಿ । (ಕಾ)

2 ಸ್ಮರದೀಕ್ಷೆಯನು ಕೊಂಡು ಹೊರವಂಟನಂದು (ಅ)

3 ವಾರ್ಧಿಕ ॥ ಅದರಿಂದ ನೀನಾತನಂ ಕರೆಸಿಯಾಗಮಂ ।
ವಿಧಿ ವಿಧಾನದಿ ವಿರಚಿಸಲ್ಕೆ ಹರಿದಯದಿ ನಿ
ನ್ನುದರದೊಳ್ ಜನಿಪನಿದು ಸಿದ್ಧವೆನಲಜಕುಮಾರಂ ಹರುಷದಿ ।
ಒದಗಿನಿಂ ರೋಮಪಾದ ನರೇಶನಲ್ಲಿಗಂ
ಸುದತಿಯರ ಕಳುಹಿ (ಮುನಿ) ಋಷ್ಯಶೃಂಗನ ಬರಿಸಿ
ಪದುಳದಿಂ ಗುರುವಸಿಷ್ಠನ ಮತದೊಳೊಡನೆ ಮುಖಕಾರಂಭಿಸಿದ ವಿನಯದಿ ॥ (ಅ)

೧೮. ಕಂದ

ಚತುರಂಬುಧಿಯೊಳಗುಳ್ಳಾ
ಪೃಥಿವಿಪರಂ ಗೆಲ್ದು ತುರಗ ಬಂದಾಕ್ಷಣದೊಳ್ |
ಯತಿತಿಲಕ ಬ್ರಹ್ಮಸುತನನು
ಮುತದಿಂದಲೆ ತಾನು ಯಜ್ಞಕಾರಂಭಿಸಿದಂ || ೫೨

(ದಶರಥಾದಿಗಳ ನಿಷ್ಕ್ರಮಣ)

(ದೇವತೆಗಳ ಹಾಗೂ ಬ್ರಹ್ಮನ ಪ್ರವೇಶ)

೧೯. ಕಂದ

ಹಿಂದೆ ದಶಶಿರನ ಬಾಧೆಗೆ
ವೃಂದಾರಕರೆಲ್ಲ ನೊಂದು ಬ್ರಹ್ಮನ ಬಳಿಗೈ |
*ತಂದುಂ ಜಯ ಜಯ ವೆನ್ನುತ
ವಂದಿಸುತವರವರು ತಮ್ಮ [1]ಗ[1]ತಿಯಂ ಪೇಳ್ದರ್ || ೫೮

೨೦. ಮಧುಮಾಧವಿ ರಾಗ—ಅಷ್ಟ ತಾಳ ೧

ದೇವೇಂದ್ರ—

ಪಾಹಿ ಸಾ | ರಸಸಂ–| ಭವ ದೇವ | ದೇವ || ಪಲ್ಲವಿ ||
ರಾವಣ | ನಾದ ನಿ | ಶಾಚರ | ನೀಚನು |
ತಾ ವರ | ದಿಂದಸ | ಮರ್ಥನಾ | ಗಿ– |
ದೇವರ್ಕ | ಳೆಲ್ಲರ | ಪೀಡಿಸು | ತ್ತೈದಾನೆ |
ಕೇವಲ | ದುಷ್ಟನಾ | ಗಿರುವ ದಾ | ರಿಯ ಕಾಣೆ || ೫೫

ತರಣಿಚಂ | ದ್ರಮರ ಸು | ಖದಿ ಸಂಚ | ರಿಸ ಗೊಡ |
ತಿರುಗಾಡ | ಬಿಡನು ಮಾ | ರುತನ ನೀ | ಗ–|
ಧರಣಿದೇ | ವಿಯುತಾನು | [2]ಬಲು[2]ಚಿಂತಿ | ಸುವಳಯ್ಯ |
ಉರಗೇಂದ್ರ | ಭಾರವ | ಧರಿಸಲೊ | ಲ್ಲನು ಸ್ವಾಮಿ || ೫೬

---

1 ಸ್ಥಿಂ (ಓ) 2 ಅತಿ (ಓ)
* ಬಂದೊರೆದರ್ ತಂತಮ್ಮಯ | ದಂದುಗಮಂ ಚರಣಕೆರಗಿ ಬಲು ದೈನ್ಯದೊಳು (ಅ)

ಬ್ರಹ್ಮ—

ಚಿಂತೆಯಾ । ತಕೆ ಕೇ । ಳಿಂದ್ರರಾ । ವಣನಿಗೆ ।
ಸಂತೋಷ । ದಿಂ ಘೋರ । ವರವಿತ್ತೆ । ನು- ।
ಸಂತತ । ವವನಕೊ । ಲ್ಲುವಯತ್ನ । ಗಳಿಗೆಅ ।
ನಂತಶ । ಯನಸಿದ । ಕನುವಬ । ಲ್ಲನು ಎಲ್ಲ ॥ ೫೭

ಪೋಗುವ । ನಾವೆಲ್ಲ । ಕ್ಷೀರಾಬ್ಧಿ । ತಡಿಗೆ ॥ ಪ ॥

೨೧. ಕಂದ

ಪರಮೇಷ್ಠಿಯು ನಗುತಾಕ್ಷಣ
ಸುರರಂ ಕರಕೊಂಡು ಕ್ಷೀರಸಾಗರ ತಡಿಯೊಳ್ ।
ಹರಿಯಂಘ್ರಿಗೆರಗಿ ಕಾರ್ಯದ
ಪರಿ ಎಲ್ಲವನರುಹುತಿರ್ದನತಿ ಮುದದಿಂದ ॥ ೫೮

೨೨. [1]ನವರೋಜು ರಾಗ—ಚೌತಾಳ. ತಿತ್ತಿತ್ತೈ[1]

ಮಾ-ಧವ ಸ್ವಾಮಿಮಾ-ತ-। ಲಾ- ಲಿಸು ಪ್ರೇ-ಮಿ-।
ನೀ-ದಯಾನಿಧಿ ಎಂ-ದು -। ನಿ-ನ್ನಸೇರಿದೆ ಬಂ- ದು- ॥ ಪಲ್ಲವಿ ॥

ರಾ-ವಣನೆಂ-ಬ-ನಿ-। ಶಾ-ಚರ ವೀ-ರ-ನು-।
ದೇ-ವತೆಗಳನೆ-ಲ್ಲ-। ಬಾ-ದಿಸುತ್ತಿಹ-ನು-।
ಗೋ-। ವಿಂದ । ನೀ-। ಬಂದು । ಅಸು । ರರೆ । ಲ್ಲರ । ಕೊಂದು ।
ಶ್ರೀ-। ವರ । ಸುಜ । ನರ । ಪ್ತೊರೆ । ಯೋ ಭ । ಕುತ । ಬಂಧು ॥ ೫೯

ಎ- । ನ್ನಭಜಿಸಲಂ-ದು-। ನಾ-ನೇ ವರವಿತ್ತೆ-ನು-।
ಇ-ನ್ನುತಪ್ಪಿಸಲೆ-ನ-। ಗಳ-ವಲ್ಲನ-ಯ್ಯಾ ।
,ಪ । ನ್ನಗ । ಶಯ । ನಕೇಳ್ । ನಿ-। ನ್ನಸು । ತನ । ತಪ್ಪ ।
,ಮ । ನ್ನಿಸಿ । ದೇವ । ರ್ಕಳ । ನಿನ್ನು । ಪೊರೆ । ಯೋ । [2]ದೇವ[2] ॥ ೬೦

---

1 ರಾಗ ಕಾಪಿ—ಏಕತಾಳ (ಓ) 2 ಜೀಯ (ಓ) (ಕಾ)

೨೩. [1]ಕಂದ

ಇಂತೆನೆ ಭಜಿಸುತ ಲಕ್ಷ್ಮೀ
ಕಾಂತನಪಾದಯುಗಳಕೆರಗುತಿರಲಾಕ್ಷಣದೊಳ್ ।
ನಂತನೊಳೊರಗಿದಹರಿ ಸುರ
ಸಂತತಿಯೊಡನಾಗಳಿಂತು ನುಡಿಯುತ್ತಿರ್ದ[1] ೬೧

(ತೆರೆ ಎತ್ತಿ ಶೇಷಶಯನನಾದ ಮಹಾ ವಿಷ್ಣುವಿನ ಪ್ರವೇಶ)

೨೪ ಮಧ್ಯಮಾವತಿ ರಾಗ—ಏಕತಾಳ ೪

ವಿಷ್ಣು —

,ಏಳಿಕ್ಲೇ । ಶಗಳೇನೆ । , ನಿಮಗಿದು । ಗಾಢ-।
,ಖೂಳ ರಾ । ವಣನ ಬಾ. । , ದೆಗೆ ಚಿಂತೆ । ಬೇಡ- ॥ ಪ ॥

,ದಶರಥ । ನೃಪತಿಗೆ । , ಸುತನಾಗಿ । ಜನಿಸುವೆ ।
,ದಶಶಿರ । ನನುಕೊಂದು । , ಕೊಡುವೆನ । ಯ್ಯ-।
,ವಸುಧೆಯೊ । ಳಗೆ ಹವ್ಯ । , ಕವ್ಯಗ । ಳೆಲ್ಲವು ।
,ಹಸನಾಗಿ । ನಡೆವಂತೆ । , ಕರುಣಿಸು । ವೆನುತಾಳಿ ೬೨

,ಆತನ । ಬಂಧು ಬಾ । , ಧವರ ಮ । ಕ್ಕಳ ಸಹ ।
,ಜಾತಿಯ । ನೆಲ್ಲನ । , ಸಂಹರಿ । ಸುವೆನು ।
,ಕೋತಿ ಗ । ಳಾಗಿ ನೀ । , ವೆಲ್ಲರು । ದಿಸಿರೆಂಬ ।
,ನಾತ ಕೇ ।ಳುತಸುರ । , ವ್ರಾತ ಕೈ । ಮುಗಿಯೆ ೬೩

೨೫. ಶಾ॥ ವೃತ್ತ

ಇಂತಿಂದ್ರಾದ್ಯರಿಗೆಂದು ಶೇಷಶಯನಂ ಪಕ್ಷೀಂದ್ರನನ್ನೇರುತ ।
ಸಂತೋಷಾಧಿಕನಾಗಿ ಬಂದು ನಿಲಲುಂ ತದ್ಯಾಗ ಸಾಮಿಪ್ಯದಿ ।

(ಪತ್ನೀ ಸಮೇತನಾದ ದಶರಥನು ಋಷ್ಯಶೃಂಗನೊಡನೆ ಯಜ್ಞ ಮಾಡುತ್ತಿರುವ ದೃಶ್ಯ ತೆರೆ ಸೀರೆ ಎತ್ತಿ ಪ್ರವೇಶ)

ಕಾಂತಾವರ್ಗವ ಕೂಡಿಕೊಂಡು ಮಖನಂ ಮಾಡುತ್ತ ಭೂಪಾಲಕಂ ।
ನಿಂತಾ ಮಾತ್ರದಿ ಋಷ್ಯಶೃಂಗಮುನಿಪಂ ಪೇಳ್ದಂ ಸುಮಾಂಗಲ್ಯದಿ ೬೪

---

1 ವಚನ ॥ ಇಂತೆಂದಜನೆಂದಾ ಮಾತಿಗೆ ಶ್ರೀಪತಿ ಅತಿಹರ್ಷದಿಂದ ಮಗನೊಡನೆ ಏನೆಂದನು ಎಂದರೆ (ಅ)

### ೨೬. ಕಲ್ಯಾಣಿರಾಗ—ಏಕತಾಳ ೪

ನೃಪತೇ ಮ | ಹಾರಾಜ | ದಶರಥ | ಸುಮತೇ || ಪ ||

ಋಷ್ಯಶೃಂಗ—

,ಪುತ್ರ ಕಾ | ಮೇಷ್ಟಿಯ | , ಮಾಡಿದ್ದ | ರಿಂದಲೆ |
,[1]ಅತ್ತ ನಿ | ನ್ನ ಮನೋ | , ರಥ ಸಿದ್ಧಿ | ಯಾಯ್ತು[1] |
,ಪುತ್ರರು | ನಾಲ್ವರು | , ದಿಪರೀಗ | ನೀ ಕೇಳು |
,ಚಿತ್ತ ಚಂ | ಚಲ ಬಿಟ್ಟು | ಸ್ಥಿರವಾಗಿ | ಬಾಳಯ್ಯ ೬೫

,ಲಕ್ಷಣ | ಶುಭವಾಗಿ | , ಕಾಣ ಬಂ | ದಿವೆ ಮತ್ತೆ |
,ದಕ್ಷಿಣಾ | ವರ್ತದಿ | , ಜ್ವಲಿಪನು | ಹವನ |
,ಪಕ್ಷೀಂದ್ರ | ವಾಹನ | , ಪರಮ ಮಂ | ಗಲದಿಂದ |
ಈಕ್ಷಣ | ದಯವಹ | , ಈಗ ನಿ | ನ್ನೊಳು ಮೋಹ ೬೬

,ಹವ್ಯ ವಾ | ಹನನ ಮ | ಧ್ಯದೊಳು ತೋ | ರುತಲಿದೆ |
,[2]ದಿವ್ಯ ಸ್ವ | ರೂಪವು[2] | , ಪಾತ್ರವ ಪಿಡಿದು |
,[3]ಅವ್ಯಕ್ತಾ | ದ್ವಯನಾದ | ಶ್ರೀಹರಿ | ಯವಗೆ ನೀ
,ಸೇವ್ಯ ತಾ | ನಾದೆಯ್ಯೆ | , ದಶರಥ ನೀಕೇಳು[3] ೬೭

### ೨೭. ಕಂದ

ಇಂತೇಳು ದಿವಸ ಮುನಿಗಳ
ತಿಂಥಿಣಿಯಿಂ ಮಖನ ರಚಿಪೆ ಪೂರ್ಣಾಹುತಿಯೊಳ್ |
ಮುಂತೆಸೆದಿರೆ ವರಲಕ್ಷ್ಮೀ
ಕಾಂತನೆ ಗೋಚರಿಸಿದಂತೆ ಯಜ್ಞೇಶ್ವರನು || ೬೮

---

1 ಅತ್ತ ನಿನ್ ಮನೋರಥ ಸಿದ್ಧಿಸಿತಲ್ಲಯ್ಯ (ಓ) 2 ದಿವ್ಯವಾದ ರೂಪಿನಿಂ (ಓ) ದಿವ್ಯಸ್ವರೂಪ ಏದಿ ಸ್ವರ್ಣಪಾತ್ರವ (ಅ) 3 ಅವ್ಯಕ್ತನದ್ವಯವಾದ ಹರಿಗೇಕೆ ನೀ ಸೇವ್ಯ ಮಾನನಾದೆಯೋ ದಶರಥ ಕೇಳು (ಓ). ಇದರ ಹಿಂದೆ ಈ ಪದ್ಯಗಳೆರಡು ಹೆಚ್ಚಿವೆ_ಮತ್ತೆ ಶ್ಲೋಕಗಳಿಲ್ಲ. ಈ ಲೋಕಗಳಿಗೆಲ್ಲ, ಸತ್ಯವಿದೆನ್ನ ಮಾತ ನೀ ಲಾಲಿಸು ಮನದಿ || ಪೃಥ್ವಿಪಾಲ ಶಾರ್ದೂಲ, ಪುರುಷ ತಿಲಕನೆ ನೋಡು | ಅತ್ಯಂತ ಭಾಗ್ಯವನು ಅಮರಿರಿಂ ಪಡೆದೆ (ಕಾ ||)

(ಯಜ್ಞೇಶ್ವರನ ಪ್ರವೇಶ)

೨೮. ವರಾಳಿ ರಾಗ—ಅಷ್ಟತಾಳ ೩

ಯಜ್ಞೇಶ್ವರ—

ರಾಜಶೇ | ಖರ ರಾಜ | ರಾಜ ಮಾ | ನವದನ |
ರಾಜೀವಾ | ಕ್ಷನಭಜ | ಕ— |
ರಾಜಿಪ | ಗ್ನಿಯೊಳಿಂದು | ನರವೇಷ | ವನು ತಾಳಿ |
ಆಜಗ | ತ್ಪತಿ ಯನು | ಜ್ಞೆಯೊಳೀಗ | ಬಂದೆನು || ೬೯

ದಶರಥ—

ಭಗವನ್ ವೀ | ತಿಹೋ ತ್ರನೆ | ನಮಿಸೆ ನಿ | ನ್ನಯ ಪಾದ |
ಯುಗಳಕೆ | ಶುಭದಾಯ | ಕ— |
ಧಗಧಗಿ | ಸುವತೇಜ | ಸ್ಸುಗಳ ಶ | ರೀರದ |
ನಗೆಮೊಗ | ದರುಶನ | ದಿಂದ ಸ | ಫಲವಾಯ್ತು || ೭೦

ಯಜ್ಞೇಶ್ವರ—

[1]ನರವರ | ಸುರರೆಲ್ಲ[1] | ಕೊಟ್ಟಪಾ | ಯಸವಿದು |
ಧರಣೀಶ | ನಿನಗೀವೆ | ನು— |
ತರುಣಿಯ | ರಿಗೆ ನಾಲ್ಕು | ಪಾಲಾಗಿ | ನೀ ನೀಡು |
ತರುಣ ನಾ | ಲ್ವರು ದಿಪ | ರ್ತರಣಿವಂ | ಶಕೆ ದೀಪ || ೭೧

೨೯. ಕಂದ

ತಂದಾಪಾಯಸ ಪಾತ್ರೆಯ
ನಂದಾ ಭೂಪತಿಗೆ [2]ಕೊಟ್ಟು ತೆರಳಲ್ ದಿವಿಜಂ[2] |
ಮಂದಿರಕೆ ಬಂದು ಶಶರಥ
ಚಂದದಿ ತನ್ನರಸಿಯರ್ಗೆ ನುಡಿಯುತ್ತಿರ್ದಂ || ೭೨

---

1 ಸುರವರನರರೆಲ್ಲ (ಓ) 2 ಕೊಟ್ಟು ತೆರಳಿದನನಲಂ (ಅ)

೩೦. ತೋಡಿರಾಗ—ಏಕತಾಳ ೩ (ತಿಶ್ರತ್ರೈ)

ದಶರಥ—

, ಫುಲ್ಲ । ಲೋಚ । ನೇ ಸು । ಶೀಲೆ । ವಲ್ಲ । ಭೆ ಕೌ । ಸಲ್ಯೆ— ।
, ಕಲ್ಯಾ । ಣದ । ಪಾಯ । ಸ ವಿದು । [1]ಪುತ್ರಾ । ರ್ಥ[1] ನೀ । ಗ್ರಹಿಸೆ— ॥

ಕೌಸಲ್ಯೆ—

. ಎಲ್ಲ । ಕಾಮ । ಕಲೆಯ । ಬಲ್ಲ । ಮುದ್ದು । ಪ್ರೌಢ । ಬೇಗ— ।
, ನಲ್ಲ । [2]ಕೊಡಿ । ಸೆನ್ನ । ಭಾಗ[2] । ವೆನಲು । ಕೊಟ್ಟ । ನಾಗ ೭೩

ದಶರಥ—

, ಸರಸಿ । ರುಹ । ದಳ । ನೇತ್ರೆ । ಸುರುಚಿ । ರ ಸು । ಗಾತ್ರೆ— ।
, ತರುಣಿ । ನಿನ್ನ । ಅಂಶ । ಇಕ್ಕೊ । ಬೇಡಿ । ಕೊಳ್ಳೆ । ಕೈಕೆ— ॥

ಕೈಕೆ—

, ವೈರಿ । ನೃಪ । ರೆದೆಗೆ । ಕುಂತ । ಮಾರ । ರೂಪ । ವಂತ ।— ।
, ಧೀರ । ಎನ್ನ । ಕಾಂತ । ಬೇಗ । ತಾರೊ । ಪರಮಾ । ನ್ನವನು— ॥ ೭೪

ದಶರಥ—

, ಪುತ್ರ । ರುದಿ । ಸು ವ । ಡಿ ದು । ಕಾರ । ಣಸು । ಮಿತ್ರೆ— ।
, ಚಿತ್ರ । ತ ರ । ಪಾಯ । ಸ ವ । ಗ್ರಹಿಸೆ । ಲೆ ನೀ । ಬಾಲೆ— ॥

ಸುಮಿತ್ರೆ—

, ಪೃಥ್ವಿ । ಪಾಲ । ಶಿರೋ । ಮಣೀ । ಚಿತ್ತ । ಜ ಸ್ವ । ರೂಪ— ।
, ಹಸ್ತ । ದಲ್ಲಿ । ಕೊಡಿಸೊ । [3]ಎನ್ನ । ಉತ್ತ । ಮಾಂಶ । ವನ್ನು[3]— ॥ ೭೫

---

1 ಪುತ್ರಾರ್ಥ (ಓ) 2 ಕೊಡಿಸೊ ಪರಮಾನ್ನವ (ಓ) 3 ಎಲ್ಲ ಉತ್ತಮಾನ್ನವನ್ನು (ಓ)

ದಶರಥ—

, ಶೇ ಷ | ದ ಪಾ | ಯಾಸ | ವಿದು | ಸುದತಿ | ಕೇಳ್ ಸು | ಮಿತ್ರೆ |
, ನಾ ಸು | ಮಂಗ | ಲದಿಂ | ದೀವೆ | ಬೇಡೆ | ಪ್ರೌಢ | ಗಾತ್ರೆ ||

, ಭೂಸು | ದತೀ | ವರ ಗು | ಣಾಢ್ಯ | ಬಾರೊ | ಎನ್ನ | ಕಾಂತ |—
, ಏ ಸು | ಧನ್ಯ | ರೋ ನಾ | ವಿಂದು | ತಾರೊ | ಪರಮಾ | ನ್ನವನು—|| ೭೬

(ದಶರಥನ ನಿಷ್ಕ್ರಮ)

೩೧. ಕಂದ

ಧರಿಣಪ ದಶರಥ ಭೂಪಂ
ತರುಣಿಯರಿಗೆ ಪ್ರೀತಿಯಿಂದ ಪರಮಾನ್ನವನು |
[1]ಕರೆದಿತ್ತಾ ಮಾತ್ರದೊಳಾ[1]
ತರುಣಿಯರುಂ ಗರ್ಭಧರಿಸೆ ಮಾತಾಡಿದರು || ೭೭

೩೨. ಕಾಂಭೋಜಿ ರಾಗ— ಜಂಪೆ ತಾಳ ೩

ಕೈಕೆ—

ನಾರೀ ಶಿ | ರೋರನ್ನೆ | ಕೌಸಲ್ಯೆ | ನಿನ್ನ |
ಮೋರೆ ಬೆಳ್ | ಚಾಯಾಗಿ | ತೋರುತಿದೆ | ಏಕೆ || ೭೮

ಕೌಸಲ್ಯೆ—

ಕೋಕಿಲ ಸು | ವಾಣಿ ಕೇ | ಳೆಲೆ ಕೈಕೆ | ನಿನ್ನ |
ಕೋಕನದ | ಕೋರಕ ಕು | ಚಾಗ್ರಕ | ಪ್ಪೇಕೆ || ೭೯
ಇಂದು ವದ | ನೆ ಸುಮಿತ್ರೆ | ಸುಮಗಂಧಿ | ನಿನ್ನ |
ಅಂದವಾ | ದ ತ್ರಿವಳಿ | ಮರೆಯಾಯಿ | ತೇಕೆ || ೮೦

1 ತರದಿಂದಿತ್ತಾ ಮಾತ್ರದಿ (ಓ)

*೩೩. ಸೌರಾಷ್ಟ್ರ[1] ರಾಗ—ಅಷ್ಟತಾಳ

ಸುಮಿತ್ರೆ—

ಅಂಗ ನಾ | ಮಣಿ ಎನ್ನ | ಅಂಗದ | ವ್ಯಥೆಯನ್ನು |
ತಾ—ಳ | ಲಾ—ರೆ | ನು || ೮೧

ಅಡಿ ಯಿಡ | ಲಳವಲ್ಲ | ಮಡಿವರೆ | ಮನಸಿಲ್ಲ |
ತಾ—ಳ | ಲಾ—ರೆ | ನು— || ೮೨

ಗಳಿಗೆ ಗ | ಳಿಗೆ ಗೊಂದು | ಅಲಗು ನೆ | ಟ್ಟಂತಿದೆ |
ತಾ—ಳ | ಲಾ—ರೆ | ನು— || ೮೩

ಕೈಕೆ—

ನಿನ್ನಂತೆ | ಎನಗಾಯಿ | ತಹುದೀಗ | ಬಹುವ್ಯಥೆ |
ತಾ—ಳ | ಲಾ—ರೆ | ನು— || ೮೪

ಉಂಡರು | ಬ್ಬಸ ಚಿಣ್ಣ | ಗುಂಡು ಕ | ಲ್ಲಿಟ್ಟಂತೆ |
ತಾ—ಳ | ಲಾ—ರೆ ನು— || ೮೫

ಕೌಸಲ್ಯೆ—

[2]ಒಬ್ಬರಂ[2] | ತೆನಗಲ್ಲ | ಉಬ್ಬಸ | ಘನವಮ್ಮ |
ತಾ—ಳ | ಲಾ—ರೆ | ನು— || ೮೬

ಕ್ಷೀರ ಸಾ | ಗರವಾಸ | ನಾರಾಯ | ಣ ದೇವೇಶ |
ರ—ಕ್ಷಿ | ಸೆ—ಮ್ಮ | ನು— || ೭೭

ಎಂದು ಮೂ | ವರು ಪೇಳಿ | ದಂದವ | ತಿಳಿದ ಗೋ |
ವಿಂ—ದ | ನಂ—| ದು— || ೮೮

---

*ವಚನ ॥ ಈ ತೆರದಿಂ ಕೈಕೆ ಕೌಸಲೆ ಸುಮಿತ್ರೆಯರು ಏನೆಂದರು ಎಂದರೆ—
1 ಪಂತುವರಾಳಿ (ಓ) ; ರೇಗುಪ್ತಿ (ಅ) 2 ಇಬ್ಬರಂ (ಓ), (ಅ)

(ಸತಿಯರ ನಿಷ್ಕ್ರಮ)

*೩೪. ಶಾ । ವೃತ್ತ ॥

ಮಾಸೇ ಚೈತ್ರಸಿತಾರ್ಧ ರಮ್ಯನವಮ್ಯಾಂ ಮಧ್ಯಾಹ್ನ[1] ಕಾಲಾಗಮೇ[1]
ಮೇಷಾರ್ಕೇ ಸುಕುಳೀರ ಲಗ್ನದುದಯೇ ತಾರಾ ಪುನರ್ವಸುವಿನೊಳ್ ।
ದೇಶಾಧೀಶ್ವರನಾದ ಪಂಕ್ತಿರಥನಿಂ ಕೌಸಲ್ಯಗರ್ಭಾಬ್ಧಿಯೊಳ್ ।
ಶ್ರೀ ಸರ್ವೇಶ್ವರ ಮೋದದಿಂದ ಲೊಗೆದಂ ಲೋಕೈಕರಕ್ಷಾಮಣಿ ॥ ೮೯

೩೫. ಕಂದ

ವರಕೈಕೆ ಪಡೆದಳೊರ್ವನ
ಸರಸಿಜದಳನೇತ್ರೆ ಮಿತ್ರೆ [2]ಬೆಸನಾ[2] ದಳು ಇ।
ರ್ವರು ಸುಕುಮಾರರ ಲಗ್ನದಿ
ಧರಣೀಶಗೆ ತಂದುಕೊಟ್ಟರತಿಮುದದಿಂದಂ ॥ ೯೦

(ಆಸನಸ್ಥನಾದ ದಶರಥನ ಪ್ರವೇಶ, ಸತಿಯರು ಒಬ್ಬೊಬ್ಬರಾಗಿ ಶಿಶುಗಳನ್ನು ತಂದುಕೊಡುತ್ತಾರೆ)

೩೬. [3] ಕಲ್ಯಾಣಿರಾಗ[3]—ಏಕತಾಳ

ಕೌಸಲ್ಯೆ—

, ದಶರಥ । ಭೂಪಗೆ । , ಕೌಸಲ್ಯಾ । ದೇವಿಯು ।
, ಶಿಶುವ ಕೈ । ಯೊಳಗಿತ್ತ । , ಅತಿ ಮೋಹ । ದಿಂದ ॥

---

*ವೃತ್ತ ಆರ್ಯೆ—ಈ ಪರಿಯಲ್ಲೀ ಸತಿಯರು ಮೂವರು ಚಿಂತಿಪಸಮಯದಲಿ। ಶ್ರೀಪತಿಯುದನರಿದಾಕ್ಷಣ ಗೋವಿಂದನು ತಾದಯವಾದ॥ (ಕಾ)

1 ದೊಳ್ ಸೂರ್ಯನು (ಕಾ ಅ) 2 ಲಾದಳು (ಓ) 3 ಮಧ್ಯಮಾವತಿ (ಅ); ಕಂದ ॥ ಸರಸಿಜನೇತ್ರೆಯರೀಪರಿ ತರಳರನುತ್ಸವದಿ ಪಡೆಯಲಾ ವಾರ್ತೆಯನು। ಧರಣಿಪ ದಶರಥ ಕೇಳುತ ಹರುಷದೊಳಾ ಬಳಿಗೆ ಬಂದು ಕಂಡನು ಸುತರಂ ॥ (ಅ)

ದಶರಥ—

, ಎಸೆವ ಸಂ । ತಸದಿಂದಾ । , ಘ್ರಾಣಿಸಿ । ರಾಮನೆಂ ।
, [1]ದತಿಶಯ[1] । [2]ಮೂರ್ತಿಯ । , ಸತಿಗಿತ್ತ[2] । ನಾಗ— ॥ ೯೧

ಕೈಕೆ—

, ತನ್ನ ಬಾ । ಲನ ಕೊಟ್ಟ । , ಳಿಂದೀವ । ರಾಕ್ಷಿ ಸಂ ।
, ಪನ್ನಗೆ । ಕೊಡಲಾತ । , ಮನ್ನಿಸಿ । ಭರತ ।

ದಶರಥ—

, ರನ್ನನೆಂ । ದುನ್ನತ । , ನಾಮವ । ವಿರಚಿಸಿ ।
, ಚೆನ್ನೆ ಕೈ । ಕೆಗೆ ಕೊಟ್ಟು । , ದನ್ನು ನೋ । ಡಿದಳು ॥ ೯೨

ಸುಮಿತ್ರೆ—

, ಶಿಶುಗಳೆ । ರಡ ತಂ । , ದು ಸುಮಿತ್ರೆ । ಚೊಡಲಾಗಿ ।
, ವಸುಧೇಶ । ಲಕ್ಷ್ಮಣ । , ಶತ್ರುಘ್ನ । ರೆಂದು ।
, ಶಶಿಮುಖಿ । [3]ಗಿತ್ತಾಗ[3] । , ಮಂಗಲ । ಘೋಷದಿ ।
, ವಸುಮತೀ । ಸುರರ್ಗೆ ಸಂ । , ದಿಸುತಿದ್ದ । ನಾಗ ॥ ೯೩

ವಚನ ॥ ಆಗಳಾ ಮಂದಗಮನೆಯರು ಬಂದು ಜೋಗುಳವ ಪಾಡಿದರದೆಂತೆನೆ—

### ೩೭. ಆಂದೋಳಿರಾಗ[4] —ಅಷ್ಟತಾಳ

ಅಂಗನಾ । ಕುಲರ । ನ್ನೆಯಂಬೆಲ್ಲ । ಬಂದು ।
ಮಂಗಲ । ಕರ ಶುಭ । ಲಗ್ನದೊ । ಳಂದು ।
ಶೃಂಗಾರ । ಮಾಗಿಹ । ತೊಟ್ಟಿಲ । ತಂದು ।
ಇಂಗಡ । ಲರಸನ । ತೂಗಿದ । ರಂದು ॥ ಜೋ । ಜೋ ॥ ೯೪

1 ದಸುರಾರಿ (ಓ); 2 ಮೂರ್ತಿಯ ಧ್ಯಾನಿಸುತಿರ್ದ (ಅ) 3 ಗಿತ್ತುತಿರುಗೆ (ಓ)
4 ಸೌರಾಷ್ಟ್ರ (ಓ).

ಜೋಜೋ । ದಶಶಿರ । ವೈರಿಮು । ರಾರಿ ।
ಜೋಜೋ । ಶ್ರೀರಾಮ । ಚಂದ್ರ ಉ । ದಾರಿ ।
ಜೋಜೋ । ಇಂದ್ರಜಿ । ತುವಿನ ಸಂ । ಹಾರಿ ।
ಜೋಜೋ । ಲಕ್ಷ್ಮಣ । ಶೇಷಾವ । ತಾರಿ । ಜೋ । ಜೋ ॥ ೯೫

ಜೋಜೋ । ಕೈಕಾ । ದೇವಿಯ । ಕಂದ ।
ಜೋಜೋ ಭ । ರತವೀರ । ಸದ್ಗುಣ । ಸಾಂದ್ರ ।
ಜೋಜೋ ಸು । ಮಿತ್ರಾ । ದೇವಿಯ । ಕಂದ ।
ಜೋಜೋ । ಶತ್ರುಘ್ನ । ರವಿಕೋಟಿ । ಸಾಂದ್ರ ॥ ಜೋ । ಜೋ ॥ ೯೬

(ಎಲ್ಲರೂ ರಂಗಸ್ಥಳದಿಂದ ನಿಷ್ಕ್ರಮಿಸುತ್ತಾರೆ)

(ಪುನಃ ಆಸನಸ್ಥನಾದ ದಶರಥನ ಪ್ರವೇಶ)

೩೮. ಕಂದ*

ಸಿತಬಿದಿಗೆಯ ಚಂದ್ರನ ಪೋ
ಲುತ ಸುಂದರ ವಿಗ್ರಹದೊಳು ವರ್ಧಿಸುತಿರಲು ।
ಪ್ರತಿವಿದ್ಯವ ಕಲಿತಿಹ ವರ
ಸುತರನ್ನೀಕ್ಷಿಸುತ ದಶರಥೇಂದ್ರಂ ಪೇಳ್ದಂ ॥ ೯೭

೩೯. ಕೇದಾರ ಗೌಳರಾಗ—ಜಂಪೆತಾಳ ೨

ದಶರಥ—
ಕಮಲದಳ । ನಯನ ರಾ । ಮ— । ಇನ ಕುಲ ।
ಕ್ಷಮಿತ ಸೌ । ಭಾಗ್ಯ ಧಾ । ಮ— ।

---

*ಸಿತಪಕ್ಷದೊಳಾ ತಾರಾ । ಪತಿ ಬೆಳೆವಂದದಲಿ ನೃಪನಗೇಹದೊಳಣುಗರ್ ।
ಅತಿವರ್ಧಿಸುತಲೆ ವಿದ್ಯಾ । ತತಿಯಂ ಕಲಿತಿರ್ಪ ಸುತರ ನೃಪಕರೆದೆಂದಂ (ಅ).

ಕಡು ಮುದ್ದು | ಮೊಗದ ಬಾ | ಲ— | ಎತ್ತೆತ್ತ |
ನಡೆದು ದಣಿ | ದೆಯೊ ಸುಶೀ | ಲ— || ೯೮

ರಾಮ—

ತಮ್ಮ ಲ | ಕ್ಷ್ಮಣನು ನಾ | ನೂ— | ಜೇಟೆಗೆ ಮ |
ಹನ್ನಮತೆ | ಯಲಿ ಪೋದೆ | ವು—

ದಶರಥ—

ಸಣ್ಣವರು | ವಿಪಿನದೊಳ | ಗೆ— | ಇಬ್ಬರೇ |
ಮಿಣ್ಣನೈ | ದುವರೆ ಹೀ | ಗೆ— || ೯೯

ರಾಮ—

ಆನೆ ಕುದು | ರೆಗಳು ಸಹಿ | ತ—ಆಯ್ದಿದೆವು |
ಕಾನನದಿ | ಕೇಳುತಾ | ತ— ||

ದಶರಥ—

ಸುರವಿರೋ | ಧಿಗಳು ಕಂ | ಡು— | ಸೈರಿಸರು |
ತರವಲ್ಲ | ಪೋಪುದಿಂ | ದು— || ೧೦೦

ಭರತ—

ಅರಿರಾಯ | ರೆಮ್ಮ ಕಂ | ಡು— | ನಡನಡುಗಿ |
ಚರಣಕೆರ | ಗಿದರು ಬಂ | ದು— |

ದಶರಥ—

ಇತ್ತ ಬಾ | ರಯ್ಯ ಭರ | ತ— | ತಿರಿಗಿಯಾ |
ಡುತ್ತಿರುವು | ದ್ಯಾವ ನೀ | ತ— || ೧೦೧

ಭರತ—

ಅನುಜ ಶ | ತ್ರುಹನು ನಾ | ನೂ— |
ಬಿಲು ವಿದ್ಯ |ವನು ಕಲಿಯು | ತಲೆ ಬಂದೆ | ವು— |

ದಶರಥ—

ತರವಲ್ಲ | ವಪ್ಪಗಳಿರ— | ವನದೊಳಗೆ |
ತಿರುಗದಿರಿ | ಬಾಲಕರಿ | ರ— || ೧೦೨

(ವಿಶ್ವಾಮಿತ್ರಮುನಿಯ ಪ್ರವೇಶ)

೪೦. ಮಾಲಿನೀ ವೃತ್ತ

ವರಸುತರೊಡನಾಭೂ ಪಾಲ ಮಾತಾಡುವಾಗ |
ಗುರು ಕುಶಿಕಜನಂದೈತಂದ ಮಾಂಗಲ್ಯದಿಂದ |
ಪರಮಪುರುಷನಂ ಕಂಡುತ್ತಮಾನಂದದಿಂದ |
ಹರಸಲು ಧರಣೀಶಂ ರಾಮು ತಾಂ ವಂದಿಸಲ್ಕೆ || ೧೦೩

೪೧. ವರಾಳಿರಾಗ—ಏಕತಾಳ (ವಿಲಂಬಿತಲಯ)

ದಶರಥ—

ಋಷಿತಿಲ | ಕಾಗ್ರಣಿ | ವಂದ | ನಂ— |
ಕುಶಿಕ ನಂ | ದನವರ | ಕೌಶಿಕನು | ನೇ— ಪಲ್ಲವಿ

ಸಾಕೇತ ಪು | ರ ನಿನ್ನ | ಪಾದಸಂಗ | ದಿ—|
ಸಕಲರ | ಘವಪರಿ | ಹರಿಸಿತ | ಲ್ಲ— || ೧೦೪ 8

ಕಂಗಳಿಗೆ ಮ | ಹಾ— | ಸುಖವಾ | ಯ್ತು—ಮುನಿ |
ಪುಂಗವ ಕೇ | ಳಯ್ಯ ನಿನ್ನ | ಕಂಡ ಮಾತ್ರ | ದಿ— || ೧೦೫

ಪೂರ್ವಜನ್ಮ । ದಿ—ನರ । ದೇವನ । ಲ್ಲಿ—।
ಸರ್ವೇಶ್ವ । ರನ ಭಜಿಸಿ । ಋಷಿಯಾ । ದೆ— ॥ ೧೦೬

ಧನ್ಯ ನಾನೀ । ಗ—ವರ । ಬ್ರಹ್ಮ ಋಷಿ । ಯೆ—।
ಎನ್ನನು । ದ್ಧರಿಸಯ್ಯ । ಮುನಿರಾ । ಯ— ॥ ೧೦೭

ಆನೆ ಕುದು । ರೆ—ಮುಂದಿ । ಸೇನೆ ಎ । ಲ್ಲ—ಈ ।
ಕ್ಷೋಣಿ ಕೊ । ಡಿರುವ ಭಾಗ್ಯ । ನಿನ್ನದ । ಯ್ಯ— ॥ ೧೦೮

ಅರುಹು ನಿ । ನ್ನ—ಮನ್ನ । ದಭಿಲಾಷೆಗ । ಳ—।
ತರಿಸಿ, ಕೊ । ಡುವೆನಯ್ಯ । ಹರುಷ ದಿಂ । ದ— ॥ ೧೦೯

ಕೌಶಿಕ—

ಅಜ ನಂ । ದನ ದಶ । ರಥನೃಪ । ತೇ—ನೀ ।
ರಜನಯನ । ಚಾರುಶೀಲ । ರಿಪುನುಥ । ನ— ॥ ಪಲ್ಲವಿ ॥

ಎಲೆ ಭೂಪ । ಏನೆಂಬೆ ಎ । ನ್ನಭಿಲಾಷೆಗ । ಳ— ।
ಸಲಿಸಿ ಕೊ । ಡುವೆನೆಂದು । ಪೇಳ್ದಿಯ । ಲ್ಲ—॥ ೧೧೦

ಪಿರಿದಾದ । ಯಾಗವನ್ನು । ಮಾಡ ಲೆಂ । ದು—ಸಕಲ ।
ಪರಿಸೋಪ । ಸ್ಕಾರಗಳ । ಮಾಡಿ ಬಂ । ದೆ—॥ ೧೧೧

ಮತಿವಂತ । ಪರಾಕ್ರಮಿ । ಯಾದ ಧೀರ । ನೀ—।
ನತಿಸತ್ಯ । ಸಂಧನಾ । ಗಿರುವೆಯ । ಲ್ಲ— ॥ ೧೧೨

ಸೋದರ ನಾ । ಗಿರುತಿಹ । ಲಕ್ಷ್ಮಣ । ನ್ನ—[1]ಕೂಡಿ ।
ನೋದದಿ । ರಾಮನ ಎ । ನ್ನೊಡನೆ ಕಳುಹಿ । ಸೊ[1] ॥ ೧೧೩

---

1 ಮುದದಿ ರಾಮನೊಡನೆ— ಕೂಡಿ ಕಳುಹಿಸೆ (ಓ)

### ೪೨. ಮತ್ತೇಭ

ದಶರಥ—

ವರಮೌನೀಶ್ವರನೆಂದ ಮಾತ ನರಪಂ ತಾ ಕೇಳು ತಲೆ ಚಿಂತಿಸಿ ।
ಹರ ಮಾಹೇಶ್ವರ ನೆನ್ನ ಪುತ್ರರುಗಳಂ ಬಿಟ್ಟೆಂತು ನಾನಿಲ್ಪೆನೋ ।

ತರುಣಪ್ರಾಯದ ಕೋಮಲಾಂಗ ರಿವರಂ ಕಂಡೇಯು ಕೌಶಿಕಮುನೇ ।
ತರವೇನ್ನೆ ನಿಮಗಿಂಥ ಕಾರ್ಯ ಗುರುವೇ ಕೇಳೆಂದ ಧಾತ್ರೀಶ್ವರಂ ॥ ೧೧೪

### ೪೩. ಭೈರವಿ ರಾಗ—ಜಂಪೆತಾಳ ೧

ಅಮಲಗುಣ । ಧಾಮ ಮುನಿ । ನಮಿಪೆನಾ । ನಿನಗೆ ॥ ಪಲ್ಲವಿ ॥

ಸ್ವಾಮಿನಿ । ಸ್ಪೃಹಮನದ । । ಮುನಿಯೆ ನಮಿ । ಸುವೆ ನಿನಗೆ ।
ರಾಮನಗ । ಲಿರುವಂಥ । ಮನಧೈರ್ಯ । ವಿಲ್ಲ ॥ ೧೧೫

ಷೋಡಷ ವ । ಯಸ್ಸಾಗ । ಲಿಲ್ಲೆನ್ನ । ಬಾಲರಿಗೆ ।
ಕೊಡೆನ್ನ । ಮಕ್ಕಳನು । ಕಳುಹಿ ಕೊಡ । ಲಾರೆ ॥ ೧೧೬

ರಕ್ಕಸರ । ಕೊಲುವಂಥ । ರಣಸಮ । ರ್ಥರೆ ಇವರು ।
ಧಕ್ಕಡಿಗ । ತನದ ಬಲು । ಕುಟಿಲರ । ಲ್ಲಯ್ಯ— ॥ ೧೧೭

ರಾಕ್ಷಸರ । ಯುದ್ಧಕ್ಕೆ । ಗಜತುರಗ । ಸಹಿತಾಗಿ
ಈಕ್ಷಣವೆ । ಬರುವೆ ವಿ । ಶ್ವಾಮಿತ್ರ । ಮುನಿಯೆ ॥ ೧೧೮

### ೪೪. ಕೇಕಯ ವೃತ್ತ

ದಶರಥ ನರಪಾಲ । ಪೇಳ್ದುದಂ ಕೇಳುತಾಗ ।
ಎಸೆವರುಣ ಮುಖಾಕ್ರಾಂತಂ । ತತ್ಸಭಾ [1]ಮಧ್ಯದೊಳಗೆ[1] ।

---

1 ಮಧ್ಯದೊಳೆ ಕಂಡು (ಓ)

ಉಸಿರಿಡುತ್ತಂ ಭುಗಿಭುಗಿಲೆನುತಾ | ಚಾರ್ಯರ್ನನ್ನೀಕ್ಷಿಸುತ್ತಂ |
ಕುಶಿಕಜ ನತಿ ಕೋಪಾ | ರೂಢಂ ತಾನಾಗಿರ್ದು ಪೇಳ್ದಂ || ೧೧೯

೪೫. ವರಾಳಿರಾಗ—ಏಕತಾಳ ೨ (ಮಧ್ಯಲಯ) ಮತ್ತು ಅಷ್ಟತಾಳ ೧

ಮಿತ್ರವಂಶ | ಜಾತನಾದ | ಭೂಮಿ ಪಾ | ಲ—ನೀನು |
ಸತ್ಯವಂತ | ನೆಂದು ನಂಬಿ | ಬಂದೆ ನ | ಲ್ಲ— || ೧೨೦

ಬಂದಕ್ಷಣದಿ | ಪೇಳ್ದ ಮಾತು | ನಿನ್ನೊಳಿ | ಲ್ಲ—ಈಗ |
ಒಂದೇ ನಿಮಿಷ | ಕಷ್ಟಮಾತು | ಬಂದಿತ | ಲ್ಲ— || ೧೨೧

ಸೂರ್ಯವಂಶ | ಭೂಪರು ಹಿಂ | ದೇನು ಯೋ | ಗ್ಯ—ನೀ ದು |
ಷ್ಕಾರ್ಯಕ್ಕೆ ಸೇ | ರಿದ ಮೇಲೆ | ಸಾಕು ಭಾ | ಗ್ಯ— || ೧೨೨

ಬಂದ ದಾರಿಗೆ | ಸುಂಕವಿಲ್ಲ | ಪೋಪೆ ಕೇ | ಳು—ನಿನ್ನ |
ಕಂದರನ್ನು | ಕೂಡಿ ಸುಖದಿ | ರಾಜ್ಯ ವಾ | ಳು— ||* ೧೨೩

೪೬. ಕಂದ

ಮುನಿ ಕುಶಿಕಾಖ್ಯಂ ಪೇಳಿದ
ಘನ ರೌದ್ರದ ಮಾತ ಕೇಳಿ ಪದ್ಮಜ ತನಯಂ |
ತನುಮಧ್ಯದೊಳಾಋಷಿಯಂ
ವಿನಯದಿ ಸಂತೈಸು ತಾಗ ಜನಪತಿಗೆಂದಂ || ೧೨೪

---

*ಬಂದತೆರದೊಳೀಗ ನಾನು ಹಿಂದೆ ಪೋಪೆ | ಸ್ಥಿರದಿ ರಾಜ್ಯವಾಳು ನೀನು ಧರಣಿಪಾಲ ||
ಸುರರಪುರಕೆ ಪೋಗಿ ಶಂಬರದೈತ್ಯನಾಗ | ಮುರಿದು ಬಂದೆನೆಂಬುವಂಥ ಗರ್ವವೀಗ ||
ಸರಿಯುಲರಿದು ಮಾರೀಚ ಸುಬಾಹು ಮುಖ್ಯ | ದುರುಳರೊಡನೆ ಕಾದಿಗೆಲುವುದಾವ
ಸೌಖ್ಯ || (ಓ)

## ೪೭. ಶಂಕರಾಭರಣ ರಾಗ—ಪಾಚಪೂತ, ಮಟ್ಟೆತಾಳ 2

ವಸಿಷ್ಠ—

ಅಜಕುಮಾರ | ಧೀರ ವೀರ | ಬಾಹುವಿಕ್ರ | ಮ— ||ಪಲ್ಲವಿ ||

ಸುಜನ ರಕ್ಷ | ಚಿಂತೆ ಬೇಡ | ಸೂರ್ಯವಂಶ | ಭೂಮಿಪಾಲ |
ಭಜಕರಿಷ್ಟ | ವೀವ ರಾಮು | ನನ್ನು ಕಳುಹಿ | ಸು || ೧೨೫

ಮುನ್ನ ಕೊಡುವೆ | ನೆಂದು ಹೇಳಿ | ಇನ್ನು ಇಲ್ಲ | ವೆಂದುಸುರಲು |
ಧನ್ಯಶೀಲ | ಧರ್ಮದ್ರೋಹ | ಬಾಹದಲ್ಲ | ಯ್ಯ— || ೧೨೬

ತನಯನಾದ | ರಾಮಚಂದ್ರ | [1]ನತಿಕಿಶೋರ[1] | ಮನುಜನಲ್ಲ |
ಮನದಿ ತಿಳಿಯೊ | ಈತನೀಗ | ಗರುಡವಾಹ | ನ || ೧೨೭

ಈ ತಪಸ್ವಿ | ಯನ್ನುನೆನೆಯ | ಲೆಲ್ಲ ಕಾರ್ಯ | ಸಿದ್ಧಿಯಹುದು |
ಭೀತಿ ಇಲ್ಲ | ದಂತೆ ರಾಮು | ನನ್ನು ಕಳುಹಿ | ಸೊ— || ೧೨೮

ದಶರಥ—

ತನಯ ಬಾರೊ | ರಾಮಚಂದ್ರ | ವನಜನೇತ್ರ | ಸುಗುಣಸಾಂದ್ರ |
ಮುನಿಕುಲೇಶ | ಕರೆಯಬಂದ | ಪೋಗಬೇಕೆ | ಲ— ||* ೧೨೯

ಋಷಿಕುಲಾರ್ಯ | ಕುಶಿಕತನಯ | ಅಸಮಧೈರ್ಯ | ಯಜ್ಞಕಾರ್ಯ |
ಎಸಗು ಬೇಗ | ಎನುತ ಸುತರ | ಬೀಳುಕೊಟ್ಟ | ನು— || ೧೩೦

---

1 ನಧಿಕಜೋರ (ಕಾ)

*ವನದೊಳಧಿಕ ರಜನಿಚರರ | ಅನುವರಿತು ಪ್ರಹರಿಸೊ ಧೀರ |
ಇನಕುಲಾಬ್ಧಿ ಸೋಮರಾಮ | ಚಿನುಮಯಾತ್ಮಕ ||
ತರುಣ ಬಾರೊ ಸುಗುಣ ಶೀಲ | ತರಣಿಸದೃಶ ಲಕ್ಷ್ಮಣಾಂಕ |
ಹಿರಿಯರಾಮದೇವನೊಡನೆ | ತೆರಳು ಬೇಗದಿ || (ಅ)

ಸೌರಾಷ್ಟ್ರ || ಮುನಿಪ ಲಾಲಿಸೋ — | ತನಯರೀರ್ವರಾ — |
ವನಕೆ ನಿನ್ನಯಾ — | ವಿನುತ ಯಾಗಕೇ — ||

**ಕೌಶಿಕ—**

ರಾಜ ತಿಲಕ । ಹರ್ಷಪುಳಕ । ರಾಜಿಯಾಗ । ಲಿಂದು ನಿನಗೆ ।
ರಾಜ ರಾಮ । ಲಕ್ಷ್ಮಣರನು । ಕೊಂಡುಪೋಪೆ । ನೈ ॥ ೧೩೧

(ದಶರಥ ವಸಿಷ್ಠರ ನಿಷ್ಕ್ರಾಮ)

೪೮. ಕಂದ

ಧರಣಿಪಗೆ ಪೇಳಿ ಮಕ್ಕಳ
ಕರುಣದಿ ಕರಕೊಂಡು ಬರುತ ಮುನಿಕುಲ ತಿಲಕಂ ।
ಪುರಮಂ ಕಳೆದೈದುತ ಬಾ
ಲರನೀಕ್ಷಿಸಿ ಮಾತನಾಡುತಿರ್ದಂ ಪಥದೊಳ್ ॥ ೧೩೨

೪೯. ನಾದನಾಮಕ್ರಿಯ—ಅಷ್ಟತಾಳ ೧

**ಕೌಶಿಕ—**

ಶ್ರೀರಾಮ । ಲಕ್ಷ್ಮಣ । ದೇವೇಶ । — ರಿರ ।
ಕೇಳಿನಾ । ಪೇಳುವ । ವಚನವ ।
ನೀರಜ । ಕೋಮಲ । ಕಾಯರೆ । — ಮುಂದೆ ।
ದಾರಿಪಾ । ಷಾಣವೆ ।ಗ್ಗಳವಯ್ಯ ॥ ೧೩೩

ಬಳಲಿಕೆ । ಯಾದರೆ । ಪೇಳಿರೋ । — ಮಂತ್ರ ।
ಗಳ ಉಪ । ದೇಶ ಮಾ । ಡುವೆ ನಿಂದು ।
ನಲವೇರು । ವದು ಹಸಿ । ವಾಗದು । — ಇನ ।
ಕುಲ ತಿಲ । ಕಾಗ್ರಣಿ । ಗಳಿರಿನ್ನು ॥ ೧೩೪

---

ಕೊಂಡುಪೋಹರೆ — । ಪುಂಡುದೈತ್ಯರಾ ।
ಕಂಡು ಬೆದರಲು — । ದ್ಧಂಡ ರಕ್ಷಿಸೋ — ॥
ಮುಂದೆ ಕ್ಷೇಮದೀ — । ತಂದು ಶೀಘ್ರದಿ — ।
ಕಂದರನ್ನು ನೀ — । ಪೊಂಪಿಸೆನ್ನೊಳು ॥

ರಾಮ—

ಕರುಣಿಸೊ । ಮುನಿರಾಯ । ಮಂತ್ರವ । — ನಿನ್ನ ।
ಕರುಣದಿ । ಬಾಧೆ ಗ । ಳಿಲ್ಲವೈ ।
ಗುರುವಾಗ । ಕೊಟ್ಟನು । ಮುದದಿಂದ । — ಇರೆ ।
ತರುಣನೋ । ಡಿದ ನೊಂದು । ಅಡವಿಯ ॥ ೧೩೫

ವೃತ್ತಾಂತ । ವೇನೀ ಕಾ । ಡಾವುದು । — ಮುನಿ ।
ಪೋತ್ತಮ । ಚಿತ್ರವಾ । ಗಿದೆ ಇದು ।

ಕೌಶಿಕ—

ಧೂರ್ತೆ ರ । ಕ್ಕಸಿಯೋರ್ವಳ್ । ತಾಟಕಿ । — ತಾಪ ।
ಸೋತ್ತಮ । ರನು ತಿಂಬಳ್ । ಘಾತಕಿ ॥ ೧೩೬

ರಾಮ—

ಏಕೆ ದಾ । ರಿಯ ಬಿಡ । ಳೇನಯ್ಯ । — ಮುನಿ ।
ಆಕೆ ಜೀ । ವಿಸು ವಳಿ । ನ್ನೇನಯ್ಯ ।

ಕೌಶಿಕ—

ಶ್ರೀ ಕರ । ರಾಮ ಅ । ವಳ ಕೊಂದು । — ಮುಂದೆ ।
ಲೋಕಕೆ । ಕೀರ್ತಿಯಾ । ಗಿರು ನಿಂದು ॥ ೧೩೭

ರಾಮ—

ಸ್ತ್ರೀಹತ್ಯೆ । ಮಾಡೆ ಲೋ । ಕದೊಳಿಲ್ಲ । — ಎನ್ನ ।
ದ್ರೋಹಿ ಎಂ । ಬರು ಎನ । ಗಿದು ಸಲ್ಲ ।

ಕೌಶಿಕ—

ನೀ ಹರಿ । ಯಲ್ಲವೆ ? । ಭಾರ್ಗವ । — ತಾಯ ।
ಪ್ರಾಹರಿ । ಸಿದ ಸುದ್ದಿ । ಯರಿಯೆಯ ॥ ೧೩೮

ರಾಮ—

ತಂದೆ ಸೇ । ಳಿದು ದಿಟ । ವಾಯ್ತಯ್ಯ । — ಈಗ ।
ಕೊಂದು ಕೊ । ಡುವೆ ತಾಳಿ । ಮುನಿರಾಯ ।
*ಇಂದೆನ್ನ । ಮೇಲೆ ದ । ಯವ ಮಾಡು । — ಎನು ।
ತಂದು ಸು । ರಲು ಆಶ್ಚ । ರ್ಯಗಳಾಯ್ತು ॥ ೧೩೯

೫೦. ಕೀ । ವೃತ್ತ ॥

ನಿಟಿ ನಿಟಿ ಲೆನುತಾಗ । ಘೋರ ರೂಪಿಂದ ಬೇಗ ।
ಅಟವಿಯೊಳಗಣ ಮಾರಿ । ಬಂದಳಡ್ಡೈಸಿ ದಾರಿ ।
ಅಟಕಟಸುತ ಭಾರಿ । ಕಣ್ಣು ಕೆಂಗಿಡಿಯು ಕಾರಿ ।
ಕುಟಿಲತನ ವಿಕಾರಿ । ತಾಟಕೀ ಎಂಬ ನಾರಿ ॥ ೧೪೦

(ಆರಭಟಿಯಲ್ಲಿ ತಾಟಕಿಯ ಸಂಭ್ರಮೋತ್ಪಾತದ ಪ್ರವೇಶ)

೫೧. ಪಂತುರಾವಳಿ—ಮಟ್ಟೆತಾಳ ೧

ತಾಟಕಿ—

ಆರೆ ಲೋ । ಮನುಜ ಇಲ್ಲಿ । ಅಂಜಿಕಿಲ್ಲ । ದೆ — ಇಂಥ ।
ಘೋರವಾದ । ಎನ್ನ ವನಕೆ । ಬಂದು ಸಿಕ್ಕಿ । ದೆ — ॥ ೧೪೧

ರಾಮ—

ಸಿಕ್ಕಿದೆ ನೆಂ । ದು ನೀ ಪೇಳ್ವ । ಪೌರುಷ ಸಾ । ಕೆ — ಕಳ್ಳ ।
ರಕ್ಕಸಿ ನೀ । ನ್ಯಾರೆ ಅತ್ತ । ಸಾರೆ ಲೆ ಜೋ । ಕೆ— ॥ ೧೪೨

---

*ಅಡಿದ ಮಾತಿನೊಳ್ ಧೂರ್ತೆಯ—ಬೇಗ । ಪ್ರಾಹರಿಸೋ ಜನರಕ್ಷಕ ।
ಬಿಡುಬಿಡು ಮುನಿಪಾಲ ಚಿಂತೆಯ—ಈ । ಕ್ಷಣದಿ ಕೊಲ್ಲುವೆ ಇಲ್ಲ ಸಂಶಯ । (ಕಾ)

ತಾಟಕಿ—

ತಾಟಕಿ ನಾ । ನೆನ್ನ ವನ । ನಿಮಗಿದುಸ । ಲ್ಲ — ಎನ್ನ ।
ಬೇಟೆಯ ಹು । ಲ್ಲಿಗಳಂತಾ । ದಿರಿ ನೀವೆ । ಲ್ಲ — ॥ ೧೪೩

ರಾಮ—

ನಿನ್ನ ಬೇಟೆ । ಎಂಬುದಾವ । ಗಣ್ಯ ಕಾಣೆ । ಲೆ — ಮೂಳಿ ।
ಕುನ್ನಿಯಂತೆ । ದಾರಿಯ ಬಿ । ಟ್ಟತ್ತ ಸಾರೆ । ಲೆ — ॥ ೧೪೪

ತಾಟಕಿ—

ಈಕ್ಷಣದಲಿ । ನಿನ್ನ ಮಾಂಸ । ಖಂಡವ ಬೇ । ಗ — ನಾ ।
ಭಕ್ಷಿಸುವೆ । ನೆನುತ ಪಲ್ಲ । ತೋರಿದಳಾ । ಗ — ॥ ೧೪೫

ರಾಮ—

ಹಲ್ಲ ಕಂಡ । ರಂಜುವನೇ । ರಾಮ ಕಾಣೆ । ಲೆ — ನಿ ।
ಮೆಲ್ಲರ ವಂ । ಶಕ್ಕೆ ಶೂಲ । ನಾಗಿರುವೆನೆ । ಲೆ — ॥ ೧೪೬

ತಾಟಕಿ—

[1]ಕಲ್ಲು ಮರದ । ಮಳೆಯ ಗರೆವೆ । ನೆನ್ನುತಲಂ । ದು — ಅಸುರೆ ।
ತಲ್ಲಣಿಸದೆ । ಸಿಡಿಲನಂತೆ । ಹೊಡೆದಳು ಬಂ । ದು — ॥[1] ೧೪೭

ಕೌಶಿಕ—

ರಾಘವಾ । ಅವಳ ನೀ ಮಾ । ತಾಡಿಸ ಬೇ । ಡ — ಅತಿ ।
ಬೇಗ ಕೊಂದು । ಕಾಲನ ವಶ । ಮಾಡೆಲೊ ಗಾ । ಢ — ॥ ೧೪೮

೫೨. ಮಾರವಿರಾಗ—ಮಟ್ಟೆತಾಳ ೪

ತಾಟಕಿ—

ಘೋರ । ರೂಪಿ । ನಸುರೆ, । ಮದ । ವೇರಿ । ಭುಜನ । ನೊದರಿ । ಸುತ್ತ ।
ಮೂರು । ಲೋಕ । ನುಂಗ । ಬಂದ । ಮಾರಿ । ಯಂತಿ । ರೆ — ॥

---

1 ಹುಲ್ಲು ಮನುಜ ನಿನಗಿದಿಷ್ಟು ಗರ್ವವ್ಯಾತಕೊ— । ಕಲ್ಲು ಮರನ ಮಳೆಯ ಗರೆವೆನೆಂದು ಪೊಯ್ದಳು ॥ (ಓ)

ಚೀರಿ । ಬಾಯ । ಬಿಟ್ಟು । ಹಲ್ಲ । ತೋರಿ । ಭಯವ । ಬೀರಿ । ಖುಷಿಗೆ ।
ಶೂರ । ರಾಮ । ಚಂದ್ರ । ಗಿಟ್ಟ । ಳೊಂದು । ಶೂಲ । ವ — ॥ ೧೪೯

ರಾಮ—

ಇಟ್ಟ । ಶೂಲ । ವನ್ನು । ರಾಮ । ತಟ್ಟಿ । ಬಿಲ್ಲ । ಕೊಪ್ಪಿ । ನಿಂದ ।
ದಿಟ್ಟೆ । ಗೊಂದು । ಶರವ । ನಾಗ । [1]ಬಿಟ್ಟ । ರೋಷ । ದಿ — ॥ ೧೫೦

ಕೆಟ್ಟ । ತೊತ್ತೆ । ಎನ್ನ । ಕೂಡೆ । ಇಷ್ಟು । ಶೌರ್ಯ । ವೇಕೆ । ನುತ್ತ ।
ಅಟ್ಟೆ । ಹಿಡಿದು । ಬಡಿದ । ಡೊಂದು । ರಟ್ಟಿ । ಬೀಳ । ಲು — ॥ ೧೫೧

ತಾಟಕಿ—

ಎತ್ತ । ಣಿಂದ । ಬಂದೆ । ನಿನ್ನ । ತುತ್ತ । ಮಾಳ್ಪೆ । ನೆನುತ । ಲಾಗ ।
ವೃತ್ಯ । ಬಾಯ । ಬಿಟ್ಟ । ವೋಲು । ಧೂರ್ತೆ । ಗರ್ಜಿ । ಸೆ — ॥ ೧೫೨

ರಾಮ—

ಚಿತ್ತ । ದಲ್ಲಿ । ರಾಮ । ಕ್ರೋಧ । ವೆತ್ತು । ಸುರರ । ಹವಿಯ । ನುಗುಳೆ ।
ನುತ್ತ । ಬಾಣ । ದಿಂದ । ಕೊರಳ । ಕತ್ತ ।ರಿಸಿದ । ನು — ॥ ೧೫೩

೫೩. ಶಾ । ವೃತ್ತ ॥

ಶ್ರೀರಾಮಂ ಪಿಡಿದೆಚ್ಚದಿವ್ಯಶರದಿಂದಾಧೂರ್ತೆಯುಮನಾಳ್ಗಳೊಳ್ ।
ಸೇರಲ್ ದಿವ್ಯಸುವೃಷ್ಟಿ ಮಂಗಳಮಯಂ ಭೋರೆಂದುದಾಕಾಶದಿ ।
ಸೌರಮ್ಯಾಂಗದಿನಾ ಸುರಾಂಗನೆಯರುಂ ಸಂಗೀತಮಂ ಪಾಡಲು ।
ಧೀರೋದಾರರನಾ ಕುಮಾರರುಗಳಂ ಮುನಿಕರೆದು ಮಾತಾಡಿದಂ ॥ ೧೫೪

---

1 ತಟ್ಟಿ ನಿಟ್ಟಿ ಕ್ರೋಧದಿ. (ಅ)

### ೫೪. ಕಾಂಭೋಜಿರಾಗ—ಮಟ್ಟೆತಾಳ ೧

ಕೌಶಿಕ—

ಇನಕುಲಾಬ್ಧಿ । ಸೋಮ ರಾಮ । ದನುಜ ವೈರಿ । ಸುಗುಣ ಧಾಮ ।
ವನಜನೇತ್ರ । ಬಹು ನಿಸ್ಸೀಮ । ಮಾತ ಕೇಳ । ಯ್ಯ — ॥ ೧೫೫

ಇಂದಿನಿರುಳು । ಇಲ್ಲಿ ನಾವು । ಚಂದದಿಂದ । ಕಳೆವ ದಿನವ ।
ಒಂದು ಕಂಟ । ಕಂಗಳಿಲ್ಲ । ಮುಂದೆ ಬಾಲ । ಕ — ॥ ೧೫೬

ಬ್ರಹ್ಮದಂಡ । ವಧಿಕ ಚಕ್ರ । ಧರ್ಮಪಾಶ । ಕಾಲನಸ್ತ್ರ ।
ನಿರ್ಮಲ ಸು । ವಾರುಣಾಸ್ತ್ರ । ಮಹೇಂದ್ರಾಸ್ತ್ರ । ವು — ॥ ೧೫೭

[1]ಕೊಡುವೆನೈದು[1] । ಅಸ್ತ್ರಗಳನು । ಪೊಡವಿಪಾಲ । ಕುವರ, ಇಂದ್ರ ।
ನೊಡನೆ ಕಾದ । ಲಾತ ಹಿಂದೆ । ನಡೆದು ಪೋಪ । ನು — ॥ ೧೫೮

### ೫೫. ಕಂದ

ಎನುತಾ ಮಂತ್ರಗಳೈದನು
ಮುನಿಪನವರ್ಗಿತ್ತನಂದು ಸಂತಸದಿಂದಂ ।
ವನಮಂ ಕಳೆದಾಶ್ರಮಕ್ಕೈ
ದಿನಿತಂ ರಘುಕುಲಜರಿಂಗೆ ನುಡಿಯುತ್ತಿರ್ದಂ ॥* ೧೫೯

### ೫೬. ಭೈರವಿ ರಾಗ—ಜಂಪೆತಾಳ ೧

—ಕೌಶಿಕ

ಶ್ರೀರಾಮ । ಕೇಳಯ್ಯ । ಆಶ್ರಮದ । ಸುತ್ತಲೂ ।
ಆರೈದು । ಕೊಳ್ಳಿರನು । ಜಾಗ್ರಜರು । ಸತತ ॥ ಪಲ್ಲವಿ

---

1 ಕೊಡುವೆ ನಾಲ್ಕು. (ಅ)

* ಎನುತಂ ಮಂತ್ರಾಸ್ತ್ರಗಳೈ । ದನು ಮುನಿಪತಿಗಿತ್ತ ಮರ್ಱದಿನದೊಳಗಂ ॥
ನಕುಲಜರು ಸಹಿತಾಶ್ರಮ । ಇವನು ತೀವ್ರದಿ ಸೇರ್ದ ಕುಶಿಕತನುಭವ ಮುದದಿಂ ॥ (ಆ)

ಎನುತ ಮಂತ್ರಗಳ ನಾಲ್ಕಂ । ಮುನಿತಿಲಕಂ ರಾಮಗಿತ್ತು . . . . ॥ (ಕಾ)

ಆರುದಿನ | ಪರ್ಯಂತ | ಈ ಋಷಿಗ | ಳೊಡಗೂಡಿ |
ಓರಂತೆ | ಯಾಗವನು | ಒಡನೆ ರಚಿ | ಸುವೆನು ||

ಶ್ರೀರಾಮ | ಲಕ್ಷ್ಮಣರೆ | ಅರಿಗಜ ನೃ | ಗೇಂದ್ರರಿರ |
ಶೂರರೇ | ಕೇಳಿರೆ | ನ್ನಯ ವಾಕ್ಯ | ಗಳನು || ೧೬೦

ಏಕಭಾ | ವದಿ ತಂದ | ನೇಕ ವ | ಸ್ತುವ ನಿಂದು |
ಶ್ರೀಕರದಿ | ಯಜ್ಞವನು | ಮಾಡುವೆನು | ನಾನು — ||

ರಾಮು—

ಆ ಕುಹಾ | ರರು ಬರಲು | ಬೇಕಾದ | ಅಸ್ತ್ರದಿಂ |
ನಾ ಕೊಂದು | ಕೊಡುವೆನೈ | ಕ್ಷಣದಿ ಮುನಿ | ರಾಯ — || ೧೬೧

ವೀರ ಲ | ಕ್ಷ್ಮಣ ಸಮರ | ಶೂರ ಆ | ದಿಕ್ಕಿನೊಳು |
ಸೇರಿ ಧನು | ಶರವಿಡಿದು | ಭೂರಿ ರಾ | ಕ್ಷಸರ ||

ಸಾರಿಯಲಿ | ತ್ರಿಶಿರನನು | ದೂರ ಸೇ | ರಿಸು ಧೀರ |
ಚಾರುಗುಣ | ಗಂಭೀರ | ಮಾರನಾ | ಕಾರ || ೧೬೨

೫೭. ಕೇ | ವೃತ್ತ ||

[1]ಅನುಜನೊಡನೆ ರಾಮು | ಮಾತನಾಡುತ್ತ ನಿಲಲು |
ದನುಜರು ಭರದಿಂದೈ | ತಂದು ತೂರಾಡುತಿರಲು |
ಮುನಿವರರು ರಾಮು ರಾಮು | ಎಂದರಾ ಭೀತಿಯಿಂದ |
ಅನುವರಿತು ರಾಕ್ಷಸರ ಶ್ರೀ | ರಾಮು ಮಾರಾಂತುನಿಂದ[1] || ೧೬೩

1 ಅನುಜಾಸಹಿತಾರಾಮಂ | ಮುನಿಮುಖನಂ ಸಲಹುತಿರುವ ವೇಳ್ಯದೊಳಾಗಂ |
ಘನರೋಷದೊಳಾರ್ಭಟಿಸುತ | ದನುಜರು ಬರೆ ಕಂಡು ರಾಮು ಮಿಗೆ ಮಾರಾಂತಂ ||

(ಮಾರೀಚ ರಾಕ್ಷಸನ ಪ್ರವೇಶ)

೫೮. ಕೇದಾರಗೌಳರಾಗ—ಮಟ್ಟೆತಾಳ ೨

ಮಾರೀಚ—

ಆರೆಲೋ ಮನು । ಜಾ, ಬಂದವ । ನಾರೆಲೋ ಮನು । ಜಾ ॥ ಪಲ್ಲವಿ

ವನದೊಳಧಿಕ । ರಜನಿಚರರ । ಹೆಣಗಿ ಯುದ್ಧ । ರಂಗದಲ್ಲಿ ।
ಕಣನ ಜೈಸ । ಲೆಂದು ದೃಢದ । ಮನವ ಮಾಡಿ । ಇದಿರು ನಿಂತ ।
ಮನುಜ ನಿನ್ನ । ಪೆಸರ ದೇನೆ । ಲಾ — ಸಂ । ಗ್ರಾಮ ಬಿಟ್ಟು ।
ವಿನಯದಿಂದ । ಪಿಂತೆ ಸಾರೆ । ಲಾ — ॥ ೧೬೪

ರಾಮ—

ಮನುಜ ನಾದ । ದಶರಥನ್ನ । ತನಯ ರಾಮ । ನೆಂಬ ನಾಮ ।
ಮುನಿಯ ಯಾಗ । ವನ್ನು ಕಾಯ್ವ । ರಣ ಸಮರ್ಥ । ನೆನ್ನ ಬರಿದೆ ।
ಕೆಣಕಿ ನೀನು । ಸಾಯಬೇಡೆ । ಲಾ — ಶರ । ಣಾಗಿ ಬೇಗ ।
ಗುಣದಿ ಕಲಹ । ಬಿಟ್ಟು ಪೋಗೆ । ಲಾ — ॥ ೧೬೫

ಮಾರೀಚ—

ಮನುಜನಾದ । ದಶರಥನ್ನ । ತನಯನೆಂಬ । ಹೆಮ್ಮೆಯಿಂದ ।
ಮುನಿಯ ಮಾತ । ಕೇಳಿ ಬಂದು । ಎನಗೆ ಗ್ರಾಸ । ವಾದೆ ಭಳಿರೆ ।
ತನುವಿನಾಸೆ । ಬಿಟ್ಟು ಕಳೆ ಎ । ಲಾ — ಬೆಂ । ಬಲಕೆ ಬೇಗ ।
ಜನಕನನ್ನು । ಕರೆಸಿಕೊಳ್ಳೆ । ಲಾ — ॥ ~~೧೨೬~~ ೧೬೬

ರಾಮ—

ಎಷ್ಟು ಮಾತ । ದೇತ ಕೆಂದು । ದುಷ್ಟಗೊಂದು । ಶರವನೆಸೆದು ।
ನೆಟ್ಟನಾ ಮಾ । ರೀಚನನ್ನು । ಇಟ್ಟನಾ ಸ । ಮುದ್ರದಲ್ಲಿ ।
ಮತ್ತೆ ಒಬ್ಬ । ದನುಜ ಬಂದ । ನು — ಶ್ರೀ । ರಾಮನೊಡನೆ ।
ಉತ್ತರವನು । ಹೇಳಿ ನಿಂದ । ನು — ॥ ೧೬೭

(ಅಬ್ಬರತಾಳದಲ್ಲಿ ಸುಬಾಹು ರಾಕ್ಷಸನ ಪ್ರವೇಶ)

ಸುಬಾಹು—

ಆರೆಲೋ ಸು । ಬಾಹು ನಾ ಸು । [1]ರಾರಿಯನ್ನು । ಗೆಲುವನೆಂಬ ।
ವೀರರನ್ನು । ಬಡಿದು ತಿಂಬ । ಮಾರಿ, ಬೇಗ । ಅಸ್ತ್ರಸಾರು ।
ರಾಮನೆಂಬ । ಪೆಸರು ನಿಲ್ಲ । ದು — । ಎನ್ನ ಕೂಡೆ ।
ರಾಮನೆಂಬ । ಗರ್ವ ಸಲ್ಲ । ದು — ॥ ೧೬೮

ರಾಮ—

ಎನ್ನ ತಿಂಬ । ಮಾರಿ ಯಾರೊ । ನಿನ್ನ ಕೊರಳ । ಕೊಯ್ವೆನೀಗ ।
ಕುನ್ನಿ ಸಾಯ । ಬೇಡ ಹೋಗು । ಇನ್ನು ಬಾಣ । ಎಸೆವೆ ನೋಡು ।
ಕೇಳು ಪಾಪಿ । ನೀಚ ರಾಕ್ಷ । ಸ — । ನಿನ್ನ ಕೊಂದ ।
ಮೇಲೆ ಎನಗೆ । ಪರಮ ಸಂತ । ಸ — ॥ ೧೬೯

ಸುಬಾಹು—

ಎನಗೆ ಬಾಣ । ಎಸೆವೆನೆಂದು । ಮನುಜ ಪೇಳ್ವೆ । ಸಾಕು ನಿನ್ನ ।
ಕ್ಷಣಕೆ ಕೊರಳ । ನರಿದು ಈ । ಧರಣಿಯೊಳಗೆ । ಚೆಲ್ವೆನೀಗ ।
ರಾಮನೆಂಬ । ಗರ್ವ ಸಲ್ಲ । ದು — । ಎನ್ನ ಕೂಡೆ ।
ರಾಮನೆಂಬ । ಪೆಸರು ನಿಲ್ಲ । ದು — ॥ ೧೭೦

ರಾಮ—

ಧರಣಿಯಲ್ಲಿ । ಎನ್ನ ಕೊರಳ । ನರಿವ ಧೀರ । ನಹುದೆನುತ್ತ ।
ಸರಳ ಬಿಟ್ಟು । ರಕ್ಕಸನ್ನ । ಕೊರಳ ಕತ್ತ । ರಿಸಿದನಾಗ ।
ಮುನಿಗಳೆಲ್ಲ । ಜಯಜಯೆಂದ । ರು — । ಯಜ್ಞದಲ್ಲಿ ।
ದನುಜ ವೈರಿ । ಜಯ ಜಯೆಂದ । ರು — ॥ ೧೭೧

---

1 ಪುರಾರಿಯನ್ನು (ಓ)

೫೯. ಶಾ । ವೃತ್ತ ॥

ಘೋರಾಕಾರಸುಬಾಹು ಬೀಳೆ ಮುನಿಪಂ ಸಂತೋಷಮಂ ತಾಳಿದಂ ।
ಭೋರೆಂದೆದ್ದು ಸುಘೋಷವೇದರವದಿಂ ತಾ ಯಜ್ಞಮಂ ನಡೆಸಿದಂ ।
ಶ್ರೀರಾಮಂಗೆ ಸುರೇಂದ್ರಮುಖ್ಯರೆರಗುತ್ತಾನಂದದಿಂ ವಂದಿಸಲ್ ।
ಧೀರಂಗಾ ಮುನಿರಾಜನಮೌಳಿ ಜನಕಂ ಲೇಖಾರ್ಥಮಂ ಕಳುಹಿದಂ ॥ ೧೭೨

(ಜನಕರಾಜನ ದೂತನು ಪತ್ರವನ್ನು ತಂದು ರಾಮನ ಕೈಯಲ್ಲಿ ಕೊಡುತ್ತಾನೆ)

೬೦. ಘಂಟಾರವರಾಗ—ಜಂಪೆತಾಳ ೧

ರಾಮ—

ಜನಕ ಕಳು । ಹಿದ ದೂತ । ವಿನಯದಿಂ । [1]ಬರ ಲಿತ್ತ[1] ।
ಮುನಿಕೌಶಿ । ಕಗೆ ಕೊಟ್ಟ । ನಾಲೇಖ । ನವನು ॥ ೧೭೩

ಕೌಶಿಕ—

ಓಲೆಯನು । ಕಂಡು ಮುನಿ । ಪಾಲ ತಾ । ಹರ್ಷದಲಿ ।
ಶ್ರೀಲೋಲ । ರಾಮು [2]ನೋಡ । ನಿದೆ ಬಂದೆ[2] । ಎಂದ ॥ ೧೭೪

೬೧. ಕಂದ

ಇಂತೆಂದಾ ಜನಕನ ಚರ
ನಂ ತಳುವದೆ ಕಳುಹಿ ಮೌನಿಕುಲ ತಿಲಕಂ ಶ್ರೀ ।
ಕಾಂತಂ [3]ರಾಮಂ ತನ್ನಯ
ಮುಂತೆಸೆದಿರೆ[3] ನುಡಿಯುತಿರ್ದ ವಿಶ್ವಾಮಿತ್ರಂ ॥ ೧೭೫

---

1 ಬರಲಿತ್ತ, (ಅ) 2 ನಾ । ನಿದೆ ಬಂದೆ (ಓ) 3 ಶ್ರೀಕಾಂತನಾದ ರಾಮಂ ತಾ । ಮುಂತೆಸೆದಿರೆ (ಓ).

೬೨. ಪಂತುವರಾಳಿ— ಮಟ್ಟೆತಾಳ ೧

ಕಾಶಿಕ—

ರಾಮ ಇನಕು । ಲೇಶ ಬಾಲ । ವನಜಲೋಚ । ನ — ।
ಇನ್ನಯೋಧ್ಯಾ । ಪುರಕೆ ನಾವು । ಪೋಗ ಬೇಕೆ । ಲೈ — ॥ ೧೭೬

ಜನಕರಾಜ । ಧಾನಿಯಲ್ಲಿ । ಒಂದು ಯಜ್ಞ । ವು — ।
ಮದನದಹನ । ಧನುವ ನೋಡ । ಬಹುದು ಬಾಲ । ಕ — ॥ ೧೭೭

ತ್ವರಿತದಲ್ಲಿ । ಮುನಿಗಳೊಡನೆ । ನಾವು ಪೋಗು । ವ — ।
ಭರದೊಳಗ್ರ । ಗಂಗೆಯನ್ನು । ಎಲ್ಲದಾಟು । ವ — ॥ ೧೭೮

೬೩. ಕೇ. । ವೃತ್ತ ॥

ಮುನಿವರ ನಿಂತೆಂದಾ । ಮಾತ್ರದೊಳ್ ಗಂಗೆಯಲ್ಲಿ ।
ಘನ ಜಪತಪದಿಂದ । ಇರುತಿರ್ದರಾ ಸಮಯದೊಳ್ ।
ಜನಪ ಸುಮತಿರಾಜಂ । [1]ಬಂದವರ ಕಂಡು ಧೀರಂ ।
ವಿನುತರು[1] ನಮಿಸುವಾಗ । [2]ಮುನಿಗೆ[2] ತಾ ಪೇಳ್ದ ನಿಂತು ॥* ೧೭೯

(ಸುಮತಿ ರಾಜನ ಪ್ರವೇಶ)

೬೪. ಕಾಂಭೋಜಿ ರಾಗ—ಚೌತಾಳ, ತಿತ್ತಿತ್ತೈ

ಸುಮತಿ—

ವಿಶ್ವಾಮಿ । ತ್ರ ಮು[3] । ನೀಂದ್ರ । ವರಗುಣ । ಸಾಂ — । ದ್ರ[3] — ॥ ಪಲ್ಲವಿ

---

1 ಬಂದು ಕಂಡು ಸುಧೀರ ಎನುತಂ (ಓ). 2 ಮೌನಿಯೊಳ್ (ಓ).

*(ಈ ವೃತ್ತಕ್ಕೆ ಬದಲು) ಕಂದ ॥ ಮುನಿವರನೆಂದುದ ಕೇಳುತ । ಘನತರ ಜಪತಪವ ರಚಿಸಿ ಗಂಗಾನದಿಯಂ । ವಿನಯದಿ ದಾಟುತ ಸುಮತೀ । ಜನಪನ ಗ್ರಹ ಸಾರ ಲೆಂದನವ ಮುನಿಯೊಡನೆ ॥ (ಓ)

3 ತಾಪಸೇಂದ್ರ–ಸ । ದ್ಗುಣ ಸಾಂದ್ರ. (ಓ)

ಇಂದು ನ । ಮ್ಮಯ । ಪುರಕೆ । ಬಂದ ಕಾ । ರಣ । ದಿಂದಾ ।
ನಂದ ವಾ । ಯಿತು । ನಮಗೆ । ವಂದಿಸು । ವೆನು । ನಿಮಗೆ ೧೮೦

ಚೆಲುವ ಬಾ । ಲರಿ । ದಾರು । ಜಲ ರುಹಾ । ಕ್ಷರು । ಮತ್ತೆ ।
ಬಲವೈರಿ । ಸಮ । ಬಲರು । ಕೋದಂಡ । ಧರರಾ । ಗಿಹರು ॥ ೧೮೧

ಕೌಶಿಕ—

ಸುಮತಿಭೂ । ಪತೇ । ಕೇಳು । ಸದ್ಗು ಣ । ಧಾ — । ಮ — ॥ ಪಲ್ಲವಿ
ದಶರಥ । ಸುತ । ರಾಮು । ಅಸಮ ಸ । ದ್ಗುಣ । ಧಾಮು ।
ರಸಿಕ ಲ । ಕ್ಷ್ಮಣ । ಕಾಣೊ । [1]ಬಿಸರು ಹಾ । ಕ್ಷರು । ಜಾಣ[1] ॥ ೧೮೨

ಎನ್ನ ಯಾ । ಗ ರ । ಕ್ಷಣೆಗೆ । ಮನ್ನಿಸಿ । ಕರೆ । ತಂದೆ ।
ಪುಣ್ಯಜ । ನ ಸು । ಬಾಹು । ವನ್ನು ಕೊಂ । ದರಿ । ವರು ॥ ೧೮೩

೭೫. ಕೇ । ವೃತ್ತ ॥

[2]ವರಮುನಿ ಪೇಳೆ ಸುಮತಿ । ರಾಜ ಸಂತೋಷದಿಂದ ।
ಚರಣಕೆ ನಮಿಸಿ ಪೂಜೆ । ಮಾಡಿ ಸಲ್ಲಿಸುತ ನಿಲಲು ।
ಪರಮಪುರುಷನಾದ । ರಾಮನಂ[3] ಕೂಡಿ ಬರಲು ।
ಹರುಷದಿ ಮುಂದಿರ್ಪ । ವನಮನುಂ ತೋರುತಿರ್ದಂ[3] ॥ ೧೮೪

೭೬. ಘಂಟಾರವ—ಜಂಪೆ ತಾಳ ೧

ರಾಮು—

ಮುನಿಕುಲೋ । ತ್ತಮ ಕೇಳು । ವನದೊಳ । ತ್ಯಧಿಕವಿದು ।
ಘನತರಾ । ಶ್ರಮ ವಾವು । ದೆನಗೆ ಪೇ । ಳಯ್ಯ ॥ ೧೮೫

---

1 ಜಾಷ್ಪ ಕುಲಜರಿವರು. (ಅ) 2 ವಚನ॥ ಇತೆಂದು ಸುಮತಿರಾಜನಂ ಬೀಳ್ಕೊಂಡು ಶ್ರೀಕಾಂತನಾಗಿಹ ರಾಮು ಮುಂದೆಸೆದಿರುವ ವನಮಂ ನೋಡಿ ಕೈಮುಗಿದು ಮುನಿಯೊಡನೆ ಕೇಳ್ದನದಂತೆನೆ—(ಅ)

3 ನೋಡಿ ಬರಲಾ । ಹರುಷದಿ ಮುನೀಶ್ವರಂ ವನಮಂ । ತೋರಲ್
ಶ್ರೀರಾಮುನೆಂದಂ ॥

—ಕೌಶಿಕ

ಕೇಳು ರಾ । ಘವ ವೀರ । ಹೇಳುವೆನು । ನಿನಗೀಗ ।
ಶ್ರೀಲೋಲ । ಈ ವನದ । ಮೂಲ ಸಂ । ಗತಿಯ ॥ ೧೮೬

ಮುನ್ನ ಗೌ । ತಮಮುನಿಪ । ತನ್ನರಸಿ । ಯೊಂದಾಗಿ ।
ಚೆನ್ನಾಗಿ । ಇಲ್ಲಿರ್ದ । ರಧಿಕ ವಿಭ । ವದಲಿ ॥ ೧೮೭

ಸುರಪನೈ । ತಂದು ಮುನಿ । ವರ ನಿಲ್ಲ । ದಿಹ ಸಮಯ ।
ವರಿತಹ । ಲ್ಯೆಯ ರಮಿಸಿ । ದನು ಕಾಮು । ಕದಲಿ ॥ ೧೮೮

ಮುತ್ತಹ । ಲ್ಯೆಗೆ ಶಾಪ । ವಿತ್ತಡರೆ । ಯಾದಳಿವ ।
ಳುತ್ತಮ ಪು । ರುಷ ಕೇಳು । ಚಿತ್ತಾವ । ಧಾನ ॥ ೧೮೯

ಇಂದು ನಿ । ನ್ನಯ ಪಾದ । ಸೋಂಕಲವ । ಳೇಳುವಳು ।
ಎಂದಡಾ । ರಾಮುಚರ । ಣ ಸ್ಪರ್ಶ । ವಾಗೆ ॥ ೧೯೦

(ತೆರೆಯಲ್ಲಿ ಅಹಲ್ಯೆಯ ಪ್ರವೇಶ)

—ಅಹಲ್ಯೆ

ಶ್ರೀ ಮುಕುಂ । ದ ಮುರಾರಿ । ದಾಮೋದ । ರಾ ಎನುತ ।
ಭಾಮಿನಿಯ । ಹಲ್ಯೆಬಂ । ದೆರಗಿದಳು । ಪದಕೆ ॥ ೧೯೧

ಇಂತೆಂದು । ಹಲ ತೆರದಿ । ಕಾಂತೆ ಭಜಿ । ಸುತ್ತಿರಲು ।
ಸಂತಸದಿ । ಗೌತಮ ಮು । ನೀಂದ್ರ ನಡೆ । ತಂದ ॥ ೧೯೨

(ಗೌತಮ ಮುನಿಯ ಪ್ರವೇಶ)

೬೭. ಯೆರುಕಲ ಕಾಂಬೋಜಿ—ಏಕತಾಳ ೪

ಗೌತಮ—

ಅಚ್ಯುತಾನಂ । ತಾ ಗೋವಿಂದಾ । ನಾರಾಯಣಾ । ವಾಸುದೇವಾ ।
ಸಚ್ಚಿದಾ ನಂ । ದಾ ಮುಕುಂದ । ಸಲಹೊ ನೀ ನಿಂ । ದು — ॥ ಪಲ್ಲವಿ

ಈ ಕಲ್ಲಾಗಿ । ಬಿದ್ದ ಹಲ್ಯೆ । ನಿನ್ನ ಪಾದ । ಸಂಗದಿಂದ ।
ಶೋಕಹೀನೆ । ಯಾಗಿ ಬಂದ । ಳೆನ್ನ ಭಾರ್ಯೆ । ಯು — ॥

ಶ್ರೀಕಮಲೆ । ಯರಸ ನೀನು । ಲೋಕೇಶ [1]ಇ । ನ್ನಾಕೆಯನ್ನು[1] ।
ನಾ ಕರೆದು । ಕೊಂಡುಪೋಪೆ । ಹೇ ಕೃಪಾನಿ । ಧೇ — ॥ ೧೯೩

ಇನ್ನು ವಿಶ್ವಾ । ಮಿತ್ರಮುನಿ । ಯನ್ನು ಕೂಡಿ । ಕೊಂಡು ಬೇಗ ।
ತನ್ನಗರಕೆ । ಹೋಗಿರೆಂದು । ಬೀಳುಕೊಟ್ಟ । ನು — ॥ ೧೯೪

(ರಂಗಸ್ಥಲದಿಂದ ಎಲ್ಲರೂ ಹೊರಟು ಹೋಗುವರು. ಆಮೇಲೆ ಜನಕರಾಯನು ಪ್ರವೇಶಿಸಿ ಸೀತಾದೇವಿಯ ಸ್ವಯಂವರಸನ್ನಾಹದ ಕುರಿತು ಪ್ರಸ್ತಾವಿಸುತ್ತಾನೆ. ಈ ಭಾಗದಲ್ಲಿರುವ ವಚನವು ಗ್ರಂಥಪಾತದಿಂದಲಾಗಿ ನಾಶವಾಗಿರುತ್ತದೆ.)

೬೪. ಕೇ । ವೃತ್ತ ॥[2]*

ವನಿತೆಯ ಕರಕೊಂಡು । ಗೌತಮ ಮುನಿ ನಿಲಲತ್ತ ।
ಇನ ಕುಲ ಜರು ಸಹಿತ । ವರ ವಿಶ್ವಾಮಿತ್ರರಂದು ।
ಜನಕನಗರಕ್ಕೈ । ತಂದರು ಸಂತೋಷದಿಂದ ।
[3]ಜನಪನಿವರಂ ನೋಡಿ । ಮೌನಿಯೊಳ್ ಪೇಳ್ದನಂದು[3]* ॥ ೧೯೫

೬೫, [4]ಕಾಂಭೋಜಿರಾಗ—ಜಂಪೆತಾಳ ೩

ಜನಕ—

[5]ಸಾಧು ಶೀ । ಲಾಗ್ರಣಿಯೆ । ಸಾಧು ಶೀ । ಲ[5] — ॥ ಪಲ್ಲವಿ

---

1 ಎನ್ನರಸಿಯನ್ನು (ಓ)

2 *ಕಂದ ॥ ವನಿತೆಯು ಸಹಿತಾ ಗೌತಮ । ಮುನಿಪೋಗಲ್ಕತ್ತ ಕುಶಿಕತನುಭವನೊಡನಂ । ಇನಕುಲಜರು ಮಿಥಿಲೆಗೆ ಬರ । ಲನುಪಮರಂ ಕಂಡು ಪೇಳ್ದ ಜನಕನೃಪಾಲಂ ॥ (ಅ)

3 ಜನಕ ನಮಿಸುವಾಗ । ಮುನಿಯೊಳ್ ಪೇಳ್ದನಂದು (ಓ) 4 ದೇಶಿ (ಓ)

5 ಹೇ ದಯಾನಿಧಿಯೆ ವಿ । ಶ್ವಾಮಿತ್ರ ಮುನಿಯೇ । ಸಾಧು ಶೀಲಾಗ್ರಣಿಯೆ ಸಕಲ ಗುಣಮಣಿಯೆ ॥ (ಅ)

ವರಮುನಿಪ । ತವಚರಣ । ದರುಶನದ । ಫಲದೊಳಘ ।
ಹರಿದು ಹೋ । ಯಿತನೇಕ । ತಾಪ ವಿಂ । ದೀಗ— ॥

ಚರಣ ನಿ । ರ್ಮಲ ಕರವು । ಪರಮಮಂ । ಗಲ ವಾಯ್ತು ।
ಧರೆಯೊಳಗೆ । ನಾಥನ್ಯ । ನಾದೆನ । ಲ್ಲೊ — । ಸ್ವಾಮಿ ॥ ೧೯೬

ಬಾಲ ರಿವ । ರಾರು ಮುನಿ । ಬಲಸ್ಪೈರಿ । ಸಮಧೀರ ।
ಶೀಲಸಂ । ಪನ್ನರ್‍ಪೈ । ಕೋದಂಡ । ಧರರು ॥

ಬಾಲರವಿ । ಕೋಟಿ ತೇ । ಜಃ ಪುಂಜ । ರಾಗಿಹರು ।
ಪಾಲಿಸುವ । ರಾವ ಜನ । ಜಾಲವ । ನ್ನೀಗ ॥ ೧೯೭

ಕೌಶಿಕ—

ನೃಪತಿ ಮೌ । ಲೇ — ಜನಕ । ನೃಪತಿ ಮೌ । ಲೇ — ॥ ಪಲ್ಲವಿ

ದಶರಥನ । ಸುತರಿವರು । ವಸುಮತೀ । ಪತಿ ಕೇಳು ।
ರಸಿಕರಿವ । ರೆನ್ನ ಯ । ಜ್ಞದ ರಕ್ಷೆ । ಗಾಗಿ ।
ಕುಶಲದಿಂ । ದಾಂ ಪೋಗಿ । ಕರೆತಂದ । ಕಾರಣದಿ ।
ನಿಶಿಚರರ । ಕೊಂದು ಯಾ । ಗವ ಕಾಯ್ದ । ರಾಮ ॥ ೧೯೮

ಬರುವಾಗ । ಸುಮತಿಭೂ । ಪಾಲ ಕಂ । ಡನು ಮತ್ತೆ ।
ವರ ಗೌತ । ಮನ ಆಶ್ರ । ಮಕೆ ಬಂದೆ । ವು — ।
ಅರೆಯಾಗಿ । ಬಿದ್ದಹ । ಲ್ಯೆಗೆ ವಿಶಾ । ಪವ ಮಾಡಿ ।
ಕರೆದು ಗೌ । ತಮಗಿತ್ತು । ಬಂದನೀ । ಧೀರ ॥ ೧೯೯

## ೭೦. ಕೇ । ವೃತ್ತ ॥

ಜನಕ—

ಕುತಿಕಸುತನ ಮಾತಂ । ಕೇಳುತಾ ರಾಜಮೌಳಿ ।
ದಶರಥಸುತರಿಂಗೆ । ವಂದಿಸುತ್ತೆಂದನಾಗ ।

ಋಷಿತಿಲಕನೆ ನೋಡಾ । ಹಿಂದೆ ಪುತ್ರಾರ್ಥಿಯಾಗಿ ।
ಎಸಗಿದೆ ಕ್ರತುವೊಂದಾ । ಶ್ಚರ್ಯವಂ ಕಾಣಲಾಯ್ತು ॥ ೨೦೦

೭೧. ಭೈರವಿರಾಗ—ಜಂಪೆತಾಳ ೧

ಧರಣಿಯನು । ಶೋಧಿಸು । ತ್ತಿರಲು ಕ । ನ್ಯಾರತ್ನ ।
ದೊರಕಲಾ । ಸುರಮುನಿಪ । ಬಂದು ಮುದ । ದಿಂದ ॥

ನರಕುವರಿ । ಸಿರಿದೇವಿ । ಹರಿಯೆ ಪತಿ । ಯಾಗುವನು ।
ಅರಿತು ಸಲ । ಹೋ ಎಂದು । ಮುನಿ ಪೋದ । ನಂದು ॥ ೨೦೧

ಇರಲು ಯ । ವ್ವನ ದೋರೆ । [1]ಸಿರಿಸೀತೆ । ಗಾ ಸ್ವಯಂ ।
ವರ ಮಾಡ । ಲೆಂದು[1] ನಾ । ಪುರವ ರಚಿ । ಸುವೆನು ॥

ದೊರೆ ದೊರೆ ಗ । ಳೆಲ್ಲರಿಗೆ । ಬರೆಸಿದೆನು । ಓಲೆಯನು ।
ಕರೆಯಲ । ಟ್ಟಿದೆ ನಿಮ್ಮ । ಕರುಣಿಸೈ । ನಮ್ಮ ॥ ೨೦೨

೭೨. ಕಂದ[2]

ಇಂತೆಂದು ಜನಕರಾಯಂ
ಸಂತೋಷದಿ ಪೇಳುತಿರಲು ದೇಶಾಧಿಪರ ।
ತಿಂಥಿಣಿ ಬರಲಾ ಸಮಯದೊ
ಳಂತರವರಿತವರನರನು ಮನ್ನಿಸುತಿರ್ದಂ ॥ ೨೦೩

---

1 ಸಿರಿಗೆ ಸೀತಾ ಸ್ವಯಂ । ವರವ ಮಾಡುವೆನೆಂದು । (ಓ)

2 ವಚನ ॥ ಇಂತೆಂದು ಜನಕರಾಯನು ಸಂತೋಷದಿಂದ ಪೇಳುತಿರಲು ದೇಶಾಧೀಶ್ವರರ ತಿಂಥಿಣಿಯು ಬರಲಾ ಸಮಯದೊಳ್ ತರವರಿತೆಲ್ಲರಂ ಮನ್ನಿಸುತಿರ್ದಂ ॥ (ಓ)

ಕಂದ ॥ ಈ ಪರಿ ಜನಕ ನೃಪಾಲಂ । ತಾಪಸವಾರ್ತೆಯನು ಮನ್ನಿಸುತ್ತಿರಲಾಗಂ ।
ಭೂಪರು ನಡೆತರಲಾಮಿಥಿ । ಲಾಪತಿ ಸಂತಸದೊಳವರ ನುಡಿಸುತ್ತಿರ್ದಂ ॥ (ಅ)

(ಅನೇಕ ರಾಜವೇಷಗಳು ಬಂದೊಂದಾಗಿ ಪ್ರವೇಶಿಸುವುವು)

೬೩. ಯೆರುಕಲ ಕಾಂಭೋಜಿ—ಏಕತಾಳ ೪

ಜನಕ—

ಬಂದಿರೇ । ನೈ ನಡೆ । ತಂದಿರೇ । ನೈ — ॥ ಪಲ್ಲವಿ

ಅಂಗದ ಭೂ । ಪಾಲ ನವೋ । ವಂಗದೇಶಾ । ಧೀಶ ನವೋ ।
ಬಂಗಾಳದ । ರಾಯಗೆ ಕ । ಳಿಂಗಗೆ ನ । ವೋ — ॥

ಮಂಗಲಾಕಾ । ರ ಕಾಂಭೋಜೋ । ತ್ತುಂಗ ಕಾಶೀ[1] । ರಾಜ[1] ನವೋ ।
ಸಿಂಗಳದ । ರಾ[2]ಯಗೆ ಮಾ । ತಂಗಗೆ ನ । ವೋ—॥[2] ೨೦೩

ಸೌರಾಷ್ಟ್ರ ಬ । ರ್ಬರ ದೇಶ । ಧೀರಪಾಂಡ್ಯ । ಕೇಕಯರ್ಗೆ ।
ಗೋರಾಷ್ಟ್ರ[3] ಹ । ಮ್ಮಿರರಿಂಗೆ । ಹೇರಳ ನ । ವೋ[3]— ॥ ೨೦೪

೬೪. ವಾರ್ಧಿಕ ಷಟ್ಪದಿ

ಜನಕಭೂಪತಿ ಬಂದನೃಪರ ಮನ್ನಿಸುತ ಶಿವ
ಧನುವನಿಲ್ಲಿಗೆ ತನ್ನಿರೆಂದೆನುತ್ತಲಿ ಪೇಳ
ಲನಿತರಲಿ ಚರರು ತೀವ್ರದಲಿ ಚಾಪವ ಹೊತ್ತು ತರ
ಲೊಡನೆ ಮಿಥಿಲೇಂದ್ರನು ।
ಅನುಜಕುಶಧ್ವಜನೊಡನೆ ಸೀತೆಯಂ ಸಿಂಗರಿಸಿ
ಘನಬೇಗದಿಂದ ಕರೆತರುವದೆನಲೈದೆ ಭೂ
ತನುಜೆಯಂ ಶೃಂಗಾರವೆಸಗಿ ಕರಕೊಂಡಾಗ ನಡೆತಂ
ದ ರಾಸಭೆಯೊಳು ॥ ೨೦೬

---

1 ಕಾಶ್ಮೀರದರಸಗೆ (ಓ) 2 ನೃಪಗೆನ್ನ ಅಂಗುಲಿಯಿಂದತಿ ನವೋ. (ಅ)

3 ಹಮ್ಮಿರನಿಗೆ। ಶೂರನಳಗೆ। ಮಾರಾಷ್ಟ ಭೂಪಾಲನಿಗೆ। ವಾರಣಾಸಿಯ ನೃಪಗೆ। ವಾರಷ್ಟ (ಆರಟ್ಟ) ವಂದಿರಾಯಗೆ। ಶರಣೆಂಬೆನಿಂದು ॥ (ಓ)

(ಕುಶಧ್ವಜನು ಸಖಿಯರೊಡನೆ ಸೀತೆಯನ್ನು ಕರಕೊಂಡು ಬಂದು ಅವಳಿಗೆ, ನೆರೆದಿದ್ದ ರಾಜರನ್ನು ಒಬ್ಬೊಬ್ಬರನ್ನಾಗಿ ತೋರಿಸುತ್ತಾನೆ. ಕುಶಧ್ವಜನ ಪಾತ್ರ ಮಾತ್ರ ನರ್ತಿಸುವುದು.)

## ೭೫. ಪಂತುವರಾಳಿ—ರೂಪಕತಾಳ ೧ (ಚರಿತೆ)

**ಕುಶಧ್ವಜ—**

ಇಂತು ಶೃಂ । ಗಾರವಾ । ಗಿಹ ಸೀತಾ । ದೇವಿಯು ।
ದಂತಿಯೋ । ರಿಸಿ ನಡೆ । ತಂದು । — ॥

ಕಾಂತೆ ನೋ । ಡಿತ್ತ ಭೂ । ಪಾಲರ । ಪಂಕ್ತಿಯ ।
[1]ನಿಂತು ನೋ । ಡೆಲೆ[1] ಸುರ । ಸಭೆಯ ॥ ೨೦೭

ವರಹಂಸೆ । ಯನ್ನೇರಿ । ಪರಮೇಷ್ಠಿ । ಬಂದಿಹ ।
ಪರಶಿವ । ನೈದನೆ । ನೋಡೆ । — ॥

ಕರಿಯೇರಿ । ಸುರಪನೈ । ತಂದನೆ । ರಳೆ ಯೇರ್ದು ।
ಸರಿವನ । ಲನನು ನೋ । ಡೆಂದ । — ॥ ೨೦೮

ಉರುಪರಾ । ಕ್ರಮಿ ಕೋಣ । ವಾಹನ । ದಿಂದ ಬಂ ।
ದಿರುವಾತ । ನಿವ ದಂಡ । ಧಾರ — । — ॥

ನಿರುತಿ ವ । ರುಣರೆಲ್ಲ । ಸಂತೋಷ । ದಿಂದ ಕು ।
ಳ್ಳಿರುವರ । ನೋಡೆಲೆ । ಬಾಲೆ — । — ॥ ೨೦೯

**ಸೀತೆ—**

[2]ದಿಕ್ಕಿನ । ಪತಿಗಳ । ನೀಕ್ಷಿಸೆ । ನಲು ನಸು ।
ನಕ್ಕಳು । ಜನಕನ । ಪುತ್ರಿ — । — ॥

ಮುಕ್ಕಳಾ । ಟಕೆ ಯೇಕೆ । ಬೊಮ್ಮನೆ । ನಗೆ ಮುಗ ।
ಮುಕ್ಕಣ್ಣ । ಸಖನೆನ್ನ । ಪತಿಗೆ[2] । — ॥ ೨೧೦

---

1 ಮುಂತೆ ಈಕ್ಷಿಸು (ಓ)

2 ವಾಯು ಕುಬೇರ ಈಶಾನ್ಯಾದಿದಿಗಧಿಪ। ರಾಯರ ಪಂಕ್ತಿಯನೆಲ್ಲ॥

ಸುರರು ಕಿ । ನ್ನರರೆಲ್ಲ । ನರರು ಕೇ । ಟಕರೆನ್ನ ।
ಅರಸರಾ । ಗುವ ಮಾತ । ದೇನು ॥

ಉರಗನ । ಹಾಸುಗೆ । ಯಾದ ದ । ಯಾನಿಧಿ । ೨೧೧
ಹರಿ ಯೆನ್ನ । ರಮಣ ಕೇ । ಳಯ್ಯ — । — ॥

ವಚನ ॥ ಈ ರೀತಿಯಿಂದ ಜಾನಕಿ ಪೇಳ್ದು ಪಿಂತಿರುಗಿ ಸತಿ
ಯರಂ ಸೇರಿ ಇರಲಾಗಿ ಆ ವೇಳ್ಯದೊಳ್ ಇತ್ತಲಾಗಿ
ಭೂಪಾಲಕರು ಮಾತಾಡುತಿರ್ದರದೆಂತೆನೆ—

### ೭೬. ಘಂಟಾರವ ರಾಗ—ಏಕತಾಳ ೩

ರಾಜರು—

ಯಾಕಯ್ಯಾ ನೀ । ವೇಳಿ — ಬಿಡಿ । ಸಾಕಯ್ಯಾ ನೀ । ವೇಳಿ — ॥ ಪಲ್ಲವಿ
ಬೇಕಿಲ್ಲವುನಮು । ಗೀಕನ್ನಿಕೆಯ ತೋಟಿ ॥

ಪಿತ್ತವೇರಿ ಕಣ್ । ಗತ್ತಲೆ ಬರುತಿದೆ । ಯಾಕಯ್ಯಾ — ॥ ೨೧೨

ಸಂದು ಶೂಲೆ ನಮು । ಗೆಂದೆಂದಿಗಾಗದು ॥ ಸಾಕಯ್ಯ — ॥ ೨೧೩

ಸತ್ತ ಸುದ್ದಿಗಿ । ನ್ನುತ್ತರವೇನಿದೆ ॥ ಯಾಕಯ್ಯಾ ॥ ೨೧೪

ತಾಯ ಹಾಲು ಎನ್ನ । ಬಾಯಿಗೆ ಬರುತಿದೆ ॥ ಸಾಕಯ್ಯಾ ॥ ೨೧೫

---

ಬಾಯೆಂದೆನುತಲಾಗ । ತೋರೆ ನಕ್ಕಳು ಸೀತೆ । ಪ್ರೀಯನಪೇಕ್ಷೆಯೊಳಂದು ।
ಕರಿ ಕುರಿ ಕಾಡ್ಕೋಣ । ನರ ನೆಗಳೆರಳೆಯು । ತುರಗಾರೂಢರನೀಕ್ಷಿಸುತಲಿ ।
ಸರಸಿಜ ಸಂಭವನೆನ್ನ ಬಾಲಕ ಪುರ । ಹರನೆನ್ನರಮಣನ ಮಿತ್ರ ॥ (ಅ)

ವಚನ ॥ ಆಗಲಾ ಸಭೆಯೊಳ್ ಆ ಹರಧನುಸ್ಸನ್ನೆತ್ತುವ ಮಹಾ ಪರಾಕ್ರಮಶಾಲಿಗೆ ಸೀತಾದೇವಿಯು ಪುಷ್ಪಮಾಲಿಕೆಯನ್ನು ಹಾಕುವಂಥವಳಾಗುವಳೆಂದು ಜನಕ ರಾಯಂ ನುಡಿಯುತ್ತಿರಲಾಗಿ—

### ೭೭. ಘಂಟಾರವ—ಏಕತಾಳ ೩

ಅಂಗರಾಜ—

ಅಂಗ—ದ । ಭೂಮಿಪಾಲ । ಬಂದ—ಆ । ಗಲ್ಲೆ ನಿಂದ ।
ಮುಂಗೈ—ಯ । ಬಳೆ ತಿದ್ದಿ । ಕೊಂಡ । — ॥
ಗಂಗಾಧರನಾ । ಚಾಪವನೆತ್ತಲು । ತುಂಗವಿಕ್ರಮನು ।
ಭಂಗದಿ ಪೋದ ॥ ೨೧೬

ಗೋಟರಾಯ—

ಗೋಟ—ದ । ರಾಯ ಮುಂದೆ । ಬಂದ—ಆ । ಗಲ್ಲೆ ನಿಂದ ।
ಸೂಟಿಯೊಳ್ । ಚಾಪವನೆತ್ತ । ಲೆಂದಾ—।—॥
ಸಾಟಿಯೋಗದೆ ಮುಂ । ದೋಟವೆ ಸರಿಯೆಂದು । ದಾಟಿ ಧನುವ
ವಂ । ದಿಸುತಿದ್ದನಾಗ ॥ ೨೧೭

ಕೇರಳದರಸ—

ಕೇರ—ಳ । ದರಸ ನಡೆ । ತಂದ—। ಕಡು ಪಂಥ ।
ದೋರುತ್ತ । ಚಾಪನ ಹೊದ್ದಿ । ನಿಂದ—।—॥
ಮಾರಾರಿಯ ಬಿಲ್ಲ । ಸಾರಿ ಪಿಡಿದು ರಕ್ತ । ಕಾರಿದಾಕ್ಷಣ ।
ಸಾರಿದ ಹಿಂದೆ ॥ ೨೧೮

### ೭೮. ಕಂದ

ಈ ತೆರದೊಳು ಭೂಪಾಲ
ವ್ರಾತ [ವು ಮುಂದೊತ್ತಿ ಬಂದು] ಮುಟ್ಟುತ ಧನುವಂ ।
ಸೋತರು ಕೆಲವರು ಚಾಪದ
ಮಾತಿನ್ನೇಕೆಂದು ಹಿಂದೆ ಶರಣೆನುತಿರ್ದರ್ ॥ ೨೧೯

ವಚನ ॥ ಆ ವೇಳ್ಯದೊಳು ಲಂಕಾಧಿಪತಿ ರಾವಣೇಶ್ವರನು ಮುಂದೆ ಬಂದನದೆಂತೆನೆ—

೭೯. ಕೀ । ವೃತ್ತ ॥

ದೆಸೆ ದೆಸೆ [1]ನಡುಗಲ್ಕೆ । ಬಂದು[1] ಮಾರ್ಗಸ್ಥನಾಗಿ ।
ಅಸುರ ಬಲವ ಕೂಡಿ । ಕೊಂಡು ಸಂತೋಷದಿಂದ ।
ದಶಶಿರಗಳ ತೋರಿಸುತ್ತ । ಆ ಸಭಾಮಧ್ಯದಲ್ಲಿ ।
ಅಸುರನು ನಡೆತಂದಾ । ಧನುವ ತಾ ಕಂಡು ನಿಂದ ॥ ೨೨೦

೮೦. ಕೇದಾರಗೌಳ—ಪಂಚಘಾತ ಮಟ್ಟೆತಾಳ ೨

ರಾವಣ—

ಅಸುರ ಬಿಲ್ಲ । ಹಿಡಿದು ಮತ್ತೆ । ವಸುಧೆಯಲ್ಲಿ । ಮುಂಡಿ ಹಾಕಿ ।
ಅಸಮಸಾಹ । ಸದಲಿ ಎತ್ತ । ಲಾಗ ಸೀತೆ । ನೋಡಿ ಚಿಂ ।
ತಿಸುತ ಮನದಿ । ಬಾಡುತಿರ್ದ । ಳು— । ಜನಕರಾಯ ।
ನುಸುರದಿರ್ದ । ದುಗುಡ ಭರದೊ । ಳು— । — ॥ ೨೨೧

ಮತ್ತೆ ಸಾಹ । ಸಿತ್ವದೊಳಗೆ । ಎತ್ತಿ ಧನುವ । ಸತ್ವದಿಂದ ।
ನೆತ್ತಿಯಲ್ಲಿ । ಇರಿಸಿಕೊಳಲು । ರಕ್ತಕಾರಿ । ಧರೆಗೆ ಬೀಳೆ ।
ದೈತ್ಯರೆಲ್ಲ । ಭೀತಿಗೊಂಡ । ರು—ಅಂ । ಬರದೊಳಾ ।
ದಿತ್ಯರೆಲ್ಲ । ನಾಚಿಕೊಂಡ । ರು— । — ॥ ೨೨೨

ಸೀತೆ—

[2]ಬಿದ್ದು ಧರೆಯಿಂ । ದೆದ್ದು ನಾಚು । ತಿದ್ದ ರಾವ । ಣನ್ನ ನೋಡಿ ।
ಮದ್ದಿದೀಗ । ಲೆಂದು ಸೀತೆ । ಹೊದ್ದಿದಧಿಕ । ಹರ್ಷದಿಂದ ।
ಬುದ್ಧಿಯೊಳ್ಳಿ । ತಾಯಿತೆಂದ । ಳು— । ಅಸುರನನ್ನು ।
ಲುಬ್ಧನೆಂದು । ಬೈದು ನಿಂದ । ಳು—[2] । — ॥ ೨೨೩

1. ನಡುಗಲ್ಕೊಂದು (ಓ)
2. ಬಿದ್ದ ಭರಕೆ ದರಣಿ ತಗ್ಗ । ಲೊದ್ದು ಹೂಂಕರಿಸಿ ಖಳನು । ಎದ್ದು ಬಹಳ ಭಂಗದಿಂದ । ಸಾಧ್ಯವೆಂದು ಭಾಷೆ ಮಾಡಿ । ಎದ್ದು ಹೋದ ನಿಜ ನಿವಾಸ । ಕೆ—ಮಿಥಿ । ಲೇಂದ್ರನಾಗ ಹೊದ್ದಿದನು ಸಂತೋಷ ನಿಮಿಷಕೆ

೮೧. ಶಾ । ವೃತ್ತ ॥

ಜನಕರಾಯ—

ಚಿಂತಾಕ್ರಾಂತನುಮಾಗಿ ತಾ ದಶಶಿರಂ ಪೋಗಲ್ಕೆ ಭೂಪಾಲಕಂ ।
ಸಂತೋಷಾಧಿಕದಿಂದ ಚಾಪದಿರವಂ ನೋಡುತ್ತ ಮಿಥಿಲೇಶ್ವರಂ ।
ಮುಂತಾ ಚಾಪವ ಭಂಗಮಾಳ್ಪರಿದಕೋ ಮಾಂಗಲ್ಯಮಾಗಿರ್ದ ಲ ।
ಗ್ನಂ ತೋರುತ್ತಿದೆ ಎಂದಡಾ ಮುನಿವರಂ ಶ್ರೀರಾಮಗಿಂತೆಂದನು ॥ ೨೨೪

೮೨. ಪಂತುವರಾಳಿ—ಮಟ್ಟೆತಾಳ ೧

ಕೌಶಿಕ—

ರಾಮ ಇನಕು । ಲೇಶ ಬಾಲ । ವನಜಲೋಚ । ನ—॥ ಪಲ್ಲವಿ

ರಾಯರೆಲ್ಲ । ಬಂದು ಧನುವಿ । ಗೆರಗಿ ಪೋದ । ರು—।
ರಾವಣೇಶ । ದಂತಭಗ್ನ । ನಾಗಿ ತೆರಳಿ । ದ—॥ ೨೨೫

ಶಿವನ ಚಾಪ । ವನ್ನು ಮುರಿವ । ಸಮಯ ಬಾಲ । ಕ—।
ಅವನಿಜಾತೆ । ಸೀತೆಯನ್ನು । ವರಿಸೊ ರಾಘ । ವ—॥ ೨೨೬

ಏತಕಿನ್ನು । ತಡವ ಮಾಳ್ಪೆ । [1]ನೀತಿಯಲ್ಲ[1] । ವು—।
ಸೀತೆ ಭೂಮಿ । ಜಾತೆಯನ್ನು । ವರಿಸೊ ಬಾಲ । ಕ—॥ ೨೨೭

ವಚನ॥ ಇಂತೆಂದು ಮುನಿ ಪೇಳಲಾವೇಳ್ಯದಲ್ಲಿ ಶ್ರೀರಾಮಂ ಶಿವಧನುವಿನೆಡೆಗೆ ಬಹ ಬಗೆಯದೆಂತೆನೆ—

೮೩. ನಾದನಾಮಕ್ರಿಯೆ—ಅಷ್ಟತಾಳ ೧

ರಾಮ—

ದಟ್ಟ ಚ । ಲ್ಲಣ ಬಿಗಿ । ದುಟ್ಟನು ।—ಕಿ ।
ಗ್ಗಟ್ಟ ಕ । ಠಾರಿಯ । ನಾಂತನು ।

1. ವಿದುವೆ ಸಮಯ (ಓ)

ತಟ್ಟನೆ । ಬಿಲ್ಲನು । ಹಿಡಿದನು ।—ಅಘ ।
ರಟ್ಟೆ ಧ । ನುವ ಮುರಿ । ದಿಟ್ಟನು ॥ ೨೨೮

ವಚನ ॥ *ಇತ್ತಲಾ ಸೀತಾದೇವಿ ಬರುತಿರ್ದಳದೆಂತೆನೆ—

ರ್೪. ಎದುಕುಲ ಕಾಂಭೋಜಿ—ಏಕತಾಳ ೪

ಸಖಿಯರು—

ಪವಳವ ಪೋ । ಲುವ ಪಾದ ಮಾ । ಧವನ ಬಳಿ । ಗೈದಲಾಗ ।
ಯುವತಿಯರೆ । ಲ್ಲಾರು ಕಂಡು । ನುಡಿಯುತಿರ್ದ । ರು—॥ ಪಲ್ಲವಿ

ಗುರುಕುಚ । ಯುಗಳೆ ಮ । ಧುರತರ ವ । ಚನ್ಮಿಸಿತ ।
ಕರಿಗಮನೆ । ನಿನ್ನ ಭಾಗ್ಯ । ದರಸನಾದ । ರಾಮ—॥

ಪರಮೇಶ್ವರ । ಪಿಡಿ [ಯುವಂಥ । ಪುರಹರದ] ಚಾಪವನ್ನು ।
ಭರದಿಂದಲಿ । ಖಂಡಿಸಿದ । ನರೆನಿಮಿಷದೊ । ಳು—॥ ೨೨೯

ಕನ್ನೆಯರ । ಕುಲಕೆಲ್ಲ । ರನ್ನೆ ನೀ । ಸೀತಾದೇವಿ ।
ನಿನ್ನ ಭಾಗ್ಯ । ದಿಂದಲಿ ಶ್ರೀ । ಚಿನ್ಮಯನೊಲಿ । ದು—।
ಬಂದು ಗಂಡ । ನಾದ ರಾಮ । ಚಂದ್ರ ತಾ ನಿ । ನಗೆ ಈಗ ।
ಸೌಂದರ್ಯದ । ಮಾಲೆಯಿಕ್ಕು । ಸುಂದರಾಂಗ । ಗೆ—॥ ೨೩೦

ಇಂದೀವರಾ । ಕ್ಷಿಯರೆಲ್ಲ । ಎಂದ ಮಾತ । ಕೇಳಿ ಸೀತೆ ।
ಚಂದದಿಂದ । ಮಾಲೆಯ ಗೋ । ವಿಂದಗಿಕ್ಕ । ಲು—।
ಅಂದಲ್ಲಿ ಭ । ವನದೊಳಿದ್ದ । ಮಂದಿಯೆಲ್ಲ । ಮುಂದೆ ಬಂದು ।
ವಂದಿಸಿತ್ತು । ಸುರರ ನರರ । ವೃಂದವೆಲ್ಲ । ವು—॥ ೨೩೧

ವಚನ ॥ ಆಗ ತದನಂತರದೊಳು ಅತ್ಯಂತ ಸಂತೋಷಯುಕ್ತನಾಗಿ ಜನಕರಾಯಂ ಅಯೋಧ್ಯಾಪಟ್ಟಣದೊಳಿರ್ದ ದಶರಥರಾಯಂಗೆ ಈ ಮಂಗಳವಾರ್ತೆಯಂ

---

*ಅದಕಂಡು ಸುರರು ಸಂತೋಷದಿ । ಪ್ರಸೂ । ನದ ಮಳೆಗರೆಯೆ ಸುಮ್ಮಾನದಿ ॥
ಮುದದಿಂದ ಸೀತೆಯ ಕಾಣುತ್ತ । ಮಿಗೆ ಸುದತಿಯರೆಂದರು ನಲಿಯುತ್ತ ॥ (ಅ)

ಪೇಳಿ ದಿಬ್ಬಣ ಸಹ ತೆರಳಿಸಿಕೊಂಡು ಬಾರೆಂದು ಒಬ್ಬ ಚಾರಕನಂ ಕಳುಹಲು
ಅವನಯೋಧ್ಯಾಪುರಕೆ ಪೋಗಿ ಏನೆಂದನು ಎಂದರೆ—

(ಎಲ್ಲರೂ ರಂಗಸ್ಥಳದಿಂದ ಹೊರಟು ಹೋಗುತ್ತಾರೆ. ಆಮೇಲೆ ಆಸನಸ್ಥನಾದ ದಶರಥನ ಪ್ರವೇಶ, ಜನಕರಾಯನ ದೂತನು ಬಂದು ವಂದಿಸುತ್ತಾನೆ.)

೮೫. ಭೈರವಿರಾಗ—ಜಂಪೆತಾಳ ೩

ದೂತ—

ವಸುಮತೀ । ಪತಿತಿಲಕ । ದಶರಥ ಮ । ಹಾರಾಜ ।
ಕುಸುಮಶರ । ರೂಪ ಕೇಳ್ । ಮಹಾಭಾಗ್ಯ । ವಂತ—॥ ಪಲ್ಲವಿ

ನಿನ್ನ ಸುತ । ನಾಗಿರ್ಪ । ರಾಮಚಂ । ದ್ರನ ವಾರ್ತೆ ।
ಚೆನ್ನಾಗಿ । ಕೇಳಯ್ಯ । ಸರಸಹೃದ । ಯದಲಿ ॥ ೧೩೧

ಕೌಶಿಕನು । ನಿಯ ಕೂಡಿ । ಕೊಂಡು ಮಿಥಿ । ಲಾಪುರಕೆ ।
ಕುಶಲದಿಂ । ದಲಿ ಬಂದು । ಧನುವನೆ । ತ್ತಿರುವ ॥ ೧೩೩

ಜನಕರಾ । ಯನು ತನ್ನ । ತನುಜೆಯ ವಿ । ವಾಹವನು ।
ವಿನಯದಿಂ । ರಚಿಸಲೆಂ । ದನುವ ಮಾ । ಡಿದನು ॥ ೧೩೪

ಮುನ್ನ ಈ । ಶ್ವರನಿತ್ತ । ಚಾಪವನು । ಮುರಿವರಿಗೆ ।
ಕನ್ನಿಕೆಯ । ಕೊಡುವೆನೆಂ । ದೆನುತ ಪೇ । ಳಿದನು ॥ ೧೩೫

ಅನುಜ ಲ । ಕ್ಷ್ಮಣ ಸಹಿತ । ವಿನಯದಿಂ । ದೈತಂದು ।
ಧನುವ ಮುರಿ । ಯಲು ಸೀತೆ । ರಾಮ[1]ಚಂ । ದ್ರನಿಗೆ[1] ॥ ೧೩೬

ಮಾಲೆಯಿ । ಕ್ಕಿದ ವಾರ್ತೆ । ಯರುಹಿ ಕರೆ । ಎಂದು ಭೂ ।
ಪಾಲ ಕಳು । ಹಲು ಬಂದು । ಪೇಳಿದೆನು । ನಾನು ॥ ೧೩೭

---

1. ದೇವನಿಗೆ (ಓ)

### ೮೬. ಕಂದ

ಭರತನ ಶತ್ರುಹ ಸತಿಯರ
ನರಸಂ ಮುನಿವರರ ಕೂಡಿ ಕೊಂಡೈತರಲುಂ ।
ಪರಮಗುಣಾಢ್ಯ ಜನಕ ಭೂ
ವರ ಕೈಮುಗಿಯುತ್ತ ಬಂದು ಮಾತಾಡಿಸಿದಂ ॥ ೨೩೮

### ೮೭. ಭೈರವಿರಾಗ—ಏಕತಾಳ ೩

**ಜನಕ—**

ಕುಶಲವೆ । ದಶರಥ । ವೀರ ।—ಕೇ ।
ಳಸಮಗು । ಣಾಢ್ಯಗ । ಭೀರ ।—।
ಕುಸುಮಶ । ರನ ಸಾ । ಕಾರ ।—ಕರು ।
ಣಿಸು ಸ । ದ್ಧರ್ಮ ವಿ । ಚಾರ ।—॥ ೨೩೯

ನಿನ್ನ ಸು । ತನು ರಾಮ । ಬಂದ ।—ಸಂ ।
ಪನ್ನನು । ಧನುವೆತ್ತಿ । ನಿಂದ ।—।
ಎನ್ನ ಮ । ಗಳ ಮುದ । ದಿಂದ ।—ಧಾರೆ ।
ಯನ್ನೆರೆ । ಯುವೆ ನೋ । ಡೆಂದ ।—॥ ೨೪೦

ಲಕ್ಷ್ಮಣ । ನಿಂಗೂ । ರ್ಮಿಳೆಯ ।—[1]ಕೊಡ ।
ಲೀಕ್ಷಿ[1]ಸು । ವೆನು ಕೇ । ಳಯ್ಯ ।—।
ಲಕ್ಷಿಸು । ದಶರಥ । ರಾಯ ।—[2]ಮಹಾ ।
ಲಕ್ಷ್ಮೀ ಕ । ಟಾಕ್ಷ ವಿ । ದಯ್ಯ[2]—॥ ೨೪೧

**ದಶರಥ—**

ಜನಕಮ । ಹೀಪತಿ । ವೀರ ।—ತ ।
ಮ್ಮನ ಮಗ । ಳುಗಳಾ । ದವರ ।—।

---

1. ಇತ್ತು । ಈಕ್ಷಿ (ಬ) 2. ಉ । ಪೇಕ್ಷೆಯ ಮಾಡದಿರಯ್ಯ । (ಅ)

ತನಯ ಭ | ರತ ಶತ್ರು | ಹರಿಗೆ |—ಬಲು |
ವಿನಯದೊ | ಳೀಯೊ ಬಾ | ಲರಿಗೆ |—|| ೨೪೨

ಜನಕ—

[1]ವರಕುವ | ರಿಯರನು | ನಮ್ಮ—|—ಬೇಗ |
ಕರೆದು ಧಾ | ರೆಯನೀವೆ | ನಿಮ್ಮ—|—|
ಧರಣಿಪ | ಸುತರಿಗೆ | ನಾನು |—ಮನ |
ಹರುಷದಿ | ಕೈಕೊಳು | ನೀನು |—[1] || ೨೪೩

೮೮. ಕಾಂಭೋಜಿರಾಗ—ಚೌತಾಳ

ಶ್ರೀ—ರಾಮ | ಚಂದ್ರ | ಧೀ—ರ—|| ಸುಂದರಾಂ | ಗ ಬಾ | ವೀ—ರ ||
ಚಂ—ದ್ರವ | ದನ | ಪು—ರು || ಷೋ—ತ್ತಮ | ಬಾ—| ರೋ—|| ಪಲ್ಲವಿ

ವರ—ಕುವರಿ | ಸೀತೆ[1]ಯ—ನ್ನು || ನಿನ—ಗೆ ಈ | ವೆನು | ಧೀ—ರ |
ಹರು—ಷದಿ | ವರಿ | ಸೋ—ನೀ || ವರ—ಮ—| ಹಾನು | ಭಾ—ವ ||
೨೪೩

ಸೌ—ಮಿ | ತ್ರ ಶು | ಭಾಂ—ಗ || ಅತಿ—ಚರಿ | ತ್ರನೆ | ಕೇ—ಳು |
ಸೌ—ವರ್ಣ | ವರ್ಣ | ಕಾ—ಯ || ಇನ—ಕು | ಲದ | ರಾ—ಯ ||
೨೪೪

ನಿನ—ಗಿ | ನ್ನೂರ್ಮಿ | ಳೆ—ಯ || . . . . . . . . .
ಸೂ—ರ್ಯ ವಂ | ಶ ತಿ | ಲ—ಕ || ನಾ—ದ ಭ | ರತ | ಕೇ—ಳು |
. . . . . . . . . . . .
ಶತ್ರುಗಳ | ಸಂಹ | ರಿ—ಪ || ಶತ್ರುಘ್ನನಿಗೆ ವಿಶ್ರುತ ಕೀರ್ತಿಯ ||
. . . . . . . . . . . . . ವಿನಯದಿ ನಡೆಸಿಕೊ | ಕೀರ್ತಿ ವಿಶಾಲ ||

ವಚನ || ಈ ಪ್ರಕಾರವಾಗಿ ಆಯಾ ಬಾಲಕರಿಗೆ ಪೇಳಿದಂಥವನಾಗಿ ಪ್ರತ್ಯೇಕ ಪ್ರತ್ಯೇಕ ಧಾರೆಯಂ ಮಾಡುತಿರ್ದನದೆಂತೆನೆ—

---

1. ವರಮುನಿಪತಿಯೆ ಕೇಳೀಗ | ತನ್ನ | ವರಕುವರಿಯರನ್ನು ಬೇಗ ||
ಕರೆದು ಧಾರೆಯ ಮಾಡುವೆನು |—ಈ | ಧರಣಿಪ ಸುತರಿಂಗೆ ನಾನು || (೬)

### ೮೯. ಡವಳಾರ—ಅಷ್ಟತಾಳ ೨, ಏಕತಾಳ ೨, ತ್ರಿವುಡೆ ೨

(ಅಷ್ಟ) ಗಂಗಾ । ಜಲವ । ನ್ನಾಗಲೆ । ತಂದು ।
ಅಂಗನೆ । ಯರ ಸಹಿ । ತವೆ ತಾ । ನಿಂದು ।

(ಏಕ) ಮಂಗಳ । [1]ಮಹಿಮ ಶ್ರೀ । ರಾಮನಿ । ಗೊಲಿದು[1] ।
ಅಂಗನೆ । ಸೀತಾ । ದೇವಿಯ । ಧಾರೆಯ ।

(ತ್ರಿವುಡೆ) ಮಂಗಲದಿ । ಜನ । ಕ—॥ ನೆರೆ—। ದ—। ನು—॥
ಸೋ—। ಬಾ—।—। ನೆ ।—।—॥ ೨೪೫

(ಅಷ್ಟ) ಮತ್ತೆ । ಲಕ್ಷ್ಮ । ಣಂಗೂ । ರ್ಮಿಳೆಯ ।
ಇತ್ತು । ತಾ ಭರ । ತಂಗೆ ಮಾಂ । ಡವಿಯ ।

(ಏಕ) ಅರ್ತಿಯೊ । ಳಗೆ ಶ । ತ್ರುಘ್ನಗೆ । ವಿಶ್ರುತ ।
ಕೀರ್ತಿಯ । ನಿತ್ತಾ । ವೈಭವ । ದಿಂದತಿ ।

(ತ್ರಿವುಡೆ) ಚಿತ್ರದಿ । ಧಾ—। ರೆ—॥ ಎರೆ—। ದ—। ನು—।
ಸೋ—। ಬಾ—।—॥ ನೆ—।—।—॥ ೨೪೬

### ೯೦. ನಾರಾಯಣಸೋಬಾನೆ—ತ್ರಿವುಡೆ ತಾಳ ೧

ಚಿನ್ನದ ಹಸೆ । ಮಣೆಯಾ । ಮೇಲೆ ।
[2]ಪನ್ನಗ ವೇ । ಣಿಯ[2] ಕು । ಳ್ಳಿರಿಸಿ ।
ಚೆನ್ನಾಗಿ । ಶೋಭನ । ಪಾಡುತ ।
*ಚಿನ್ನದಾ । ರತಿ । ಯ—॥ ಬೆಳ—। ಗಿ—। ರೆ—॥
ಸೋ—। ಬಾ—। ನೆ—॥ ೨೪೭

---

1. ಮಂಗಲಕರ ಶುಭಲಗ್ನದೊಳಂದು (ಓ) 2. ಕನ್ನೀ ಜಾನಕಿಯನು (ಓ)

* ಕನ್ನೆ ಜಾನಕಿಗೂ ಪ್ರ । ಸನ್ನ ರಾಮನಿಗೂ । (ಓ)

ಮಂಗಳ ಜಯ । ರಾಮಗೆ । ಸೀತೆಗೆ ।
ಮಂಗಳ ಲ । ಕ್ಷ್ಮಣನಿಗೆ । ಭರತಗೆ ।
ಮಂಗಳ ಶ । ತ್ರುಘ್ನನಿ । ಗೆನುತಲೆ ।
ಮಂಗಳಾ । ರತಿ । ಯ—॥ ಬೆಳ—। ಗಿ—। ರೆ—॥
ಸೋ—। ಬಾ—। ನೆ—॥ ೨೪೮

ವಚನ॥ ಇಂತು ಸಕಲ ಸಂಭ್ರಮದಿ ವಿವಾಹವಾಗಲಾ ದಶರಥಂ ಸಂತೋಷದಿ ಪುತ್ರರು ತರುಣಿಯರು ಸಹಿತಲೆ ಮುಂದೈತರಲಾ ಪಥದೊಳು ಅಂತಕಹರನಂದದಿ ಪರಶುರಾಮಂ ತಡೆದು ಗರ್ಜಿಸುತ ಏನೆಂದನು ಎಂದರೆ—

(ರಂಗಸ್ಥಳದಿಂದ ಎಲ್ಲರೂ ಪಯಣ ಹೊರಟು ಪುನಃ ಪ್ರವೇಶಿಸುತ್ತಾರೆ, ಆಗ ಪರಶು ರಾಮನು ದಕ್ಷಿಣದ್ವಾರದಿಂದ ಪ್ರವೇಶಿಸಿ ತಡೆಯುತ್ತಾನೆ.)

೯೧. ಪೂರವಿರಾಗ—ಮಟ್ಟೆತಾಳ ೧

ಪರಶುರಾಮ—

ಆರೆಲೋ । ನಡೆದು ಬಹ । ರಾಮ ಕೇಳೊ । ಮೂಢ ।
ವೀರನಾದ । ರೆನ್ನ ಕೂಡೆ । ಬಾಣವೆಸೆ । ಯಯ್ಯ ॥ ೨೪೯

ಎನ್ನ ಗುರು । ವಿನ ಚಾಪ । ವನ್ನು ಮುರಿಯು । ತ್ತೀಗ ।
ಕನ್ನೆಯನೊ । ಯ್ಯ ಬಿಡುವೆನೆ । ಬಿಟ್ಟು ನಡೆಯೋ । ಗಾಢ ॥ ೨೫೦

ರಾಮ—

ಭಾರ್ಗವ ನಿ । ಸ್ಸೀಮ ಕೇಳು । ಪೋಗುವರೆ । [1]ಮಾರ್ಗ ।
ಈಗ ಬಿಡಲು[1] । ಬೇಕಲ್ಲಯ್ಯ । ಮಹಾ ಮುನಿ । ವರ್ಯ ॥ ೨೫೧

ಹೆಂಡತಿಯ । ಬಿಡುವುದೆಂಬ । ಬಂಡಾಟವಿ । ದೇನೊ ।
ಪುಂಡಾಟಿಕೆ । ಏತಕೆಲವೊ । ಚಂಡ ಪರಶು । ರಾಮ ॥ ೨೫೨

---

1. ಎನಗೆ । ಮಾರ್ಗಕೊಡ (ಓ)

ಪರಶುರಾಮ—

ದಶರಥ | ಸುತ ರಾಮ | ಪರಶುರಾಮ | ನೆಂಬ |
ಪೆಸರೆರ | ಡಿಲ್ಲದಂತೆ | ಮಾಳ್ಪೆನೀಗ | ನೋಡು || ೨೫೩

ಇಷ್ಟೊಂದಹಂ | ಕಾರವೇಕೊ | ಇಟ್ಟು ಮುರಿದ | ಚಾಪವನ್ನು |
ದಿಟ್ಟ ಭಗ್ನ | ಮಾಡಿದ್ದೆಂಬ | ಗರ್ವ ಸಲ್ಲ | ದಯ್ಯ || ೨೫೪

೯೨. ಮಾರವಿರಾಗ—ಏಕತಾಳ ೨

ರಾಮ—

ವಿ | ಪ್ರ ಕು | ಲಾ | ಧಮ | ನಿ | ನ್ನಯ | ಶೌ | ರ್ಯವ |
ಕ್ಷಿ | ಪ್ರದಿ | ನಿಲಿ | ಸುವೆ | ಜೆದ | ರದಿ | ರೀ | ಪರಿ
ಕೇ | ಳೋ | ಭಾ | ರ್ಗವ | ರಾ | ಮ—|| ೨೫೫

ಪರಶು—

ವೃ | ದ್ಧ ತ | ನದ | ರಾ | ಕ್ಷಸಿ | ಯನು | ಕಾ | ಡೊಳು |
ಯು | ದ್ಧದಿ | ಕೊಂ | ದಾ | ಗ | ರ್ವ ವು | ಸ | ಲ್ಲದು |
ಕೇ | ಳೋ | ದಶ | ರಥ | ರಾ | ಮ—|| ೨೫೬

ರಾಮ—

ಅವ | ಳೆ | ನ್ನಯ | ತಾ | ಯ | ಲ್ಲ ಮು | ನೀಂ | ದ್ರನೆ |
ಅವ | ನಿಯೊ | ಳ | ವ್ವೆಯ | ಶಿರ | ವರಿ | ದಿ | ಲ್ಲವೆ |
ಪೇ | ಳೋ | ಭಾ | ರ್ಗವ | ರಾ | ಮ || ೨೫೭

ಪರಶು—

ಕ್ಷ | ತ್ರಿಯ | ವಂ | ಶವ | ನೆ | ಲ್ಲವ | ಸವ | ರುವ |
ಚಿ | ತ್ರ ಪು | ರುಷ | ನಾ | ರೆಂ | ದರಿ | ಯೆಯ | ನೀ |
ಕೇ | ಳೋ | ರಾ | ಘವ | ರಾ | ಮ || ೨೫೮

ರಾಮು

ಮುನಿ । ಯೆಂ । ದತಿ । ಶಯ । ಮಾ । ಡಿದೆ । ನ । ಲ್ಲದೆ ।
ಧನು । ವಿಡಿ । ದಾ । ರ್ನೋಲ್ । ಯು । ದ್ಧದಿ । ಭಯ । ವೇ ।
ಕೇ । ಳೋ । ಭಾ । ರ್ಗವ । ರಾ ಮು ॥ ೨೫೯

ಪರಶು—

ಬ । ಲ್ಲಿದ । ನಾ । ದರೆ । ಕಣೆ । ಗಳ । ವೊ । ತ್ತುವ ।
ಜೆ । ಲ್ಲತಿ । ವೇ । ಗದಿ । ನೋ । ಳ್ಪೆ ಪ । ರಾ । ಕ್ರಮು ।
ಕೇ । ಳೋ । ರಾ । ಘವ । ರಾ । ಮು ॥ ೨೬೦

ರಾಮು—

ಬಿ । ಲ್ಲ ಸೆ । ಳೆದು । ಹೆದೆ । ಏ । ರಿಸಿ । ದಾ । ಕ್ಷಣ ।
ಎ । ಲ್ಲಿಗೆ । ಸೆಯ । ಲೀ । ಶರ । ವೆಂ । ದೆನು । ತಲಿ ।
ಹೇ । ಳೋ । ಭಾ । ರ್ಗವ । ರಾ । ಮು ॥ ೨೬೧

ವಚನ॥ ಈ ತೆರದಿ ಶ್ರೀರಾಮನು ಬಾಣವಂ ತೊಡಲು ಅವತಾರಮೂರ್ತಿಯಂ ಕಂಡು ಪರಶುರಾಮನು ಏನೆಂದನು ಎಂದರೆ—

### ೯೨. ನಾದನಾಮಕ್ರಿಯೆ—ರೂಪಕ ತಾಳ ೧

*ನಿನ್ನ ಕೂಡೆ । ಸೆಣಸಿ ವ್ಯರ್ಥ । ಖಿನ್ನನಾದೆ । ಗ್ರಹಿಸಲೀಗ ।
ನನ್ನ ನಿನ್ನ । ವಿಕ್ರಮದಲಿ । ಭಿನ್ನ ಭೇದ । ಕಾಣದಯ್ಯ ॥ ೨೬೨

ಜಯ ಜ । ಯಾ । ರಾಮಚಂದ್ರ । ಜಾನಕೀಶ । ಸುಗುಣ ಸಾಂದ್ರ ॥ ಪಲ್ಲವಿ

ನೋಡಲಿನ್ನು । ಯುದ್ಧಮುಖದಿ । ಮಾಡಿದ ಪ್ರ । ತಿಜ್ಞೆ ಸಾಕು ।
ಬೇಡ ಹೋಗು । ಶ್ರೀ ಗೋವಿಂದ । ಗಾಡಿಕಾರ್ತಿ । ಯೊಡನೆ ಚಂದ ॥ ೨೬೩

---

*ಜಯ ಜಯಾ । ಜಾನಕೀಶ । ಶ್ರೀರಾಮಚಂದ್ರ ॥
ಜಯ ಜಯ ಭಾನುಕುಲೇಶ । ರವಿಕೋಟಿ ಸಾಂದ್ರ ॥ಪಲ್ಲವಿ॥ (ಅ)

ಸ್ಥಿರಜೀವಿಯಾ । ಗಿರ್ಪಂತೆನ್ನ । ಕರುಣಿಸೊ ರಾ । ಘವ ರಾಮು ।
ಇರದೆ ತಪಕೆ । ಪೋಪೆನಯ್ಯ । ವರವ ಕೊಡು ಮ । ಹಾನುಭಾವ ॥ ೨೬೪

೯೩. ವಾರ್ಧಿಕ ಷಟ್ಪದಿ

ಇಂತೆಂದು ಶ್ರೀರಾಮಚಂದ್ರ ಗಭಿವಂದಿಸುತ
ತಾಂ ತೆರಳಲಿತ್ತಲುಂ ಸತಿಸಹಿತ ರಾಘವಂ
ಸಂತಸದಿ ಪುರಕೆ ಬಂದಿರ್ದನೆಂದೆನುತ ಬಾಲರಿಗೆ ಮುನಿಪತಿ ಪೇಳ್ದನು ।

ಕಂತುಜನಕನ ಚರಿತೆ ಇದನು ಕೇಳ್ದವರಿಗ
ತ್ಯಂತ ಸೌಖ್ಯವನಿತ್ತು ಧರೆಯೊಳನವರತ ನಿ
ಶ್ಚಿಂತೆಯಲಿ ಸಲಹುವನು ಕಣ್ವಪುರದೊಡೆಯ ಶ್ರೀ
ಕೃಷ್ಣಂ ಕಟಾಕ್ಷದಿಂದ ॥ ೨೬೫

(ಎಲ್ಲರೂ ನಿಷ್ಕ್ರಮಿಸುತ್ತಾರೆ)

ಮಂಗಲ

# ಪಟ್ಟಾಭಿಷೇಕ–ಪಂಚವಟಿ

## ಪ್ರಸಂಗದ ಕಥಾಸಾರ

ವೃದ್ಧನಾದ ದಶರಥ ಮಹಾರಾಜನು ಶ್ರೀರಾಮನಿಗೆ ಪಟ್ಟಾಭಿಷೇಕವನ್ನು ಮಾಡ ಬೇಕೆಂದು ಮಂತ್ರಿಯೊಡನೆ ಸಮಾಲೋಚಿಸಿ ನಿರ್ಣೈಸಿದ ಪ್ರಕಾರ ಸಕಲ ಸನ್ನಾಹಗಳು ಭರದಿಂದ ನಡೆಯುತ್ತವೆ. ಕೈಕೆಯು ತನ್ನ ಸಖಿಯಾದ ಮಂಥರೆಯ ದುರ್ಬೋಧನೆಗೆ ಒಳಪಟ್ಟು ತನ್ನ ಮಗನಾದ ಭರತನಿಗೆ ಪಟ್ಟವಾಗಬೇಕೆಂದೂ ರಾಮನನ್ನು ಹದಿನಾಲ್ಕು ವರ್ಷಕಾಲ ವನವಾಸಕ್ಕೆ ಕಳುಹಿಸಬೇಕೆಂದೂ ಛಲ ಹಿಡಿಯುತ್ತಾಳೆ. ಕೈಕೆಯ ಮಾತನ್ನು ಉಲ್ಲಂಘಿಸಲಾರದೆ ದಶರಥನು ದಿಙ್ಮೂಢನಾಗಿರುವುದನ್ನು ಕಂಡು ಶ್ರೀರಾಮನು ತನ್ನ ರಾಜ್ಯವನ್ನು ಬಿಟ್ಟು ಚಿಕ್ಕಮ್ಮನ ಮಾತಿನಂತೆ ವನವಾಸವನ್ನು ಕೈಕೊಳ್ಳುತ್ತಾನೆ ; ಹಾಗೂ ತನ್ನೊಡನೆ ಬರುತ್ತೇವೆಂದು ಹಟಮಾಡಿದ ಸೀತಾಲಕ್ಷ್ಮಣರನ್ನು ಕೂಡಿಕೊಂಡು ಕಾಡಿಗೆ ಹೊರಟು ಹೋಗುತ್ತಾನೆ. ಪುತ್ರವಿಯೋಗವ್ಯಸನದಿಂದ ಸಂತಪ್ತನಾದ ದಶರಥನು ಮುಂದೆ ಕೆಲವೇ ದಿನಗಳಲ್ಲಿ ಮರಣಹೊಂದುತ್ತಾನೆ. ಆಗ ತನ್ನ ಮಾವನ ಮನೆಯಲ್ಲಿದ್ದ ಭರತನಿಗೆ ಮಂತ್ರಿಗಳು ದೂತರನ್ನಟ್ಟಲು ಆತನು ಬಂದು ತನ್ನ ತಾಯಿಯ ದೌರ್ಜನ್ಯ ಕ್ಕಾಗಿ ಕೋಪಿಸಿಕೊಂಡು ರಾಮನನ್ನು ಕರೆತರುವುದಕ್ಕಾಗಿ ಕಾಡಿಗೆ ಹೊರಟು ಹೋಗು ತ್ತಾನೆ. ಹಾಗೆ ಹಿಂಬಾಲಿಸಿ ಬಂದ ಭರತನನ್ನು ರಾಮನು ಸಮಾಧಾನಪಡಿಸಿ ತನ್ನ ಪಾದುಕೆಗಳನ್ನು ಕೊಟ್ಟು ಹಿಂದಕ್ಕೆ ಕಳುಹಿಸಿ, ತಾನು ಸೀತಾಲಕ್ಷ್ಮಣರೊಂದಿಗೆ ವನಮಾರ್ಗದಲ್ಲಿ ಮುಂದುವರಿಯುತ್ತಾ ದಂಡಕಾರಣ್ಯದಲ್ಲಿರುವ ಋಷ್ಯಾಶ್ರಮಗಳನ್ನು ಕಳೆದು ಪಂಚವಟೀಕ್ಷೇತ್ರಕ್ಕೆ ಬಂದು ಅಲ್ಲಿಯೊಂದು ಸುಸ್ಥಳವನ್ನು ನೋಡಿ ಪರ್ಣಶಾಲೆ ಯನ್ನು ರಚಿಸಿ ವಾಸಮಾಡುತ್ತಿರಲು, ಶೂರ್ಪನಖಿ ಎಂಬ ರಾಕ್ಷಸಿಯು ಇವರನ್ನು ಕಂಡು ಕಾಮಾತುರಳಾಗಿ ಬಂದು ಕಾಡುತ್ತಾಳೆ. ಅವಳ ಕೀಟಲೆಯನ್ನು ಸಹಿಸಲಾರದೆ, ಲಕ್ಷ್ಮಣನು ರಾಮನ ಅಪ್ಪಣೆಯಂತೆ ಅವಳ ಕಿವಿ,ಮೂಗು, ಮೊಲೆಗಳನ್ನು ತರಿದು ಮಾನ ಭಂಗಮಾಡಿ ಓಡಿಸುತ್ತಾನೆ. ಹತಾಶಳಾದ ಆ ಶೂರ್ಪನಖಿಯು ತನ್ನ ಅಣ್ಣಂದಿರಾದ ಖರದೂಷಣರಿಗೆ ದೂರಲು, ಹಿರಿಯನಾದ ಖರಾಸುರನು ರಾಮಲಕ್ಷ್ಮಣರನ್ನು ಕೊಲ್ಲು ವುದಕ್ಕಾಗಿ ದೂಷಣ ತ್ರಿಶಿರ ಮುಂತಾದ ತನ್ನ ತಮ್ಮಂದಿರನ್ನು ಕಳುಹಿಸುತ್ತಾನೆ.ಅವರೆಲ್ಲರೂ ರಾಮಲಕ್ಷ್ಮಣರೊಡನೆ ಘೋರಯುದ್ಧವನ್ನು ಮಾಡಿ ಮಡಿಯಲು, ಕೊನೆಗೆ ರಾಕ್ಷಸರ ಪಡೆಯನ್ನೇ ಕೂಡಿಕೊಂಡು ಖರಾಸುರನು ಯುದ್ಧಕ್ಕೆ ಬರುತ್ತಾನೆ. ರಾಮನಿಗೂ ಆತನಿಗೂ ನಡೆದ ಘೋರಸಂಗ್ರಾಮದಲ್ಲಿ ಶ್ರೀರಾಮನು ಸೈನ್ಯಸಮೇತನಾದ ಖರನನ್ನು ಕೊಂದು ಪಂಚವಟೀಕ್ಷೇತ್ರದಲ್ಲಿರುವ ಋಷಿಗಳಿಗೆ ಮುಂದೆ ರಾಕ್ಷಸರ ಭಯವಿಲ್ಲದಂತೆ ಮಾಡಿದನೆಂಬಲ್ಲಿಗೆ ಈ ಪ್ರಸಂಗಕ್ಕೆ ಮಂಗಳವಾಗುವುದು.

**ಮುಖ್ಯ ಪ್ರಕರಣಗಳು**

೧. ಪಟ್ಟಾಭಿಷೇಕಸನ್ನಾಹ
೨. ವನವಾಸಪ್ರಸ್ಥಾನ
೩. ಭರತಸಮಾಗಮ
೪. ಶೂರ್ಪನಖೀಪ್ರಕರಣ
೫. ಖರದೂಷಣಾದಿಗಳ ವಧೆ

**ಭೂಮಿಕೆಗಳು**

ದಶರಥ
ಸುಮಂತ್ರ
ವಸಿಷ್ಠಮುನಿ
ರಾಮ
ಲಕ್ಷ್ಮಣ
ಭರತ
ಗುಹ
ದೂಷಣಾಸುರ
ತ್ರಿಶಿರ
ರಾಕ್ಷಸಭಟರು
ಋಷಿಗಳು
ಪುರಜನರು
ಕೇಕಯ ರಾಜ

ಕೌಸಲ್ಯೆ
ಕೈಕೆ
ಸುಮಿತ್ರೆ
ಮಂಥರೆ
ಶೂರ್ಪನಖಿ
ಮಾಯಾಶೂರ್ಪನಖಿ

# ಪಟ್ಟಾಭಿಷೇಕ–ಪಂಚವಟಿ

## ಪ್ರಸಂಗಪೀಠಿಕೆ

*ಶಾ। ವೃತ್ತ ॥

[**ಶ್ರೀರಾಮಂ [1]ಸುರಮೌಳಿವಂದಿತಪದಂ ಖದ್ಯೋತವಂಶೋದ್ಭವಂ[1]
ಪಾರಾವಾರ ಗಭೀರಮಾದಿಪುರುಷಂ [2]ಶ್ರೀ ಜಾನಕೀ ವಲ್ಲಭಂ[2]
ಮಾರೀಚಾ[3]ದಿ ಮಹಾಸುರೌಘಮಥನಂ ಮಾಂಗಲ್ಯರೂಪಾನ್ವಿತಂ[3]
[4]ವೀರಂ ವಾನರರಾಜಮಿತ್ರಮಮಲಂ[4] [5]ಧ್ಯಾಯಾಮಿ ಚಿತ್ತೇ ಸದಾ[5]] ೧

---

*'ಪುತ್ರಕಾಮೇಷ್ಟಿ' ಪ್ರಸಂಗದ ಆರಂಭಕ್ಕಿರುವ ಕಥಕ್ಕಳಿ ರಾಮಾಯಣಾರಂಭದ ಆ ಎರಡು ವೃತ್ತಗಳು 'ಪಟ್ಟಾಭಿಷೇಕ'ದ ಆರಂಭಕ್ಕೂ ಕೆಲವೊಂದು ಪ್ರತಿಗಳಲ್ಲಿರುತ್ತವೆ.

1. ಶ್ರೀರಾಮಂ ಚ ಸುರೌಘವಂದಿತಪದಂ ಕೌಸಲ್ಯ ಗರ್ಭೋದ್ಭವಂ । (ಓ)
   ೧ . . . . ದಿವಿಜೌಘವಂದಿತಪದಂ ಸಾಕೇತವಾಸಂ ಪರಂ ।
   ೨ . . . . ರಘುವಂಶವಾರ್ಧಿ ವಿಲಸಚ್ಚಂದ್ರಂ ಗುಣಾಲಂಕೃತಂ । (ಅ)
2. ತ್ರೈಲೋಕ್ಯನಾಥಂ ಪ್ರಭುಂ, (ಓ) ಸುಗ್ರೀವರಾಜ್ಯಪ್ರದಂ (ಅ)
3. ಖರಕುಂಭಕರ್ಣಮಥನಂ ದಶಕಂಠ ಸಂಹಾರಕಂ (ಓ)
   ೧ ಧೀರಂ ರಾವಣಚಂಡಮೇಘಮರುತಂ ಸುಜ್ಞಾನಕಲ್ಪದ್ರುಮಂ (ಅ)
   ೨ ಪಾರಾವಾರಗಭೀರಸದ್ಗುಣಯುತಂ ಸೀತಾಮನೋಹಾದಕಂ (ಅ)
4. ಕಾರುಣ್ಯಾಂಬುಧಿ ಜಾನಕೀಪತಿಪದಂ (ಓ)
   ೧ . . . . . . . . . ಪತಿಮಹಂ (ಅ)
   ೨ ಕಾರುಣ್ಯಾಲಯಮೆನ್ನಚಿತ್ತದಿ ಸದಾ (ಅ)
5. ಪ್ರಾಣೇಶದಂ ನಮಾಮ್ಯಹಂ (ಓ)
   ನಿಂತಿರ್ದು ಕಾಪಾಡಲಿ (ಅ)

**ಯಾದೇವೀ ಮಿಥಿಲೇಶಮುಖ್ಯತನುಜಾ ಯಾ ಭೂಮಿಜಾ ಸುವ್ರತಾ ।
ಯಾ ಪದ್ಮಾಲಯಸಂಭವಾ ಶಶಿಮುಖೀ ಶ್ರೀರಾಮಪತ್ನೀ ಸದಾ ।
ಸಾ ಸೀತಾಖಿಲಲೋಕಪಾವನಕರೀ ಸನ್ಮಾರ್ಗಸಂಚಾರಿಣೀ ।
ಯಾ ಪದ್ಮಾ ಪರಮೇಶವಂದಿತಪದಾ ಪಾಪೌಘವಿಧ್ವಂಸಿನೀ ॥ (ಓ)

೨ ನಾಟಿರಾಗ—ಜಂಪೆತಾಳ

ಜಯ ಜಾನಕೀಕಾಂತ । ಜಯ ಸಕಲ । ವೇದಾಂತ ।
ಜಯತು ಮಂ । ಗಳ ರೂಪ । ಜಯ ಸುಪ್ರ । ತಾಪ ॥ ಪಲ್ಲ ॥

ದಶರಥಾ । ತ್ಮಜವೀರ । ದಶಕಂಠ । ಸಂಹಾರ ।
ಪಶುಪತೀ । ಶ್ವರಮಿತ್ರ । ಪಾವನಚ । ರಿತ್ರ ॥

ಕುಸುಮುಬಾ । ಣಸ್ವರೂಪ । ಕುಶಲಕೀ । ರ್ತಿ ಕಲಾಪ ।
ಅಸಮರಾ । ಕ್ಷಸಶಿಕ್ಷ । ಅಂಬುಜದ । ಳಾಕ್ಷ ॥ ೧ ॥

ಸಾಮಗಾ । ನವಿಲೋಲ । ಭಕ್ತಜನ । ಪರಿಪಾಲ ।
[1]ಕಾಮಿತಾ । ರ್ಥವಿಧಾತ । ಕೀರ್ತಿವಿ । ಖ್ಯಾತ[1] ॥
ಸೋಮ ಸೂ । ರ್ಯ ಪ್ರಕಾಶ । ಸರ್ವಲೋ । ಕಾಧೀಶ ।
ಶ್ರೀಮಹಾ । ರಘುವೀರ । ಸಿಂಧು ಗಂ । ಭೀರ ॥ ೨ ॥

ಸಕಲ ಶಾ । ಸ್ತ್ರವಿಚಾರ । ಶರಣಜನ । ಮಂದಾರ ।
ವಿಕಸಿತಾಂ । ಬುಜವದನ । ವಿಶ್ವಮಯ । ಸದನ ॥
ಸುಕೃತವೋ । ಕ್ಷ ವಿಲಾಸ । ಸಾಕೇತ । ಪುರವಾಸ ।
ಭಕತವ । ತ್ಸಲರಾಮ । ಭಳಿರೆ ನಿ । ಸ್ಸೀಮ ॥ ೪ ॥

೩ ಮತ್ತೇಭ ವೃತ್ತ

ಹರಿಗಂಭೀರ ಗಣಾಧಿಪಂಗೆ[2] ಶಿವಗಂ ಗೌರೀಂದಿರಾವಾಣಿಗಂ ।
ಕರುಣಾಕಾರ ವಸಿಷ್ಠನಾರದರಿಗಂ ಸಾಕ್ಷಾತ [3]ಸದ್ಗುರುವಿಗಂ[3] ।
ಪರಮೇಷ್ಠ್ಯಾದಿ ಮುನೀಂದ್ರದೇವತತಿಗಂ ಸಾತ್ವೀಕಸನ್ಮಾರ್ಗಿಗಂ ।
ಪರಮೋಲ್ಲಾಸದೊಳೆಲ್ಲರಿಂಗೆರಗುತೀ ಕೃತಿ ಪೇಳ್ವೆ ಸಂತೋಷದಿಂ ॥ ೫ ॥

೪ ಶಾ । ವೃತ್ತ

ಧಾತ್ರೀಗುತ್ತಮ ಕಣ್ವನಾಮ[4]ಪುರದೀ[4]ನಿಂತಿರ್ದ ಶ್ರೀಕೃಷ್ಣನಾ ।
ತತ್ಪಾದಾಂಬುಜ ದಿವ್ಯನಾಮವರದಿಂದೀ ಪಾರ್ವತೀನಂದನಂ ।

---

1. ಕಾಮುಪಿತ । ಕಮಲೇಶ । ಕಮನೀಯ । ವೇಷ । (ಓ) 2. ವೀರಗಣಾಧಿಪಂಗೆ (ಅ)
3. ಆಚಾರ್ಯಗಂ (ಅ) 4. ಪುರದಿಂ (ಓ)

ಬತ್ತೀಸಾಕೃತಿ ತಾಳರಾಗವಿಧದಿಂ ರಾಮಾಯಣಂ ಪೇಳ್ವುದಾ ।
ಭಕ್ತಿಧ್ಯಾನದಿ ಕೇಳ್ದು ಪುಣ್ಯಕಥೆಯಂ ಸಂತೋಷಮಂ ಮಾಳ್ಪುದು ॥ ೬ ॥

೫ ದ್ವಿಪದಿ

ವಾಲ್ಮೀಕಿ ಮಾಮುನಿಪನೊಲಿದು ಕುಶಲವರ್ಗೆ
ರಾಮಾಯಣಾಮೃತವ ಪೇಳುತಿರಲವರ್ಗೆ ॥ ೭ ॥

ಮುನಿರಾಯ ಕೇಳಯ್ಯ ಮೊದಲೆಂದ ಕಥೆಯ
ಮನಸಿನಲಿ ಗ್ರಹಿಸಿದೆವು ಮತ್ತೆ ಸಂಗತಿಯ ॥ ೮ ॥

ಸೀತಾಸ್ವಯಂವರದ ಮುಂದೆ ಮತ್ತೇನು
ತಾತನಾಜ್ಞೆಯ ರಘುಜ ತಾಳ್ದ ಪರಿಗಳನು ॥ ೯ ॥

ರಾಮಲಕ್ಷ್ಮಣರೇಕೆ ರಾಜ್ಯವನು ಬಿಟ್ಟು
ಗ್ರಾಮ ಭೂಮಿಯನೆಲ್ಲ ಭರತನಿಗೆ ಕೊಟ್ಟು ॥ ೧೦ ॥

ಕಾನನಾಂತರದಿ ದಿನ ಕಳೆದರವರೆಂತು
ಜಾನಕಿಯುಸಹಿತ ಘೋರಡವಿಯಲಿ ನಿಂತು ॥ ೧೧ ॥

ದುರುಳೆ ಶೂರ್ಪನಖಿಗಪಮಾನವದು ಹೇಗೆ
ಖರದೂಷಣಾದಿಗಳ ತರಿದ ಬಗೆ ಹೇಗೆ ॥ ೧೨ ॥

ಪೇಳಬೇಕೆಮಗೆನುತ ಪಾದಕಭಿನಮಿಸಿ
ಕೇಳಿದರು ಬಾಲಕರು ಬಹುದೈನ್ಯವೆರಸಿ ॥ ೧೩ ॥

ತರಳರಾಡಿದ ನುಡಿಗೆ ಮುನಿಪ ನಸುನಗುತ
ಎರಡುಕೈ ದಣಿಯಲಪ್ಪಿದನು ಭಳಿರೆನುತ ॥ ೧೪ ॥

ಅರುಹುವೆನು ನಿಮಗೆ ಮುಂದಾದ ಕಾರಣವ
ತರಳರಿರ ಕೇಳಿರೈ ತಿಳಿದು ಓರಣವ ॥ ೧೫ ॥

(ಆಸನಸ್ಥನಾದ ದಶರಥನ ಒಡ್ಡೋಲಗ)

೬ ಮಧ್ಯಮಾವತಿ—ತ್ರಿವುಡೆ ತಾಳ ೧

ವೀರದಶರಥ । ನೃಪತಿ ಇನಕುಲ । ವಾರಿಧಿಗೆ ಪ್ರತಿ । ಚಂದ್ರನು ।
ಧಾರಿಣಿಯನಾ । ಳ್ದಿರಲು ಕುಶಿಕ ಕು । ಮಾರಕನು ಕರೆ ।
ದೊಯ್ಯಲು—ಯಜ್ಞಕೆಂದು ॥ ೧೬ ॥

ಮುನಿಯ ಯಾಗವ । ಕಾಯ್ದು ರಾಘವ । ಜನಕರಾಯನ ।
ಧನುವನೆತ್ತಿಯೆ ।
ಜನಕಜೆಯು ಸಹಿ । ತಾಗಯೋಧ್ಯೆಗೆ । ಘನಪರಾಕ್ರಮಿ ।
ಬಂದನು—ಚಂದದಿಂದ ॥ ೧೭ ॥

ಒಂದು ದಿನ ಕೇ । ಕಯುದ ರಾಜ[1]ನ । ಕಂದನೊರ್ವ[1] ನೃ । ಪಾಲನು ।
ಬಂದಯೋಧ್ಯಾ । ಪುರಕೆ [2]ಸಂಭ್ರಮ । ದಿಂದ ಸಮಿಸಲು[2] ।
ಕಂಡನು—ದಶರಥೇಂದ್ರ ॥ ೧೮ ॥

(ಕೇಕಯರಾಜಪುತ್ರನ ಪ್ರವೇಶ)

೭ ಘಂಟಾರವ—ಜಂಪೆತಾಳ ೩

ಕೇಕಯ—

ಜಯಜಯ ಮ । ಹೀಪತೇ । ದಶರಥ ನೃ । ಪಾಲ ॥ ಪಲ್ಲವಿ ॥

ಕ್ಷೇಮವೇ । ನೃಪತಿಲಕ । ಪರಿವಾರ । ಗಳಿಗೆಲ್ಲ ।
ರಾಮ ಲ । ಕ್ಷ್ಮಣರುಗಳು । ಬಂದರೇ । ಪುರಕೆ ॥ ೧೯ ॥

ತಂದೆ ಕಳು । ಹಿದರಿಂದ । ಬಂದೆನಿ । ಲ್ಲಿಗೆ ನಿಮ್ಮ ।
ಕಂದ ಭರ । ತ ಶತ್ರುಘ್ನ । ರಿಂದೊಯ್ಯ । ಲೆನುತ ॥ ೨೦ ॥

ಶಾಸ್ತ್ರ ವಿ । ದ್ಯಾಭ್ಯಾಸ । ವನು ಕಲಿಸಿ । ದಾ ಮೇಲೆ ।
ಪುತ್ರರನು । ಕರೆದು ತಂ । ದೊಪ್ಪಿಸುವೆ । ನೆಂದ ॥ ೨೧ ॥

---

1 ಸು ಬಂದಕೋಸಲ (ಅ) 2 ಭಕ್ತಿಯೊಳಂಘ್ರಿಗೆರಗಲು (ಅ)

ಲ ಶಾ । ವೃತ್ತ ॥

ದಶರಥ—

ಎಂದಾ ರಾಯನ ಮಾತಕೇಳ್ದು ನೃಪತೀ ಸಂದೇಹನಂ ಮಾಡುತಾ ।
ಇಂದೀ ಬಾಲರ ಬುದ್ಧಿಸಾಲದವರಂ ಬಿಟ್ಟೆಂತು ನಾ ನಿಲ್ವೆನೋ ।
ಕಂದ [1]ರ್ಪೋಪಮರೂಪರಿಬ್ಬರುಗಳಂ ತೆಗೆದಪ್ಪಿ[1]ಮುದ್ದಾಡುತಾ ।
ಒಂದಾಗಿರ್ವರು ವಿದ್ಯೆಯಂ ಕಲಿಯಬೇಕೆಂದಾಗಳಿಂತೆಂದನು ॥ ೨೨ ॥

(ದಶರಥನು ಕರೆಯಲಾಗಿ ಭರತಶತ್ರುಘ್ನರು ಪ್ರವೇಶಿಸುತ್ತಾರೆ)

೯ ತೋಡಿ—ಏಕತಾಳ ೫

ಪುತ್ರ ನೀ । ಬಾರೊ ಭರತ । ಶತ್ರುಘ್ನ ನೀ । ನಿತ್ತ ।
ಅರ್ತಿಯಿಂದ । ಕೇಳಿ ಕಾರ್ಯ । ದುತ್ತಮಂಗ । ಳನ್ನು ॥ ೨೩ ॥

ಕೇಕಯ ನೃ । ಪಾಲ ನಿಮ್ಮ । ಕಾಣಬೇಕೆಂ । ದೆನುತ ।
ಬೇಕಾದಂಥ । ವಸ್ತುಗಳ । ತಾ ಕಳುಹಿ । ಸಿಹನು ॥ ೨೪ ॥

ಪೋಗಿ ಬೇಗ । ಬನ್ನಿರೆನ್ನು । ತ್ತಾಗ ಮುಕ್ಕ । ಳನ್ನು ।
ಬೇಗದಿಂದ । ಕಳುಹಿಸಿದ । ನಾಗ ಧರಣೀ । ಪಾಲ ॥ ೨೫ ॥

೧೦ ಕಂದ

ಬಾಲಕರಿರ್ವರನಾ ಭೂ ।
ಪಾಲನ ಕೈಗೆತ್ತಿ[2]ಕೊಟ್ಟನುಡುಗೊರೆ ಸಹಿತಾ[2] ।
ಶೀಲರ್ನಡೆಯಲ್ಕಂ[3] ದಾ
ವೇಳೆಯೊಳೇ ಕಾರ್ಯವೊಂದ ಮಂತ್ರಿಗೆ ಪೇಳ್ದಂ[3] ॥ ೨೬ ॥

---

1 ರ್ಪಂಗೆಸಮಾನರೂಪಸುತರಂ ಬಾರೆಂದು (ಅ)
2 ಕೊಟ್ಟುಬೇರುಡುಗೊರೆಯಂ (ಓ)
3 ಲ್ಕಂಡಾ । ಲೀಲೆಯೊಳವನೀಶನಿಂತು ಮಂತ್ರಿಯೊಳೆಂದಂ (ಅ)

(ದಶರಥನು ಚಾರಕನೊಡನೆ ಮಂತ್ರಿಯನ್ನು ಕರೆಯಲು ಹೇಳುತ್ತಾನೆ.
ಆಗಲೇ ಮಂತ್ರಿಯ ಪ್ರವೇಶ)

೧೧ ರೇಗುಪ್ತಿ—ಜಂಪೆತಾಳ ೩

ಮಂತ್ರಿ ಮಹಾ । ವೀರ ಸು । ಮಂತ್ರ ಬಹು । ಧೀರ ।
ಅಂತರಂ । ಗದಿ ಪೇಳ್ವೆ । ನೀಂ ತಿಳಿದು । ಕೇಳು ॥ ೨೭ ॥

ಒಡಲು ನೆಲೆ । ಎಂದು ಬಹು । ಕಾಲ ಪ । ರ್ಯಂತ ।
ಪೊಡವಿಯಾ । ಳಿದೆನಿನ್ನು । ಕಡುವೃದ್ಧ । ನಾದೆ ॥ ೨೮ ॥

ಪೊಡವಿಯನು । ರಾಘವಗೆ । ಕೊಡುವೆ ನಾ । ನದಕೆ ।
ಪೊಡವಿಪತಿ । ಗಳ ಕರೆಸು । ಪುರವ ಶೃಂ । ಗರಿಸು ॥ ೨೯ ॥

ಇಂತಾ ವ । ಸಿಷ್ಠಮುನಿ । ಮಂತ್ರಿಯರ । ಕೂಡೆ ।
ಅಂತರಂ । ಗದಿ ದಶರ । ಥೇಂದ್ರ ಮಾ । ತಾಡೆ ॥ ೩೦ ॥
*

(ಮಂಥರೆಯೊಡನೆ ಕೈಕೆಯ ಪ್ರವೇಶ)

೧೨ ಕಾಂಭೋಜಿ—ಏಕತಾಳ ೪

ಮಂಥರೆ—
ನಾಳೆ ರಾಮು । ಚಂದ್ರಗಭಿ । ಷೇಕವದಾ । ಗುವದುಂಟೆಂದು ।
ಕೇಳಿದಳು । ಮರೆಯಲ್ಲಿ ನಿಂ । ದು ಮಂ । ಥರೆ ತಾ ಪೋಗಿ ।
ಪೇಳಿದಳು । ಕೈಕೆಯೊಳಿಂ । ತೆಂದು ॥ ೩೧ ॥

ಕಾಂಭೋಜಿ—ಏಕತಾಳ—ತಿತ್ತಿತ್ತೈ

ಬಾಲೆ ಕೇಳ್ಪೊ । ಮಾಲೆ ಚಾರು । ಶೀಲೆ ಇಂದು । ನಿನ್ನ ಕಾಂತ ।
ಭೂಲೋಕವ । ರಾಮನಿಗೆ । ಪಾಲಿಸಬೇ । ಕೆಂದು ಹೀಗೆ ॥ ೩೨ ॥

ಮಂತ್ರಿ ವಸಿ । ಷ್ಠರ ಕೂಡೆ । ಅಂತರಂಗ । ದಲಿ ಮಾತಾಡೆ ।
ನಿಂತು ಕೇಳಿ । ರುವೆನಾ ಮಾತ । ಕಾಂತೆ ಕೇಳಿ । ದಾವ ನೀತ ॥ ೩೩ ॥

---

* ಆ ಮಾತ । ಕೇಳಿ ದೂ । ತಿಯು ಬೇಗ । ನಡೆತಂದು ।
ಪ್ರೇಮದಿಂ । ಕೈಕೆಯೊಡ । ನಿಂತೆಂದ । ಳಾಗ (ಅ)

ಕೈಕೆ—

ಮಂದರೆ ಕೇ । ಳೊಳ್ಳಿತಾಯ್ತು । ಚಂದವಾಯಿ । ತದಕಿನ್ನೇನು ।
ಕಂದ ರಾಮ । ಚಂದ್ರನ ಆ । ನಂದವ ನೋ । ಡುವೆವು ನಾಳೆ ॥ ೩೪ ॥

೧೩ ಕಲ್ಯಾಣಿ[1]—ಏಕತಾಳ ೪

ಮಂಥರೆ—

,ಧರಣಿಯಾ । ಧಿಪತಿತ್ವ । ,ರಾಮಗಾ । ದರೆ ನಿನ್ನ ।
,ಭರತಗಾ । ತನಲಿ ಚಾ । ,ಕರಿಯಹು । ದಮ್ಮ ॥ ಪಲ್ಲವಿ ॥

,ತರುಣಿ ಕೌ । ಸಲ್ಯೆ ಪಟ್ಟ । ,ದರಸಿಯಾ । ಗುವಳು ನೀ ।
,ನಿರತ ಸೇ । ವಕ ವೃತ್ತಿ । ,ಪರಿಚಾರಿ । ಯಾದೆ ॥ ೩೫ ॥

,ಆಡಿಕೊಂ । ಡರೆ ಮುನ್ನ । ಚಾಡಿಗಾ । ರ್ತಿಯೆಂಬರೆನ್ನ ।
,ನಾಡ ಮಾ । ತಲ್ಲ ನೀ । ನೋಡಿಕೋ । ಮನದಿ ॥ ೩೬ ॥

೧೪ ಘಂಟಾರವ—ಏಕತಾಳ ೩

ಕೈಕೆ—

ಈ ಮಾತಾ । ಡುವರೆ ಕೇ । ಳಿ—ಏ । ಹುಚ್ಚು ಮೂಳಿ ।
ಕಾಮಿನಿ । ಯರೊಳ್ಳಿವಾ । ಳಿ— ॥
ರಾಮನು ಹಿರಿಯುವ । ನಾದ ಮೇಲೆ ಈ ।
ಭೂಮಿಯಾಳುವುದು । ಭರತನು ಲೋಕಕೆ ।
ಸರಿಯೆ ? ಗುಣ । ಮೆರೆಯೆ—ಹೊಸ । ಪರಿಯೆ ? ನೀ ।
ನೇನಾನರಿಯೆ ॥ ೩೭ ॥

ಮಕ್ಕಳು । ನಾಲ್ವರೊಳ । ಗೆ—ತ । ಮ್ಮೊಳು ಭೇದ ।
ವಿಕ್ಕಿ[2]ನ । ಡೆವರೆ ಹೀ[2] । ಗೆ— । — ॥
ಇಕ್ಕೆಲದವರಿದ । ಕೇಳ್ದರೆ ನಿನ್ನಯ । ಸೊಕ್ಕ ಮುರಿದು ಬ್ಯಾ ।
ಹೊಯ್ವರು ಸುಮ್ಮನೆ ।
ಹೋಗೆ—ಮುದಿ । ಗೂಗೆ—ಸತ್ತ । [3]ಹಾಗೆ[3]—ಚಾ । ಡಿಯ ಸೀಗೆ ॥ ೩೮ ॥

---

1 ಸೌರಾಷ್ಟ್ರ; ಪಹಡಿ (ಅ) ತೋಡಿ; ಕಾಂಭೋಜಿ (ಓ) 2 ಮಾತಾಡುವರೆ (ಅ)
3 ಕಾಗೆ (ಓ)

೧೫ ಕಂದ

ಮಂಥರೆ—

ಸೊಕ್ಕಿದ ಹೆಣ್ಣೆಂದಿವಳಂ
[1]ಧಿಕ್ಕರಿಸಿಯೆ[1] ಹೋಗು ನಾಯಿ ಸುಮ್ಮನೆ ಎನಲಾ ।
[2]ರಕ್ಕಸಿ ಮಾಯದಿ ಹೃದಯವ
ಹೊಕ್ಕಳು[2] ಕದಡಿದಳು ಕೈಕೆಯಂತಃಕರಣಂ ॥ ೩೯ ॥

೧೬ ಕಾಂಭೋಜಿ—ಏಕತಾಳ ೪

ಕೈಕೆ—

ಸಖಿ ನೀ ಪೇ । ಳಿದ ಮಾತು । ಸಕಲವು । ಲೇಸಾಯ್ತು ।
ಯುಕುತಿ ಏ । ನಿದಕಿನ್ನು । [3]ಎನ್ನೊಳ್ ಪೇಳು[3] । ಕಂಡುದನ್ನು ॥ ೪೦ ॥

ಎಂದರೆ ಆ । ಮಾತ ಕೇಳಿ । ಮಂದರೆ ಥೈ । ರ್ಯವ ತಾಳಿ ।
ಮಂದಗಜ । ಗಮನೆ ಕೇ । ಳೊಂದು ಯುಕ್ತಿ । ಯುಂಟದಕೆ ॥ ೪೧ ॥

ಮಂಥರೆ—

ಹಿಂದೆ ಮೆಚ್ಚಿ । ನಿನಗೆ ಆ ನ । ರೇಂದ್ರ ಕೊಟ್ಟ । ಮಾತೆರಡ ।
ಇಂದು ಕೇಳು । ಕೊಟ್ಟಮೇಲೆ । ಮುಂದೆ ಹೇಳು । ಕಾರ್ಯ ಬಾಲೆ ॥ ೪೨ ॥

ಈರೇಳು । ವರ್ಷ ರಾಮ । ಆರಣ್ಯದೊ । ಳಿರಬೇಕು ।
ಧಾರಿಣಿಯ । ನಿನ್ನಪುತ್ರ । ಭರತನಿಗೆ । ಕಟ್ಟಬೇಕು ॥ ೪೩ ॥

*

ಎಂದು ಕೇಳು । ಕಾಂತನೊಳು । ಸಂದೇಹವ । ಮಾಡಬೇಡ ।
ಮುಂದೆ ಕಾರ್ಯ । ವೆಲ್ಲ ಲೇಸು । ಇಂದೀವರಾ । ಕ್ಷಿ ಲಾಲಿಸು ॥ ೪೪ ॥

---

1 ಜಕ್ಕುಲಿಸಿಯೆ
2 ಹೊಕ್ಕಳು ಹೃದಯವ ಮಾಯಾ । ರಕ್ಕಸಿ (ಓ)
3 ಮುಕುರಕಪೋಲೆ (ಓ)
* ರಾಮಚಂದ್ರನ ಈ ಹೊತ್ತೇ । ವನವಾಸಕ್ಕಟ್ಟಬೇಕು (ಓ)

೧೭ ಶಂಕರಾಭರಣ—ತ್ರಿವುಡೆ

ಕೈಕೆ—

ಸುತಗೆ ಪಟ್ಟವ । ಕಟ್ಟಬೇಕೆಂಬ । ಮತದೊಳಂದು ।—ಕೈಕೆಯು ।
ಅತಿಶಯದ ಛಲ । ದಿಂದ ತೆಗೆದಾ । ಭರಣಗಳನು ॥ ೪೫ ॥

ತೊಟ್ಟ ತೊಡಿಗೆಗ । ಳೆಲ್ಲವನು ತೆಗೆ । ದಿಟ್ಟು ಕಡೆಗೆ ।—ಮಾನಿನಿ ।
ಇಟ್ಟ ಕಸ್ತುರಿ । ತಿಲಕವನು ಕೈ । ಗೊಟ್ಟು ಕೆದರಿ ॥ ೪೬ ॥

ಮಾಸಿದೊಸನವ । ಮುಸುಕಿ ಮಂಚದಿ । ಹಾಸಿದುದನೇ ।
—ಪಸರಿಸಿ ।
ಶ್ರೀ ಸದಾಶಿವ । ನೀನೆ ಗತಿಯೆಂದು । ಮರುಗುತಿಹಳು ॥ ೪೭ ॥

ಬಣ್ಣಗುಂದಿದ । ಳಬಲೆ ಬಲುಬಲು । ಕ್ಲೇಶದಿಂದ ।—ಬಳಲುತ ।
ಕಣ್ಣ ನೀರನು । ತುಂಬಿ ದುಗುಡದಿ । ಪವಡಿಸಿದಳು ॥ ೪೮ ॥

(ಕೈಕೆಮಂಥರೆಯರ ನಿಷ್ಕ್ರಾಮ)

ವಚನ ॥ ಇತ್ತಲಾ ಕೈಕೆ ಮಹಾಕ್ಲೇಶದಿಂ ಚಿಂತಿಸುತ್ತಿರಲಾಗಿ ಅತ್ತಲಾ ಪಟ್ಟಾಭಿಷೇಕಕ್ಕೆ ಸಕಲ ಸನ್ನಾಹವಂ ಮಾಡಿದರದೆಂತೆನೆ—

(ದಶರಥನ ಪ್ರವೇಶ)

೧೮ ಚರಿತೆ (ಸಾಂಗತ್ಯ)—ರೂಪಕತಾಳ ೧

ದಶರಥ—

ಪಟ್ಟಾಭಿ । ಷೇಕವ । ಮಾಡಬೇ । ಕೆನುತಲೆ । ಪಟ್ಟಣ ।
ಶೃಂಗರಿ । ಸಲ್ಕೆ ।
ಸೃಷ್ಟಿಪಾ । ಲಕನ ಅ । ಪ್ಪಣೆಯಿಂದ । ಕರೆಸಿದ । ರಷ್ಟದಿ ।
ಕ್ಕಿಂದ ಚಿ । ತ್ರಿಕರ ॥ ೪೯ ॥

ಬಣ್ಣಗಾ | ರರು ಬಂದು | ನೆರೆದರು | ಆನೇಲಿ | ಮಣ್ಣಿನೊ |
ಡ್ಡರ ಕರೆ | ಸಿದರು |
ಚಿನ್ನದ | ಕೆಲಸ ಕೆ | ತ್ತಿಗೆಯ ಪಾಂ | ಚಾಲರು | ಹನ್ನೊಂದು |
ನೂರು ಕೂ | ಡಿದರು ‖ ೫೦ ‖

ಅಗೆದು ಪೆ | ಟ್ಟಿಸಿದರು | ನೆಲಗಳ | ಸಮನಾಗಿ | ಜಗಲಿ ಗೋ |
ಡೆಗಳ ಸಾ | ರಣೆಯು |
ಸೊಗಸಾದ | ಚಪ್ಪರ | ಮೇಲುಗ | ಟ್ಟುಗಳಿಂದ | ನಗರವ |
ಶೃಂಗರಿ | ಸಿದರು ‖ ೫೧ ‖

ಮುತ್ತಿನು | ಪ್ಪರಿಗೆ ಚಾ | ವಡಿ ಕೋಣೆ | ಚೌಕಿಯು | ಸುತ್ತಲು |
ಬಿಗಿದ ಪ | ಜ್ಜಿಗಳ |
ಪುತ್ಥಳಿ | ಬೊಂಬೆ ಬಾ | ಗಿಲ ದಾರಂ | ದದ ಮನೆ |
ಹತ್ತು ಸಾ | ವಿರವ ಮಾ | ಡಿದರು ‖ ೫೨ ‖

ತೋರಣ | ಕುರುಜು ಮೋ | ರುವೆ ತೋಟ | ಕೆರೆಭಾವಿ |
ಕೇರಿಕೇ | ರಿಯ ಮನೆ | ಮನೆಯು |
ಭೇರಿ ಡ | ಮಾಮಿ ಮ | ದ್ದಳೆ ತಾಳ | ಗತಿಯಿಂದ | ಸಾರಿ ಡಂ |
ಗುರವ ಹೊ | ಯ್ಸಿದರು ‖ ೫೩ ‖

ಅಷ್ಟದಿ | ಕ್ಕಿನೊಳಿರ್ದ | ಅರಸು ಬ | ಲ್ಲಾಳರ್ಗೆ | ಕಟ್ಟಿದ |
ರುಡುಗೊರೆ | ಗಳನು |
ಪಟ್ಟಾಭಿ | ಷೇಕಕ್ಕೆ | ಪಯಣದಿ | ಬರಲೆಂದು | ಸೃಷ್ಟಿಪಾ |
ಲಕ ಕಳು | ಹಿದನು ‖ ೫೪ ‖

ಛಪ್ಪನ್ನ | ದೇಶದ | ಭೂಮಿಪಾ | ಲರು ನಡೆ | ತಪ್ಪ ಸಂ |
ಭ್ರಮವೇನ | ನೆಂಬೆ |
ಇಪ್ಪತ್ತು | ಲಕ್ಷಾನೆ | ಕುದುರೆ ದಂ | ಡಿಗೆಯಿಂದ | ಒಪ್ಪಿದ |
ರಂದು ಸಂ | ದಣಿಸಿ ‖ ೫೫ ‖

ವಸುಧಾ ಪಾ । ಲಕರೆಲ್ಲ । ತೆರಳಿ ಬಂ । ದವರನ್ನು । ದಶರಥ ।
ನೃಪನಿದಿ । ರ್ಗೊಂಡು ।
ಎಸೆವ ಬಿ । ಡಾರವಿ । ತ್ತವರವ । ರಿಗೆ ತಕ್ಕ । ಉಪಚಾರಂ ।
ಗಳನು ಮಾ । ಡಿಸಿದ ॥ ೫೬ ॥

೧೯ ವಾರ್ಧಿಕ ಷಟ್ಪದಿ

ಕುಶನೆ ಕೇಳಿಂತಯೋಧ್ಯಾಪುರದ ಸಂಭ್ರಮವ
ವಶವಲ್ಲ ಹೇಳಿ ತುದಿಗಾಣಿಸುವಡರಿದೆನುಗೆ
ಪಸರಿಸಿತು ಮಂದಿ ಕುದುರೆಗಳ ಸಂದಣಿಯಿಂದ ನಾನಾರವಂಗಳಿಂದ ।
ವಸುಧೆ ಹಿಗ್ಗಿದಳು ಕೆಂಧೂಳಿದ್ದು ನಭಗಳಂ
ಮುಸುಕಿ ದಿಗ್ಗಜ ಬೆದರೆ ಕೂರ್ಮನೆದೆಗೆಟ್ಟ ಫಣಿ
ಕುಸಿದ ಸುರರಾಕಾಶದಲ್ಲಿ ಜಯಜಯಯೆಂದು ದೇವದುಂದುಭಿ
ಮೊಳಗಿತು ॥ ೫೭ ॥

(ವಸಿಷ್ಠನು ಸುಮಂಗಲೆಯರೊಂದಿಗೆ ರಾಮನನ್ನು ಕರಕೊಂಡು ಪ್ರವೇಶಿಸುತ್ತಾನೆ)

೨೦ ಭೈರವಿ—ಜಂಪೆತಾಳ ೧

ಪನ್ನೀರ । ರಾಮನಿಗೆ । ಪಂಕಜಾ । ಕ್ಷಿಯರೆರೆದು ।
ಚಿನ್ನಗಳ । ತೊಡಿಸಿದರು । ಚಿನ್ಮಯಾ । ತ್ಮಕಗೆ ॥ ೫೮ ॥

ಅಗರು ಚಂ । ದನ ಗಂಧ । ಕಸ್ತೂರಿ । ಲೇಪನವ ।
ಸೊಗಸಾಗಿ । ರಚಿಸಿದರು । ಶೃಂಗಾರ । ವಾಗಿ ॥ ೫೯ ॥

ಸಿಂಹಾಸ । ನವನೇರು । ಶ್ರೀರಾಮ । ನೀನೆನುತ ।
ಬ್ರಾಹ್ಮರಾ । ಶೀರ್ವಾದ । ಬಹಳ ಹರ । ಸಿದರು ॥ ೬೦ ॥

೨೧ ಸೌರಾಷ್ಟ—ತ್ರಿವುಡೆತಾಳ ೩

ವಸಿಷ್ಠ—

[1]ಸೃಷ್ಟಿಯಧಿಪತಿ । ತನಕೆ ಜನರೊಡ ।
ಬಟ್ಟು[1] ಚಿನ್ನದ । ಕಲಶದಲ್ಲಿ ವ ।
ಸಿಷ್ಠ ಮುನಿ ಮಂ । ತ್ರೋದ[2]ಕಕೆ ಕೈ । ಗೊಟ್ಟು[2] ನಿಂದ ॥ ೬೧ ॥

ವೊಳಗಿದವು ಬಹು । ವಾದ್ಯ ತಿಂಥಿಣಿ ।
ಗಳ ರವಂಗಳ । ಮೇಳದಿಂದಾ ।
ನಳಿನಲೋಚನ । ನೆದ್ದು ಗುರುವಿಗೆ । ಕರವ ಮುಗಿದ ॥ ೬೨ ॥

ಸುರವರರು ಕೊಂ । ಡಾಡೆ ಗಾಯಕ ।
ರಿರದೆ ಗೀತವ । ಪಾಡೆ ನಾಟ್ಯದ ।
ತರುಣಿಯರು ಕುಣಿ । ದಾಡೆ ವಾದ್ಯಗ । ಳ್ಮೊರೆಯೆ ಕೂಡೆ ॥ ೬೩ ॥

೨೨ ಭಾಮಿನಿ ಷಟ್ಪದಿ

ರಾಮ—

[3]ಜನಕಜನನಿಯರಿಂಗೆ ರಾಘವ
ನನುನಯದಿ ಕೈಮುಗಿದು ತನ್ನಯ
ಮನೆಯ ದೈವವ ಬೇಡಿ ಗುರುಹಿರಿಯರಿಗೆ ತಲೆವಾಗಿ ।
ನೆನಸಿ ಪೊಡಮಟ್ಟನು ಸುಮಿತ್ರೆಯ
ಜನನಿ ಕೈಕೆಯ ಕಾಣದಿರೆ ಲ
ಕ್ಷ್ಮಣನನೀಕ್ಷಿಸಿ ತಂದೆ ದಶರಥರಾಯಗಿಂತೆಂದ[3] ॥ ೬೪ ॥

1 ಪಟ್ಟದಾನೆಯ ಕರದಿ ಮಾಲೆಯ । ಕೊಟ್ಟು (ಅ)   2 ಕವ ನೆರೆ । ಪಿಡಿದು (ಅ)
3 ಈ ಭಾಮಿನಿ ಷಟ್ಪದಿಯು 'ಸೌರಾಷ್ಟ—ತ್ರಿವುಡೆಯ' ರೂಪದಲ್ಲಿ ೨೧ನೇ ಪದ್ಯದ ಕೊನೆಯಲ್ಲಿ ಸೇರಿಕೊಂಡಿದೆ :

ಜನಕ . . . . . .
. . . . . . . .
. . . . . . . ಹಿರಿಯರಿಗೆ ನಮಿಸಿ ॥
. . . . . . . .
ಜನನಿ ಕೈಕಾದೇವಿ ಬಾರದ
ಅನುವಿದೇನೆಂದೆನುತ ತನ್ನಯ ಜನನಿಗೆಂದ ॥ (ಓ)

೨೩ ಘಂಟಾರವ—ಜಂಪೆತಾಳ

ಜನಕ ಕಿರು । ಜನನಿಯಹ । ವನಜಮುಖಿ । ಕೈಕೆ ಈ ।
ಜನರ ಸಭೆ । ಯೊಳಗೆಲ್ಲ । ನಾ ಕಾಣೆ । ನಯ್ಯ ॥ ೬೫ ॥

ಏಕೆ ಭರ । ತನ ಮಾತೆ । ಈ ಕಡೆಗೆ । ಬರಲಿಲ್ಲ ।
ನೀ ಕರೆದು । ಬಾರನುಜ । ಲಕ್ಷ್ಮಣ । ವೀರ ॥ ೬೬ ॥

ತಿಳಿಯಲಿ । ಲ್ಲವೆ ಮೊದಲೆ । ತಾಯಿ ಕೈ । ಕಾದೇವಿ ।
ಬಲುಬೇಗ । ಕರಕೊಂಡು । ಬಾರಯ್ಯ । ತಮ್ಮ ॥ ೬೭ ॥

(ಲಕ್ಷ್ಮಣನೊಡನೆ ಎಲ್ಲರೂ ಹೊರಟುಹೋಗುತ್ತಾರೆ. ಆಮೇಲೆ ಮಂಚದಲ್ಲಿ ಮಲಗಿದ್ದ ಕೈಕೆಯ ಪ್ರವೇಶ—ತೆರೆಯಲ್ಲಿ)

೨೪ ಸೌರಾಷ್ಟ—ಮಟ್ಟೆತಾಳ ೪

**ಲಕ್ಷ್ಮಣ**—

ಎನಲು ಲಕ್ಷ್ಮ । ಣ— । ಘನದಿ ಬಂದ । ನು— ।
ಜನನಿಯಾಗಿ । ಹ— । ಕೈಕೆಯಲ್ಲಿ । ಗೆ— ॥ ೬೮ ॥

(ಲಕ್ಷ್ಮಣನ ಪ್ರವೇಶ)

**ಲಕ್ಷ್ಮಣ**—

ಜಯಜಯಾ ಮ । ಹಾ— । ಕಮಲಲೋಚ । ನೆ— ।
ಭಯ ನಿವಾರಿ । ಣೀ— । ಭಾಗ್ಯಶಾಲಿ । ನಿ— ॥ ೬೯ ॥

ಚಿಂತೆ ಏಕ । ವ್ವ— । ನಿಮ್ಮ ಮನಸಿ । ಗೆ— ।
ಸಂತಸದಿಂ । ದ— । ಅಣ್ಣ ರಾಮ । ಗೆ— ॥ ೭೦ ॥

ಪೊಡವಿಪತ್ಯ । ವ— । ಕೊಡುವ ಭೂಪ । ತಿ— ।
ತಡೆಯದಲ್ಲಿ । ಗೆ— । ತೆರಳಿ ಶೀಘ್ರ । ದಿ— ॥ ೭೧ ॥

ಭೂಮಿಪಾಲ । ರು— । ಸಹಿತ ಕಾವ । ರು— ।
ಭಾಮಿನೀ ಮ । ಣೀ— । ಭ್ರಮರ ಕುಂತ । ಳೆ— ॥ ೭೨ ॥

ಲಗ್ನಕೈದಿ | ದೆ— | ಶೀಘ್ರದಿಂದ | ಲೆ |
ವಿಘ್ನವಾಗಿ | ದೆ— | ನೀವು ಬಾರ | ದೆ— || ೭೩ ||

ಅಗ್ರಗಣ್ಯ | ನು— | ಅಣ್ಣ ರಾಘ | ವ— |
ವ್ಯಗ್ರನಾಗು | ವ— | ಪೋಗದಿದ್ದ | ರೆ— || ೭೪ ||

೨೫ ಪಂತುವರಾಳಿ—ಜಂಪೆತಾಳ ೩

ಕೈಕೆ—

ಲಕ್ಷ್ಮಣ ಮ | ಹಾ ವೀರ | ನಿನ್ನೊಳಾ | ಡುವದೇನು |
ಲಕ್ಷವಾ | ದರು ಬಾರೆ | ಕಾರಣ | ಬೇರೆ || ೭೫ ||

ಹುಡುಗ ನೀ | ನರಿಯೆ ಹೋ | ಗತಿ ಬೇಗ | ದಲಿ ನಮ್ಮ |
ಪೊಡವಿ ಪಾ | ಲಕನಿಲ್ಲಿ | ಬರಲಿ ಹೇ | ಳಯ್ಯ || ೭೬ ||

ತಡವ ಮಾ | ಡುವುದೇಕೆ | ತರಳ ಪೋ | ಗುವದಕ್ಕೆ |
ನಡೆ ನಡೆ | ಬರಲೆನ್ನ | ಕಾಂತ ನೋ | ಹನ್ನ || ೭೭ ||

ಲಕ್ಷ್ಮಣ—

ಎನಲು ಲ | ಕ್ಷ್ಮಣ ನಂದು | ಘನ ಬೇಗ | ದಲಿ ಬಂದು |
ಜನಕನಿ | ದಿರಲಿ ನಿಂದು | ಸಭೆಯೊಳಿಂ | ತೆಂದ || ೭೮ ||

(ರಾಮನೂ ದಶರಥನೂ, ಸ್ವಲ್ಪ ತಡೆದು ಲಕ್ಷ್ಮಣನೂ ಪ್ರವೇಶಿಸುತ್ತಾರೆ)

೨೬ ಕಲ್ಯಾಣಿ—ಏಕತಾಳ ೪

,ರಾಘವ | ಬಿನ್ನಹ | ಕೈಕಾ ದೇ | ವಿಯ ಮನ |
,ದಾಗಮ | [1]ಬೇರಿದೆ[1] | ಹೋಗಿ ನೋ | ಡಿದೆನು || ಪಲ್ಲವಿ ||

,ಬಾಗಿಲು | ಗಳನೆಲ್ಲ | ಹಾಕಿ ಮಂ | ಚದ ಮೇಲೆ |
,ರೋಗ ಬಂ | ದವರಂತೆ | ಬಹಳ ದುಃ | ಖದಲಿ || ೭೯ ||

1 ಬೇರಾಗಿದೆ (ಅ)

,ಮಲಗಿದಿ । ರೇಕೆಂದು । ಮಾತನಾ । ಡಿಸಿದರೂ ।
,ಒಳವ ಎ । ನ್ನೊಳು ಪೇಳ । ಲಿಲ್ಲ ಆ । ಜನನಿ ॥ ೮೦ ॥

,ದಶರಥ । ಪಿತನೊಳು । ಮಾತುಗ । ಳುಂಟಂತೆ ।
ವಸುಧೇಶ । ನನು ಬರ । ಹೇಳ್ದಳಾ । ಕಾಂತೆ ॥ ೮೧ ॥

ಲಕ್ಷ್ಮಣ । ನಿಂತೆಂದು । ಪೇಳೆ ಭೂ । ಪಾಲಕ ।
ಆ ಕ್ಷಣ । ದಲಿ ಬಂದು । ಕೈಕೆಯ । ಕಂಡ ॥ ೮೨ ॥

(ರಾಮಲಕ್ಷ್ಮಣರ ನಿಷ್ಕ್ರಾಮ ಮತ್ತು ಕೈಕೆಯ ಪ್ರವೇಶ)

೨೭ ಘಂಟಾರವ—ಏಕತಾಳ ೪ ; ತೋಡಿ—ಏಕತಾಳ ೫

ದಶರಥ—

ಏನಾಯಿತಂ । ಬುಜನೇತ್ರೆ । ಮಾನಿ[1]ನಿಮಾರ್[1] । ವರ್ಣಾಲೇ ।
ನೀನೇಕೆ ಚಿಂ । ತಿಸುತಿರ್ಪೆ । ಪೇಳಬೇಕಿಂ । ದೆನಗೆ ॥ ಪಲ್ಲವಿ ॥

ಆನನವೇ । ಕೆ ಬಾಡಿತು । ಅಂಬುಜದ । ಳಾಕ್ಷಿ ।
ಈ ನಿರೋಧ । ಗಳಿಂದೇಕೆ । ಕೋಮಲಾಂಗಿ । ಪೇಳೆ ॥ ೮೩ ॥

ಕೈಕೆ—

ವಲ್ಲಭ ಕೇ । ಳೆನ್ನ ಮನ । ದಲ್ಲಿರುವ । ಕ್ಲೇಶ ।
ಎಲ್ಲವ ನಿ । ನ್ನೊಡನೆ ಪೇಳ್ವೆ । ಕಲ್ಯಾಣಾಂಗ । ಕೇಳು ॥ ೮೪ ॥

ಪಿಂತೆ ನೀ ಕೊ । ಟ್ಟ ಮಾತೆರ । ಡುಂಟು ನಿನ್ನ । ಮೇಲೆ ।
ಸಂತೋಷವ । ಮಾಡಿಕೊಡು । ಸಂದೇಹವ । ಬಿಟ್ಟು ॥ ೮೫ ॥

ದಶರಥ—

ಕಾಂತೆ ಕೇಳಿ । ಷ್ಟೊಂದು ಮಾತಿ । ಗಿಂಥದೊಂದು । ಸಿಟ್ಟೇ ।
ಅಂತರಂಗ । ಶುದ್ಧವಾಗಿ । ಬೇಡಿಕೊ ನಾ । ಕೊಟ್ಟೆ ॥ ೮೬ ॥

---

1 ಯರ್ (ಕಾ) ಯರ (ಅ)

ಕೈಕೆ—

ನೇಮವೆಂದೆ । ನುತ್ತ ಕೈಯ । ಮೇಲೆ ಕೈಯ । ತಟ್ಟು ।
ಕಾಮರೂಪ । ಸಿದ್ಧವೆಂದು । ಕೊರಳ ನೀನು । ಮುಟ್ಟು ॥ ೮೭ ॥

ದಶರಥ—

ಅಂಬುಜಲೋ । ಚನೆ ಇನಿ । ತೆಂಬ ಮಾತ । ಕೇಳಿ ।
ಕುಂಭಿನೀ ಪಾ । ಲಕ ಕೈಕೆಗೆ । ನಂಬುಗೆಯ । ಕೊಟ್ಟ ॥ ೮೮ ॥

ವಚನ ॥ ಇಂತಾ ದಶರಥಂ ದೃಢನಂಬುಗೆಯಂ ಕೊಡಲಾಗಿ ಕೈಕೆಯು ಸಂತೋಷ ಮನಸ್ಸಿನಿಂದ ಏನೆಂದಳು ಎಂದರೆ—

ಕೈಕೆ—

[1]ಭೂಮಿಯನ್ನು । ಎನ್ನ ಪುತ್ರ । ಭರತನಿಂಗೆ । ಕೊಟ್ಟು ।
ರಾಮಚಂದ್ರ । ನನ್ನೀಹೊತ್ತೇ । ವನವಾಸಕ್ಕೆ । ಅಟ್ಟು[1] ॥ ೮೯ ॥

೨೮ ವಾರ್ಧಿಕ

ಕುಶನೆ ಕೇಳಿಂತು ಮನುಜರು ನೆನೆದುದೊಂದು ವಿಧಿ
ವಶದೊಳೊಂದಾಯ್ತು ಮಾರುವರಾರು ಕಲ್ಪಿತವ
ವಸುಧೇಶ ಕೊಟ್ಟ ನಂಬುಗೆಗೆ ಮೂರ್ಛಿತನಾಗಿ ಹಮ್ಮೈಸಿ ಬಿದ್ದಿರ್ದನು ।
ಉಸುರಲಾರದೆ ಮೂರುಗಳಿಗೆ ಪರ್ಯಂತ ತನು
ವಶವಿಲ್ಲದಂತಾಯ್ತು ಸರ್ವೇಂದ್ರಿಯಂಗಳುಂ
ಬಿಸಜಲೋಚನೆ ಕೈಕೆಯಂ ನೋಡಿ ದೈನ್ಯದಿಂ ದಶರಥೇಂದ್ರಂ ಪೇಳ್ದನು ॥ ೯೦ ॥

೨೯ ನೀಲಾಂಬರಿ—ಜಂಪೆತಾಳ ೧

ದಶರಥ—

ಕಂಬುಕಂ । ಠಿನಿ ಚಾರು । ಶೀಲೆ— । ಕಮಲಮುಖಿ ।
ಕುಂಭಕುಚೆ । ಪುತ್ಥಳಿಯ । ಬೊಂಬೆ ಪ್ರತಿ । ರಂಭೆ ॥ ಪಲ್ಲವಿ ॥

1 ಎನ್ನ ಪುತ್ರ । ಭರತನಿಂಗೆ । ಪಟ್ಟವನ್ನು । ಕಟ್ಟು ।
ಮುನ್ನ ರಾಮ । ಚಂದ್ರನನ್ನು । ವನವಾಸ । ಕ್ಕಟ್ಟು ॥ (ಓ, ಕಾ)

ಮಕ್ಕಳಿ | ಲ್ಲದೆ ಬಹಳ | ಕಾಲ— | ನಾನಿರಲು |
ದುಃಖದೊಳ | ಗಾಗ ಮುನಿ | ಪಾಲ— | ತಾನೊಲಿದು |
ಅಕ್ಕರಿಂ | ದುಪದೇಶ | ವಿತ್ತನಿದು | ಮೂಲ || ೯೧ ||

ಕ್ರತುಮುಖದಿ | ಪಡೆದ ಸುಕು | ಮಾರ— | ರೂಪಿನಲಿ |
ರತಿಪತಿಯ | ಪೋಲ್ವ ರಘು | ವೀರ— | ಆರಣ್ಯ |
ಗತಿಯೊಳಿರ | ತಕ್ಕವನೆ | ಶ್ರುತಿವಚನ | ದೂರ || ೯೨ ||

ಅರೆನಿಮಿಷ | ಮಾತ್ರ ರಾ | ಘವನ— | ನಾ ಬಿಟ್ಟು |
ಇರಲಾರೆ | ನಯ್ಯೊ ವೋ | ಹನನ— | ಇನ್ನೆಂತು |
ಕರೆದು ಕಳು | ಹುವೆ ಗಹನ | ಕೀಗ ಬಾ | ಲಕನ || ೯೩ ||

೩೦ ಮತ್ತೇಭ—ವೃತ್ತ

ಛಲದಿಂ ಕೈಕೆ ಇರುತ್ತಿರಲ್ ದಶರಥಂ ಶೋಕಾಬ್ಧಿಯಿಂದಾಳುತ |
ಸಲೆ ಹೃತ್ಪಂಕಜ [1]ಬಾಡಿತುಗ್ರಹತಿಯೊಳ್ ಕಣ್ಣೊಳ್ ಜಲಂ ಸೂಸುತ |
ಕಳುಹಲ್ ಕಂದನನಿಲ್ಲಿ ಬೇಗ ಬರಲೆಂದಾ ವಾಕ್ಯಮಂ ಕೇಳುತ |
ಖಳಸಂಹಾರಕುಲಾಬ್ಧಿಚಂದ್ರ ಬಳಿಗಂ ಬಂದಾಗಳಿಂತೆಂದನು[1] || ೯೪ ||

(ರಾಮನ ಪ್ರವೇಶ)

೩೧ ತೋಡಿ—ಅಷ್ಟತಾಳ ೩

ರಾಮ—

ತಾತ ನಿಮ | ಗೀಗ ಬಂ | ದುದು ಯಾ | ತರ ಚಿಂತೆ |
ಭೂತಳದೊ | ಳಿದ್ದಂಥಾದ್ದ | ನಾ ತರುವೆ | ನಿಮ್ಮ ಮನದ |
ಭೂತನಾಥ | ನಡ್ಡಬಂದ | ರಾತುಗೊಂಬೆ | ನು ತಾನೆಂದ || ಪಲ್ಲವಿ ||

---

1 ನೊಂದು ಮನದೊಳ್ ಶ್ರೀರಾಮನಂ ಬೇಗದಿಂ |
ಕರೆಸಲ್ಬಂದು ಪಿತಂಗೆ ವಂದಿಸಿ ಮಹಾಸಂತಾಪದಿಂದಿರ್ಪ ಭೂ |
ಲಲನಾ ಕಾಂತನ ಕೇಳಿದಂ ರಘುವರಂ ಸಂದೇಹದಿಂ ತಂದೆಯಂ || (ಅ)

ಅಷ್ಟದಿಕ್ಪಾ । ಲಕರ ಕೂಡೆ । ಕಷ್ಟ ಬಂದ । ರಂಜೆ ನಾನು ।
ಸೃಷ್ಟಿಗೀಶ । ನಿಮ್ಮ ಮನದ । ಭೀಷ್ಟವ ಪೇ । ಳ ಸುಳ್ಳಲ್ಲ ॥ ೯೫ ॥

ದೇಶದೇಶ । ದರಸರ್ಗೆಲ್ಲ । ಬೇಸರಿಕೆ । ಪುಟ್ಟಿತಲ್ಲ ।
ಈಸುದಿನ । ವಿಲ್ಲದಪ । ಹಾಸದ ಮಾ । ತು ಬಂತಲ್ಲ ॥ ೯೬ ॥

ಅಲ್ಲಿ ಕೂಡಿ । ದವರೆಲ್ಲ । ಸೊಲ್ಲಿಸುತ್ತ । ನಗುಪರಲ್ಲ ।
ಎಲ್ಲ ರಾಯ । ರೂ ಸಾಗುವ । ರಲ್ಲ ಬುದ್ಧಿ । ವಂತರೆಂದು ॥ ೯೭ ॥

ವಚನ॥ ಇಂತೆಂಬ ಮಗನ ಮಾತಿಗೆ ದಶರಥನು ಉತ್ತರವಂ ಕೊಡದೆ ಸುಮ್ಮನೆ ಅಳು ತ್ತಿರಲು ಕೈಕೆ ಏನೆಂದಳು ಎಂದರೆ—

೩೨ ಶಂಕರಾಭರಣ—ತ್ರಿವುಡೆ ೧

ಕೈಕೆ—

ಕೇಳು ರಾಘವ । ನಿನ್ನ ಪಿತ ಮಾ । ತಾಡದಿರುವ ।—ಪರಿಯನು ।
ಪೇಳುವೆನು ಸಿ । ಟ್ಟಾಗದಿರು ಇನ । ವಂಶಜಾತ ॥ ೯೮ ॥

ಭರತಗಿತ್ತನು । ರಾಜ್ಯವೆಲ್ಲವ । ಧರಣಿಪಾಲ ।—ನಿನ್ನನು ।
ಕರೆದು ಗಹನಕೆ । ಕಳುಹ[1]ಲಾಗಿಯೆ[1] । ಮರುಗುತಿಹನು ॥ ೯೯ ॥

ಇನ್ನು ಯೋಚನೆ । ಏಕೆ ರಾಘವ । ಚಿಂತೆ ಬೇಡ ।—ದಿಟವಿದು ।
ಮುನ್ನ ನೀನಾ । ರಣ್ಯವಾಸಕೆ । ಪಯಣವಾಗು ॥ ೧೦೦ ॥

೩೩ ಕಲ್ಯಾಣಿ—ಏಕತಾಳ ೪

ರಾಮ—

,ಲೇಸನಾ । ಡಿದಿರವ್ವ । ಈ ಸ್ವಲ್ಪ । ಕೆಲಸಕ್ಕೆ ।
,ಈಸು ಚಿಂ । ತೆಗಳೇಕೆ । ,ಹೇ ಸುಗು ।ಣಾಢ್ಯೆ ।
[2],ಏಸು[2] ದಿ । ನಾರಣ್ಯ । ,ವಾಸದೊ । ಳಿರಬೇಕು ।
,ಆಸು ದಿನ । ನಾನಿಹೆ । ,ಹೇ ಶಶಿ । ವದನೆ ॥ ೧೦೧ ॥

---

1 ಲಾರದೆ (ಬಿ) 2 ಐಸು (ಬಿ)

ಕೈಕೆ—

,ಈರೇಳು । ವರುಷ ನೀ ।, ಸೇರಿ ಅ । ರಣ್ಯವ ।
,ಬಾರಾಯೋ । ಧ್ಯೆಗೆ ಮತ್ತೆ ।, ಶ್ರೀರಾಮ । ಚಂದ್ರ ॥
,ಬೇರೇನು । ಸಂದೇಹ ।, ಇದರೊಳು । ಮಾಡಬೇಡ (ದಿರು) ।
,ಸಾರು ತಂ । ದೆಯ ಮತ ।, ಈ ರೀತಿ । ಎನಲು ॥ ೧೦೨ ॥

ರಾಮ—

,ಜನಕ ನೀವ್ । ಚಿಂತಿಸ ।, ದಿರಿ ಕೈಕಾ । ದೇವಿಯ ।
,ಮನಸಿನ । ವ್ರತವನು ।, ಸಲಿಸಿ ಬ । ರುವೆನು ॥
,ಎನುತ ಕೈ । ಮುಗಿದ ಬಾ ।, ಲನ ಕಂಡು । ದಶರಥ ।
, ಮನಕರ । ಗಲು ಚಿಂತಾ ।, ವನದೊಳಿಂ । ತೆಂದ ॥ ೧೦೩ ॥

ದಶರಥ—

,ಸಣ್ಣವ । ನೀನೆಂತಾ ।, ರಣ್ಯದೊ । ಳಿರುವೆಯ ।
,ಪುಣ್ಯ ಹೀ । ನನಾನೆಂದ ।, ಕಣ್ಣನೀ । ರಿಂದ ॥
,ಚಿಣ್ಣನ । ನಪ್ಪಿ ಮು ।, ದ್ದಿಸಿ ದಶ । ರಥ ಬಲು ।
,ಬಣ್ಣಿಸಿ । ಮರುಗಿ ಕಾ ।, ರ್ಪಣ್ಯದೊ । ಳ್ಬಿಡದೆ ॥ ೧೦೪ ॥

,ದುಷ್ಟ ಪಾ । ಪಿ ನಾನಯ್ಯೊ ।, ಏಕೆನ್ನ । ಜಠರದಿ ।
, ಪುಟ್ಟಿದೆ । ರಾಮಚಂದ್ರ ।, ರವಿಕೋಟಿ । ಸಾಂದ್ರ ॥
,ಎಷ್ಟು ಹೇ । ಳಿದರೇನು ।, ವಿಧಿ ಫಣೆ । ಯೊಳುಬರ ।
,ದಿಟ್ಟುದ । ಲ್ಲದೆ ಬೇರೆ ।, ನಿಷ್ಠುರ । ವಿಲ್ಲ ॥ ೧೦೫ ॥

ರಾಮ—

,ತಂದೆ ನೀ । ವೇಕೆನ್ನ ।, ನೆನೆದು ಮ । ರುಗುವಿರಿ ।
,ಕಂದರ್ಪಾಂ । ತಕನಾಣೆ ।, ಭಯವಿಲ್ಲ । ತನಗೆ ॥
,ಮುಂದೆ ರಾ । ಜ್ಯವನೆಲ್ಲ ।, ಭರತಗೆ । ಕೊಟ್ಟು ನೀವ್ ।
,ಚಂದದಿ । ಸುಖಬಾಳಿ ।, ರೆಂದು ಕೈ । ಮುಗಿದ ॥ ೧೦೬ ॥

,ವಂದಿಸಿ । ಜನಕನ ।, ಬಳಿಯಿಂದ । ಶ್ರೀರಾಮ ।
,ಬಂದ ತ । ನ್ನರಮನೆ ।, ಗಂದು ಶೀ । ಘ್ರದಲಿ ॥

,ಅಂದಾ ಕೌ । ಸಲ್ಯಾಮ್ಮ ।, ಗೆರಗಿ ಬಿ । ನ್ನೈಸಿದ ।
,ತಂದೆ ಕೈ । ಕೆಯ ಮಾತ ।, ನೊಂದೂ ಮ । ರೆಯದೆ ॥ ೧೦೭ ॥

(ಎಲ್ಲರೂ ನಿಷ್ಕ್ರಮಿಸುತ್ತಾರೆ, ರಾಮನು ಕೌಸಲ್ಯೆಯೊಡನೆ ಪುನಃ ಪ್ರವೇಶಿಸಿ ಆಕೆಗೆ ವಂದಿಸುತ್ತಾನೆ)

೩೪ ಚರಿತೆ (ಸಾಂಗತ್ಯ) ತೋಡಿ—ರೂಪಕತಾಳ ೧

ರಾಮ—

ಶರಣಮ್ಮ । ತಾಯೆ ನಾ । ನಿಂದು ಕೈ । ಕೆಯ ಮನ ॥ ದ್ದರಕೆಗೋ ।
ಸುಗ ಒಂದು । ಕಾರ್ಯ ।
ಮರುಗದಿ । ರೀರೇಳು । ವರ್ಷ ಅ । ರಣ್ಯದಿ ॥ ಚರಿಸಿ ಬ । ರುವೆ
ನಿಮ್ಮ । ಬಳಿಗೆ ॥ ೧೦೮ ॥

ಧರಣಿಪಾ । ಲಕ ಭಾಷೆ । ಕೊಟ್ಟ ಕಾ । ರಣದಿಂದ ॥
ಭರತಗಾ । ಯಿತು ರಾಜ್ಯ । ವೆಲ್ಲ ।
ವರ ಕೈ । ಕಾಮ್ಮನ । ಮನವ ಮೆ । ಚ್ಚಿಸಿಕೊಂಡು ॥
ಸ್ಥಿರವಾಗಿ । ಬಾಳಿ ನೀ । ವೆಲ್ಲ ॥ ೧೦೯ ॥

ನೀಡಿರ । ಪ್ಪಣೆಯನ್ನು । ಸತ್ಯವಿ । ದ್ದರೆ ಕಾಡು ॥
ನಾಡಾಗಿ । ಮನಕೆ ರಂ । ಜಿಪುದು ।
ಬೇಡ ಮ । ತ್ತೊಂದು ಯೋ । ಚನೆ ಪುಣ್ಯ । ವಿದ್ದರೆ ॥
ನೋಡುವೆ । ನಿಮ್ಮ ಪಾ । ದವನು ॥ ೧೧೦ ॥

ನುಡಿದ ಮಾ । ತನು ಕೇಳಿ । ಸಿಡಿಲೆರಗಿ । ದಂದದಿ ॥
ಮಡದಿ ಮೂ । ರ್ಛಿತೆಯಾದ । ಳಾಗ ।
ಬಿಡಲಾರ । ದಪ್ಪಿ ಮು । ದ್ದಿಸಿ ತನ್ನ । ಕುವರನ ॥
ತಡವರಿಸು । ತ್ತೆಂದಳಾ । ಜನನಿ ॥ ೧೧೧ ॥

೩೫ ವರಾಳಿ—ಏಕತಾಳ ೭

ಕೌಸಲ್ಯೆ—

ಏನು ಬುದ್ಧಿ | ನೆನೆದೆಯಯ್ಯೊ | ರಾಮ—ನೀ | ಎನ್ನ ಕೊಂದು |
ಕಾನನಕ್ಕೆ | ಮತ್ತೆ ಹೋಗೊ | ರಾಮ—ರಾ | ಮ — ||
ದಾನವರು | ತಿನ್ನರೇನೊ | ರಾಮ—ನಿ | ನ್ನ ಕೈವಿಡಿದ |
ಮಾನಿನಿ | ಗಿನ್ನೇನು ಗತಿಯೊ | ರಾಮ—ರಾ | ಮ— || ೧೧೨ ||

ಒಂದು ಗಳಿಗೆ | ನಿನ್ನ ಬಿಟ್ಟು | ರಾಮ—ಇರ | ಲಾರದಾ ನ |
ರೇಂದ್ರನೇನು | ಭ್ರಾಂತನಾದ | ರಾಮ—ರಾ | ಮ—||
ಇಂದು ಕೈಕೆ | ಯೇ ಬೇಕಾಯ್ತೆ | ರಾಮ—ಹಾ | ಗಾದರು ನಿ |
ನ್ನಿಂದ ಕೈಕೆ | ಗೇನು ಬಾಧೆ | ರಾಮ—ರಾ | ಮ— || ೧೧೩ ||

ಭರತನಾಳ | ಲಯ್ಯೊ ರಾಜ್ಯ | ರಾಮ—ನಾವ್ | ಬಡವರಂತೆ |
ಶರೀರಮಾ | ತ್ರವಾಗಿರುವ | ರಾಮ—ರಾ | ಮ ||
ತರವಲ್ಲ ಪೋ | ಗುವದಿಂತು | ರಾಮ—ಸೀ | ತಾಂಗನೆ ಬಲು |
ಕರಗಿ ಸೊರಗಿ | ಮರುಗದಿಹಳೆ | ರಾಮ—ರಾ | ಮ— || ೧೧೪ ||

ಒಂದು ಎರಡು | ದಿವಸವಲ್ಲ | ರಾಮ—ಈ | ರೇಳು ವರ್ಷ |
ಎಂದಿಗೆ ತೀ | ರುವದಯ್ಯೊ | ರಾಮ—ರಾ | ಮ—||
ತಂದು [1]ಕಂಡ | ವರ[1] ಮಗಳ | ರಾಮ—ನಂ | ಬಿಸಿಯುವರ |
ನಿಂದು ಕೊರಳ | ಕೊಯ್ವುದೇನೊ | ರಾಮ—ರಾ | ಮ— || ೧೧೫ ||

೩೬ ಕೇದಾರಗೌಳ—ಅಷ್ಟತಾಳ ೧

ರಾಮ—

ಕಣ್ಣನೀ | ರಬುಧಿಯೊ | ಳಾಳುವ | ಜನನಿಯು |
ಪುಣ್ಯಪು | ರುಷ ನೋಡು | ತ್ತ —||

---

1 ಪರರ ಹೆಣ್ಣು (ಓ)

ಬಣ್ಣಗಾ | ರಿಕೆಯಲ್ಲ | ತಾಯೆ ತಂ | ದೆಯ ಮಾತ |
ನುಣ್ಣಗ | ಳಿಯ ಬಾರ | ದ— || ೧೧೬ ||

ಜಾನಕಿ | ಲಕ್ಷ್ಮಣ | ರರಿಯರು | ಬುದ್ಧಿಯ |
ನೀನಿದ್ದು | ಸಲಹೆಯ | ವ್ವ— ||
ತಾವ್ ನೊಂದು | ಕೊಂಬರ | ರಿತರೆ ಪೋ | ಗುವ ಸುದ್ದಿ |
ನೀನಾಗಿ | ಅರುಹ ಬೇ | ಡ— || ೧೧೭ ||

ಧಾರಿಣೀ | ಪತಿ ಮುಪ್ಪಿ | ನವನು ಲ | ಕ್ಷ್ಮಣ ಬಾಲ |
ನಾರಿ ಸ | ಣ್ಣವಳು | ಸೀತೆ— ||
ಬೇರೆ ಬೇ | ರೆವರ ರ | ಕ್ಷಿಸಿಕೊಳ್ಳಿ | ನುತ ಬಿಲ್ಲ |
ನೂರಿ ಕೈ | ಮುಗಿದು ನಿಂ | ದ— || ೧೧೮ ||

೩೭ ವಾರ್ಧಿಕ

ತರಳನಾರಣ್ಯವಾಸವ ಕೇಳಿ ಕೌಸಲ್ಯೆ
ತರಹರಿಸಲಾರದಾದಿತ್ಯನುರುತರಕಿರಣ
ದುರಿಯೊಳಗೆ ಬಾಡಿದೆಳಲತೆಯಂತೆ ಮೊಗಕುಂದಿ ದೆಸೆದೆಸೆಗೆ ಬಾಯ್ಬಿಡುತಲಿ |
ಪರಿಪರಿಯ ದುಃಖದಲಿ ಮರುಗುತಿಹ ಜನನಿಗು
ತ್ತರವಿತ್ತು ಕೈಕೆಯಾ ಹರಕೆಯಂ ಕೈಕೊಂಡು
[1]ಹೊರಡೆ[1] ಜಾನಕಿ ಕಂಡು ಬಳಿಗೈದಿ ಪದಕೆರಗಿ ಸೆರಗ ಪಿಡಿದಿಂತೆಂದಳು || ೧೧೯ ||

(ಕೌಸಲ್ಯೆ ನಿಷ್ಕ್ರಮಿಸಿ ಸೀತೆಯ ಪ್ರವೇಶ)

೩೮ ಸಾವೇರಿ |—ತ್ರಿವುಡೆ ೧, ಅಷ್ಟತಾಳ ೨

ಸೀತೆ—

ಪೋಗುವ | ದುಚಿತವೇ | ನ್ಯೆ—ಎನ್ನ | ನೀ ಬಿಟ್ಟು || ಪಲ್ಲವಿ ||

---

1 ಬಳಿಕ (ಕಾ)

ರಘುವೀರ । ನೀ ಎನ್ನ । ನಗಲಿ ಪೋ । ಗುವೆಯಾ ಈ ।
ಜಗದೊಳೆ । ನ್ನನು ಬಿಟ್ಟು । ಕೊರಳಕೊ । ಯ್ಯುವೆಯ—॥
ಅಗಜೆಯ । ರಸನ ಬಿ । ಲ್ಲಿತ್ತಿದಂ । ದಿಂದನಿ ।
ನ್ನಗಣಿತಾ । ಶ್ರಯ ಬಿಟ್ಟು । ಇರಲಿಲ್ಲ । ವಯ್ಯ— ॥ ೧೨೦ ॥

ರಾಮ—

ಕಳಕೀರ । ವಾಣಿ ಕೇಳ್ । ಕಾಂತೆ—। ಮಮ ಪ್ರಿಯೆ ।
ಸುಲಲಿತ । ಮಂಜುಳ । ಕರರೂಪೆ—॥
ನಳಿನಲೋ । ಚನೆ ಬಹೆ । ಕಿರಿದು ದಿನ । ಕಿಲ್ಲಿಹೆ ।
ಬಳಲಬೇ । ಡವೆ ಕಾಮ । ನರಗಿಣಿ । ಯೆ— ॥ ೧೨೧ ॥

ಸುಮ್ಮನೆ । ಮರುಗದಿ । ರಿ—ಜಾ । ನಕಿ ನೀನು ॥ ಪಲ್ಲವಿ ॥

ಸೀತೆ—

ತರವಲ್ಲ । ನಿನ್ನನೊಂ । ದರೆನಿಮಿ । ಷವೂ ಬಿಟ್ಟು ।
ಇರಲಾರೆ । ಕಾಂತಶಿ । ರೋಮಣಿ । ಯೆ—॥
ಕರವ ಮು । ಗಿವೆನೆನ್ನ । ಕರೆದೊಯ್ಯೊ । ಮೋಹನ್ನ ।
ಕರುಣಸಾ । ಗರಸ್ವಾಮಿ । [1]ಭರತ[1]ಸು । ಪ್ರೇಮಿ—॥ಪೋಗುವ— ॥ ೧೨೨ ॥

ರಾಮ—

ಛಲವೇನೆ । ನಿನಗಿಲ್ಲಿ । ಇರು ಎಂದ । ರೆನ್ನೊಳು ।
ನಳಿನಾಕ್ಷಿ । ನೀ ಬಂದು । ಬಳಲಲೇ । ಕೆ—॥
ಬಲುಕಾಡಿ । ನೊಳುದಿನ । ಕಳೆವದು । ಬಲುಘನ ।
ಖಳರ ಊ । ರದು ಕಾಣೆ । ಕಾಂತೆ ನಿ । ನ್ನಾಣೆ—॥ ಸುಮ್ಮನೆ—॥ ೧೨೩ ॥

ಸೀತೆ—

ಬಿಸಜಾಕ್ಷ । ಎನ್ನ ವಂ । ಚಿಸಿ ಪೋದೆ । ಯಾದರೆ ।
ವಿಷವ ಕು । ಡಿದು ಸಾವು । ದಲ್ಲದೆ । ಬೇರೆ—॥
ಹುಸಿದರೆ । ನಿನ್ನಾಣೆ । ಜನಕನ । ಪದದಾಣೆ ।
ದಶರಥ । ನೃಪನಾಣೆ । ಅಸುರವೈ । ರಿ— ॥ ಪೋಗುವ—॥ ॥ ೧೨೪॥

---

1 ಭಕತ (ಓ)

೩೯ ವಾರ್ಧಿಕ

ಬೇಡವೆಂದಾ ಮಾತ ಕೇಳದುರೆ ಬಿದ್ದು ಹೊರ
ಳಾಡಿ ಸೆರಗಂ ಬಿಡದೆ ಬಳಲುತಿಹ ಜಾನಕಿಯು
[1]ನೋಡಿ ರಾಘವನೊಡಂಬಡಿಸುತಿಹ ವಾರ್ತೆಯಂ[1] ನಾಡಜನರಿಂದ ಕೇಳ್ದು ।
ರೂಢಿಪಾಲಕರಾಮ ರಾಜ್ಯಮಂ ಬಿಟ್ಟೆನ್ನ
ಜೋಡಗಲಿ ಪೋಪನೆಂಬುದನರಿತು ಲಕ್ಷ್ಮಣಂ
ಕೇಡಾದಳೇ ಕೈಕೆ ಎಂದು ಬಂದಗ್ರಜನ ಕೂಡೆ ಬಳಿಕಿಂತೆಂದನು ॥ ೧೨೫ ॥

(ಲಕ್ಷ್ಮಣನ ಸಂಭ್ರಮದ ಪ್ರವೇಶ)

೪೦ ಸೌರಾಷ್ಟ್ರ—ರೂಪಕ ತಾಳ ೩

ಲಕ್ಷ್ಮಣ—
ಅಣ್ಣದೇವ । ನೆ—ಅಯ್ಯುದವದೆ । ಲ್ಲಿ— ।
ಪುಣ್ಯವಾರಿ । ಧೀ— । ಪುರುಷರತ್ನ । ನೆ— ॥ ೧೨೬ ॥

ಇನಕುಲೇಂದ್ರ । ನೆ— । ಏನು ಭಾವ । ನೆ— ।
ಮನಸಿದೇನ । ಯ್ಯ—। [2]ಮನಸಿಜನ । ಯ್ಯ—[2] ॥ ೧೨೭ ॥

ಪೊಡವಿ ಕೈಕೆ । ಗೆ— । ಮಾರಿಹೋಯಿ । ತೆ— ।
ದೃಢವ ಪಾಲಿ । ಸೊ— । [3]ದುಷ್ಟಮರ್ದನ[3]— ॥ ೧೨೮ ॥

೪೧ ತೋಡಿ—ಏಕತಾಳ ೪

ರಾಮ—
ತಮ್ಮ ಇನಿ । ತೇಕೊ ಕೋಪ । ಸುಮ್ಮನೆ ಇ । ರಪ್ಪ ।
ಸಮ್ಮತವ । ಲ್ಲವಿದು ಸತ್ಯ । ಧರ್ಮವ ಮೀ । ರುವದು ॥ ೧೨೯ ॥

1 ಕೂಡಿಕೊಂಡಾರಣ್ಯ । ಕಾಗಿ ಪೋಗುವ ವಾರ್ತೆ (ಓ) 2 ಸರಸಿಜನಯ್ಯ (ಓ) 3 ಭಕ್ತವತ್ಸಲ (ಓ)

ತಾತನು ಪೇ । ಳಿದ್ದುದೊಂದು । ಮಾತ ವಿಾರ । ಲಿಂದು ।
ಪಾತಕ ಹೊ । ದ್ದುವದಯ್ಯ । ನೀ ತಿಳಿದು । ನೋಡು ॥ ೧೩೦ ॥

ನಾರಿ ಜಾನ । ಕಿಯ ಸಹಿತ । ಆರಣ್ಯದೊ । ಳಿದ್ದು ।
ಈರೇಳು ವ । ರ್ಷದ ಮೇಲೆ । ಊರಿಗೆ ಬ । ರುವೆನು ॥ ೧೩೧ ॥

೪೨ ಪಂತುವರಾಳಿ—ಪಂಚಘಾತಮಟ್ಟೆತಾಳ ೩

ಲಕ್ಷ್ಮಣ—

ರಾಘವ ನೀ । ನಿಂದು ವನಕೆ । ಪೋಗುವದೇ । ಬದ್ಧವಾದರೆ ।
ಈಗ ನಾನೂ । ಸಹಿತ ಬರುವೆ । ಪೋಗುವ ಮೂ । ವರು— ॥ ೧೩೨ ॥

ವನಜನಯನ । ನಿನ್ನಬಿಟ್ಟು । ದಿನವ ಕಳೆಯು । ಲಾರೆ ನಾನು ।
ಅನುಜನಾದ । ರೆನ್ನಕೂಡಿ । ವನಕೆ ಪೋಗೆ । ಲೊ— ॥ ೧೩೩ ॥

ಮೇದಿನೀಶ । ರಾಮನಿನ್ನ । ಪಾದಕಮಲ । ವನ್ನು ಬಿಟ್ಟು ।
ಮೇದಿನಿಯೊ । ಳಿರೆನು ತಾಯ । ಪಾದದಾಣೆ । ಗು— ॥ ೧೩೪ ॥

(ಸುಮಿತ್ರೆಯ ಪ್ರವೇಶ)

ಎನುತ ಲ । ಕ್ಷ್ಮಣನು ಬಂದು । ಧನುಶರಗಳ । ತೆಗೆದುಕೊಂಡು ।
ಜನನಿಯಂಘ್ರಿ । ಗೆರಗಿ ಪೇಳ್ದ । ಮನದೊಳಿದ್ದು । ದ — ॥ ೧೩೫ ॥

ಅಮ್ಮ ರಾಮ । ಚಂದ್ರನು ಸೀ । ತಮ್ಮನವರ । ಕೂಡಿಕೊಂಡು ।
ನಿರ್ಮಲದೊಳು । ವನಕೆ ಪೋಪ । ನಂತೆ ಶೀಘ್ರ । ದಿ ॥ ೧೩೬ ॥

ಕಳೆಯಲಾರೆ । ಬಿಟ್ಟು ದಿನವ । ನಳಿನನೇತ್ರ । ನೆರಡು ಪದವ ।
ತಿಳುಹಿ ರಾಮ । ನೊಡನೆ ಮಾತೆ । ಕಳುಹು ಎನ್ನ । ನೂ— ॥ ೧೩೭ ॥

೪೩ ನವರೋಜು—ಮಟ್ಟೆತಾಳ ೧

**ಸುಮಿತ್ರೆ—**

ಲೇಸು ಮಗನೆ | ರಾಮ ವನಕೆ | ಪೋಪನಾದ | ರೆ— |
ಐಸೆ ಕಾರ್ಯ | ವಿದು ಮುಹೂರ್ತ | ಬೇಸರಿಲ್ಲ | ದೆ— || ೧೩೮ ||

ದೃಢಮನಸ್ಸಿ | ನಲ್ಲಿ ರಾಮ | ನೊಡನೆ ಪೋಗೆ | ಲೊ— |
ಅಡವಿಯೇ | ರಾಜ್ಯ ನಾಲ್ಕು | ಕಡೆಯೊ | ಳಾಹು | ದು— || ೧೩೯ ||

ಸೀತೆಯನ್ನು | ಮನದಿ ಎನ್ನ | ರೀತಿ ನೋಡಿ | ಕೊ— |
ತಾತ ರಾಮು | ಚಂದ್ರನೆಂದು | ಮಾತನಾಡಿ | ಕೊ— || ೧೪೦ ||

೪೪ ಕಂದ

ಕಂದಗೆ ಬುದ್ಧಿಯ ಪೇಳ್ದಾ
ಚಂದ್ರಾನನೆ ಬೇಗ ರಾಮನಲ್ಲಿಗೆ ಬಂದು[ಂ] |
ನಿಂದಿದ್ದಾಕೆಯ ಕಾಣುತ
ವಂದಿಸೆ ರಾಘವನೊಳೆಂದಳಂಬುಜನಯನೆ || ೧೪೧ ||

೪೫ ಕಾಂಭೋಜಿ—ಏಕತಾಳ ೪

ಧಾರಿಣಿಯ | ಧಿಪತಿತ್ವ | ಭರತಗಿ | ತ್ತು ನೀನೀಗ |
ನಾರಿ ಜಾನ | ಕಿಯ ಸಹಿತ | ಆರಣ್ಯಕೆ | ಪೋಗುವೆಯ || ೧೪೨ ||

ಲಕ್ಷ್ಮಣ ನಿ | ನ್ನ ಬಿಟ್ಟು ಒಂ | ದೇ ಕ್ಷಣವೂ | ನಿಲುವನಲ್ಲ |
ರಕ್ಷಿಸಿಕೊ | ನೀ ಪೋದಲ್ಲಿ | ಅಕ್ಷಯ ಆ | ಯುಷ್ಯವಿರಲಿ || ೧೪೩ ||

ಸ್ವಸ್ತಿಯಾಗ | ಲೆಂದು ತನ್ನ | ಪುತ್ರನಾದ | ಲಕ್ಷ್ಮಣನ್ನ |
ಭಕ್ತಿಯಿಂದ | ಶ್ರೀರಾಮನ | ಹಸ್ತದೊಳಿ | ತ್ತಳು ಮಗನ || ೧೪೪ ||

(ಎಲ್ಲರೂ ನಿಷ್ಕ್ರಮಿಸುತ್ತಾರೆ. ಆಮೇಲೆ ಆಸನಸ್ಥನಾದ ದಶರಥನ ಮುಂದೆ
ಸೀತಾರಾಮಲಕ್ಷ್ಮಣರ ಪ್ರವೇಶ)

ವಚನ॥ ಇಂತು ಸುಮಿತ್ರೆಯಿಂ ಬೀಳ್ಕೊಂಡು ಜಾನಕೀಲಕ್ಷ್ಮಣರನೊಡಗೊಂಡು ಪಿತನಾದ ದಶರಥನ ಬಳಿಗಂ ಬಂದು ರಾಮನು ಏನೆಂದನು ಎಂದರೆ—

೪೬ [1]ಮಧ್ಯಮಾವತಿ—ಏಕತಾಳ ೩[1]

ರಾಮ—

,ತಾತ ಬಿ । ನ್ನಹ ಎನ್ನ ।, ಮಾತ ಲಾ । ಲಿಸಬೇಕು ॥ ಪಲ್ಲವಿ ॥

,ನಾರಿ ಜಾ । ನಕಿ ತಮ್ಮ ।, ಲಕ್ಷ್ಮಣ । ಸಹಿತಾಗಿ ।
,ಆರಣ್ಯ[2]ದೊ । ಳಿರುವೆ[2]ವೆಂ ।, ದಳುತಲ್ಲೆ । ದಾರೆ ॥ ೧೪೫ ॥

,ಏನು ಮಾ । ಡಲಿ ವಿಧಿ ।, ಬರೆದುದಾ । ಯಿತು ಮುಂದೆ ।
,ನೀನು ಸು । ಖದೊಳಿರೈ ।, ಧಾರಿಣೀ । ಪಾಲ— ॥ ೧೪೬ ॥

೪೭ ನೀಲಾಂಬರಿ—ತ್ರಿವುಡೆ ೧, ಅಷ್ಟತಾಳ ೧

ದಶರಥ—

ರಾಘವ । ವಿಪಿನಕ್ಕೆ । ಜಾನಕಿ । — ಸಹಿ ।
ತಾಗಿ ಲ । ಕ್ಷ್ಮಣ ನೀನು । ಮೊದಲಾಗಿ ॥
ಹೀಗೆ ಮೂ । ವರು ನೀವು । ಮಾತಾಡಿ । — ಕೊಂಡು ।
ಪೋಗುವ । ದಡವಿಗೆ । ಬದ್ಧವೆ ॥ ೧೪೭ ॥

ಕಾಡಿನೊ । ಳಗೆ ಬಲು । ಮೃಗಗಳು ।—ನಿಮ್ಮ ।
ಪೀಡಿಸ । ದಿರುವವೆ । ನೀ ಪೇಳು ॥
ಗಾಢರ । ಕ್ಕಸರಿಪ್ಪ । ಠಾವಲ್ಲಿ ।—ಸೀತೆ ।
ನೋಡಿ ಅಂ । ಜದೆ ತಾನೆಂ । ತಿಹಳಲ್ಲಿ ॥ ೧೪೮ ॥

ಹಸಿವಾಗ । ಲಡವಿಯೊ । ಳೇನುಂಟು ।—ನಿದ್ರೆ ।
ಮುಸುಕೆ ಕಾ । ಡೊಳು ಮಲ । ಗುವಿರೆಂತು ॥

---

1 ಘಂಟಾರವ—ಜಂಪೆ (ಕಾ) 2 ಕೈಬರುತೇವೆ । (ಅ)

ಬಿಸಿಲು ಮ | ಳೆಯನೆಂತು | ತಡೆವಿರಿ |—ಹಾಲು |
ಮೊಸರು ಬೆ | ಣ್ಣೆಯನೆಂತು | ಬಿಡುವಿರಿ || ೧೪೯ ||

ಸಾವಕಾ | ಲಕೆ ಕಂಡೆ | ಭಾಗ್ಯವ |—ಕೊಟ್ಟ |
ದೇವರಿಂ | ದೆನಗೆ ಅ | ಯೋಗ್ಯವ ||
ಯಾವ ಮು | ಹೂರ್ತಕೀ | ಕೈಕೆಯ |—ತಂದೆ |
ಜೀವಕ್ಕೆ | ಮುತ್ತಾದ | ಳೀಕೆಯ || ೧೫೦ ||

೪೮ ಚರಿತೆ (ಸಾಂಗತ್ಯ)—ರೂಪಕತಾಳ ೨ ; ತೋಡಿ

ವನವಾಸ | ಕೆಯ್ದ ಬ | ರುವೆನೆಂದು | ಮೂವರು | ಜನಕನ |
ಪಾದಕ್ಕೆ | ನಮಿಸಿ |
ವನಿತೆಕೈ | ಕಾದೇವಿ | ಗಭಿವಂದಿ | ಸಲು ಕಂಡು | ಮನದೊಳಿ |
ದ್ದುದನರು | ಹಿದಳು || ೧೫೧ ||

ಕೈಕೆ—

ಆರಣ್ಯ | ದೆಡೆಗೆ ಶೃಂ | ಗಾರವ |·ಲ್ಲೆನುತ ಭಂ | ಗಾರವ |
ಸ್ತುವನೆಲ್ಲ | ಕಳಚಿ |
ಬೇರೆ ಬೇ | ರವರಿಗೆ | ವಿಂಗಡಿ | ಸುತ ಮತ್ತೆ | ನಾರಿನಂ |
ಬರ ಕೊಟ್ಟ | ಳಾಗ || ೧೫೨ ||

ಸೀತೆ—

ಪಟ್ಟೆಸೀ | ರೆಯ ಬಿಚ್ಚಿ | ಚಿನ್ನವ | ತೆಗೆದಾಕೆ | ಕೊಟ್ಟ ವ |
ಲ್ಕಲವ ಕಾ | ಣುತ್ತ |
ಸೃಷ್ಟಿದೇ | ವಿಯೆ ನೀನೋ | ಡೆಂದು ಕಂ | ಬನಿದುಂಬಿ | ಉಟ್ಟಳು |
ಜನಕನ | ಪುತ್ರಿ || ೧೫೩ ||

೪೯ ಭಾಮಿನಿ

ಗುರು ವಸಿಷ್ಠಾದ್ಯಖಿಲ ಹಿರಿಯರ
ಚರಣಕಭಿವಂದಿಸುತ ಮೂವರು
ವರಮಹಾಮಂದಿರವ ಹೊರಟರು ಪೂರ್ವಮುಖವಾಗಿ |

ಕರದೊಳಗೆ ಬಿಲ್‌ಬಾಣ ಗಜರಥ
ತುರಗ[1]ಸಂದಣಿಯಿಂದ, ಲೋಕದ[1]
ನೆರವಣಿಯು ನಾರಿಯರು ನೆರೆದಿಂತೆಂದರೊಳಗೊಳಗೆ ॥ ೧೫೪ ॥

(ಎಲ್ಲರೂ ನಿಷ್ಕ್ರಮಿಸಲಾಗಿ ಇಬ್ಬರು ಪೌರಸ್ತ್ರೀಯರು ಪ್ರವೇಶಿಸುತ್ತಾರೆ)

೫೦ ಆನಂದಭೈರವಿ-ಆದಿತಾಳ

ಪೌರಸ್ತ್ರೀಯರು—
ಅಕ್ಕ ನೋ । ಡಿಂಥ ಬಾಲ । ರ—ದೇ । ಶಾಧಿಪ ವ ।
ನಕ್ಕೆ ಕ । ಳುಹುವನ । ಲ್ಲೆ— । — ॥
ಮುಕ್ಕಣ್ಣ । ಶಿವನೆ ಬ । ಲ್ಲ—ಕೈ । ಕೆತಾನಿಂಥ ।
ಮಕ್ಕಳ । ಹೆರಲಿಲ್ಲ । ವೆ— । — ॥ ೧೫೫ ॥

ಹದಿನಾಲ್ಕು । ವರುಷ ಬಿ । ಟ್ಟು—ಕಾ । ಸಲ್ಯೆಗೆ ।
ಎದೆಯೆಂತು । ನಿಲ್ವುದ । ವ್ವ— । —॥
ಮದನಕೋ । ಟಿಸ್ವರೂ । ಪ—ಲ । ಕ್ಷ್ಮಣ ನೋಡೆ ।
ಮದುಮಗ । ನಂತಿರು । ವ— । — ॥ ೧೫೬ ॥

ಎಲ್ಲರಂ । ತಲ್ಲವೆ ಜೀ । ವ—ಸು । ಮಿತ್ರೆಗೇನು ।
ಕಲ್ಲೆದೆ । ಯಾಯಿತ । ವ್ವ— । — ॥
ಫುಲ್ಲಲೋ । ಚನೆ ಸೀತೆ । ಯ—ತಾ । ಯ್ತಂದೆಯರು ।
ಎಲ್ಲಿಹ । ರೇನಾಹ । ರೊ — । — ॥ ೧೫೭ ॥

ಎಷ್ಟುತ । ಪವ ಗೈದ । ರು—ಇಂ । ಥ ಮಕ್ಕಳು ।
ಪುಟ್ಟುವ । ರೇನೆಯ । ಕ್ಕ— । — ॥
ಸೃಷ್ಟಿಗೆ । ಸೂರ್ಯರ । ಲ್ಲೆ—ಹೀ । ಗಾದರೆ ।
ಕಟ್ಟಿತ । ಯೋಧ್ಯದೂ । ರು— । — ॥ ೧೫೮ ॥

---

1 ಜನರ ವಿಶೇಷ ಘೋಷದಿ (ಕಾ)

೫೧ ದೇಶಿರಾಗ—ಅಷ್ಟತಾಳ ೧

ಬಂದರು । ರಾಮ ಲ । ಕ್ಷ್ಮಣರು । — ಆನೆ ।
ಮಂದಿ ಕು । ದುರೆ ತೇರು । ಸಂಗಡ । ಬರಲು ॥ ಪಲ್ಲವಿ ॥

ಕೇರಿ ಕೇ । ರಿಗಳೆಲ್ಲ । ಕಳೆದು । — ತಮ್ಮ ।
ಊರು ತಾ । ಯ್ತಂದೆಯ । ಹಂಬಲ । ತೊರೆದು ।
[1]ಏರುಕಂ । ಬನಿ ಧರೆ । ಗಿಳಿದು ।—ಮುಂದೆ ।
ಸೇರಿಪ್ಪ । ಸಂಸಾರ । ಬಂಧನ । ಹರಿದು[1] ॥ ೧೫೯ ॥

ಮಾತಾಪಿ । ತರ ಮೊಗ । ನೋಡಿ । —ಸುಮ್ಮ ।
ನೇತಕೆ । ಕ್ಲೇಶವೆಂ । ದೆನುತ ಮಾ । ತಾಡಿ ।
ಪ್ರೀತಿಯಿಂ । ದವರ ಕೊಂ । ಡಾಡಿ । —ನಾನಾ ।
ರೀತಿಯಿಂ । [2]ದೆಲ್ಲರೊ । ಳಪ್ಪಣೆ । ಬೇಡಿ[2] ॥ ೧೬೦ ॥

(ಪೌರಸ್ತ್ರೀಯರು ಹೊರಟುಹೋಗಲಾಗಿ ರಾಮಸೀತಾಲಕ್ಷ್ಮಣರು ಸುಮಂತ್ರನೊಡನೆ ಪ್ರವೇಶಿಸುತ್ತಾರೆ)

೫೨ ಭಾಮಿನಿ

ಊರ ಹೊರವಂಟವರು ಗಂಗಾ
ತೀರಪರ್ಯಂತರದಿ ನಿಂತಾ
ಬೇರೆ ಬೇರೆಲ್ಲರಿಗೆ ಕರಗಳ ಮುಗಿದು ಬೀಳ್ಕೊಂಡು ।
ಸಾರೆ ನದಿಯನು ಮಂತ್ರಿಸಹ ರಥ
ವೇರಿ ನಡೆದರು ಮುಂದೆ ಪಯಣದಿ
ಮೂರುದಿನ, ತಡೆನಿಂದುರಾಮುಸುಮಂತ್ರಗಿಂತೆಂದ ॥ ೧೬೧ ॥

೫೩ ನೀಲಾಂಬರಿ—ಅಷ್ಟತಾಳ ೨

ರಾಮ—
ಮಂತ್ರೀಶ । ಕೇಳಯ್ಯ । ನಿನ್ನೊಳು ।—ಪೇಳು ।
ವಂಥದೇ । ನುಂಟು ಬ । ಲ್ಲವನೊಳು ।

---

1 ಊರಜ । ನರು ಬೇರೆ ನೆರೆದು ।—ಬರೆ ।
ಬೇರೆಬೇರೆಲ್ಲರು । ನಮಿಸಿದ । ರೊಲಿದು॥ (ಓ)
2 ದವರೊಳ । ಪ್ಪಣೆಯನ್ನು ಬೇಡಿ । (ಕಾ)

ಚಿಂತಿಪ್ಪ | ಜನಕ ಮು | ಪ್ಪಿನ ಕಾಲ | —ಎಂದು |
ನೀಂತಿಳಿ | ದೆಲ್ಲರ | ಸಲಹಯ್ಯ ॥ ೧೬೨ ॥

ಭರತಶ | ತ್ರುಘ್ನರು | ಬರಲಿಲ್ಲ | —ಬೇಗ |
ಕರೆಸಿಕೊ | ಳ್ಳಲಿ ಹೇಳು | ಧರಣೀಶ |
ವರಜನ | ನಿಯರು ಚಿಂ | ತಿಸುವರು | —ಭರತ |
ಗರುಹು ಚಂ | ದದಿ ನೋಡಿ | ಸಲಹಲಿ ॥ ೧೬೩ ॥

ಮನಸಿನೊ | ಳಗೆ ಭೇದ | ವೆಣಿಸದೆ |—ನಾ ಬಾ |
ಹನಕ ಒ | ಕ್ಕಲುಗಳ | ದಣಿಸದೆ |
ಘನತೆಗೆ | ಕಡಿಮೆ ಎಂ | ದೆನಿಸದೆ | —ಧರ್ಮ |
ವೆನಿಸಿ ರ | ಕ್ಷಿಸಹೇಳು | ಭರತಗೆ ॥ ೧೬೪ ॥

(ಸುಮಂತ್ರನ ನಿಷ್ಕ್ರಮ)

೫೪ ಘರಜುರಾಗ—ಏಕತಾಳ ೩

ಈ ತೆರ | ದಲಿ ಮಂ | ತ್ರಿಯ ಕಳು | ಹಿಸಿ ರಘು |
ನಾಥ ಮುಂ | ದಡಿಯಿಡ | ಲಃ— |
ಸೀತಾ | ದೇವಿಯು | ಲಕ್ಷ್ಮ | ಣ | ಸಹ ಬರು |
ವಾತನ | ಗುಹನು ಕಂ | ಡು— ॥ ೧೬೫ ॥

(ಗುಹನ ಪ್ರವೇಶ)

ಗುಹ—

ನೂತನ | ವಿದು ದಶ | ರಥನಣು | ಗರು ಬಹ
ರೀತಿಯ | ನೆರೆ ತಿಳಿ | ದು — |
ಪ್ರೀತಿಯ | ಕಾಣಿಕೆ | ಯಿತ್ತಡಿ | ಗೆರಗುತ |
ಮಾತಾ | ಡಿಸುತೆಂ | ದ— ॥ ೧೬೬ ॥

೫೫ ಆಹೇರಿರಾಗ—ಮಟ್ಟೆತಾಳ ೩

ಎನ್ನ | ಯ ಕುಲ | ದೇವೇ | ಶ— | ರಾಮ | ಚಂ — | ದ್ರ — | ಪಾದ
ವನ್ನು | ಕಂಡು | ಧನ್ಯ | ನಾದೆ | ರಾಮ | ಚಂ | ದ್ರ— |

ಮನ್ನ | ರಥಿ | ಪತಿ | ನೀನು | ರಾಮ |ಚಂ—ದ್ರ — | ರಾಜ್ಯ |
ವನ್ನು | ಬಿಟ್ಟು | ಪೋಪು | ದೇನು | ರಾಮ | ಚಂ—| ದ್ರ— || ೧೬೭ ||

ರಾಮ—

ತರಳ | ಗುಹನೆ | ಬಾಬಾ | ಯಾ—| ರರಿಯ | ದಂದ | ದಿ— | ನಮ್ಮ |
ಭರದಿ | ಮೂಪ | ರನ್ನು | [1]ನದಿಯ | ಕರೆಗೆ | ದಾಟ | ಸೊ[1]— ||
ತರಣಿ | ಯುದಯ | ವಾದ | ರಿಲ್ಲಿ | ದ್ದವರು | ಕಂಡ | ರೆ—| ಸುಮ್ಮ |
ನಿರದೆ | ಮಾಳ್ಪ | ರು— | ಫಲವ | ಬರುವೆ | ನೆಂಬ |ರು— || ೧೬೮ ||

*

ಗುಹ—

ಕಂಜ | ದಳ | ನೇತ್ರೆ | ಸೀತೆ | ರಾಮ | ಚಂ—| ದ್ರ— | ಕಣ್ಗೆ |
ರಂಜಿ | ಪ ಲ | ಕ್ಷ್ಮಣನು | ಸಹ | ರಾಮ | ಚಂ—| ದ್ರ— |
ಸಂಜೆ | ಯಾಯಿ | ತೀ | ಹೊತ್ತು | ರಾಮ | ಚಂ—| ದ್ರ—| ನಾಳೆ |
ಮುಂ | ಜಾನೆ | ಎದ್ದು | ಪೋಗಿ | ರಾಮ | ಚಂ— | ದ್ರ— || ೧೬೯ ||

(ಗುಹನು ಹೊರಟುಹೋಗಲಾಗಿ ಭಾರದ್ವಾಜಋಷಿಯು ಪ್ರವೇಶಿಸುತ್ತಾನೆ)

೫೬ ವಾರ್ಧಿಕ

[2]ಗುಹನಿಂತು ಪ್ರಾರ್ಥನೆಯ ಮಾಡಿ ತಾ ಸಕಲ ಸ
ನ್ನಹವ ಕೊಟ್ಟಲ್ಲಿದ್ದರಾದಿವಸ ರಾತ್ರಿಯಲಿ
ಬಹು ಮುಂಚಿತಾಗಿ ಮರುದಿನ ಎದ್ದು ಬಂದು ಭಾರದ್ವಾಜನಂ ಕಂಡರು

---

1 ಆಚೆ ದಾಟಿ ಸೋಗಡ (ಅ)

* ಎಂದೆಡೆ ಗು | ಹ—ಯಾ | ರರಿಯದಂದ | ದಿ—|| ಅಂದು ರಾಮ | ಚಂದ್ರನ ಸೀಮೆ | ಯನ್ನು ದಾಟಿಸಿದ | (ಅ)

2 ಭಾಮಿನಿ || ಉತ್ತರಿಸಿ ಯಮುನೆಯನು ಗಿರಿಗಳ
ಹತ್ತಿಳಿದು ಬಹು ಮಾರ್ಗ ನಡೆದರು
ಚಿತ್ರಕೂಟವೆನಿಪ್ಪ ಪರ್ವತ ನೆಲಸಿರುವ (ತನಕ) |
ಉತ್ತಮದ ಋಷಿಗಳಲಿ ಸರ್ವಸ
ಮರ್ಥ ಭಾರದ್ವಾಜಮುನಿಪನ
ಹತ್ತಿರಕೆ ನಡೆತಂದು ನುಡಿದರು ಬಂದ ಸಂಗತಿಯ | (ಅ)

ವಿಹಿತ ಮಾರ್ಗದಲಿ ತಪಸಿರುವ ಮುನಿಗೆರಗಿದಡೆ
ಬಹುಮಾನದಿಂ ಪರಸಿ ಮನ್ನಿಸಿದನಿವರುಗಳ
ಅಹುದು ಇನಕುಲದರಸುಗಳು ನೀವು ಬಂದಹದನೇನೆಂದು ಬೆಸಗೊಂಡನು
|| ೧೭೦ ||

೫೭ ಘಂಟಾರವ—ಜಂಪೆ ೩

ರಾಮ—

ದಶರಥ ನೃ | ಪಾಲನೊಳು | ವಸುಧೆಯನು | ಬೇಡಿ ಪೊರ |
ಡಿಸಿದಳೆ | ಮ್ಮನು ಕೈಕೆ | [1]ಕೇಳಯ್ಯ | ಮುನಿಪ[1] || ೧೭೧ ||

ಬೇಡವೆಂ | ದರೆ ಮಾತ | ಕೇಳದೀ | ಜಾನಕಿಯು |
ಕೂಡಿ ಬಂ | ದಳು ಅಳುತ | ಕಾಡೊಳಿರ | ಲೆಂದು || ೧೭೨ ||

ಯಾರು ಪೇ | ಳ್ದರೂ ಮಾತ | ಮೀರಿ ಲ | ಕ್ಷ್ಮಣ ನೀತ |
ಸೇರಿ ಬಂ | ದನು [2]ವನವ[2] | ಸುಖವೆಂದೆ | ನುತ್ತ ||
ಈರೇಳು | ವರ್ಷ ನಮ | ಗಾರಣ್ಯ | ದೊಳಗಿಹರೆ |
[3]ತೋರಿಕೊಡಿ | ಸುಸ್ಥಳವ | ಸೌಖ್ಯವಾ | ಗಿರುವ[3] || ೧೭೩ ||

ಭಾರದ್ವಾಜ—

ಎನಲು ರಾ | ಘವ ಕೇಳು | ಮುಂದಿರುವ | ಪರ್ವತಕೆ |
ದನುಜ[4]ರ | ಟ್ಟುಳಿಯಿಲ್ಲ | ಭಯವಿಲ್ಲ | ವಯ್ಯ[4] ||
ದಿನದಿನಕೆ | ಬೇಕಾದ | ಫಲಗಳಿವೆ | ಯದರೊಳಗೆ |
ಅನುಮಾನ | ಬೇಡ ಇರಿ | ಮನಶುದ್ಧ | ವಾಗಿ || ೧೭೪ ||

ಚಿತ್ರಮಯ | ರಾಗಿರುವ | ಚಿತ್ರಮೂ | ರುತಿಗಳನು |
ಚಿತ್ರಕೂ | ಟಕೆ ಮುನಿಪ | ಕಳುಹಿಸಿದ | ನಂದು |
ಚಿತ್ರಮಯ | ವೆಸೆವ ನವ | ಚಿತ್ರವನ | ಗಳ ನೋಡಿ |
ಚಿತ್ತಶು | ದ್ಧಿಯೊಳಲ್ಲಿ | ಇರುತಿರ್ದ | ರವರು || ೧೭೫ ||

---

1 ಕೇಳೆಸೆವ ಮುನಿಪಾಲ (ಅ) 2 ವನಕೆ (ಅ)
3 ತೋರಿಸಿ ಕೊಡಿ । ನಮಗೆ ಸ್ಥಳವ | ಸೌಖ್ಯವಾಗಿ (ಅ)
4 ದಟ್ಟುಳಿಯಲ್ಲಿ ಬಾರದಯ್ಯ (ಅ)

(ಎಲ್ಲರೂ ನಿಷ್ಕ್ರಮಿಸುತ್ತಾರೆ. ಆಸನಸ್ಥನಾದ ದಶರಥನ ಮುಂದೆ ಮಂತ್ರಿಯ ಪ್ರವೇಶ)

೫೮ ವಾರ್ಧಿಕ

ಮತ್ತೆ ಬಹು ರಮ್ಯತರ ವನಗಿರಿಯ ಸೌಭಾಗ್ಯ
ಚಿತ್ರಕೂಟದೊಳಿರ್ದರವರಿತ್ತ ದಶರಥನ್ನ
ಪೋತ್ರಮನು ಕೌಸಲ್ಯೆಯರಮನೆಗೆ ಬಂದು ನಿಜಪುತ್ರರಂ ನೆನೆನೆನೆಯುತ।
ಚಿತ್ತದಲಿ ಕೆಡುನೊಂದು ಚಿಂತಿಸುವ ವೇಳೆಯಲಿ
ಹತ್ತಿರಕೆ ನಡೆತಂದ ಮಂತ್ರೀಶನಂ ಕಂಡು
ಉತ್ತರವ ಬೆಸಗೊಂಡನೆಲ್ಲಿಪರ್ಯಂತೆನ್ನ ಪುತ್ರರೈದಿದರೆನ್ನುತ ॥ ೧೭೬ ॥

೫೯ ಘಂಟಾರವ—ಜಂಪೆ ೧

ದಶರಥ—

ಮಂತ್ರಿ ಮಮ । ಬಾಲಕರ । ನೆಲ್ಲಿ ಬಿ । ಟ್ಟು ಬಂದೆ ।
ಕಾಂತೆ ಜಾ । ನಕಿ ನಡೆದು । ಪೋದಳೇ । ಮುಂದೆ ॥ ೧೭೭ ॥

ಬರುವ ಸಮ । ಯಕೆ ರಾಮ । ಕರೆದುದೇ । ತಕೆ ನಿನ್ನ ।
ಬರುವೆನೆಂ । ದನೆ ಹಂಬ । ಲವ ತೊರೆದ । ನೇನೈ ॥ ೧೭೮ ॥

ಈಸು ಭಾ । ಗ್ಯವನೆಲ್ಲ । ಬಿಟ್ಟೆನ್ನ । ಣುಗರುವನ ।
ವಾಸಕೈ । ದಿದರಲ್ಲೊ । ಅಯ್ಯಯ್ಯೊ । ವಿಧಿಯೆ ॥ ೧೭೯ ॥

ತರಹರಿಸು । ತಿದೆ ಪ್ರಾಣ । ತಾನುಳಿವ । ಪಾಡಿಲ್ಲ ।
ಕರೆಸು ಭರ । ತನ ಮಂತ್ರಿ । ಚಾರಕರ । ಕಳುಹು ॥ ೧೮೦ ॥

ಅರೆನಿಮಿಷ । ಮಾತ್ರ ಯುಗ । ವಾಗುತಿದೆ । ಎನಗೀಗ ।
ತರುಣಿಯರ । ಮೂವರನು । ಕರೆಸಯ್ಯ । ಬೇಗ ॥ ೧೮೧ ॥

೬೦ ರಾಗ ವರಾಳಿ—ಏಕತಾಳ ೭

ಎಂದಿನಂ । ತೇಕೆಬಾರೆ । ರಾಮಚಂ । ದ್ರ—ಕಣ್ಣ ।
ಮುಂದೆ ಸುಳಿ । ದಾಡಲೊಲ್ಲೆ । ರಾಮಚಂ । ದ್ರ— ॥ ೧೮೨ ॥

ಬಿಲ್ಲುವಿದ್ಯೆ । ಗಳ ತೋರೊ । ರಾಮಚಂ । ದ್ರ— ಹಿಂದೆ ।
ನಿಲ್ಲುವ ಲ । ಕ್ಷ್ಮಣನ ಕಾಣೆ । ರಾಮಚಂ । ದ್ರ — ॥ ೧೮೩ ॥

ಎಲ್ಲಿಗೆ ಪೋ । ದಳೊ ಸೀತೆ । ರಾಮಚಂ । ದ್ರ — ನ ।
ಮ್ಮೆಲ್ಲರ ಬಿ । ಟ್ಟು ನೀ ಪೋದೆ । ರಾಮಚಂ । ದ್ರ — ॥ ೧೮೪ ॥

೬೧ ರಾಗ ಆನಂದ ನೀಲಾಂಬರಿ—ಆದಿತಾಳ

,ಏಕೆ ನಿಂ । ತಿರುವೆ ಮಂ । ತ್ರಿ — ಬು । ದ್ಧಿಗಳೆಲ್ಲ ।
,ಆ ಕಡೆ । ಗಾಯಿತ । ಲ್ಲ — । — ॥
,ಕೌಸಲ್ಯೆ । ಯೆಲ್ಲಿದ್ದಾ । ಳೆ — ಕ । ರೆಸು ಮಂತ್ರಿ ।
,ಕೈಕೆಯೂ । ಬರಲಿ ಹೇ । ಳು — । — ॥ ೧೮೫ ॥

,ಭರತ ಶ । ತ್ರುಘ್ನರ ಕರೆ । ಯ — ಹೋ । ದವರಾರು ।
,ಬರುತಾರೊ । ಇಲ್ಲವೇ । ನೊ — । — ॥
,ಗುರು ತಾನೆ । ಲ್ಲಿಗೆ ಪೋದ । ನು — ಕರೆ । ಸಯ್ಯ ಬೇಗ ।
,ಅರಿತ ಶಾ । ಸ್ತ್ರದ ವಿಪ್ರ । ರ — । — ॥ ೧೮೬ ॥

,ಮೇಲು ಶ್ವಾ । ಸ ಉಕ್ಕಿತ । ಲ್ಲಾ — ಇಂ । ಥ ವೇಳ್ಯಕ್ಕೆ ।
,ಬಾಲಕ । ರೊಬ್ಬರೂ ಇ । ಲ್ಲ — । — ॥
,ಮೇಲಾದ । ಮಂತ್ರಿಗ । ಳ — ಕರೆ । ಸಯ್ಯ ಮತ್ತೆ ।
,ನಾಲ್ವರು । ಕರಣಿಕ । ರ — । — ॥ ೧೮೭ ॥

,ಬಾಲರೆ । ಲ್ಲರು ಮಕ್ಕ । ಳು — ಬು । ದ್ಧಿಯ ಹೇಳಿ ।
,ಪಾಲಿಸು । ರಾಜ್ಯವೆ । ಲ್ಲ — । — ॥
,ಬ್ಹಾಳ ಶಾ । ಣ್ಯ ರಾವುತ । ರು — ಅವ । ರಿಗೆ ತಕ್ಕ ।
,ಹೇಳಿ ಕೇ । ಳಿಸಿ ಪಾಲಿ । ಸೋ — । — ॥ ೧೮೮ ॥*

* ಸೋಮವಂಶದವರಿಂದಲೂ । ಇದು ದೊಡ್ಡಿತಯ್ಯ — ಏ ಮಂತ್ರಿ ಧರ್ಮ ವೆಗ್ಗಳ ॥ (ಅ)

,ರಾಮು ಲ | ಕ್ಷ್ಮಣರರಿಯ | ರು — ಅ | ವರುಬಂದ |
,ರಾಮೂಲ | ವಾಗಿ ಪೇ | ಳು — | — ||
,ರಾಮು ರಾ | ಮಾ ಶ್ರೀರಾ | ಮಾ — ರಾ | ಜೀವನೇತ್ರ |
,ನಾರಾಯ | ಣಾ ನಾರಾಯ | ಣ — | — || ೧೮೯ ||

೬೨ ವಾರ್ಧಿಕ ಷಟ್ಪದಿ

ಧಾರಿಣೀಪತಿ ಮಾತುಮಾತಾಡಿದಂತೆ ಯೆದೆ
ಯಾರಿ ಕಣ್ಮುಚ್ಚಿ ನಾಲಗೆ ಸೆಳೆದು ದಂತದಡಿ
ಯಾರಿದುವು ರಕ್ತದೋಸರಣಿಗಳ್ ಶ್ವಾಸಸಂಚಾರವಿಲ್ಲದೆ ಹೋಯಿತು ||

(ಕೌಸಲ್ಯೆ, ಕೈಕೆ, ಸುಮಿತ್ರೆಯರ ಪ್ರವೇಶ)

ಮೂರು ಮಂದಿಯುಂ ಪಟ್ಟದರಸಿಯರು ಕೇಳುತ್ತ
ಹೇರಾಳ ದುಃಖದಲಿ ನೊರೆಯಿಡುತ ಬಂದು ಬಳಿ
ಕೂರ ಜನಮಧ್ಯದಲಿ ಬಾಯ್ಬಿಡುತ ಹಲುಬಿದರು ಪತಿಯುಳಿದ ಕ್ಲೇಶದಿಂದ
|| ೧೯೦ ||

೬೩ ರಾಗ ವರಾಳಿ—ಏಕತಾಳ ೩

ಕೌಸಲ್ಯೆ, ಕೈಕೆ, ಸುಮಿತ್ರೆ —

ಕಾಂತನೇಕೆ | ಮಾತನಾಡ | ನಯ್ಯಯ್ಯೋ ಈತ |
ಗಿಂಥ ಮರಣ | ಬಂದಿತೇತ | ಕಯ್ಯ | ಯ್ಯೋ— ||
ಕಂತು ರೂಪಿ | ನಂಥ ದೇಹ | ವಯ್ಯ | ಯ್ಯೋ ನಮ್ಮ |
ಅಂತರಂಗ | ವಂಥ ಮೋಹ | ವಯ್ಯ | ಯ್ಯೋ || ೧೯೧ ||

ಕಣ್ಣು ಮೇಲ | ಕುಪ್ಪರಿಸಿ | ತಯ್ಯ | ಯ್ಯೋ ಅಗ್ರ |
ಗಣ್ಯನೆಚ್ಚ | ರಳಿದನಲ್ಲೊ | ಅಯ್ಯ | ಯ್ಯೋ—||
ಪುಣ್ಯಪ ಏ | ನೆಂದು ಹೇಳ | ಲಯ್ಯ | ಯ್ಯೋ—ಮೈಯ |
ಬಣ್ಣಗುಂದಿ | ತಣ್ಣಗಾಯಿ | ತಯ್ಯ | ಯ್ಯೋ — || ೧೯೨ ||

೬೪ ಕಂದ

ಕಾಂತನ ಪ್ರೈಯಲಿ ಬಿದ್ದಾ
ಕಾಂತೆಯರಿಂತಳಲುತಿರಲು ಬಂದಾ ಮುನಿಪಂ ।
ಸಂತಯ್ಸಲು ಬೇಕೆನ್ನುತ
ಚಿಂತಿಸುತಿಹ ಬಾಲೆಯರ್ಗೆ ನಯದಿಂ ಪೇಳ್ದಂ ॥ ೧೯೩ ॥*

(ವಸಿಷ್ಠಮುನಿಯ ಪ್ರವೇಶ)

೬೫ ಚರಿತೆ (ಸಾಂಗತ್ಯ), ರಾಗ ಆನಂದಭೈರವಿ—ರೂಪಕತಾಳ ೩

ವಸಿಷ್ಠ—

ಬಾಲೆಯ । ರಿರ ಕೇಳಿ । ಬಲುಕ್ಲೇಶ । ದಿಂದ ನೀವ್ । ಗೋಳಿಟ್ಟು ।
ಮೊರೆಯಿಡ । ಲೇಕೆ ।
ಕೇಳಿದ । ಜನರು ಮ । ತ್ತೇನ ಪೇ । ಳುವರು ಭೂ । ಪಾಲರಿ ।
ಗಿದುಯೋಗ್ಯ । ವಲ್ಲ ॥ ೧೯೪ ॥

ಹೆಮ್ಮಕ್ಕ । ಳಿರ ನೀವು । ಕೂಗಿಯಾ । ಡಿದರಿಂದ । ಬ್ರಹ್ಮನ । ಲಿಖಿತ ತ ।
ಪ್ಪುವುದೇ ।
ಕರ್ಮಬಂ । ಧಗಳು ಕ । ಟ್ಟೈಳೆ[1]ವಾಗ । ವಿಕ್ರಾಂದ[1] । ಧರ್ಮದ್ವೈ ।
ವಗಳು ರ । ಕ್ಷಿಪವೇ ॥ ೧೯೫ ॥

ಗಾಳಿ ಸಿ । ಡಿಲು ಮಳೆ । ಹೊಯ್ಯ ಬೇ । ಡೆಂದು ಕೈ ।
ತೋಳನೆ । ತ್ತಿದರೆ ನಿ । ಲ್ಲುವುದೆ ।
ಬಾಲಕ । ರಿಲ್ಲದ । ವೇಳೆಯೆಂ । ದರೆ ಯಮ । ನಾಳುಗ ।
ಳದರ ಕೇ । ಳುವರೇ ॥ ೧೯೬ ॥

---

* ಯಾರೂಯಿ । ಲ್ಲದ ವೇಳ್ಯದೊ । ಳಯ್ಯಯ್ಯೋ—ನಮ್ಮ ।
ಗಾರುಮಾಡಿ ಪೋದನಲ್ಲವಯ್ಯಯ್ಯೋ ।
ಕಾರಣವೇನೆಂದು ತಿಳಿಯ । ದಯ್ಯಯ್ಯೋ—ಸುಕು । ಮಾರರೊಬ್ಬರಿಲ್ಲ
ದಾಯಿತಯ್ಯಯ್ಯೋ ॥ (ಕಾ)

1 ವವೇಳೆ । ಮಕ್ಕಳ (ಅ)

ನೆಲೆಯಲ್ಲ । ತನುವಿದು । ಮಳೆಗಾಲ। ದಲಿ ತುಂಬಿ ।
ದ್ಹೊಳೆಯಲ್ಲಿ । ನೆರೆಪುಟ್ಟು । ವಂತೆ ।
ನಳಿನಸಂ । ಭವ ಬರೆ । ದಾ ದಿನ । ಸಂದರೆ । ಉಳಿವವೇ ।
ನಿಮಿಷ । ಪ್ರಾಣಿಗಳು ॥ ೧೯೭ ॥

ಈ ತೆರ । ದೊಳು ನಾನಾ । ನೀತಿಯ । ಪೇಳ್ದಾ ಸು । ನೀತೆಯು ।
ರನ್ನೊಡಂ । ಬಡಿಸಿ ।
ಭೂತಳಾ । ಧಿಪನ ತ್ಯೆ । ಲದೊಳಿಟ್ಟು । ಭರತನಿ । ದ್ದಾ ತಾವಿ ।
ಗೋಲೆಯು । ಟ್ಟದನು ॥ ೧೯೮ ॥

(ಕುಣಿತವಿಲ್ಲದೆ ಸಂಭ್ರಮದಿಂದ ಭರತನ ಪ್ರವೇಶ)

ಬಂದನು । ಭರತನಾ । ಕ್ಷಣದಿ ನೋ । ಡುತಲಿದ । ರಂದವೇ ।
ನೆಂದು । ಕೇಳಿದರೆ ।
ಒಂದುಳಿ । ಯದೆ ಮುನಿ । ಪೇಳ್ದರೆ । ಧರೆಗೆ ಹಾ । ಯೆಂದು ಮೂ ।
ರ್ಛಿತ[1]ನಾಗಿ । ಬಿದ್ದ[1] ॥ ೧೯೯ ॥

(ಮಾರವಿ—ಅಷ್ಟತಾಳ ೧, ದ್ರುತಲಯ)

ಭರತ—
ಪ್ರಳಯಕಾ । ಲದ ರುದ್ರ । ನಂತೆದ್ದಾ । ರ್ಭಟಿಸಿ ಕಂ ।
ಗಳ ಮೇಲೆ । ಕಿಡಿಗೆದ । ರಿದನು ।
ಹೊಳೆವ ಖ । ಡ್ಗವ ಕೊಂಡು । ಮಾತೆಯು । ಕಡಿವೆನೆಂ ।
ದಿಳಿಯೆ ಸು । ಮಂತ್ರ ಬೋ । ಧಿಸಿದ ॥ ೨೦೦ ॥

೬೩ ರಾಗ ಭೈರವಿ—ಜಂಪೆತಾಳ ೪

ಎನಗಾಗಿ । [2]ರಾಘವನ । ವನಕೆ ಕಳು । ಹಿದ ಮೇಲೆ ।
ಜನನಿಯೇ । ಎನಗಿವಳು । ಅನುಮಾನ । ವೇನು[2] ॥ ೨೦೧ ॥

1 ನಾಗುತೆದ್ದು (ಅ)
2 ಎನಗಾಗಿ ಶ್ರೀರಾಮು । ವನಕೆ ತೆರಳಿದ ಮೇಲೆ । ಅನುಮಾನವೇ ಎನ್ನ ।
ಜನನಿಯೇ ಇವಳು ॥ (ಅ)

ಈ ನರೇಂ । ದ್ರನು ತೀರಿ । ಹೋದ ಮೇ । ಲೆನಗಾಗಿ ।
ನಾನೆಂತು । ಮೊಗದೋರ್ಪೆ । ದಾನವಾಂ । ತಕಗೆ ॥ ೨೦೨ ॥

ಕಣ್ಣನೀ । ರನು ತುಂಬಿ । ಕರಗಿ ಭರ । ತನು ಮನದಿ ।
ಎಣ್ಣಿಸಿದ । ನೊಂದು ಅರೆ । ಗಳಿಗೆ ಪ । ರ್ಯಂತ ॥ ೨೦೩ ॥

ಕೌಸಲ್ಯೆ । ಯರ ದುಃಖ । ಕಾಂಬುದಕೆ । ಮುನ್ನವೇ ।
ಲೇಸೆನಗೆ । ಸಾವುದೆಂ । ದೇ ತಿಳಿದ । ನಂದು ॥ ೨೦೪ ॥

ಅಗ್ರಜನ । ಪೊರಡಿಸಿದ । ಆ ದೋಷ । ಪಿತೃವಧೆ ಯಿ ।
ವಗ್ನಿಯೊಳ । ಗಲ್ಲದೇ । ಪೋಗವಿ । ನ್ನಗಲಿ ॥ ೨೦೫ ॥

ಹೀಗೆಂದು । ಭರತನಣಿ । ಯಾಗೆ ಕಂ । ಡು ಸುಮಂತ್ರ ।
ರಾಘವನು । ಪೇಳ್ದ ಮಾ । ತಾಗ ಪೇ । ಳಿದನು ॥ ೨೦೬ ॥

ರೂಢಿಪಾ । ಲಕನ ತನು । ಸಂಸ್ಕಾರ । ಕರ್ಮವನು ।
ಮಾಡಿದಾ । ಕ್ಷಣದೊಳಗೆ । ಭರತ ಹೊರ । ವಂಟ ॥ ೨೦೭ ॥

(ಭರತನ ನಿಷ್ಕ್ರಮ)

೬೭ ಶಾರ್ದೂಲ ವಿಕ್ರೀಡಿತ ವೃತ್ತ

ನಾನಾ ಸೈನ್ಯನ ಕೂಡಿಕೊಂಡು ಪುರಕಾ ಶತ್ರುಘ್ನನಂ ನಿಲಿಸುತ ।
ಕಾಣಲ್‌ಬೇಕು ನರೇಂದ್ರ ಪಾದಯುಗಮೆಂದಾ ~~ನದಿಗಳಂ~~ ದಾಂಟುತ । ಗಂಗೆಯಂ
ತಾನುಂ ಮೂವರು ಜನನಿಯರ್ ಸಹಿತಲ್ಲೈತಂದಾತನಂ ಕಾಣುತ ।
ಏನೆಂದಾ[1]ರದೆ[1] ಕೋಪದಿಂ ರಘುಜಗಾ ಸೌಮಿತ್ರಿಯಿಂತೆಂದನು ॥ ೨೦೮ ॥

(ರಾಮಲಕ್ಷ್ಮಣರ ಪ್ರವೇಶ)

೬೮ ರಾಗ ಶಂಕರಾಭರಣ—ಮಟ್ಟೆತಾಳ ೨

ಲಕ್ಷ್ಮಣ—

ಅಣ್ಣನೋಡು । ಭರತ ರಾಜ್ಯ । ತನ್ನದಾಯಿ । ತೆಂಬ ಗರ್ವ ।
ವನ್ನು ತೋರ । ಬಂದ ನಮ್ಮ । ಕಣ್ಣೆದುರಿ । ಗೆ —॥

1 ರದ (ಅ)

ವಿಂಣ್ಣ ಗಿರಿ । ನೀವ್ ನೇರಳೆ । ಹಣ್ಣ ಕುರುಕಿ । ದುತೆ ಬಲವ ।
ಬನ್ನ[1]ಬಡಿಸಿ[1] । ಬಿಡುವೆ ಕ್ಷಣಕೆ । ನಿನ್ನ ಕರುಣ । ದಿ— ॥ ೨೦೯ ॥

ರಾಮ—

ಸುಮ್ಮನಿರ್ರೈ । ಭರತ ಬರುವ । ಧರ್ಮವನ್ನು । ಅರಿಯೆ ನೀನು ।
ಹೆಮ್ಮೆಗಾರ । ನಲ್ಲ ಗುಣದಿ । ನಮ್ಮ ಸಹಜ ।ನು— ॥ ೨೧೦ ॥

(ಭರತನು ತೆರೆಸರಿಸಿ ಬಂದು ರಾಮನಿಗೆ ವಂದಿಸುತ್ತಾನೆ)

ಎಂದು ತನ್ನೊ । ಳಾಡುತಿರಲು । [2]ಹಿಂದೆ ರಥವ । ನಿಳಿದು ಭರತ[2] ।
ಬಂದು ರಾಮ । ಚಂದ್ರನಡಿಗೆ । ವಂದಿಸಿರ್ದ । ನು— ॥ ೨೧೧ ॥

ಪಾದಕೆರಗಿ । ದನುಜನಂ ವಿ । ನೋದದಿಂದ । ಲಪ್ಪಿ ಬಳಿಕ ।
ಆದರಿಸುತ । ನುಡಿದ ತನ್ನ । ಸೋದರನೊ । ಳು— ॥ ೨೧೨ ॥

೬೯ ರಾಗ ಸೌರಾಷ್ಟ—ತ್ರಿವುಡೆ ತಾಳ ೨

ರಾಮ—

ಬಂದೆಯಾ ಇನ । ವಂಶವಾರಿಧಿ ।
ಚಂದ್ರ ನಾ ಬರು । ವಾಗ ನಿನ್ನೊಡ ।
ನೆಂದುದಿಲ್ಲವೆ । ನುತ್ತ ಮನದಲಿ । ನೊಂದೆಯೇನೈ ॥ ೨೧೩ ॥*

ಕ್ಷೇಮವೇ ದಶ । ರಥಪಿತಗೆ ಪರಿ ।
ಣಾಮವೇ ಶ । ತ್ರುಘ್ನ ಮೊದಲಾ ।
ದಾಮಹಾ ಪ್ರಜೆ । ಗಳಿಗೆ ಕುಶಲವೆ । ಸೀಮೆಯೊಳಗೆ ॥ ೨೧೪ ॥

ಏನು ಮುಖದಲಿ । ಕಾಂತಿ ತಗ್ಗಿತು ।
ನೀನು ಜನನಿಯ । ಸಹಿತ ನಾವಿಹ ।
ಕಾನನಾಂತಕೆ । ಬಂದುದೇತಕೆ । ಮಾನನಿಧಿಯೆ ॥ ೨೧೫ ॥

---

1 ಜಡಿಸಿ (ಅ)  2 ಕಂಡ ಭರತ । ರಥವನಿಳಿದು (ಕಾ)
* ಎಂದು ಬಂದೆಯ । ಯೋಧ್ಯ ಪುರಕಿದ ।
ನೆಂದು ಕೇಳಿದೆ । ನಮ್ಮ ವಾರ್ತೆಯ ।
ಎಂದು ಪೊರಟರಿ ಜನನಿಯರು ಸಹ ಮಂದಿರವನು । (ಓ)

೭೦ ರಾಗ ಪಂತುವರಾಳಿ—(ಪಂಚಘಾತ) ಮಟ್ಟೆತಾಳ ೧

ಭರತ—

ಜಯ ಜಯ ಶ್ರೀ । ರಾಮಚಂದ್ರ । [1]ಜಯ ಜಯ ರವಿ । ಕೋಟಿ[1] ಸಾಂದ್ರ ।
ಜಯ ಜಯ ಭಾ । ನು ಕುಲೇಂದ್ರ । ಜಯತು ಜಯ । ನರೇಂದ್ರ ॥ ಪಲ್ಲವಿ ॥

ಅಣ್ಣಾಶ್ರಿತ । ಪೋಷ ಕೇಳು । ನಿನ್ನ[2]ನು ಕಳು । ಹಿಸಿದ[2] ಮೇಲೆ ।
ಅನ್ನವುಣದೆ । ಎಂಟು ದಿನಕೆ । ಇನ್ನು ನಾನು । ಪೇಳ[3]ಲೇಕೆ[3] ॥ ೨೧೬ ॥

ಇನಕು[4]ಲೇಶ । ನಿಂದಿಗೆ ಮೂ । ರ್ದಿನ ವಾಯ್ತು[4] । ನಿಲ್ಲದಿರಲು ।
ಮನಕರಗುತ । ಕ್ಲೇಶದಿ ಸುರ । ಪನ ಪುರಕ್ಕೈ । ದಿದನು ॥ ೨೧೭ ॥

೭೧ ವಾರ್ಧಿಕ ಷಟ್ಪದಿ

ಲಕ್ಷ್ಮಣ—

ಇಂತೆಂದು ಭರತನಾಡಿದ ನುಡಿಯ ಕೇಳ್ದು ಬಲು
ಚಿಂತಾಸಮುದ್ರದೊಳಗಾಳ್ದು ಲಕ್ಷ್ಮಣ ಮೂರ್ಛೆ
ಯಂ ತಾಳ್ದ ಶಿವ ಶಿವಾಯೆನುತಲಂಗನೆ ಧರೆಗೆ ಹಮ್ಮೈಸ್ಸಿ ಬಿದ್ದಳಾಗ ॥

ಸೀತೆ—

ಇಂತು ಮಾಡಿತೆ ದೈವ ಇನಕುಲದ ಸೌಭಾಗ್ಯ
ಚಿಂತಾಮಣಿಯು ಬೆಳಕು ತಗ್ಗಿತೇ ಹರಹರಾ
ಯೆಂತಿರ್ದಡೇ[5]ನಿನ್ನು ಎನುತ ಕಂಬನಿದುಂಬಿ[5] ಕಾಂತೆ ಜಾನಕಿ
ನುಡಿದಳು ॥ ೨೧೮ ॥

೭೨ ನೀಲಾಂಬರಿ—ರೂಪಕತಾಳ ೩

ಸೀತೆ—

ಇನ್ನಾರಿ । ನ್ನನು ಗುಣದಲಿ । ಮನ್ನಿಸಿ [6]ಮ । ನ್ನಿಸಿ[6] ಕರೆವರು ।
ಕಣ್ಣಲಿ ಕಾ । ಣದೆ ಹೋಯಿತೆ । ಪುಣ್ಯವೆ ಹಾ । ವಿಧಿಯೇ ॥ ೨೧೯ ॥

---

1 ಜಾನಕೀ ಸದ್ಗುಣ (ಅ) 2 ಪಿತಕಳುಹಿದ (ಅ) 3 ಬೇಕೆ
4 ಇನಕುಲಾಧಿಪ । ನಿಂದಿಗೆ ದಿನ ಮೂರಾ । ಯ್ತು ನಾ (ಅ)
5 ನು ಇನ್ನೇನಾದಡೇನೆಂದು (ಓ) 6 ಮೋಹದಿ (ಅ)

ಮಾವನ ಗುಣ । ವರ್ಣಿಸುವಡೆ । ಸಾವಿರ ಬಾ । ಯಿರಬೇಕು ।
ಯಾವರಿಗಿಂ । ಥಾ ಮನಸಿದೆ । ದೇವರಿಗೆ ಸ । ಮಾನ || ೨೨೦ ||

ಎಷ್ಟರ ಸಂ । ಕಟ ಪಟ್ಟನೊ । ಮಕ್ಕಳ ನೋ । ಡುವೆನೆನುತಲಿ ।
ಎಷ್ಟೆಮ್ಮನು । ಕರೆಕರೆದು । ಬಿಟ್ಟನೊ ಪ್ರಾ । ಣವನು || ೨೨೧ ||

ಒಂದೇ ದಿನ । ವಾದರು ಮನ । ನೊಂದೆನ್ನೊಳು । ನುಡಿದರಿಯಾ ।
ತಂದೆತಾಯ್ಗ । ಳಾರಾದರು । ಬಂದಪರೇ । ಹೀಗೆ || ೨೨೨ ||

ಹೊತ್ತಲ್ಲದ । ಹೊತ್ತಿನಲಿ ನೃ । ಪೋತ್ತಮನಳಿ । ದನೆ ಹಾಯೆನು ।
ತತ್ತೆಯ ಮೊಗ । ನೋಡುತ ಬಲು । ಅತ್ತಳು ಜನ । ಕಸುತೆ || ೨೨೩ ||

ಒದಗುವರಾ । ಪತ್ತಿಗೆಂದು । ಮದುವೆಯ ಮಾ । ಡಿದ ಮಗನಿಗೆ ।
ತುದಿಗಾಲಕೆ । ನಾವಿದ್ದಿ । ಲ್ಲದಹಾಗಾ । ಯ್ತಲ್ಲ || ೨೨೪ ||

(ಕೌಸಲ್ಯೆ, ಕೈಕೆ, ಸುಮಿತ್ರೆ ಒಟ್ಟಾಗಿ ಪ್ರವೇಶಿಸುತ್ತಾರೆ)

೬೩ ವಾರ್ಧಿಕ ಷಟ್ಪದಿ

ಹೋದ ಮಾವನ ಗುಣವನಭಿವರ್ಣಿಸುತ ಸೀತೆ
ಪಾದದಡಿಯಲಿ ಬಿದ್ದು ಹೊರಳುತಿರೆ, ಕೌಸಲ್ಯೆ
ಮೇದಿನೀಸುತೆಯು ತೆಗೆದಪ್ಪಿ ಮೆಯ್ಯೊರಸಿ ಕಣ್ಣೀರ ಸೆರಗಿಂದ ತೊಡೆದು
ಆದರಿಸುತವರು ಮೂವರು ಜನನಿಯರು ಸಹಿತ
ಪೋದರಾ ನದಿಯೆಡೆಗೆ ಗುರುಮುಖದಿ ಸ್ನಾನಕ
ರ್ಮಾದಿಗಳ ರಚಿಸಿದರು [1]ಮುನಿಗಳಂ ಕರೆಸಿ ಬಹು ವಿಧಿವಿಹಿತಮಾರ್ಗದಿಂದ[1] ||
ವೇದೋಕ್ತಮಂತ್ರದಿಂ [2]ವಿಹಿತ[2]ಕರ್ಮಂಗಳಂ
ಸಾಧಿಸಿಯೆ ದಾನದಕ್ಷಿಣೆ ಹೋಮ ನೇಮದಿಂ
ಮೇದಿನೀಶಗೆ ಸ್ವರ್ಗಮಂಗೊಳಿಸಿ ಸಕಲ ಪಿತೃಜನವ ಸಂತುಷ್ಟಿಗೊಳಿಸಿ ।
ಆ ದಿವಸ ಉಪವಾಸದೊಳಗಿರ್ದು ಮರುದಿನದೊ
ಳಾದಯಾಂಬುಧಿ ರಾಮ ಕೌಸಲೆ ಸುಮಿತ್ರೆಯರ
ಪಾದಕೆರಗುತ ಸಕಲಮುನಿಜನರ ಮುಂದೆ ಧೈರ್ಯೋದಾರ[3]ದಿಂ[3]
ಪೇಳ್ದನು || ೨೨೫ ||

1 ವಿಪ್ರಮುಖದಿಂದ ವಿಧಿವಿಹಿತದಿಂ ನ್ಯಾಯದಿಂದ (ಅ) 2 ದಪರ (ಅ) 3 ಮಂ

೭೪ ರಾಗ ಆನಂದಭೈರವಿ—ಆದಿತಾಳ, ತಿಶ್ರಿತ್ರೈ

ರಾಮ—

ಬಂದುದು ಲೇ | ಸಾಯಿತು ನೀ | ವು — ಹೀ | ಗಾದ ಮೇಲೆ |
ನೊಂದು ಮಾಳ್ಪ | ದಿನ್ನೇನು ನಾ | ವು — | — |
ಎಂದಿಗಾದ | ರೊಂದು ದಿವ | ಸ — ಈ | ದೇಹ ನಾಶ |
ಹೊಂದದೆ ನಿ | ಲ್ಲದಿದು ಸಿದ್ಧ — | — || ೨೨೬ ||

ನೋವು ತೋಷ | ವೆಂಬುವದೆ | ಲ್ಲ — ಸಂ | ಸಾರಿಗಳಿ |
ಗಾವರಿಗಾ | ದರೂ ಉಂಟ | ಲ್ಲ — | — |
ಸಾವು ಹುಟ್ಟು | ಸುಖದುಃಖವೆ | ಲ್ಲ — ಅರಿ | ಯದ ಹಾಗೆ |
ನೀವು ಚಿಂ | ತಿಸುವಿರ | ಲ್ಲ — | — || ೨೨೭ ||

ಭರತನ ಮಾ | ತೊಂದ ವಿಾರ | ದೆ — ಸೂ | ರ್ಯವಂಶದ |
ದೊರೆತನಕ್ಕೆ | ಕುಂದು ತಾರ | ದೆ — | — |
ಅರಿತು ದಾನ | ಧರ್ಮಂಗಳ | ಲ್ಲಿ — ಕಡಿ | ಮೆಯಿಲ್ಲದೆ |
ಸಿರಿತನದಿಂ | ದಾಳಿ ನೀವ | ಲ್ಲಿ — | — || ೨೨೮ ||

ತೆರಳಿ ನೀ | ವೆಲ್ಲ ಊರಿ | ಗೆ — ನಾ | ಬಹೆನೆಂದು |
ವರುಷ ಈರೇ | ಳರ ಮೇಲಲ್ಲಿ | ಗೆ — | — |
ತರಳ ಶ | ತ್ರುಘ್ನನೂ ನೀ | ನೂ — ಒಂ | ದೇ ಬುದ್ಧಿಯೊ |
ಳಿರುತ ರಾಜ್ಯ | ವಾಳು ನೀ | ಸು — | — || ೨೨೯ ||*

ವಚನ|| ಇಂತೆಂದು ಶ್ರೀರಾಮದೇವರು ಕೌಸಲ್ಯೆ ಸುಮಿತ್ರೆ ಮೊದಲಾದಂಥವರನ್ನೊಡಂಬಡಿಸಲಾಗಿ ಭರತನು ಏನೆಂದನು ಎಂದರೆ—

೭೫ ರಾಗ ಕೇದಾರಗೌಳ—ಅಷ್ಟತಾಳ ೧

ಭರತ—

ಅಣ್ಣ ನೀವ್ | ಮೂವರಾ | ರಣ್ಯದೊ | ಳಿರುವಾಗ |
ಬಣ್ಣವೆ | ತನಗೆ ರಾ | ಜ್ಯ — |
ಪುಣ್ಯ[1]ಸಾ | ಗರ[1] ನಿನ್ನ | ಪಾದವ | ಬಿಡೆನೆಂದು |
ಕಣ್ಣನೀ | ರನೆ ತುಂಬಿ | ದ— || ೨೩೦ ||

---

* ಅಂದಿನ ದಿನಕೆ ಲಕ್ಷ್ಮ | ಣ — ಸಹ | ಮೂವರೂನಾವ್ | ಬಂದೇವಯೋಧ್ಯಾಪುರಕೆ | (ಅ) 1 ಗೌರವ (ಅ)

ಹೆಮ್ಮಕ್ಕ । ಳೊಳಗೆ ಗ । ಯಾಳಿ ಕೈ । ಕಾದೇವಿ ।
ಯಮ್ಮನಾ । ಡಿದ ಮಾತಿ । ಗೆ — ।
ಸುಮ್ಮನೆ । ರಾಜ್ಯವ । ಬಿಡುವುದು । ನೀತಿಯೆ ।
ನಿಮ್ಮ ಮ । ನ[1]ಕೆ ಸರಿ । ಯೆ[1] — ॥ ೨೩೧ ॥

ನಿರ್ಮಲ । ದೊಳು ಜ್ಯೇಷ್ಠ । ಸುತನಿರ । ಲಾತನ ।
ತಮ್ಮಗೆ । ರಾಜ್ಯವುಂ । ಟೇ — ।
ಸನ್ಮತ । ವಲ್ಲದಿ ।ದ್ದರೆ ನಾ ಅ । ಯೋಧ್ಯೆಗೆ ।
ಜನ್ಮಾಂತ । ರಕೂ ಪೋಗೆ । ನು — ॥ ೨೩೨ ॥

ಕೋಪಿಸಿ । ಕೊಂಡು ನೀವ್ । ಜರೆದರೆ । ದೃಢವಾಗಿ ।
ಪೋಪೆ ಮ । ತ್ತೊಂದೂರಿ । ಗೆ — ।
ಭೂಪ ನಿ । ನ್ನಂತರಂ । ಗವೆ ಸಾಕ್ಷಿ । ಯಿದಕೆಂದು
ತಾಪದಿ । ನಿಂತಿರ್ದ । ನು — ॥ ೨೩೩ ॥*

೭೬ ಕಂದ

ಎಂದಾ ಭರತನ ಮಾತಿಗೆ
ಅಂದೆಲ್ಲರು ಬದ್ಧವೆಂದು ಕರಗಳ ಮುಗಿಯಲ್ ।
[2]ನೊಂದಳು ಹೃದಯದಿ ರಾಮನೊ
ಳೆಂದಳು ಮನಕರಗಿ ಮರುಗಿ ಕೈಕಾದೇವಿ[2] ॥ ೨೩೪ ॥

೭೭ ರಾಗ ಕಾಂಭೋಜಿ—ಏಕತಾಳ ೪

ಕೈಕೆ—
ಮಂದರೆಯ । ಮಾತ ಕೇಳಿ । ಮಂದಬುದ್ಧಿ । ಯಿಂದ ನಾನು ।
ಎಂದ ಮಾತಂ । ತರಂಗ[3]ಕ್ಕೆ । ತಂ[3]ದುಕೊಳ್ಳ । ಬೇಡ ರಾಮ ।

---

1 ಸಿನೊಳಗೆ (ಅ)
* ಭರತನ । ಮಾತಿಗೆ । ಬಂದೆಲ್ಲ । ರಹುದೆಂದು ।
ಕರವ ಮು । ಗಿದು ನಿಂತಿ । ರೆ — ।
ಅಳುತ ಜ । ನನಿ ಕೈಕಾ । ದೇವಿತಾ । (ಶ್ರೀ) ರಾಮ ।
ನೊಳು ಮಾತ । ನಾಡಿದ । ಳೆ — ॥ (ಅ)
2 ಬಂದಳು ಕೈಕಾದೇವಿಯು
ನಿಂದು ಶ್ರೀರಾಮಗಿಂತಳೊಂದುತ್ತರಮಂ । (ಅ)
3 ದಿನೊಂ (ಕಾ)

ಬಂದಯೋಧ್ಯಾ । ಪುರಕೆ ತ । ಮ್ಮಂದ್ಯರನ್ನು । ಕೂಡಿಕೊಂಡು ।
ಇಂದು ರಾಜ್ಯ । ವಾಳು ನೀನು । ಎಂದೊಡಂ । ಬಡಿಸಿದಳು ॥ ೨೩೫ ॥

ವಚನ॥ ಇಂತೆಂದ ಕೈಕೆಯ ಮಾತಿಗೆ ಮನಸ್ಸಿನೊಳಗೇ ಉತ್ತರವಂ ಕೊಟ್ಟು ಭರತ ನೊಡನೆ ಏನೆಂದನು ಎಂದರೆ—

೭೮ ರಾಗ ಘಂಟಾರವ—ಜಂಪೆತಾಳ ೩

ರಾಮ—

ತಮ್ಮ ಕೇ । ಳಿನಕುಲದ । ರಾಯರಲಿ । ಜನಿಸಿರ್ದು ।
ಧರ್ಮವೇ । ಸತ್ಯವನು । ಬಿಟ್ಟು ನಡೆ । ಯುವುದು ॥ ೨೩೬ ॥

ಪಿತನ ವಾ । ಕ್ಯವ ಮೀರಿ । ಹಿಂತೆ ನಡೆದವ । ರುಂಟೆ ।
ಅತಿರೇಕ । ವಿದು ಲೋಕ । ಕತಿಜೋದ್ಯ । ವಯ್ಯ ॥ ೨೩೭ ॥

ಹದಿನಾಲ್ಕು । ವತ್ಸರದ । ತುದಿಯ ಮರು । ದಿವಸ ಬಂ ।
ದೊದಗುವೆನು । ಪಟ್ಟಣಕೆ । ಇದು ಕಪಟ । ವಲ್ಲ ॥ ೨೩೮ ॥

ಅನಿತುದಿನ । ರಾಜ್ಯವನು । ಆಳಿಕೊಂ । ಡಿರು ನೀನು ।
ಮನಸಿನೊಳು । ಅನುಮಾನ । ಮತ್ತೇನೂ । ಬೇಡ ॥ ೨೩೯ ॥

ಎನ್ನೊಡನೆ । ಜನಿಸಿರ್ದ । ತಮ್ಮನಾ । ದರೆ ನೀನು ।
ಎನ್ನ ಮಾ । ತನು ಕೇಳು । ಎರಡಿಲ್ಲ । ದಾಳು ॥ ೨೪೦ ॥

೭೯ ಕಂದ

ಈ ಪರಿಯಿಂದಂ ತಮ್ಮನ
ಭೂಪಾಲಕ[1]ನೊಡಬಡಿಸಲು ಬಳಿಕಾ ಭರತಂ[1] ।
ಕೋಪಿಸಿಕೊಂಡಗ್ರಜನೊಳ್
ಚಾಪವ ಕೈಗೆತ್ತಿಕೊಂಡು ಮತ್ತಿಂತೆಂದಂ ॥ ೨೪೧ ॥

1 ದೈನ್ಯದಿಂದೊ । ಡಂಬಡಿಸಲ್ಕೆ (ಕಾ, ಅ)

೮೦ ರಾಗ ಘಂಟಾರವ—ಜಂಪೆತಾಳ ೩

ಭರತ—

ಅಣ್ಣ ಕೇ | ಳೀರೇಳು | ವತ್ಸರದ | ಮರುದಿವಸ |
ಉಣ್ಣದಿಹೆ | ನೊಂಭತ್ತು | ಗಳಿಗೆ ಪ | ರ್ಯಂತ || ೨೪೨ ||

ಅಗ್ರಜರು | ನೀವಷ್ಟ | ರೊಳು ಬಾರ | ದಿದ್ದರೆ |
ಅಗ್ನಿಕುಂಡ | ದೊಳಳಿವೆ | ನಿಮ್ಮಪದ | ದಾಣೆ || ೨೪೩ ||

ರಾಮ—

ಮರೆತು ಹೋ | ಗದೆ ದಿವಸ | ಅರಿತುಕೋ | ಲಕ್ಷ್ಮಣಾ |
ಶರತುದಿಯ | ಲೀಗ ಬರೆ | ದಿರಿಸೊಂದು | ಕಡೆಯು || ೨೪೪ ||

ಸೇವೆಗೆ | ನ್ನುತ ತನ್ನ | ಪಾವನಾಂ | ಘ್ರಿಯೊಳಿದ್ದ |
ಹಾವುಗೆಯ | ಕೈಲಿಟ್ಟು | ಹರಸಿ ಬೀ | ಳ್ಕೊಟ್ಟ || ೨೪೫ ||

೮೧ ವಾರ್ಧಿಕ ಷಟ್ಪದಿ

ಭರತ ಚತುರಂಗ[1]ಬಲವಂ ಕೂಡಿ ಕರಕೊಂಡು
ಸಿರಿರಾಮಚಂದ್ರಗಭಿವಂದಿಸುತ ತಿರುಗಿದಂ[1]
ವರಮಾತೆಯರ ಸಹಿತ ಗಂಗಾನದಿಯ [2]ದಾಂಟಿ ಪುರಕೆ ಕಳುಹಿಸುತೆಲ್ಲರ[2] |
[3]ಇರಿಸಿ ನಿಜ ಪಟ್ಟಣಕೆ ಶತ್ರುಘ್ನನಂ ತಾನು
ಕರುಣಾಳು ಶ್ರೀರಾಮನಂಘ್ರಿಯಂ ಧ್ಯಾನಿಸುತ[3]
ಇರಲು ನಂದಿಗ್ರಾಮದೊಳಗಿತ್ತ ರಾಮ ಮುನಿವರರ ಕೂಡಿಂತೆಂದನು ||೨೪೬||

---

1 ಸೈನ್ಯವ ಕೂಡಿ ಶ್ರೀರಾಮ | ಚರಣಕಭಿವಂದಿಸುತ ಬಂದಲ್ಲಿ (ಓ)
ಮಾರ್ಬಲ ಸಹಿತ . . . . . .ತೆರಳಿದಂ (ಅ)
ಬಲಸಹಿತವರ . . . (ಅ)
2 ನುತ್ತರಿಸುತೆಲ್ಲವರನು ಕಳುಹಿ (ಅ)
3 ವರಮಂತ್ರಿಗಳಿಗೆ ಸೀಮೆಯ ಪಾರುಪತ್ಯಮಂ | ವಿರಚಿಸಿಯೆ ಶತ್ರುಘ್ನನಂ ನಿಲಿಸಿ ಪಟ್ಟಣಕೆ (ಕಾ, ಅ)

(ಭರತಾದಿಗಳ ನಿಷ್ಕ್ರಮಣ ; ಮುನಿಗಳ ಪ್ರವೇಶ)

೮೨ ರಾಗ [1]ನವರೋಜು[1]—ಮಟ್ಟೆತಾಳ ೧

ರಾಮು—

ಬಂದು ಬಹಳ । ದಿವಸ ನಮ್ಮ । ಸಲಹಿಕೊಂಡಿ । ರಿ — ।
ಇಂದು ಪ ।ರ್ಯಂತ ನಮ್ಮ । ನುಳುಹಿಕೊಂಡಿ । ರಿ ॥ ೨೪೭ ॥

ಮುಂದೆ ಪೋಪೆ । ವಿನ್ನು ನಾವು । ಕಳುಹಿ ನಮ್ಮ । ನು — ।
ಒಂದು ದಿನವೂ । ಮರೆವುದಿಲ್ಲ । ಮುಂದೆ ನಿಮ್ಮ । ನು — ॥ ೨೪೮ ॥

ದಂಡಕಾ । ರಣ್ಯದೆಡೆಗೆ । ದಾರಿಯಾವು । ದು — ।
ಹಿಂಡು ಮುನಿಗ । ಳಿಪ್ಪ ವನದ । ತಂಡವಾವು । ದು — ॥ ೨೪೯ ॥

ಎನುತ ರಾಮು । ಕೈಯ ಮುಗಿದು । ಕೇಳ್ದ ಮಾತಿ । ಗೆ — ।
ಮುನಿ[2]ಗಳೆಲ್ಲ । ಗುರುತವನ್ನು । ಪೇಳ್ದರಾತ । ಗೆ[2] — ॥ ೨೫೦ ॥

ಮುಂದೆ ರಾಮು । ನಡುವೆ ಸೀತೆ । ಹಿಂದೆ ಲಕ್ಷ್ಮ । ಣ — ।
ಒಂದೆ ಮತದಿ । ಚಿತ್ರಕೂಟ । ದಿಂದ ಪೊರಟ । ರು — ॥ ೨೫೧ ॥*

೮೩ ವಾರ್ಧಿಕ ಷಟ್ಪದಿ

ಗಿರಿಸರಸಿ ಕಾನನಂಗಳೊಳು ಗುಹೆ ಕಲ್ಲಿನೊಳು
ತೆರಳಿ ಬಂದವರು ಬಹುದಿವಸ ಉಪವಾಸದಿಂ
ದಿರಲು ಚಳಿ[3]ಗಾಳಿ ಬಿಸಿಲ್ ಬೇಸರಿಕೆಯೆಣ್ಣೆ ನೀರಿಲ್ಲ ದಾ[3]ಸರಿನಟ್ಟುಳಿ
ಬರದ ನಿದ್ರೆಯ[4]ರಾಕ್ಷಸರ್ಕಳಾರ್ಭಟೆ ಕೂಡೆ
ಪಿರಿದಾದ ಸಿಂಹಶಾರ್ದೂಲಗರ್ಜನೆಯ ನಿ
ಷ್ಠುರಕೆ ಬಸವಳಿದೊಂದು ದಿನ ತನ್ನ ಕಾಂತಂಗೆ ಧರಣಿನಂದನೆ ನುಡಿದಳು[4] ॥೨೫೨॥

---

1 ಶಂಕರಾಭರಣ (ಅ) 2 ಳಿರುವ ವನದ ಗುರುತ ಪೇಳ್ದರ್ ರಾಮುಗೆ (ಅ)

* ಬನ್ನಬಡಿಸಿ ಶಂಭುಕಾಸು । ರನ್ನಗೆಲಿದರು । ಬಿನ್ನೈಸುತ ಋಷಿಗಳಾಶ್ರಮವನು ಕಳೆದರು (ಕಾ)

3 ಬಿಸಿಲ ಝಳತಕ್ಕೆಣ್ಣೆ ನೀರಿಲ್ಲದಾಸರಾ (ಅ)

4 ತೊರೆದು ರಾಕ್ಷಸರ್ಕಳ ಕಂಡು
ಪರಿಪರಿಯ ಸಿಂಹ ಶಾರ್ದೂಲಗಳ ನೋಡುತ್ತ
ತರಣಿಕುಲ ನಿಜಕಾಂತನಿಗೆ ಧರಣಿ ನಂದನೆಯದೊಂದು ದಿನ ಬಿಸು ಸುಯ್ದಳು। (ಅ)

೮೪ ರಾಗ ಘಂಟಾರವ—ಏಕತಾಳ ೭

ಸೀತೆ—

ಕಾಂತ ರಾಮು । ಚಂದ್ರದೇವ । ಚಿಂತೆ ಹೆಚ್ಚಿ । ತೆನ್ನ ಜೀವ ।
ಅಂತರಿಸ । ಲಾರೆ ನೀಗ । ಇಂತು ಪೋಪು । ದೇಕೊ ಬೇಗ ॥ ೨೫೩ ॥

ನಡೆಯ ಲಾರೆ । ನಯ್ಯೊ ಮುಂದೆ । ಅಡವಿಯಲ್ಲೊ । ನೋಡು ಹಿಂದೆ ।
ನಡುಗುತಿದೆ । ನ್ನಕ್ಕೈಕಾಲು । ಒಡೆದುದೇತ । ಕಯ್ಯೋ ಹೇಳು ॥ ೨೫೪ ॥

ಜನಕರಾಯ । ನನು ಕಾಣದೆ । ಮನಸು ಬಹಳ । ಕರಗುತಿದೆ ।
ಕನಸಿನಲ್ಲಿ । ಕಂಡೆ ತಾಯ । ನೆನಸಿ ಬಡ । ವಾದೆ ಪ್ರಿಯ ॥ ೨೫೫ ॥

೮೫ ವಾರ್ಧಿಕ ಷಟ್ಪದಿ

ಬಸವಳಿದು ಸೀತೆ ಮೈಗುಂದಿ ಕಾಲೊಡೆದು ನೆರೆ
ಬಸಿವರುಣಧಾರೆಯಲಿ ಬಟ್ಟೆಕೆಸರಾಯ್ತು ಮಾ
ತುಸುರಲಾರದೆ ಬಿದ್ದಳಬ್ಜಾಕ್ಷಿ ತಲೆತಿರುಗಿ ಕಣ್ಣಾಲಿ[1] ನೀರೆತ್ತಿತು[1]
ಕುಶನೆ ಕೇಳಿದರ ಲಕ್ಷ್ಮಣ ಕಂಡು ರಾಮನೊಡ
ನುಸುರೆ ರಘುಕುಲ ತಿಲಕ ಕಮಲಪೆಲೆಯಲಿ ನೀರ
ಪಸರಿಸುತ ಕಣ್ಣಿಗೊತ್ತ್ಯಮೃತಹಸ್ತದಿ ತನುವ ತಡವರಿಸುತಿಂತೆಂದನು ॥ ೨೫೬ ॥

೮೬ ರಾಗ ವರಾಳಿ—ಆದಿತಾಳ

ರಾಮ—

ದೃಷ್ಟಿಸಿ ನೋ । ಡಿದೆಯೇನೊ । ತಮ್ಮಾ—ಜಾ । ನಕಿ ಬಂದು
ಕಷ್ಟ ಬಟ್ಟ । ಳಲ್ಲೊ ಬರಿದೆ । ತಮ್ಮಾ—ತ । ಮ್ಮಾ— ॥
ಹೊಟ್ಟೆಗನ್ನ । ವಿಲ್ಲದೆ ನಡೆದು । ತಮ್ಮಾ—ಅದ । ರಿಂದ ಕಂ ।
ಗೆಟ್ಟು ಮೂರ್ಛೆ । ಯೋದಳಲ್ಲೊ । ತಮ್ಮಾ — ತ । ಮ್ಮಾ ॥ ೨೫೭ ॥

ಜನಕನುದರ । ದಲ್ಲಿ ಜನಿಸಿ । ತಮ್ಮಾ—ಎ । ನ್ನ ಕೈವಿಡಿದು ।
ಇನಿತು ಭಾಗ್ಯ । ಉಂಡಳಲ್ಲೊ । ತಮ್ಮಾ—ತ । ಮ್ಮಾ— ॥
ಘನತೆಯಿಲ್ಲ । ಇನ್ನಿವಳಿಂದ । ತಮ್ಮಾ—ಅ । ಯೋಧ್ಯೆಯಲ್ಲಿ ।
ವನಿತೆಯನ್ನು । ಬಿಟ್ಟು ಬಾರೊ । ತಮ್ಮಾ—ತ । ಮ್ಮಾ ॥ ೨೫೮ ॥

೮೭ ರಾಗ ಪಂತುವರಾಳಿ—(ಪಂಚಘಾತ) ಮಟ್ಟೆತಾಳ ೨

ಸೀತೆ—

ರಘುಕುಲೇಂದ್ರ । ರಾಮು ನಿನ್ನ । ಅಗಣಿತಾ । ಶ್ರಯವ ಬಿಟ್ಟು ।
ಅಗಲಲಾರೆ । [2]ನಿಮಿಷ ತವ । ಪಾದದಾಣೆ । ಗೂ[2] — ॥ ೨೫೯ ॥

1 ಮೇಲೊತ್ತಿತು (ಓ) 2 ನೊಂದು ನಿಮಿಷ । ಸುಮ್ಮನೇತಕೋ ।

ನೀರ ನಿನ್ನ | ನಿಲ್ಲಿ ಬಿಟ್ಟು | ಊರೊಳೇನು | ಭಾಗ್ಯವುಣಲಿ |
ಬೇರೆ ಮತಗ | ಳಿಲ್ಲವಯ್ಯ | ನೀರಜಾಕ್ಷ | ಣ— || ೨೬೦ ||

ಎನಲು ಸೀತೆ | ರಾಮನತ್ರಿ | ಮುನಿಪನಾಶ್ರ | ಮಕ್ಕೆ ಬರಲು |
ಘನವಿವೇಕ | ದಿಂದ ತಿಳಿದು | ಧರ್ಮಶಾಸ್ತ್ರ | ವ — || ೨೬೧ ||

ಅನಸೂಯಾ | ದೇವಿ ಭೂ | ಷಣವ ಕೊಡಲು | ತೆಗೆದುಕೊಂಡು |
ಮನದ ಹರುಷ | ದಿಂದಲಲ್ಲಿ | ದಿನವ ಕಳೆದ | ರು — || ೨೬೨ ||

೮೮ ವಾರ್ಧಿಕ ಷಟ್ಪದಿ

ತಿಂಗಳತ್ರಿಯ ಮುನಿಪನಾಶ್ರಮದೊಳಿರ್ದು ರಘು
ಪುಂಗವಂ ಬಳಿಕೆದ್ದನಲ್ಲಿಂದ ಮುಂದೆ ಕರು
ಣಂಗಳಿಂ ಜಮದಗ್ನಿಯಿಂ ಕಳುಹಿ ಖಳವಿರಾಧನ ಮುರಿದು ಮಾರ್ಗದೊಳಗೆ |
ಕಂಗೊಳಿಪ ದಂಡಕಾರಣ್ಯಕೈತಂದು ಶರ
ಭಂಗಋಷಿಯಂ ಕಂಡು ನೈತ್ರಾವರುಣಿಯಲ್ಲಿ
ಸಂಗಡಿಸಿ ಮೂವತ್ತು ದಿನಸ[1]ಬಳಿಕೈತಂದು[1] ಕುಂಭಸಂಭವನಲ್ಲಿಗೆ || ೨೬೩ ||

(ಅಗಸ್ತ್ಯಮುನಿಯ ಪ್ರವೇಶ)

೮೯ ರಾಗ ಕಾಂಭೋಜಿ—ಏಕತಾಳ ೩

ಅಗಸ್ತ್ಯ—

ರಾಮ ಹ | ರೇ ರಘು | ನಾಥ ಹ | ರೇ — |
ಭೂಮಿಪಾ | ಲಕ ಚಾರು | ಶೀಲ ಸ | ಜ್ಜನಪಾಲ || ಪಲ್ಲ ||

ಖರದೂ | ಷಣ ದಶ | ಶಿರ ಮುಂತಾ | ದಸುರರ |
ಶಿರವ ಕ | ತ್ತರಿಸುವ | ಶರವಿದೇ | ಸಹಜ || ೨೬೪ ||

೯೦ ಕಂದ

ಚಾಪವ ಕೊಟ್ಟಾ ಮುನಿಪಗೆ
ಭೂಪಾಲಕ ಶಿರವ ಮಣಿದು ಪೊರಟಲ್ಲಿಂದಂ |

1 ವಿದ್ದಲ್ಲಿಂದ (ಅ)

ಈ ಪರಿ ವನಗಳ ಕಾಣುತ
ತಾಪಸರಂ ಮನ್ನಿಸುತ್ತ ಸೀತೆಗೆ ಪೇಳ್ದಂ ॥ ೨೬೫ ॥

(ಅಗಸ್ತ್ಯಮುನಿಯ ನಿಷ್ಕ್ರಾಮ)

೯೧ ದ್ವಿಪದೆ

ರಾಮ—

ಕಂಡೆಯಾ ಜನಕಸುತೆ ಕಡುವಿಚಿತ್ರಗಳ
ದಂಡಕಾ ವನದೊಳಿಹ ಸಕಲವಸ್ತುಗಳ ॥ ೨೬೬ ॥

ಇದೆ ಲವಂಗ ವಿಳಂಗ ಕುರವಕವು ಬದರಿ
ಇದೆ ಕಕ್ಕೆ ಕಲಗು ಕರ್ಮ್ಮರ ಕಡಿಕು ಕದಳಿ ॥ ೨೬೭ ॥

ಆಲ ಲಂಬಟೆ[1] ಕಣಿಲು ಬೆಟ್ಟ[1] ಬೊಬ್ಬುಳಿಯು
ಸಾ[2]ಲ ಕಿತ್ತಿಳೆ ಪನಸ ಬಿಲ್ವ ಸಮಿಧೆಗಳು[2] ॥ ೨೬೮ ॥

ತೂಗುತಿಹ ಚೂತಫಲವಿದೆ ಸುತ್ತುಮುತ್ತ
ಪೂಗ ಪುನ್ನಾಗ ಕಲ್ಲರಳಿಯಶ್ವತ್ಥ ॥ ೨೬೯ ॥

ಇದೆ ತವಸೆ ತಡಸೆ ತಂಡಸಿಲೆ ರೆಂಜೆಗಳು
ಇದಕೊ ರುದ್ರಾಕ್ಷಿ ಖರ್ಜೂರ ಬೆಳಲೆಗಳು ॥ ೨೭೦ ॥

ಬಿದಿರು ಬಿಲವಟ್ಟಾಲ ಬೀಜಪುರ ಮತ್ತಿ
ಇದೆ ನೆಲ್ಲಿ ಮಧುಕ ಮಾದಳ ಮರುಗ ಇತ್ತಿ ॥ ೨೭೧ ॥

ಕಲ್ಲತ್ತಿ ಕದವು ಕಾಲತ್ತಿ ಕಟ್ಟು ಸೋದಿ
ಬೆಲ್ಲವತ್ತವು ಕಪಿತ ಸುರಹೊನ್ನೆ ಬೋದಿ ॥ ೨೭೨ ॥

ಚಿತ್ತವರೆ ಯಣಿಲೆ ಮುಳುಮುತ್ತುಗಾದಿಗಳ
ಮತ್ತೆ ನೋಡಿಲ್ಲಿರುವ ಕರ್ಣಿಕಾರಗಳ ॥ ೨೭೩ ॥

---

1 ತಗ್ಗಿ ತಿಟ್ಟೆ (ಓ)  2 ಲಾದ ಪನಸ ಕಿತ್ತಿಳೆ ಬಿಲ್ವ ಸಮಿಧ (ಕಾ)

ಹಿಂತಾಳ ಹಾಲೆ ಹಿಪ್ಪಲಿ ಹುಗಿಲು ಹಗುಳ
ಮುಂತಾದ ನಿಕ್ಕಳ್ಳ ಗುಗ್ಗುಳಾದಿಗಳ ॥ ೨೭೪ ॥

ಕಲ್ಲರಳಿ ಕರ್ಪೂರ ಕೊಡಸಿಗೆಯು ಮೊದಲ
ವೆಲ್ಲ ತರ ವೃಕ್ಷಗಳ ಕಂಡೆಯಾ ಬದಲ ॥ ೨೭೫ ॥

ಕಡವು ಕಾತರು ಜಾಲಿ ಕೈಸೋರೆ ಬೇಲ
ಗಿಡಗಳು ಕಪಿತ್ಥ ಸುರಹೊನ್ನೆಗಳ ಸಾಲ ॥ ೨೭೬ ॥

ಚಾರು ಜಂಬೀರ ವರನಾಗಚಂಪಕವ
ಗೇರು ಗಾವಟೆ ಚಳ್ಳೆ ತಿಲಕ ತರುಕುಲವ ॥ ೨೭೭ ॥

ಇದೆ ಬಾಗೆ ಸೀಗೆ ಮೊದಲಾದ ತರುಚಯುವ
ಸುದತಿಮಣಿ ನೋಡಿತ್ತ ವನದ ಸಂಭ್ರಮವ ॥ ೨೭೮ ॥

ಹರಿ ಕ್ರೋಡ ಖಡ್ಗಿಯು ಕರಂಗಿ ಕಡಸಗಳ
ಶರಭ ಶಾರ್ದೂಲ ಸಾರಂಗ ಕರಡಿಗಳ ॥ ೨೭೯ ॥

ಕಾಡಾನೆ ಕಾಳ್ಕೋಣ ಕಾಡೆಮ್ಮೆಗಳನು
ಕಾಳ್ನಾಯಿ ಕಾಡ್ಕೋಳಿ ಕಾಳ್ಬೆಕ್ಕುಗಳನು ॥ ೨೮೦ ॥

ಚಾತಕ್ಕಿ ಬೋಳಕ್ಕಿ ಜಕ್ಕವಕ್ಕಿಗಳ
ನೂತನ ಕಳಿಂಗ ಗೊರವಂಕ ಗುಬ್ಬಿಗಳ ॥ ೨೮೧ ॥

ಕೋಡಗಗಳುರಿಗಣ್ಣ ಜಂಬುಕಾದಿಗಳ
ಕಾಡೊಳೋಡಾಡುತಿಹ ಮೂಷಿಕಾದಿಗಳ ॥ ೨೮೨ ॥

ಕಸ್ತೂರಿಮೃಗ ಚಮರಿ ಗರಗ ಮತ್ತಿರವ
ಇತ್ತನೋಡ್ ಮುಂಗುಲಿಯ ಚಂದದಾನನವ ॥ ೨೮೩ ॥

ಶುಕಪಿಕಂಗಳ ಕೇಳು ನುಡಿಯ ಗಾನಗಳ
ನಿಖಿಲ ವನದಲಿ ನೋಡು ಸಕಲ ವಸ್ತುಗಳ ॥ ೨೮೪ ॥

ಇಂತೆಂದು ತೋರಿಸುತ ನಡೆತಂದರಂದು
ಕಾಂತೆ ಜಾನಕಿಸಹಿತ ಪಂಚವಟಿಗಂದು ॥ ೨೮೫ ॥

೯೨ ರಾಗ ಸೌರಾಷ್ಟ—ತ್ರಿವುಡೆ ತಾಳ ೨

ನೋ[1]ಡಿ[1] ನಿರ್ಮಲ । ಜಲಸವಿರಾಪದಿ ।
ಮಾಡಿಕೊಂಡರು । ಪರ್ಣಶಾಲೆಯ ।
ರೂಢಿಪಾಲರು । ಪಂಚವಟ್ಯದ । ಕಾಡಿನೊಳಗೆ ॥ ೨೮೬ ॥

ವನದ ಫಲಗಳ । ಕೊಯ್ದು ಲಕ್ಷ್ಮಣ ।
ದಿನದಿನವರಿಗೆ । ತಂದುಕೊಡುವನು ।
ವನದೊಳ[2]ತಿಸುಖ । ದಿಂದ ಕಳೆದರು । ಕೆಲವು ಕಾಲ[2] ॥ ೨೮೭ ॥

ಒಂದು ದಿನ ಅ । ಲ್ಲಿರುವ ಋಷಿಗಳು ।
ಬಂದು ರಾಮನ । ಬಳಿಗೆ ಕೈಮುಗಿ ।
ದೆಂದರಾ ರಾ । ಕ್ಷಸರು ಮಾಳ್ಪ ನಿ । ರ್ಬಂಧಗಳನು ॥ ೨೮೮ ॥

(ಋಷಿಗಳು ಬೊಬ್ಬಿಡುತ್ತ ಪ್ರವೇಶಿಸುವರು)

೯೩ ರಾಗ ಘಂಟಾರವ—ಏಕತಾಳ ೫, ತಿತ್ತಿತ್ತೈ (ಯಾಲಪದ)

ಋಷಿಗಳು—

ಚಿತ್ತೈ । ಸಯ್ಯ । ರಾಮ । ನಿನ್ನೆ । ಘೋರ । ದನುಜ । ನೊಬ್ಬ । ಬಂದು ।
ವ್ಯರ್ಥ । ವಂಚಿ । ಸುತ್ತ । ನಮ್ಮ । ನು— । —ಯ । ಜ್ಞಶಾ । ಲೆಯ ।
ಕಿತ್ತು ।—[3]ಬಿ । ಸಾಡಿ । ಪೋದ । ನು[3]— ॥ ೨೮೯ ॥

,ಮ । ತ್ತೊಬ್ಬ । ಖಳನು । ದೂರ । ನಿತ್ತು । ಕೊಂಡು । ಕಲ್ಲ । ಲಿಟ್ಟು ।
,ಹ । ತ್ತುಗಾ । ಯವ । ಮಾಡಿ । ದ—।—ನಮೂ । ಗಿಂದ । ಬಹ ।
,ನೆ । ತ್ತರ । ನೀನು । ನೋಡಿ । ದ್ಯಾ— ॥ ೨೯೦ ॥

ಭಂಡ । [4]ನೆಂಬ । ದೈತ್ಯ । ನುಮುಂ । ಕೊಂಡು । ಬಂದು । ನಮ್ಮ । [4]ಯಜ್ಞ ।
,ಕುಂ । ಡಕೆಂ । ಜಲ । ನಿಟ್ಟ । ನು—।—ವ್ಯಾ । ಘ್ರಚ । ರ್ಮವ ।
,ಕೊಂ । ಡೋಡಿ । ಪೋ—। ದನ । ಯ್ಯ— ॥ ೨೯೧ ॥

---

1. ಡು (ಕಾ) 2. ಗೆ ಬಲು । ಸುಖದೊಳಿರ್ದರು । ಕೆಲವು ದಿವಸ (ಅ, ಕಾ)
3. ನಮ್ಮೆಲ್ಲರ ಬಡಿದ (ಅ) 4. ದೈತ್ಯ । ರಿಬ್ಬರಿಂದು । ಬಂದು ಮುಂ । ಕೊಂಡು (ಅ)

,ಮೂ | ರು ಮಂ | ಡೆಯುವ | ನೊಬ್ಬ | ,ಘೋ | ರದಾ | ನವ | ಬಂದು |
,ನಾ | ರ ವ | ಸ್ತ್ರವ | ಸೆಳೆ | ದ — | — ಜ | ಪಗಳ | ಮಾಳ್ಪ |
,ಹಾ | ರವ | ಕಡಿ | ಮೋಡಿ | ದ — || ೫೨ ||

೯೪ ವಾರ್ಧಿಕಷಟ್ಪದಿ

ಎಂದು ಹುಯ್ಲಿಟ್ಟ ಋಷಿಗಳ ಮಾತ ಕೇಳ್ದು ರಘು
ನಂದನನು ನಸುನಗುತ ಬೆದರದಿರಿ ರಕ್ಕಸರ
ಕೊಂದು ಕೊಡುವೆನು ತಾಳಿ [2]ಕಿರಿದು[2]ದಿನದೊಳಗೆ ತಾನೆಂದೊ
ಡಂಬಡಿಸಿ ಬಳಿಕ |

(ಋಷಿಗಳ ನಿಷ್ಕ್ರಮಣ)

ಹಿಂದೆ ಕಳುಹಿದನವರ ಸಂತಯ್ಸಿ, ಮುನಿವಧುಗ
ಳಿಂದ ಮಾತನು ಕೇಳಿ ಜನಕಸುತೆ ಭೀತಿಯುಲಿ
ನೊಂದುಕೊಂಡವಳಾಗಿ ರಾಮಚಂದ್ರನ ಕೂಡೆ ಎಂದಳಾ
ವೃತ್ತಾಂತವ || ೫೩ ||

೯೫ ರಾಗ ಎರುಕಲಕಾಂಭೋಜಿ—ಏಕತಾಳ ೪

ಸೀತೆ—

ವನಜಲೋಚ | ನ ಕೇಳ್ ಮುಂದೆ |
ಘನವಾದ ಘೋ | ರಡವಿಯಂತೆ |
ಅಣೆಯಿಲ್ಲದ | ಗಹ್ವರವಂ | ತೆ — ಅ | ಲ್ಲಿ ರಕ್ಕಸರು |
ಮನೆ ಮಾಡಿ | ಕೊಂಡಿಹರಂ | ತೆ — ಹಿಂ | ದೆ ಅನೇಕ |
ವನಿತೆಯರ | ನೊಯ್ದಿಹರಂ | ತೆ — ಈ | ವಿಪಿನದೊ |
ಳಿರುವದು — | ಕಷ್ಟ ರಾಘ | ವ — || ೫೪ ||

ರಾತ್ರಿಂಚರ | [3]ಮತ್ತನೊರ್ವ |
ಧೂರ್ತ[3]ಖಳ | ನಿರುವನಂತೆ |
ಮಸ್ತಕಂಗ | ಳು ಹತ್ತುಂಟಂ | ತೆ— [4]ಅ | ಷ್ಟಲ್ಲದ[4]ವಗೆ |

---

1. ರ (ಅ) 2. ಕೈದು (ಅ) 3. ನಾಥನಾಗಿ | ಮತ್ತೊಬ್ಬ (ಕಾ) 4. ಅ | ಮೇಲ (ಅ)

ಹಸ್ತಂಗಳಿ । ಪ್ಪತ್ತು ಉಂಟಂ । ತೆ — ಹೆ । ಣ್ಣುಗಳೆಂಬ ।
ಪಿತ್ತ ತಲೆ । ಗೇರಿಹುದಂ । ತೆ — ಈ । ವಿಪಿನದೊ ।
ಳಿರ್ಪುದು — । ಕಷ್ಟ ರಾಘ । ವ — ॥ ೨೯೫ ॥

೯೬ ವಾರ್ಧಿಕಷಟ್ಪದಿ

ಅರ್ಗ[1]ಳೆಯ[1] ದನುಜರಟ್ಟುಳಿಯನಾಲಿಸಿ ರಾಮ
[2]ಶೀಘ್ರ[2]ದಿಂ ಜನಕನಂದನೆಗೆ ಧೈರ್ಯವ ಪೇಳಿ
ಉಗ್ರಶರಚಾಪವಂ ಕೊಂಡು ಮನದೊಳಗೆ ಶೌರ್ಯಾಗ್ರ
ದಿಂದಿರ್ಪಾಗಲು ।
ಘೋರ್ಗರೆವ ರಕ್ಕಸರ ದಂಡು ಬಾಯ್ಬಿಟ್ಟೊದರೆ
ನಿರ್ಘೋಷದಬ್ಬರದ ಗಮ[3]ನದಾರ್ಭಟೆಯ ಬಲು
ದೀರ್ಘಮನಶೂರ್ಪನಖಿ ಬಂದಳಾ ವನಕೆ ಪ್ರಲಯಾಗ್ನಿ
ಭೈರವಿಯಂದದಿ[3] ॥ ೨೯೬ ॥

(ಅಬ್ಬರತಾಳದಲ್ಲಿ ಶೂರ್ಪನಖಿಯ ಪ್ರವೇಶ)

೯೭ ರಾಗ ಕಲ್ಯಾಣಿ—ಅಷ್ಟತಾಳ ೧

ಶೂರ್ಪನಖಿ—

ಆ, ರೆ । ಲೋ ಮನು । ಜಾ — ಈ । ವನಕೆ ಬಂದವ— ॥ ಪಲ್ಲವಿ ॥

ಭಾರಿ ಭಾರಿಗೆ । ಮೆಯ್ಯ ವಾಸನೆ । ಬೀರುತಿದೆ ಪೊಸ ।
ಗಮಲುಗಳ ಬಲು ।
ಧೀರರೆಲ್ಲರು । ಬನ್ನಿ ನಮ್ಮಯ । ಬಾರಣೆಗೆ ತು । ತ್ತಾಗಿ ಬಂದವ ॥ ೨೯೭ ॥

ಇಷ್ಟು ಕಾಲದೊ । ಳೊಬ್ಬರಿಲ್ಲಿಗೆ । ಥಟ್ಟನೇ ತನ । ಗಂಜಿ ಬಾರರು ।
ದಿಟ್ಟರಿವರಹ । ರಾರು ನೋಳ್ಪಡೆ । ದೃಷ್ಟಿಗೋಚರ । ವಿಲ್ಲ ಬಂದವ ॥ ೨೯೮ ॥

---

1. ಳದ (ಅ, ಕಾ) 2. ವ್ಯಗ್ರ (ಕಾ) 3. ಗಮಕದಾರ್ಭಟೆಯ ಸಿಡಿ । ಲಬ್ಬರದ ಬೊಬ್ಬೆಯಿಂ ॥ ಶೂರ್ಪನಖಿ ಬಂದಳಾ । ಕಾನನಕೆ ಕುಲಗೇಡಿಯು । (ಅ)

ಖಂಡ ಖಂಡವ । ಬೇರೆ ಬೇರೇ । ತುಂಡು ತುಂಡೇ । ಹಸಿಯ ನುಂಗುವೆ ।
ಕೆಂಡದಲ್ಲಿ । ಟ್ಟವರ ಎಲುಗಳ । ಕಂಡಿಸುವೆ [1]ಕಟ । ಕಟನೆ ಸೊಗಸಿಲ ।
ದಾ[1]ರೆಲೋ — ॥ ೯೯ ॥

೯೮ ಶಾರ್ದೂಲವಿಕ್ರೀಡಿತ ವೃತ್ತ (?)

[2]ಇಂತೀರಾಕ್ಷಸಿ ಭೀಕರಾಕೃತಿಯೊಳೇ ಮತಿಗೆಟ್ಟು ಬಂದಿರ್ದೊಡಾ ।
ಪೃಥಿವೀ ಜಗ್ಗಿತು ಪರ್ವತಂಗಳದಿರಲ್ ನಾಲ್ಕೊಗಂ ಅಂಜುವಂತೆ ।
ಅತಿವೇಗಂ ರಘುವೀರನೆದ್ದು ಕರದೊಳ್ ಬಿಲ್ಬಾಣಮಂ ಕೊಳ್ಳಲು ।
ಮಿಥಿಲೇಂದ್ರಾತ್ಮಜೆ ಸೀತೆ ಬಂದಳುಕುತಂ ತತ್ಕಾಂತಗಿಂತೆಂದಳು[2] ॥ ೨೦೦ ॥

೯೯ ರಾಗ ಪುನ್ನಾಗ, ತೋಡಿ—ತ್ರಿವುಡೆತಾಳ ೧

ಸೀತೆ—

ರಾಘವ ನೀ । ಎನ್ನ ಬಿಟ್ಟು । ಪೋಗದಿರ । ಯ್ಯ — ।
ಈಗ ಬಂದ । ಳಾ ರಾಕ್ಷಸಿ । ಕೂಗುತಾಳೆ । ಆರ್ಭಟಿಸಿ ॥ ಪಲ್ಲವಿ ॥

ಲಕ್ಷ್ಮಣನೆ । ಲ್ಲಿದ್ದನೇನೊ । ರಾಕ್ಷಸಿಯು । ಕಂಡನೇನೊ ।
ದಾಕ್ಷಿಣ್ಯವಿ । ಲ್ಲದೆ ನಮ್ಮ । ಭಕ್ಷಿಸುವಳು । ತಡೆಯೊ ನೀನು । ॥ ೨೦೧ ॥
ವ್ಯರ್ಥವಾಗಿ । ಬಂದೆವು ಋಷಿ । ಪತ್ನಿಯರ । ಮಾತ ಕೇ[3]ಳದೆ[3] ।
ಮೃತ್ಯು ಮುಂಡೆ । ಬಂದಳ್ ಮಾರಿ । ತುತ್ತುಗೊಂಬ । ಳೊಂದೇಬಾರಿ
॥ ೨೦೨ ॥

---

1. ಸೊಗಸಾಗಿ ಬಂದವ । ನಾ (ಕಾ, ಅ)
2. ವಾರ್ಧಿಕ ॥ ಖತಿಯೊಳಾ ರಾಕ್ಷಸಿಯು ಭೀಕರಾಕೃತಿಯೊಳಗೆ ।
ಮತಿಗೆಟ್ಟು ಬಂದಿರ್ದಡದುಭುತಾಕಾರದಿಂ ।
ಪೃಥಿವಿ ತಗ್ಗಿತು ಅದಿರಿತಾ ದಿಕ್ತಟಂಗಳುಂ ನಾಲ್ಕೊಗಂ ಅಂಜುವಂತೆ ॥
ಅತಿಬೇಗ ರಘುವೀರ ಬಿಲ್‌ಬಾಣಮಂ ಪಿಡಿಯೆ ।
ಮಿಥಿಲೇಂದ್ರ ಕುಲಜಾತೆ ಕಂಡಂಜುತಾ ಸೀತೆ ।
ಪತಿಯೆಡೆಗೆ ನಡೆತಂದು ಕಡುಭಯದಿ ರಘುವರಂಗೆರಗುತ್ತ
ಲಿಂತೆಂದಳು (ಕಾ)
3. ಳಿ (ಓ)

೧೦೦ ರಾಗ ಘಂಟಾರವ—ಜಂಪೆತಾಳ ೨

ರಾಮ—

ಅಂಜಬೇ | ಡೆಲೆ ಸೀತೆ | ಮಿಥಿಲೇಂದ್ರ | ಕುಲಜಾತೆ |
ಭಂಜಿಸುವೆ | ರಾಕ್ಷಸಿಯ | ಕುಂಜರ | ಗಮನೆ — || ೩೦೩ ||

ಕಣ್ಣ ಮು | ಚ್ಚಿಕೊ ನೀನು | ಕಂಡರಂ | ಜುವೆಯವಳ |
ಹೆಣ್ಣುಮೂ | ಳಿಯ ಕೊಂದು | ಮಣ್ಣುಗೂ | ಡಿಸುವೆ || ೩೦೪ ||

ಎಂದು ಧೈ | ರ್ಯವ ಪೇಳಿ | ಬಂದು ರಾ | ಮನ ದೂರ |
ದಿಂದ ನೋ | ಡಿದರೆ ಬಲು | ಚಂದವಾ | ಗಿರಲು — || ೩೦೫ ||

(ಏಕತಾಳ, ತಿತ್ತಿತ್ತೈ)

ಶೂರ್ಪನಖಿ—

,ಕಂಡ | ರೆ — | ಮದನ | ನಂಥ | ಗಂಡು | ಸಾ — | ಗಿರುವ | ನೀತ |
,ಕೊಂಡೊ | ಯ್ದುವನ | ಮನೆಗೆ | ಯೆನ್ನ | ,ಗಂಡ | ನ ಮಾ | ಳ್ಪೆ —
|| ೩೦೬ ||

(ಮಾಯಾ ಶೂರ್ಪನಖಿಯ ಪ್ರವೇಶ)

೧೦೧ ದ್ವಿಪದೆ

ಎನುತ ಮನದೊಳಗಿಂತು ಯೋಚನೆಯ ಮಾಡಿ
ಘನವಾದ ದೇಹವನು ಕುನಿಸಿ ಮರೆಮಾಡಿ || ೩೦೭ ||

ಮಾಯಕದ ರೂಪದಲಿ ಮತ್ತೊಂದು ಬಗೆಯ |
ಕಾಯವನು ಧರಿಸಿದಳು ಕಪಟದಾಕೃತಿಯ || ೩೦೮ ||

ಹದಿನಾರು ವತ್ಸರದ ಹೆಣ್ಣಾದಳವಳು
ಮುದದಿಂದ ಶೃಂಗಾರ[1]ಮಾಡಿ ನೋಡಿದ[1]ಳು || ೩೦೯ ||

1. ವಾಗಿ ಮತ್ತವ (ಅ)

ಪೂಗೋಲನುರುಪಟ್ಟದಾನೆಯಂದದಲಿ
ರಾಘವನ ಬಳಿಗಾಗಿ ಬಂದ[1]ಳೊಲವಿ[1]ನಲಿ ॥ ೩೧೦ ॥

ಕರವಮುಗಿದಳು ಬಳಿಕ ಕಂಡು ರಘುಪತಿಯ
ಅರುಹಿದಳು ಕಾರ್ಯಗಳ ಅಂತರಸ್ಥಿತಿಯ ॥ ೩೧೧ ॥

೧೦೨ ರಾಗ ಕಾಂಭೋಜಿ—[2]ಚೌತಾಳ[2], ತಿತ್ತಿತ್ತೈ

ಮಾಯಾಶೂರ್ಪನಖಿ—

ರಾಘವ । ನರಪತೇ । ,ಶ್ರುಣು ಮಮ । ವಚನಂ ।
ನೀ ಗುಣ । ನಿಧಿಯೆಂದು । ,ನಿನ್ನ ಸೇ । ರಿದೆ ಬಂದು ॥ ಪಲ್ಲವಿ ॥

ಅತಿ[3]ಕುಲ[3] । ವತಿ ನಾನು । ,ಪೃಥಿವಿಪಾ । ಲಕನೀನು ।
ರತಿದೇವಿ । ಗೆಣೆ ನಾನು । ,ಮನ್ಮಥ । ನೀನು ॥ ೩೧೨ ॥

ಸರಸಿಜಾಂ । ಬಕಿ ನಾನು । ,ತರಣಿಪ್ರ ।ಕಾಶ ನೀನು ।
ವರ ಬಿಂಬಾ । ಧರೆ ನಾನು । ,ಅರಗಿಣಿ । ನೀನು ॥ ೩೧೩ ॥

ಕವಲು ಮ । ನವ ಬಿಟ್ಟು । ,ತವಕದಿ । ದಯವಿಟ್ಟು ।
ಸವಿದಂಬು । ಲವ ನೀಡು । , ಸರಸ ಮಾ । ತಾಡು ॥ ೩೧೪ ॥

ಎಲ್ಲಿ ನೋ । ಡಿದರೆನ । ,ಗಿಲ್ಲ ಒ । ಪ್ಪುವ [4]ಜನ,[4] ।
ಬ[5]ಲ್ಲಾ ತ । ನೀ ಖ[3]ರೆಯೊ । ,ಬಲು ಬೇಗ । ನೆರೆಯೊ ॥ ೩೧೫ ॥

೧೦೩ ಕಾಂಭೋಜಿ—ಏಕತಾಳ

ರಾಮ—

ಮದನನ ಪ । ಟ್ಟದಾನೆ ನೀ । ಮೊದಲೇ ಬಂದು । ದಿಲ್ಲ ।
ಚದುರೆ ಸ । ಣ್ಣವಳೊಬ್ಬಳ । ಮದುವೆಯಾದೆ । ನಲ್ಲ ॥ ೩೧೬ ॥

---

1. ಲಿದಿರಿ (ಅ) 2. ಅಷ್ಟತಾಳ (ಅ) 3. ಕಲಾ (ಅ) 4. ಜಾಣ 5 ಲ್ಲ ತನ ದಿಕ (ಅ).

ಒಂದು ಚೂರಿ | ಗೆರಡು ಒರೆ | ಹೊಂದುವುದೆ | ಪೇಳು — ಮ |
ತ್ತೊಂದು ಯುಕುತಿ | ಯುಂಟಾದರೆ | ಮಂದಗಮನೆ | ಕೇಳು || ೩೧೭ ||

ಎಮ್ಮಿಂದ ನೂ | ರ್ಮಡಿಗೆ [1]ಚೆಲುವ[1] | ತಮ್ಮ[2]ನಿಗೆ[2] | ಪ್ರಾಯ |
ಗಮ್ಮನೆ ನೀ | ಹೋಗಿ ತೋರು | ನಿನ್ನಲ್ಲಿದ್ದ | ಪಾಯ || ೩೧೮ ||

ವಂಚನೆಯಿ | ಲ್ಲದೆ ಪೋಗು | ಚಂಚಲಾಕ್ಷಿ | ಬೇಗ |
ಪಂಚಬಾಣ | ನುರುಬೆಯಿಂದ | ಮುಂಚೆ ಕೂಡುವ | ನೀಗ || ೩೧೯ ||

೧೦೪ ರಾಗ ಗೌಳೀಪಂತು—ರೂಪಕತಾಳ ೧

ಶೂರ್ಪನಖಿ—

ಚಂದದಿಂದ | ಬಂದಳಬ್ಜ | ಲೋ — ಚ | ನೆ — ರಾಮ |
ಚಂದ್ರನೆಂದ | ಮಾ[3]ತಿನ ಆ | ನಂದವನ್ನೆ | ನೆನೆಯುತಾಗ[3] || ಪಲ್ಲವಿ ||

ಕನ್ನಡಿಯನು | ಹಿಡಿದು ಮುಂದೆ | ನೋ — ಡು | ತ — ಮೊಗವು |
ಚೆನ್ನಾಗಿಹು | ದೆಂದು ನಗೆಯ | ಮಾ — ಡು | ತ — ತನಗೆ |

ಕನ್ನೆಯರೊಳು | ಜೋಡಿಲ್ಲೆಂದು | ಪಾ — ಡು | ತ — ಅಸುರೆ |
ತನ್ನೊಳಗೆ | ತಾನೇ ನಲಿ | ದಾ — ಡು | ತ — ಚಂದ | ದಿಂದ —
|| ೩೨೦ ||

ಕುರುಳ ಕಯ್ಯ | ಬೆರಳಿಂದೊಡನೆ | ತಿ — ದ್ದಿ | ತ — ಹೂವಿನ |
ಪರಿಮಳದೊಳು | ಮೆಯ್ಯ ನಲವಿಂ | ದ — ದ್ದಿ | ತ — ಮೂಗಿಂ |
ಗರಿವ ತಿಲಕ | ವನ್ನು ಬೆರಳಿಂ | ದು — ದ್ದಿ | ತ — ಬೇಗ |
ತರಳ ಲಕ್ಷ್ಮ | ಣನ್ನ ಬಳಿಯ | ಹೊ — ದ್ದಿ | ತ — ಚಂದ | ದಿಂದ —
|| ೩೨೧ ||

---

1. ಹೆಚ್ಚು (ಅ) 2. ಗೀಗ (ಬ) 3. ತತಾನೊಂದೊಂದನೆ ಜಿಸಗೊಳ್ಳುತ್ತ (ಅ).

೧೦೫ ರಾಗ ಕಾಪಿ-ಅಷ್ಟತಾಳ ೧

ಶೂರ್ಪನಖಿ—

ಕಾಮಸ । ನ್ನಿಭ ಮಾತ । ಕೇಳು — । — ಪೇಳ ।
ರಾಮ[1]ತಾ । ಕಳುಹಿದ । ನೆನ್ನೊಳು[1] ।
ನೀ ಮನ । ಸಿಟ್ಟು ಕೃ । ಪಾಳು — । — ಅತಿ ।
ಕಾಮಿಸಿ । ಬಂದೆನು । ನಿನ್ನೊಳು । — ಇನ್ನು ।
ತಾಮಸ । ಗೊಳದಿರು । ತಾಳಲಾ । ರೆನು ಸು ।
ಪ್ರೇಮದಿಂ । ದಲೆ ಕೂಡು । [2]ಸರಸಮಾ । ತಾ[2]ಡು ॥ ೩೨೭ ॥

ನೆರೆ ಮನ । ಸೆನ್ನಮೇ । ಲಿಟ್ಟು ।—ಇಕ್ಕೊ ।
ಗುರುಕುಚ । ವೆರಡ ನೀ । ಮುಟ್ಟು ।
ತೆರೆದ ಚೆಂ । ದುಟಿಗೆ ಬಾ । ಯಿಟ್ಟು ।—ಚ ।
ಪ್ಪರಿಸಿ ಸು । ರತಸುಖ । ಕೊಟ್ಟು ।—ಎನ್ನ ।
ವಿರಹವ । ನಿಲಿಸು ಕಾ । ತರವನ್ನೆ । ಮರೆಸು ಕಣ್ ।
ದೆರೆದು ಮಾ । ತಾಡು [3]ಕ । ಟಾಕ್ಷದಿಂ । ದಲೆ ನೋ[3]ಡು ॥ ೩೨೭ ॥

೧೦೬ ರಾಗ ಶಂಕರಾಭರಣ—ಅಷ್ಟತಾಳ ೩, (ದ್ರುತಲಯ)

ಲಕ್ಷ್ಮಣ—

ಮಂದಗಮನೆ । ಇಂಥಸುದ್ದಿ । ಯೊಂದನೆನ್ನೊ । ಳಾಡದಿರು ।
ಮುಂದೆ ಬ್ರಹ್ಮ । ಚಾರಿ ನಾ ಕಾ । ಣೆ— ।
ಬಂದದಾರಿಗೆ । ಸುಂಕವಿಲ್ಲ । ತಂದರಣ್ಣನ । ಗುರುತವನ್ನು ।
ಮುಂದೆ ಯೋಚನೆ । ಮಾಳ್ಪೆನೆಂದ । ನು— ॥ ೩೨೮ ॥

ಭಂಡುಮಾತ । ನಾಡುತಿದ್ದಿ । ಕಂಡರತಿ । ಚೆಲುವೆ ನಿನ್ನ ।
ಗಂಡನಾರು । ದೇಶವಾವು । ದೇ— ।
ಪುಂಡರೀಕ । ಲೋಚನೆ ಭೂ । ಮಂಡಲೇಶ । ರಾಮನ ನೀ ।
ಕಂಡುದಿಲ್ಲ । ಪೋಗು ಸುಮ್ಮ । ನೆ— ॥ ೩೨೫ ॥

---

1 ಕಳುಹಿದ ನಿಂದಿನೊಳು (ಅ)
2 ಪರಮ ಸ್ನೇಹವ ಮಾ (ಅ)
3 ಕಾರುಣ್ಯದಿಂದಲಿ ಕೂ (ಆ, ಕಾ)

ಎಂದ ಮಾತ | ಕೇಳಿ ಧೈರ್ಯ | ಗುಂದಿ ಕೋಪಾ | ಕ್ರಾಂತಳಾಗಿ |
ಬಂದಳು ಶ್ರೀ | ರಾಮನಲ್ಲಿ | ಗೆ— |
ಚಂದವಾಯ್ತು | ರಾಘವಾ ನಿ | ನ್ನಿಂದ ಬುದ್ಧಿ | ವಂತ ತಮ್ಮ |
ನೆಂದರೆ ಜಾ | ನಕಿ ನಕ್ಕ | ಳು— || ೩೨೬ ||

೧೦೬ ರಾಗ ಶಂಕರಾಭರಣ—ಅಷ್ಟತಾಳ ೨

ಏಕಪ | ತ್ನಿಯ ವ್ರತ | ನಿನಗೆ— | ಬಹ್ಮ[1]ಚರ್ಯ[1] |
ಸಾಕಾರಿ | ಸುತಿಡ ತ | ಮ್ಮನಿಗೆ |
ಬೇಕಂತೆ | ಗುರುತವಾ | ತನಿಗೆ— | [2]ನೀಡ[2]ಯ್ಯ ವಿ |
ವೇಕದಿಂ | ದನುಜ ಲ | ಕ್ಷ್ಮಣಗೆ || ೩೨೭ ||

ನಗೆಗೇಡ | ಮಾಡಿದಿ | ರಲ್ಲ—ಸು | ಮ್ಮನೆ ಬಂದು |
ಹಗುರವಾ | ದೆನು ನಿಮ | ಗೆಲ್ಲ |
ಮೊಗದೊಳಿಂ | ಥವರೆಂಬು | ದರಿಯೆ— | [3]ಹೀಗೆನ್ನ[3] |
ವಿಗೆ ವಂಚಿ | ಸಿದುದೀಗ | ಸರಿಯೆ || ೩೨೮ ||

ರಾಮ—

ಚದುರೆ ಬಾ | ಬಾರೆಂದು | [4]ಕೈಯ[4]—| ಅಂಬಿನ |
ತುದಿಯೊಳ್ | ಬರೆದ ಮೂಗ | ಕೊಯ್ಯ |
ಮುದದಿಂದ | ತೋರಲೆ | ಬೆನ್ನ—| ಕುರು[5]ಹನೋ |
ಡಿದರೆ [5]ಕೂ | ಡುವ ತಮ್ಮ | ನಿನ್ನ || ೩೨೯ ||

ಶೂರ್ಪ—

ಎಂದ ಮಾ | ತನು ಕೇಳಿ | ಕಡೆಗೆ—|—ನಲ |
ವಿಂದ ಬಂ | ದಳು ತಮ್ಮ | ನೆಡೆಗೆ |
ವಂದಿಸಿ | ದಳು ಪಾದ | [6]ದಡಿಗೆ— | ಬೆನ್ನ[6]ನೋ |
ಡೆಂದು ರ | ಕ್ಕಸಿ ಪೇಳ್ದ | ನುಡಿಗೆ || ೩೩೦ ||

---

1 ಚಾರಿತ್ರ (ಅ) 2 ಪಾಲಿಸ (ಅ) 3 ನೀವಿಬ್ಬರೂ (ಕಾ)
4 ಕರೆನು (ಕಾ, ಅ) 5 ಹಿಗೊದಗಿ (ಓ) 6 ದೆಡೆಗೆ ಕುರುಹ (ಕಾ)

೧೦೮ ರಾಗ ಸೌರಾಷ್ಟ—ತ್ರಿವುಡೆತಾಳ ೩

ಲಕ್ಷ್ಮಣ—

ಅಣ್ಣನಾಜ್ಞೆಯ । ನೋಡಿ ಲಕ್ಷ್ಮಣ ।
ತನ್ನ ಮನದಲಿ । ತಾನೆ ನಗುತಲಿ ।
ಕನ್ನೆ ಪ್ರಾಯದ । ಚದುರೆ ಬಾ ಮೋ । ಹನ್ನಕಾರಿ ॥ ೩೩೧ ॥

ಇತ್ತ [1]ನಿಲ್ಲೆಂ[1] । ದೆನುತ [2]ಕುಚಕೆ ಕೈ ।
ಯೆ[2]ತ್ತಿ ಲಕ್ಷ್ಮಣ । [3]ನವಳ ಕಿವಿಗಳ ।
ಕಿತ್ತು ಕಳೆದಾ । ಕುಂಭವೆರಡನು[3] । ಕತ್ತರಿಸಿದ ॥ ೩೩೨ ॥

ಕೆತ್ತಿದನು ನಾ । ಸಿಕವನುದ್ದಕೆ ।
ರಕ್ತಮಾಂಸಗ । ಳುದಿರೆ ಭರದಲಿ ।
ಮತ್ತೆ ಕೂಗಿದ । ಳಸುರೆ ಶರಧಿಯೆ । ಬತ್ತುವಂತೆ ॥ ೩೩೩ ॥

ನೋಡುವಳು ಮೊಲೆ । ಮಾಂಸಗಳನೀ ।
ಡಾಡುವಳು ನಾ । ಲ್ದೆಸೆ[4]ದೆಸೆಗೆ[4]ಹೊರ ।
ಳಾಡುವಳು [6]ವು[6]ನ । ದೊಳಗೆ ಜಾನಕಿ । ನೋಡಿ ಬೆದರೆ ॥ ೩೩೪ ॥

೧೦೯ ರಾಗ ಮಾರವಿ—ಮಟ್ಟೆತಾಳ ೩

ಶೂರ್ಪ—

ರಾಘವಾ ಲೇ । ಸು ಲೇಸಾಯಿ । ತೀಗ ನೀಮಾ । ಡಿರುವ ಮೋಸ ।
ಆಗಲಾಗ । ಲದಕೇನೀಗ । ತಾಳು ತಾಳ । ಯ್ಯ— ॥ ೩೩೫ ॥

ಎನ್ನಗ್ರಜ । ರಿಂಗಿದನೆಂದು । ನಿನ್ನ ಸತಿಯು । ಳನ್ನು ತಂದು ।
ಬನ್ನಬಡಿಸ । ದಿದ್ದರೆ ನಾ । ಹೆ[5]ಣ್ಣಲ್ಲ ಕಾ । ಣೊ[5]— ॥ ೩೩೬ ॥

ಎತ್ತ ಹೋದ । ರತ್ತ ಬಿಡದೆ । ಮತ್ತೆ ನಿನ್ನ । ಹೆಂಡತಿಯ ।
ಎತ್ತಿಕೊಂಡೊ । ಯ್ಯದಿದ್ದರೆ ನಾ । ಹೊತ್ತದ್ದು । ಮೊಲೆಯೆ ॥ ೩೩೭ ॥

---

1 ಬಾರೆಂ (ಅ) 2 ಕೈಗಳನೆ (ಕಾ) 3 ಯೆರಡು ಕಿವಿಗಳನೊತ್ತಿ ಕಳೆದಾ ಕುಚಗಳೆರಡರ (ಕಾ) 4 ಗಸುರೆ (ಅ) 5 ವ (ಓ) 6 ಹೆಜ್ಜನ ಕುಲವೆ (ಅ,ಕಾ)

ಸೃಷ್ಟಿ ಈರೇ | ಳರೊಳು ಬ | ಚ್ಚಿಟ್ಟುಕೊಂಡಿ | ದ್ದರೂ ಅವಳ |
ಬಿಟ್ಟು ಹೋದೆ | ನಾದರೆ ನಾ | ನುಟ್ಟದ್ದು ನೆರಿ | ಯೆ || ೩೩೮ ||

೧೧೦ ವಾರ್ಧಿಕಷಟ್ಪದಿ

ಪಂಥಗಳನಾಡಿ ಮೊಲೆಮೂಗಿನುರಿಗೌಷಧಿಯ
ಮಂತ್ರಗಳನೆಸಗಿ [1]ಘೋರೆಂದಾರ್ದು ಕನಲಿತ
ನ್ನಂ [1]ತರಂಗದೊಳು ಪಗೆವಿಡಿದು ನಾನಾ ಪರಿಯ ಚಿಂತಿಸುತ ನಡೆತಂದಳು |
ಎಂತಾದಡಾಗಲಾ ರಾಮಲಕ್ಷ್ಮಣರ್ಗೆ ಕೇ
ಡಂತಾರದಿರೆನೆಂದು ಪಲ್ಮೊರೆಯುತಯಿದ್ದ ವೃ
ತ್ತಾಂತಮಂ ಖರದೂಷಣಾದಿಗಳ ಮುಂದೆ ತಾ ನಿಂತುಕೊಂಡಿಂತೆಂದಳು ||೩೩೯||

(ಖರದೂಷಣಾದಿಗಳ ಪ್ರವೇಶ)

೧೧೧ ರಾಗ ಆನಂದಭೈರವಿ—ಆದಿತಾಳ

ಅಣ್ಣ ಕೇಳಿಂ | ದೆನಗಾದಂ | ಥ—ನಾ | ಚಿಕೆಯಿದು |
ಹೆಣ್ಣು ಜನ್ಮ | ಕ್ಕಾಗಬಾರ | ದು—|—|
ಕಣ್ಣಾರೆ ನೀ | ನೋಡಬಾರ | ದೆ—ಎ | ನ್ನಯ ಮೆಯ್ಯ |
ಬಣ್ಣ—ಕೆಂ | ಗಳಿಗೆ ತೋರ | ದೆ—|— || ೩೪೦ ||

ದಶರಥನ್ನ | ಮಕ್ಕಳಿಂ | ತೆ—ಇ | ಬ್ಬರು ತಮ್ಮ |
ವಸುಧೆಯನ್ನು | ಬಿಟ್ಟಿಹರಂ | ತೆ—|—|
ಅಸಮ—ಸಾ | ಹಸಿಗಳಂ | ತೆ—ಏ | ನೆಂದು ನಾವ |
ರ್ಣಿಸುವೆನಾ ರಾ | ಘವನ ಕಾಂ | ತೆ—|— || ೩೪೧ ||

ತಮ್ಮನಾದ | ಲಕ್ಷ್ಮಣನು ತಾ | ನು—ಎ | ನ್ನೆರಡೂ ಕುಚವ |
ಸುಮ್ಮ—[2]ಸು | ಮ್ಮನೆ ಕೊಯ್ದ[2] | ನು—|—|
ಹೆಮ್ಮೆಯಿಂದ | ಮೂಗ ತರಿದ | ನು—ಎ | ನ್ನಗ್ರಜರು |
ನಿಮ್ಮಂಥವರಿ | ದ್ದೂ ಹೀಗಾದೆ | ನು—|— || ೩೪೨ ||

---

1 ಲೆ ೯೩ಸಿ ಕಸಲ್ದು ನಡೆತಂದು । ಅಂ (ಕಾ)   2 ನೆ ಮೋಸದಿ ಕಡಿದ (ಅ)

ಪುಂಡರೀಕ | ನೇತ್ರೆಯೊರ್ವ | ಳು—ರಾ | ಮನೆಂಬವಗೆ |
ಹೆಂಡತಿಯಾ | ಗಬೇಕವ | ಳು—|—|
ಕಂಡರೆ ರಂ | ಭೆಯಂತಿರ್ಪ | ಳು—ಬೇ | ಗದಿ ತಂದು |
ಕೊಂಡರೆ—| ನಿಮಗಪ್ಪ[1] | ಳು—|— || ೩೪೩ ||

೧೧೨ ರಾಗ ಘಂಟಾರವ—ಜಂಪೆತಾಳ ೪

ಖರ—

ದುರುಳೆಯಾ | ಡಿದ ನುಡಿಯ | ದುಷ್ಟಖರ | ಕೇಳುತ್ತ |
ಶಿರವ ತೂ | ಗಿದನಂದು | ಹರಹರಾ | ಯೆಂದು || ೩೪೪ ||

ತಂಗಿ ಶೂ | ರ್ಪನಖಿಗೀ | ಭಂಗವೆಸ | ಗಿದ ವೇಳೆ |
ವಿಂಗಡದೆ | ನಾವಿದ್ದು | ಇನ್ನೇನು | ಕಾರ್ಯ || ೩೪೫ ||

ಅಸುರರೊಳು | ಬಲವಂತ | ನಾರೆಂದು | ಕರೆದು ನೇ |
ಮಿಸಿದ ನೀ | ಹೋಗೆಂದು | ತ್ರಿಶಿರನೆಂ | ಬವನ || ೩೪೬ ||

ರಾಮಲ | ಕ್ಷ್ಮಣರುಗಳ | ರಟ್ಟೆಯನು | ಮುರಿದಿಕ್ಕಿ |
ಕಾಮಿನಿಯ | ತಾರೆಂದ | ಕಡುತವಕ | ದಿಂದ || ೩೪೭ ||

೧೧೩ ಕಂದ

ಅಗ್ರಜನಾಡಿದ ಮಾತಿಗೆ
ಉಗ್ರಾಂತದಿ ತ್ರಿಶಿರನಾಗ ಚಾಪವ ಕೊಂಡುಂ
ಶೀಘ್ರದಿ ಬಂದಾವನದೊಳು
ಭೋರ್ಗರೆಯುತ ಪರ್ಣಶಾಲೆಯೆಡೆಗೈತಂದಂ || ೩೪೮ ||

೧೧೪ ರಾಗ ಮಾರವಿ—ಮಟ್ಟೆತಾಳ ೧

ತ್ರಿಶಿರ—

ಆರೆಲೋ ಇ | ಲ್ಲಿರುವ ವೀರ | ನೇ—| ಧೀರ ಶೂರ | ನಾರೆಲೋ ||ಪಲ್ಲವಿ||
ಮೂರು ತಲೆಯ | ನೋಡೊ ಯೆನ್ನ | ಶೂರತನವು | ಬೇಡ ನಿನ್ನ |
ಬೇರುಸಹಿತ | ಕಡಿದು ಕೊಚ್ಚಿ | ನೂರು ಚೂರು | ಮಾಳ್ಪೆನೀಗ || ೩೪೯ ||

1 ಕದ್ದುಕೊಂಡು ಬಂದರೆ ನಿನಗಹ (ಕಾ)

ತಂಗಿಯಾದ | ಶೂರ್ಪಣಖಿಯು | ಹೆಂಗುಸೆಂದು | ನೋಡದನಳ |
ತುಂಗಕುಚವ | ಕೊಯ್ದು ನಾಸಿ | ಕಂಗಳನ್ನೆ | ತರಿದ ಮೂಢ || ೩೫೦ ||

ಪುಂಡುಹುಡುಗ | ಲಕ್ಷ್ಮಣನ್ನ | ಕಂಡಮಾತ್ರ | ದಲ್ಲಿ ಮುನ್ನ |
ಖಂಡಖಂಡ | ವಾಗಿ ಕಡಿದು | ಕೆಂಡದಲ್ಲಿ | ಸುಡುವೆ ನೋಡು || ೩೫೧ ||

೧೧೫ ರಾಗ ಕೇದಾರಗೌಳ—ಮಟ್ಟೆತಾಳ ೪

ಈ ಪ | ರಿಯಲಿ | ಭಾಷೆ | ಗಳನು | ಭೂಪ | ನೊಡನೆ | ಪೇಳಿ | ಕೈಯ |
ಚಾಪ | ವನ್ನು | ನೆಗಹಿ | ಶರವ | ತಾಪ | ದಿಂದ | ಬಿಡಲು | ರಾಮು |
ಮಾಪು | ಗೆಯ್ದು | ತಿರಿಗಿ | ನೋಡಿ | ದ— | ಕೈಯ | ಸರಳ |
ಕೋಪ | ದಿಂದ | ತಿರುವಿ | ಹೂಡಿ | ದ— | ಬಹಳ | ಸುಪ್ರ |
ತಾಪ | ದಿಂದ | ಯುದ್ಧ | ಮಾಡಿ | ದ— || ೩೫೨ ||

ಜಡಿದು | ಚಾಪ | [1]ದಿಂದ[1] | ಬಾಣ | [2]ಬಿಡಲು | ಗಿರಿಗ |ಳದಿರು | ವಂತೆ |
ನಡೆಯೆ | ಮುನಿಗ | ಳಸುರ | ಗಂಜಿ | ಧಡಿಗ | ದೈತ್ಯ | ನಾರ | ಭಟೆಗೆ |

ಸೀತೆ—

ಮಡದಿ | ಬಾಯ | ಬಿಡುತ | ಲಿರ್ದ | ಳು[2]— | ಲಕ್ಷ್ಮಣನ್ನ |
ಕಡೆಗೆ | ಬೇಗ | ದಿಂದ | ಸಾರ್ದ | ಳು— | ಬೆದರು | ತಾತ |
ನೊಡನೆ | ತನ್ನ | ಭಯವ | ಪೇಳ್ದ | ಳು— || ೩೫೩ ||

ರಾಮು—

ದುಷ್ಟ | ದನುಜ | ನೊಡನೆ | ತಾನಿ | ನ್ನಿಷ್ಟು | ಕಾದ | ಲೆನುತ | ಶರವ |
ಬಿಟ್ಟು | ರಾಮು | ಕಣನೊ | ಳಿ— | ದ್ದಷ್ಟು | ಬಲವ | ನೆಲ್ಲ | ಯಮನ |
ಪಟ್ಟ | ಣಕ್ಕೆ | ಸೇರಿ | ಸಿರ್ದ | ನು— | ಜನಕ | ಸುತೆಯ |
ನೆಟ್ಟ | ಭಯವ | ಹಾರಿ | ಸಿರ್ದ | ನು— | ಮಡಿದ | ಹೆಣನ |
ಬೆಟ್ಟ | ಸತಿಗೆ | ತೋರಿ | ಸಿರ್ದ | ನು— || ೩೫೪ ||

---

1 ವನ್ನು (ಅ)
2 ತೊಡಿಸಿಯುದರ ನೊತ್ತಿಸೆಳೆದು | ನಡುಗಿ ಗಿರಿಗ | ಳುರುಳಲಾಗ |
ಬಿಡಲು ಬೆದರೆ | ಸಪ್ತಲೋಕ | ವು—(ಅ)

ಈಸು | ಬಲವ | ನೆಲ್ಲ | ಸವರಿ | ದಾ ಸಾ |, ಮ | ರ್ಥ್ಯಗಳ | ಕೇಳಿ |
ಮೋಸ | ಗತಿಯೊ | ಳಿದರ | ಗೆಲ್ವ | ಭಾಷೆಯನ್ನು | ಹೊಡಿ | ಬಂದ |
ದೂ | ಷಣಾಸು | ರನ್ನ | ಮಡುಹಿ | ದ— | ಅವನ | ತಲೆಯ |
ಗಾಸಿ | ಮಾಡಿ | ಧರೆಗೆ | ಕೆಡಹಿ | ದ— | ರಘುಜ | ಮಹೋ |
ಲ್ಲಾಸ | ದಿಂದ | ಶರವ | ಕೊಡಹಿ | ದ— || ೩೫೫ ||

೧೧೬ ವಾರ್ಧಿಕಷಟ್ಪದಿ

ತ್ರಿಶಿರಮೊದಲಾಗಿ ದೂಷಣ ಭಂಡ ಸಹಿತ ರಾ
ಕ್ಷಸರೆಲ್ಲ ಬಂದು ಕಾಳೆಗಗೊಟ್ಟು ಮಡಿಯೆ ಸಾ
ಲ್ದಿಸೆ ತುಂಬುವಂತೆ ಮಾರ್ಬಲವೆರಸಿ ಬಂದು ಖರನೆಂಬಸುರನಿದಿರಾದನು |
ಮಸೆದಲಗು ಕಣೆಯ ಕಂಪಣ ಶೂಲ [1]ಖಡ್ಗ ಪೆ
ರ್ಮುಸಲ ಮುದ್ಗರ ಪಿಂಡಿವಾಳ ಪಟ್ಟಸವೆಂಬ
ಪೆಸರಾಯುಧಂಗಳಂ ತೆಗೆದು ಮುಂದಿಳುಹಿಯಾರ್ಭಟಿಸಿದಂ ರೋಷದಿಂದ[1]
|| ೩೫೬ ||

೧೧೭ ರಾಗ ಶಂಕರಾಭರಣ—ಮಟ್ಟೆತಾಳ ೨

ಖರ—

ಘೋರ ರೂಪ | ದಿಂದ ಖರ | ಶೂರನೆಚ್ಚ | ಡೊಂದು ಶರವ |
ವೀರ ರಾಮ | ನದರ ತರಿದು | ವಾರಣೆಸಿದ | ನು — ||
ಬೇರೆ ಮ | ತ್ತೊಂದು ಬಗೆಯ | ಭಾರಿ ಬಾಣ | ವೆಸೆಯಲದರ |
ಬೇರ ಕಡಿದು | ಬಿಸುಟ ರಾಮ | ಧಾರಿಣಿಯ | ಲಿ — || ೩೫೭ ||

ಭೋರ್ಗುಡಿಸುತ | ಖರನು ಬಹಳ | ಉಗ್ರದಿಂದ | ಲಾರ್ಭಟಿಸಲು |
ಸ್ವರ್ಗಲೋಕ | ಸಹಿತಲಿಳೆಯ | ಗರ್ಭ ನಡುಗಿ | ತು — ||
ಅರ್ಗಳಾಸ್ತ್ರ | ಪಿಂಡಿವಾಳ | ಮುದ್ಗರ ವೃ | ಸುಂಡಿಗಳನು |
ದೀರ್ಘದಿಂದ | ಬಿಡಲು ದನುಜ | ಭಾರ್ಗವಾರಿ | ಗೆ — || ೩೫೮ ||

---

1 ವೇ ಮೂಲ | ಮುಸಲ ಮುದ್ಗರ ಪಿಂಡಿವಾಳಾದಿ ಪರಿಪರಿಯ | ಪೊಸಮಸೆಯ ಆಯುಧಂಗಳಿನಿಟ್ಟು ಆರ್ಭಟಿಸೆ ಕೋಪದಿಂದಾರಾಮನು (ಅ)

ರಾಮ —

ತಂಡ ತಂಡ | ದಾಯುಧಗಳ | ತುಂಡು ತುಂಡು | ಮಾಡಿ ರಾಮ |
ಕೆಂಡ ಕಣ್ಣೊ | ಳುದಿರೆ ಕೋಪ | ಗೊಂಡು ಜರೆಯು | ತ — ||
ಗಂಡುಸಹುದೊ | ಭಳಿರೆ ನಿನ್ನ | ಕಂಡೆ ಶೌರ್ಯ | ಗಳನು ಮುನ್ನ |
ಭಂಡ ಫಡ ಫ | ಡೆನುತ ಧನುವ | ಖಂಡಿಸಿರ್ದ | ನು — || ೩೫೯ ||

ಬಿಟ್ಟ ಚಾಪ | ವನ್ನು ಖರನು | ಮುಷ್ಟಿಯಿಂದ | ತಿವಿಯೆ ರಾಮ |
ಹೊಟ್ಟೆಯೂರಿ | ಬಿದ್ದ ಸೀತೆ | ನಟ್ಟನಡುಗ | ಲು — ||
ಕೆಟ್ಟೆನೆಂದು | ಬೆದರುತಿರ್ದ | ಳಷ್ಟರೊಳಗೆ | ಎದ್ದು ರಾಮ |
ದುಷ್ಟನಿಗ್ರ | ಹಕ್ಕೆ ಮನವ | ಕೊಟ್ಟನಾಗ | ಲೇ — || ೩೬೦ ||

ಮತ್ತೆ ತೆಗೆದು | ಮೂಲಶರವ | ಶಕ್ತಿಯಿಂದ | ತೊಡಿಸಿ ತಿರುವ |
ಮಸ್ತಕಕ್ಕೆ | ಬಿಡಲು ಶಿರವ | ಕತ್ತರಿಸಿ | ತು || ೩೬೧ ||

೧೧೮ ಮತ್ತೇಭವಿಕ್ರೀಡಿತವೃತ್ತ

ಇನವಂಶಾಂಬುಧಿಚಂದ್ರ ರಾಘವ ಮಹಾರಕ್ಷೌಘಮಂ ಕೊಲ್ಲಲು
ಮನಸಂತೋಷದೊಳಿರ್ದರಿತ್ತಲು ಮಹಾಮೌನೀಜನಂ ತೋಷದಿ |
ಅನುವಂ ಕಂಡುರೆ ದೇವದುಂದುಭಿಗಳುಂ [1]ಧ್ವನಿಗೆಯ್ಯಲಾಕಾಶದಿ[1] |
ಇನಿತಾನಂದದಿ ಮಂಗಳೋತ್ಸವ ಮಹಾ ಶ್ರೀರಾಮ[2]ಗಂದಾಯಿತು[2] ||೩೬೨||

೧೧೯ ರಾಗ ರೇಗುಪ್ತಿ—ಏಕತಾಳ ೩

ಜಯ ರಾ | ಘವೇಂದ್ರ | ಶ್ರೀರಾ | ಮ ಚಂದ್ರ |
ಜಯ ಜಯ | ತು ರಾಘ | ವೇಂದ್ರ— || ಪಲ್ಲವಿ ||

ಶರಧಿತ | ನುಜೆಯರ | ಸಾ ಜನ | ರಂಜನ |
ಉರಗಶ | ಯನ ಪಂ | ಕಜನಾ | ಭ— |
ವರಅಹ | ಲ್ಯಾಸತಿ | ಪಾಪವಿ | ಮೋಚನ |
ದುರಿತದು | ರ್ಗಸಂ | ತರಣಗು | ಣ— || ೩೬೩ ||

1 ನಿರ್ಘೋಷಮಂಗೆಯ್ಯಲು (ಓ)   2 ಸಿಂಗಾಗಲು (ಓ)

ಕೌಸ । ಲ್ಯಾಹೃದ । ಯಾಬ್ಧಿ ಚಂ । ದ್ರ ಇನ ।
ವಂಶರ । ತ್ನ ತಾಟ । ಕೀಹರ । ಣ — ।
ವಿಶ್ವರೂ ।, ಪ ವಿ । ಶ್ವಾತ್ಮಕ । ನರಹರಿ ।
ವಿಶ್ವವಂ । ದ್ಯ ಬಹು । ವಿಶ್ವಮ । ಯ— || ೩೬೪ ||

ಸಾಕೇ । ತಾಗ್ರಣಿ । ಸರ್ವೋ । ತ್ತಮ ಸುರ ।
ಲೋಕನಾ ।, ಥ ವಂ । ಗಲರೂ । ಪ — ||
ಜಯರಾಘವೇಂದ್ರ || ೩೬೫ ||

೧೨೦ ಡವಳಾರ; ರಾಗ ಸೌರಾಷ್ಟ್ರ—ಏಕತಾಳ ೪

ಹೃದಯಕ । ಮಲವೆಂಬ । ಹರಿವಾಣ । ದೊಳು ದಿವ್ಯ ।
ಸದಮಲ । ಭಕ್ತಿರ । ಸದ ತೈಲ । ದಿ — ।
ಪದುಮನಾ । ಭನ ನಾಮ । ವೆಂಬ ಜ್ಯೋ । ತಿಯ ತಂದು ।
ಮುದದಿಂದ । ಜ್ಞಾನದಾ । ರತಿಯೆತ್ತಿ । ರೇ — || ೩೬೬ ||

ಮಂಗಲಂ । ಶ್ರೀರಾಮ । ಚಂದ್ರನಿ । ಗೆ — || ಪಲ್ಲವಿ ||

ದಶರಥ । ನುದರದಿ । ಜನಿಸಿ ವಿ । ಶ್ವಾಮಿತ್ರ ।
ಋಷಿಯ ಮಾ । ತಿನಲಿ ತಾ । ಟಕಿಯ ಕೊಂ । ದು — ।
ಪಶುಪತಿ । ಧನುವೆತ್ತಿ । ಪರಶುರಾ । ಮನ ಗೆದ್ದ ।
ವಸುಧಾಪಾ । ಲಕನಿಗಾ । ರತಿಯೆತ್ತಿ । ರೇ — । ಮಂಗಲಂ || ೩೬೭ ||

ಪಿತನ ವಾ । ಕ್ಯವ ಕೇಳಿ । ಸೌಮಿತ್ರಿ । ಯೊಡಗೂಡಿ ।
ಸತಿಸಹಿ । ತವೆ ಪಂಚ । ವಟಿಗೆ ಬಂ । ದು — ।
ಖತಿಯಿಂದ । ಖರದೂಷ । ಣರ [1]ಕೊಂದು । ಶರಣ[1] ಸಂ ।
[2]ತತಿಯ ರ । ಕ್ಷಿಸಿದಂ[2]ಗಾ । ರತಿಯೆತ್ತಿ । ರೆ — । ಮಂಗಲಂ ||೩೬೮ ||

1 ಸಂತತಿಯನು (ಅ) 2 ಹತಿಯ ಮಾ । ಡಿದನಿ (ಅ)

ಸಾಕೇತ । ಪುರವಾಸ । ಸ[1]ರ್ವಲೋ । ಕಾಧೀಶ[1] ।
ಮಾಕಾಂತ । ಮಹಿಮ ಮಂ । [2]ಗಲರೂಪ । ಗೆ — ।
ಲೋಕೇಶ । ಜನಕ ಮೂ । ಲೋಕವಂ । ದಿತನಿಗೆ ।
ಸಾಕಾರ[2] । ಮೂರ್ತಿಗಾ । ರತಿಯೆತ್ತಿ । ರೇ — ॥ ೩೬೯ ॥

ಮಂಗಲಂ । ಶ್ರೀರಾಮ । ಚಂದ್ರನಿ । ಗೆ — ಜಯ ॥*

೧೨೧ ವಾರ್ಧಿಕಷಟ್ಪದಿ

ಬಾಲಕರು ಕೇಳಿಂತು ಪಂಚವ[3]ಟ್ಯದ ವನದಿ[3]
ಖೂಳ ಖರದೂಷಣರ ಸಂಹರಿಸಿಯಾವನವ।
ಪಾಳುಮಾ[4]ಡುತವೆ ಋಷಿಗಳಿಗೆ ಮತ್ತಾವನದಿ[4] ಕಾಲೋಚಿತಂ ಗೆಯ್ದರು ।
[5]ಮೇಲಲ್ಲಿ ಲವಕುಶರ ಕೂಡೆ ವಾಲ್ಮೀಕಿಮುನಿ
ಪೇಳಿದೀ ಸಂಧಿಯ ಪ್ರಸಂಗವನು ಧರೆಯೊಳಗೆ[5]
ಹೇಳಿ ಕೇಳುವ[6]ರನುಂ ಕಣ್ವಪುರದೊಡೆಯ ಗೋಪಾಲ
ರಕ್ಷಿಸುವ ಬಿಡದೆ ॥ ೩೭೦ ॥

॥ ಗೋಪಾಲಕೃಷ್ಣಾಯ ನಮಃ ॥

---

1 ಸಕಲ ಲೋಕೇಶಗೆ (ಅ, ಕಾ) 2 ಜುಳರೂಪ । ಮೂ — ॥ ಲೋಕವಂದಿತ ನಿಗೆ । ಮುರನ ಸಂಹಾರಗೆ । ಶ್ರೀಕಾಂತ (ಕಾ) * ಮಂಗಲಂ । ರವಿಕೋಟಿ । ಸಾಂದ್ರ ನಿ । ಗೆ — । (ಅ) 3 ಟಿ ವನದೊಳಗೆ (ಅ) 4 ಡಿದು ಮತ್ತೆ ಅಲ್ಲಿದ್ದು ಕೆಲವು ದಿನ (ಕಾ) 5 ಮೇಲೆ ಕುಶಲವರೊಡನೆ ವಾಲ್ಮೀಕಿಮುನಿವರಂ । ಪೇಳಿರುವ ಪುಣ್ಯ ಕಥೆಯನ್ನು ನಿಜಭಕ್ತಿಯಿಂ 6 ಜನರ ರಕ್ಷಿಸುವ ಕಣ್ವಪುರದೊಡೆಯ ಗೋಪಾಲಕೃಷ್ಣ (ಓ, ಅ)
— . . . ಕಣ್ವಪುರ ಶ್ರೀಕೃಷ್ಣ ಪಾಲಿಸುವನನುಗಾಲವೂ (ಓ, ಕಾ)

# ಪಂಚವಟಿ-ವಾಲಿಸಂಹಾರ

## ಪ್ರಸಂಗದ ಕಥಾಸಾರ

ಖರದೂಷಣಾದಿಗಳ ಸಂಹಾರದಿಂದ ಹತಾಶಳಾದ ಶೂರ್ಪನಖಿಯು ರಾಮ
ಲಕ್ಷ್ಮಣರ ಮೇಲಿನ ಸೇಡು ತೀರಿಸಿಕೊಳ್ಳುವುದಕ್ಕಾಗಿ ಲಂಕೆಗೆ ಹೋಗಿ ರಾವಣನಿಗೆ ದೂರು
ತ್ತಾಳೆ. ಆಕೆಯು ವರ್ಣಿಸಿದ ಸೀತೆಯ ಲಾವಣ್ಯಾತಿಶಯಕ್ಕೆ ಮರುಳಾದ ರಾವಣನು
ೀತಾದೇವಿಯನ್ನು ಅಪಹರಿಸಿ ತರಲು ನಿರ್ಣಯಿಸುತ್ತಾನೆ. ತನ್ನ ಪಟ್ಟದರಸಿಯಾದ
ುಂಡೋದರಿಯು ತಡೆದರೂ ಕೇಳದೆ ಆತನು, ಮಾವನಾದ ಮಾರೀಚನನ್ನು ಮಾಯಾ
ಮೃಗವಾಗಿ ಸೀತೆಯ ಮುಂದೆ ನಲಿದಾಡುವಂತೆ ಕಳುಹಿಸುತ್ತಾನೆ. ಆ 'ಪೊಂಮೃಗ'
ವನ್ನು ಕಂಡು ಮೋಹಿಸಿದ ಸೀತೆಯು ಅದನ್ನು ಹಿಡಿದು ತರಬೇಕೆಂದು ರಾಮನನ್ನು ಕಾಡಿ
ೇಡುತ್ತಾಳೆ. ಮೃಗವನ್ನು ಬೆಂಬತ್ತಿ ಹೋದ ರಾಮನಿಗೆ ರಾಕ್ಷಸರಿಂದ ಅಪಾಯವುಂಟಾಯಿ
ೆಂದು ಶಂಕಿಸಿದ ಸೀತಾದೇವಿಯ ಮಾತಿನಿಂದ ಲಕ್ಷ್ಮಣನು ರಾಮನನ್ನರಸಲಿಕ್ಕಾಗಿ ಪರ್ಣ
ಾಲೆಯಿಂದ ಹೊರಟುಹೋಗುತ್ತಾನೆ. ಆಗ, ಈ ಹಂಚಿಕೆಯನ್ನು ಹೂಡಿ ಸಮಯ
ಾಧಿಸುತ್ತಿದ್ದ ರಾವಣನು ಸನ್ಯಾಸಿವೇಷದಿಂದ ಪರ್ಣಶಾಲೆಗೆ ಬಂದು ಸೀತಾದೇವಿಯಲ್ಲಿ
ಿಕ್ಷೆ ಬೇಡುತ್ತಾನೆ ಮತ್ತು ಭಿಕ್ಷೆ ಹಾಕಲು ಹೊರಬಂದ ಆ ಭೂಜಾತೆಯನ್ನು ನೆಲಸಹಿತ
ತ್ತಿ ರಥದಲ್ಲಿಟ್ಟು ಆಕಾಶಮಾರ್ಗದಲ್ಲಿ ಕೊಂಡೊಯ್ಯುತ್ತಾನೆ. ಸೀತೆಯ ಮೊರೆಯನ್ನು
ೇಳಿದ ಜಟಾಯುವು ಮಾರ್ಗಮಧ್ಯದಲ್ಲಿ ಇದಿರಾಗಿ ತಡೆದು ರಾವಣನೊಡನೆ ಕಾದು
ತ್ತಾನೆ. ಅವರೊಳಗೆ ನಡೆದ ಧರ್ಮಯುದ್ಧದಲ್ಲಿ ರಾವಣನು ವಂಚನೆಯಿಂದ ಜಟಾಯು
ವನ್ನು ಭಂಗಿಸಿ ಸೀತೆಯನ್ನು ಕೊಂಡೊಯ್ಯುತ್ತಾನೆ.

ಇತ್ತ ಮಾಯಾಮಾರೀಚನನ್ನು ಕೊಂದು ಹಿಂತಿರುಗಿದ ರಾಮಲಕ್ಷ್ಮಣರು ಪರ್ಣ
ಾಲೆಯಲ್ಲಿ ಸೀತೆಯಿಲ್ಲದುದನ್ನು ನೋಡಿ ಚಿಂತಾಕ್ರಾಂತರಾಗಿ ವನಾಂತದಲ್ಲಿ ಹುಡುಕು
ತ್ತಿರುವಲ್ಲಿ, ಪೆಟ್ಟಾಗಿ ಬಿದ್ದಿರುವ ಜಟಾಯುವಿನಿಂದ ರಾವಣನ ದುಷ್ಕೃತ್ಯವನ್ನು ತಿಳಿದು,
ಸು ನೀಗಿದ ಜಟಾಯುವಿಗೆ ಮೋಕ್ಷವನ್ನಿತ್ತು, ಸೀತಾನ್ವೇಷಣಕ್ಕಾಗಿ ಮುಂದೆ ನಡೆಯಲು
ೂರ್ಪನಖಿಯ ಮಗಳಾದ ಅಯೋಮುಖಿಯೆಂಬ ರಾಕ್ಷಸಿ ತಡೆಯುತ್ತಾಳೆ. ರಾಮ
ಕ್ಷ್ಮಣರು ಅವಳಿಗೂ ಶೂರ್ಪನಖಿಯದೇ ಗತಿಯನ್ನು ಕಾಣಿಸಿ ಮುಂದುವರಿಯುತ್ತಾ,
ಾಮದರ್ಶನಕ್ಕಾಗಿ ತಪಸ್ಸು ಮಾಡುತ್ತಿದ್ದ ಶಬರಿಯ ಆಶ್ರಮಕ್ಕೆ ಬಂದು, ಅವಳ ಭಕ್ತಿಗೆ
ಲಿದು, ಅವಳಿಂದ ಮುಂದಿನ ದಾರಿಯನ್ನು ತಿಳಿದವರಾಗಿ ಕಿಷ್ಕಿಂಧೆಗೆ ಬರಲು, ಅಲ್ಲಿ
ಣ್ಣನಾದ ವಾಲಿಯ ಭಯದಿಂದ ಋಷ್ಯಮೂಕಪರ್ವತವನ್ನು ಆಶ್ರಯಿಸಿಕೊಂಡಿದ್ದ

ಸುಗ್ರೀವನು ಕಂಡು ಹನುಮಂತನನ್ನು ಕಳುಹಿಸಿ ಇವರನ್ನು ಆದರದಿಂದ ಕರೆಸಿಕೊಳ್ಳುತ್ತಾನೆ. ಸಮಾನಸಂತಾಪವಿರುವ ರಾಮಸುಗ್ರೀವರೊಳಗೆ ಸಖ್ಯವುಂಟಾಗಿ, ಸುಗ್ರೀವನ ಪತ್ನಿಯನ್ನು ಬಲಾತ್ಕಾರದಿಂದ ತನ್ನ ವಶವಿಟ್ಟುಕೊಂಡಿರುವ ವಾಲಿಯನ್ನು ರಾಮನು ಸಂಹರಿಸಿದ್ದಾದರೆ, ರಾವಣನು ಅಪಹರಿಸಿದ ಸೀತಾದೇವಿಯನ್ನು ಹುಡುಕಿ ಹಿಂದಕ್ಕೆ ತರುವಲ್ಲಿ ಸುಗ್ರೀವನು ತನ್ನ ಕಪಿಬಲಸಮೇತ ಸಹಾಯ ಮಾಡುವುದಾಗಿ ಅವರೊಳಗೆ ಪ್ರತಿಜ್ಞಾಪೂರ್ವಕ ಒಪ್ಪಂದವೇರ್ಪಡುವುದು. ಆ ಪ್ರತಿಜ್ಞೆಯಂತೆ, ಸುಗ್ರೀವನು ವಾಲಿಯೊಡನೆ ಯುದ್ಧ ಮಾಡುತ್ತಿರುವಾಗ ಶ್ರೀರಾಮನು ಮರೆಯಲ್ಲಿ ನಿಂತು ಬಾಣಪ್ರಯೋಗ ಮಾಡಿ ವಾಲಿಯನ್ನು ನಿಗ್ರಹಿಸಿ ಕಿಷ್ಕಿಂಧೆಯ ಆಧಿಪತ್ಯವನ್ನು ಸುಗ್ರೀವನಿಗಿತ್ತು ಅನುಗ್ರಹಿಸಿದನೆಂಬಲ್ಲಿಗೆ ಈ ಪ್ರಸಂಗಕ್ಕೆ ಮಂಗಳವಾಗುವುದು.

| ಮುಖ್ಯ ಪ್ರಕರಣಗಳು | ಭೂಮಿಕೆಗಳು |
|---|---|
| ೧. ಸೀತಾಪಹಾರ | ರಾಮ |
| ೨. ಪಂಚವಟಿಯಿಂದ ನಿರ್ಗಮನ | ಲಕ್ಷ್ಮಣ |
| ೩. ಸುಗ್ರೀವಸಖ್ಯ | ರಾವಣ |
| ೪. ವಾಲಿಸಂಹಾರ | ಮಾರೀಚ |
| | ರಾವಣ ಸನ್ಯಾಸಿ |
| | ಜಟಾಯು |
| | ಕಬಂಧ |
| | ಸುಗ್ರೀವ |
| | ವಾಲಿ |
| | ಹನುಮಂತ |
| | ಅಂಗದ |
| | ಕಪಿಗಳು |
| | ಮಾಯಾಮೃಗ (ಸೂತ್ರದ ಬೊಂಬೆ) |
| | ಶೂರ್ಪನಖಿ |
| | ಮಂಡೋದರಿ |
| | ಅಯೋಮುಖಿ |
| | ಸೀತೆ |
| | ಶಬರಿ |
| | ತಾರೆ |

# ಪಂಚವಟಿ-ವಾಲಿಸಂಹಾರ

೧ ವಾರ್ಧಿಕಷಟ್ಪದಿ

ಮುನಿಪ ಕೇಳ್ಳೈ ಮುಂದೆ ರಾಮಲಕ್ಷ್ಮಣರುಗಳು
[1]ಘ[1]ನ ಪಂಚವಟಿಯೊಳಂದೇನ ಮಾಡಿದರು ಶೂ
ರ್ಪನಖಿ ಮತ್ತೇನಾದಳೆಂಬ ವಿವರವ ನಮ್ಮ ಮನ ತಿಳಿಯಲರುಹೆನ್ನುತ ।
ತನಯರಿರ್ವರು ಕರವ ಮುಗಿದು ಬೆಸಗೊಳಲು ಮುನಿ
ವಿನಯದಿಂ ಬಾಲಕರ ತೆಗೆದಪ್ಪಿ [2]ಮನ್ನಿಸು[2]ತ
ಗುಣದಿಂದ ಪೇಳಿದಂ ಮುಂದಣ ಪ್ರಸಂಗವಂ ವನಜನಾಭನ ಚರಿತವ ॥ ೧ ॥

೨ ರಾಗ ನಾದನಾಮಕ್ರಿಯೆ—ಅಷ್ಟತಾಳ೧

ತನಯರು । ಕೇಳಿ ದ್ಭ । ಢದೊಳಿಂದು ।—ಶೂ ।
ರ್ಪನಖಿ ತ । ನ್ನಂತರಂ । ಗದಿ ನೊಂದು ॥

ಶೂರ್ಪನಖಿ—

ಇನಿತಾದ । ವೃತ್ತಾಂತ । ಗಳನಂದು । —ರಾ ।
ವಣಗೆ ತಾ । ಪೋಗಿ ಪೇ । ಳುವೆನೆಂದು ॥ ೨ ॥

ಮಂಡೆ ಮಂ । ಡೆಯ ಹೊಡ । ಕೊಳ್ಳುತ್ತ । —ನಡೆ ।
ಗೊಂಡು ಕ । ಣ್ಣಲಿ ನೀರ । ಸುರಿಸುತ್ತ ॥
ಕೆಂಡದಂ । ದದಿ ರೌದ್ರ । ತಾಳುತ್ತ । —ಕಂಡ ।
ಕಂಡಸು । ರರಿಗಿದ । ಹೇಳುತ್ತ ॥ ೩ ॥

ರಾಘವ । ಮಾಡಿದ । ಮಾಟಕ್ಕೆ । —ತಮ್ಮ ।
ಲಕ್ಷ್ಮಣ । ನೋಡಿದ । ನೋಟಕ್ಕೆ ॥
ಮೂಗು ಮೊ । ಲೆಯ ಕೊಯ್ದ । ಕೋಪಕ್ಕೆ । —ತಾನು ।
ಬೇಗ ಸಾ । ಗುವೆ ಲಂಕಾ । ದ್ವೀಪಕ್ಕೆ ॥ ೪ ॥

---

1 ವ (ಅ)  2 ಮುದ್ದಿಡು (ಅ)

ಹೀಗೆಂದು | ತನಗೆ ತಾ | ನೆಂದಳೊ | —ತೆಂಕ |
ಸಾಗರ | ತ[1]ಟದ[1]ಲ್ಲಿ | ನಿಂದಳೊ ||
ಹೇಗೆ ದಾ | ಟುತ ಪಾಪಿ | ಬಂದಳೊ | — ತಾ |
ನಾಗಿ ಲಂ | ಕೆಗೆ ಕೇಡ | ತಂದಳೋ || ೫ ||

(ತೆರೆಯಲ್ಲಿ ಒಡ್ಡೋಲಗಸ್ಥನಾದ ರಾವಣನ ಪ್ರವೇಶ)

ರಾವಣ—

ದಶಕಂಠ | ನನುಜೆಯು | ಕಂಡನು | —ಕಾಣು |
ತಸುರ ಚಿ | ತ್ತದಿ ಭ್ರಮೆ | ಗೊಂಡನು ||
ಎಸೆವ ಓ | ಲಗವ ಬೀ | ಳ್ಕೊಂಡನು | — ಅತಿ |
[2]ವ್ಯಸನ[2]ದಿಂ | ದೊಳಗೆದ್ದು | ಬಂದನು || ೬ ||

ತಂಗಿಯು | ಕರೆದು ಮಾ | ತಾಡಿದ | —ಮಾನ |
ಭಂಗದ | ಪರಿಯೆಲ್ಲ | ಕೇಳಿದ ||
ಹಿಂಗದೆ | ರೌದ್ರವ | ತಾಳಿದ | —ಅಂತ |
ರಂಗವ | ದೇನೆಂದು | ಕೇಳಿದ || ೭ ||*

೩ ರಾಗ ಕಾಂಭೋಜಿ—ಜಂಪೆತಾಳ ೧, ೨

ಶೂರ್ಪನಖಿ—

ದಶರಥನ | ಸುತರಾದ | ರಾಮಲ | ಕ್ಷ್ಮಣರೆಂಬ
ಪೆಸರುಳ್ಳ | ವೀರರಿ | ಬ್ಬರಿಗೆ ||
ವಸುಧೆಯೊಳ | ಗಿದಿರಿಲ್ಲ | ನೋಡಿದರೆ | ಬಾಲಕರು |
ಅಸಮ ಸಾ | ಹಸರು ಕೇ | ಳಣ್ಣ — || ೮ ||

---

1 ಡಿಯ (ಕಾ, ಅ) 2 ಕುಶಲ (ಅ)

*ದ್ವಿಪದಿ || ಏನು ಹೊಡೆಯಿತು ಮಾರಿ ತಂಗಿ ನಿನಗೆನುತ | ದಾನವರ ಅರಸ ಬೆಸಗೊಂಡ ನಸುನಗುತ ||
ಊನವನು ತಂದೆ ಖಳವಂಶಕ್ಕೆ ನೀನು | ಮಾನಭಂಗವನೆಸಗಿದವನ ಪೆಸರೇನು ||

ಕಾಂಭೋಜಿ–ಜಂಪೆ ||
ಕೇಳಣ್ಣ ನಿನ್ನೊಳೀ | ಮಾನಭಂಗದ ಪರಿಯ | ಪೇಳಲೇನಿನ್ನು ಧರೆಯೊಳಗೆ ||
ಬಾಳಿರುವೆನೆಂತಕಟ | ಸಂಭವಿಸಿದಪಹಾಸ್ಯ | ದೂಳಿಗವನೊರೆವೆ ವಿಸ್ತರದಿ || (ಕಾ, ಅ)

ರಾಮನೆಂ । ಬಾತನಿಗೆ । ರಾಜಿಸುವ । ಳೂರ್ವ ಸತಿ ।
ಕಾಮನರ । ಗಿಣಿಯಂತೆ । ತರುಣಿ ॥
ಕಾಮಿನಿಯ । ಕಂಡು ಮರು । ಳಾಗದವ । ರಾರುಂಟು ।
ಭೂಮಿಯೊಳು । ಜೋಡಿಲ್ಲ । ವಳಿಗೆ ॥ ೯ ॥

ನಾಗವೇ । ಣಿಯ ಕಂಡು । ಸೈರಿಸದೆ । ಮನಸು ನಿನ ।
ಗಾಗಿ ಕೈ । ಯಿಕ್ಕಿದೆನು । ಸತಿಗೆ ॥
ಆಗ ಲ । ಕ್ಷ್ಮಣನೆಂಬ । ಹುಡುಗನೆ । ನ್ನೆರಡು ಮೊಲೆ ।
ಮೂಗು ಸಹ । ಕೊಯ್ದು ಕಡು । ಧೀರ ॥ ೧೦ ॥

ತರಿದ ಗಾ । ಯವದುರಿಯ । ತಾಳಲಾ । ರದೆ ನಮ್ಮ ।
ಖರ[1]ದೂಷ । ಣರ[1] ಸ್ಥಾನ । ಕಯ್ದಿ ॥
ಇರದೆ ಸಂ । ಗತಿಯರುಹೆ । ಗಜರಥಾ । ದಿಗಳಿಂದ ।
ಭರದಿ ಮು । ತ್ತಿದ[2]ರೆ[2] ರಾ । ಘವನ ॥ ೧೧ ॥

ಖರದೂಷ । ಣಾದಿಗಳ । ಸಂಹರಿಸಿ । ಪಂಚವಟಿ ।
ವರದಂಡ । ಕಾರಣ್ಯ । ದೆಡೆಯ ॥
ಸ್ಥಿರವಾಗಿ । ನೆಲಸಿರ್ದ । ನಮ್ಮವರ । ನೆಲ್ಲ ಯಮ ।
ಪುರಕೆ ಕಳು । ಹಿಸಿದನಾ । ರಾಮ ॥ ೧೨ ॥

ದಾನವರ । ಸಂಹರಿಸಿ । ನಮ್ಮವರ । ಹೊಳಲೆಲ್ಲ ।
ದಾನಗಳ । ಕೊಟ್ಟ ಋಷಿ । ಗಳಿಗೆ ॥
ಏನು ಹೋ । ದರೂ ಹೋಗ । ಲೆಂತಾದ । ಡಾಗಲಾ ।
ಮಾನಿನಿಯ । ತರಬೇಕು । ಸಿದ್ಧ ॥ ೧೩ ॥

೪ ರಾಗ ಶಂಕರಾಭರಣ—ಅಷ್ಟತಾಳ ೨

ರಾವಣ—

[ಅಂಥಾ ಚೆ । ಲುವೆ ಯೇ । ನೇ—ರಾ । ಮನ ಕಾಂತೆ ।
ಅಂಥಾ ಚೆ । ಲುವೆಯೇ । ನೆ— ॥ ಪಲ್ಲವಿ ॥

---

1 ನಿರುವ ಜನ (ಅ)    2 ರು (ಕಾ, ಅ)

ಅಂಥ ಚೆ । ಲುವೆಯೇನೆ । ಕಾಂತೆ ಜಾ । ನಕೀದೇವಿ ।
[1]ಅಂತರಂ । ಗದಿ ಮಂ[1]ಡೋ । ದರಿಗಿಂತ । [2]ಸೊಬಗುಳ್ಳ[2] ॥ ೧೪ ॥

ಕಣ್ಣುಗ । ಳೆಂತಿಹ । ವು— ಅ । ವಳಮೆಯ್ಯ ।
ಬಣ್ಣವ । ದೆಂತಿಹು । ದು— ॥
ರನ್ನ ಕೆ । ತ್ರಿದನಡು । ಸಣ್ಣವಾ । ಗಿಹುದೇನೆ ।
ಮನ್ಮಥ । ನರಗಿಣಿ । ಯಂತೆ ತೋ । ರುವಳೇನೆ] ॥ ೧೫ ॥

೫ ರಾಗ [3]ಬೇಗಡೆ—ತ್ರಿವುಡೆ[3] ತಾಳ ೧

ಶೂರ್ಪನಖಿ—

ತರಬೇಕು । ತರುಣಿಯು । ಳ—ಕಾ । ಮನ ಮುಂಗ ।
ಯ್ಯರಗಿಣಿ । ಯಂತಿಹ । ಳ—॥
ಸ್ಮರನ ಸಿಂ । ಗಾಡಿ ಪು । ರ್ಬಿನ ನೀರೆ । ಮಲ್ಲಿಗೆ ।
ಪರಿಮಳಿ । ಸುವ ಮೆಯ್ಯ । ವರಕರಿ । ಗಮನೆಯ ॥ ೧೬ ॥

ಪನ್ನಗ । ನಿಭವೇಣಿ । ಯು—ಪಂ । ಕಜದೆಸ ।
ಳ್ಗಣ್ಣ ಕ । ನ್ನಡಜಾಣೆ । ಯು— ॥
ಹೊನ್ನ ಪು । ತ್ಥಳಿ ಬೊಂಬೆ । ಯಂಥ ರಾ । ಮನ ಕಯ್ಯ ।
ಕನ್ನಡಿ । ಕದಪಿನ । ಕಡುಸುಪ್ರ । ವೀಣೆಯ ॥ ೧೭ ॥

ಕಿರುನಗೆ । ಮೊಗದೋಜೆ । ಯು—ಲಾ ।
ವಣ್ಯಭಾ । ಸ್ಕರಕೋಟಿ । ನಿಭತೇಜೆ । ಯು— ॥
ವರಕುಂಭ । ಕುಚೆಯ ಸ । ರೋಜಗಂ । ಧಿನಿಯು ಕೇ ।
ಸರಿಮಧ್ಯೆ । ಮರಿಶುಕ । ವಚನೆ ಶು । ಭಾಂಗಿಯ ॥ ೧೮ ॥

೬ ಕಂದ

ರಾವಣ—

ತಂಗಿಯು ಸವಿನುಡಿಯಂ ಕೇ
ಳ್ದಂಗಜಶರತಾಗಿ ರಾವಣಂ ಭ್ರಮೆಗೊಂಡಂ ।
ಅಂಗನೆ ಮಂಡೋದರಿಗೀ
[4]ಸಂಗತಿಯರುಹಲ್ಕೆ ಪೋಗಿ ತಾ ಕರೆದೆಂದಂ[4] ॥ ೧೯ ॥

---

1 ಕಾಂತೆ ಮಾಂ (ಅ) 2 ಲೂ ಸೊಬಗೇನೆ (ಅ) 3 ಕಾಪಿ—ಅಷ್ಟ (ಅ, ಕಾ)
4 ಸಾಂಗದಿ ತಾ ಪೇಳಲೆಂದು ಸಕಿಗುಸುರಿದನು (ಅ)

(ಮಂಡೋದರಿಯ ಪ್ರವೇಶ)

೭ ರಾಗ ಘಂಟಾರವ—ಜಂಪೆತಾಳ ೩

ಬಾರೆ ನೋ | ಹ[1]ನಾಕಾ[1]ರೆ | ನಾರೀಶಿರೋ | ರನ್ನೆ |
ನೀರೆ ಮಂ | ಡೋದರಿಯೆ | ಕೇಳೊಂದು | ನುಡಿಯ || ೨೦ ||

ಜನಕನಂ | ದನೆಯಂತೆ | ಸೀತೆಯೆಂ | ಬವಳಂತೆ |
ಘನಸೊಬಗಿ | ನವಳಂತೆ ರಾಘವನ | ಕಾಂತೆ || ೨೧ ||

ತರಲು ಪೋ | ಪೆನು ನಾನು | ತಂದರವ | ಳೂ ನೀನು |
ಎರಕವಾ | ಗಿರುವ ಬಗೆ | ಪೇಳಬೇ | ಕೆನಗೆ || ೨೨ ||

ಎನಲಾಗ | ಕೇಳಿ ಕಾಂ | ತನನು ಬಿಗಿ | ಯಪ್ಪಿ ಮಯ |
ತನುಜೆ ನುಡಿ | ದಳು ಬೇಗ | ದನುಜಪತಿ | ಯೊಡನೆ || ೨೩ ||

೮ ರಾಗ ಅಹೇರಿ—ಅಷ್ಟತಾಳ ೧

ಮಂಡೋದರಿ—

ತರವಲ್ಲ |— ಕಾಂತ | ತರವಲ್ಲ || ಪಲ್ಲವಿ ||

ತರವಲ್ಲ | ವಿದು ಲೋಕ | ಮಾತೆ ಜಾ | ನಕಿಯ |
ತರುವೆನೆಂ | ದೆನುತ ಪೋ | ಗುವುದು | ಆ ಸತಿಯ || ಅನುಪಲ್ಲವಿ ||

ನಾರಾ | ಯಣಸ್ವಾಮಿ | ಆ ರಾಮು | ಚಂದ್ರ |
ಚಾರುಲ | ಕ್ಷ್ಮಣನೆಂಬಾ | ತನೆ ಉರ | ಗೇಂದ್ರ |
ನಾರೀ ಜಾ | ನಕಿಯೆಂಬ | ಳಾಕೆ ಲ | ಕ್ಷ್ಮೀದೇವಿ |
ಧಾರಿಣಿ | ಯೊಳಗವ | ತರಿಸಿದ | [2]ರೀ ಬಾ[2]ರಿ || ೨೪ ||

ಕುಲವೆ ಸಂ | ಹಾರವಾ | ಗುವ ಕಾಲ | ಬಂತು |
ಇಳೆಯೊಳ್ | ಬಾಳಿರುವಂಥ | ಋಣವೆಲ್ಲ | ಸಂತು |
ಇಳೆಯ ನಂ | ದನೆ ಸಿಕ್ಕ | ಳೀತಕೀ | ಭ್ರಾಂತು |
ಉಳಿಯದು | ಪ್ರಾಣ ನಾ | ಸಾರಿದೆ | ನಿಂತು || ೨೫ ||

---

1 ನಗಾ (ಅ) 2 ರ್ಸೀ (ಅ)

ಖರದೂಷ । ಣಾದ್ಯರು । ಬಡವರೆ । ನೋಡು ।
ನೆರೆ ಮುಂದೆ । ಬಾಳುವ । ದರಿತು ಮಾ । ತಾಡು ।
ಕರವ ಮು । ಗಿದು ಬೇ । ಡುವೆ ದಯೆ । ಮಾಡು ।
ತರುಣಿಯು । ತಳ್ಳಿಗ್ಹೋ । ದರೆ ಬಂತು । ಕೇಡು ॥ ೨೬ ॥

೯ ರಾಗ ಶಂಕರಾಭರಣ—ಏಕತಾಳ ೪; ರಾಗ ತೋಡಿ—ಏಕತಾಳ ೫ ತಿತ್ತಿತ್ತೈ

ರಾವಣ—

ವಲ್ಲಭೆ ಕೇ । ಳಿಂಥ ಮಾತ । ನೆನ್ನೊಳು ಪೇ । ಳುವರೇನೆ ।
ಹುಲ್ಲೆ ಘೋರ । ಸಿಂಹವನ್ನು । ಕೊಲ್ಲುವದುಂ । ಟೆ— ॥ ೨೭ ॥

ಮಂಡೋದರಿ—

ಎಳ್ಳಿನಷ್ಟು । ಕಿಚ್ಚು ಮನೆಗ । ಳೆಲ್ಲ ಸುಡದೆ । ಬಿಡುವುದುಂಟೆ ।
ಒಳ್ಳಿತಲ್ಲ । ಬುದ್ಧಿ ಬರಿದೆ । ಕೆಡಬೇಡ ಕಾಂ । ತ— ॥ ೨೮ ॥

ರಾವಣ—

ಮಾನಿನಿ ಕೇ । ಳಿಲಿಗಳು ಮ । ದ್ದಾನೆಯ ಸಂ । ಹರಿಸಲುಂಟೆ ।
ದಾನವರಿಗೂ । ಮಾನವರಿಗೂ । ಸಮವೇನೆ ಕಾಂ । ತೆ— ॥ ೨೯ ॥

ಮಂಡೋದರಿ—

ಕಾಣದೆ ಕು । ಣಿಯೊಳು ಬಿದ್ದ । ಡಾನೆಯಾದ । ರೇನು ಕಡೆಗೆ ।
ಶ್ವಾನಗಿಂತ । ಕಡೆಯಲ್ಲವೆ । ನೀ ನೋಡು ಕಾಂ । ತ— ॥ ೩೦ ॥

ರಾವಣ—

ಕಿಚ್ಚಿಗಿರುವೆ । ಮುತ್ತಲುಂಟೆ । ಬಚ್ಚಲೂ ಮಾ । ಳಿಗೆಯೂ ಸರಿಯೆ ।
ಹೆಚ್ಚುಕಡಿಮೆ । ಯಿಲ್ಲವೇನೆ । ಅಮೃತ ಗರಳ । [1]ವೇ[1]— ॥ ೩೧ ॥

ಮಂಡೋದರಿ—

ನೆಚ್ಚಿ ಪರರ । ಹೆಣ್ಣಿಗೆ ಮನ । ಮೆಚ್ಚಿದಾತ । ಗಮೃತ ವಿಷವು ।
ಕಿಚ್ಚು ನೀರೊ । ಳುರಿವುದುಂಟೆ । ಹೆಚ್ಚೇನು ಕಾಂ । ತ— ॥ ೩೨ ॥

1 ವು

ರಾವಣ—
ಈರೇಳು ಲೋ । ಕದೊಳಗುಳ್ಳ । ಪಾರುಪತ್ಯ । ವೆನಗಿದ್ದಂತೆ ।
ನಾರಿ ಹುಲು । ಮನುಜರ್ಗೆಲ್ಲ । [1]ಅಂ[1]ಜುವೆನೇ । ನೆ— ॥ ೩೩ ॥

ಮಂಡೋದರಿ—
ಬೇರು ಕಡಿದ । ಮೇಲೆ ವೃಕ್ಷ । ಜಾರದೆ ನಿ । ಲ್ಲುವದುಂಟೆ ।
ಮಾರಿಬಡಿವ । ವೇಳ್ಯಕ್ಕಾರೂ । ಬಾರರು ಕಾಂ । ತ— ॥ ೩೪ ॥

ರಾವಣ—
ಬಂದದ್ದೆಲ್ಲಾ । ಬರಲದರಿಂದ । ಮಂದಗಮನೆ । ಸೀತೆಯನ್ನು ।
ತಂದಲ್ಲದೆ । ಬಿಡೆನು ಕಾಣೆ । ಚಂದಿರವದ । ನೆ— ॥ ೩೫ ॥

ಮಂಡೋದರಿ—
ತಂದೆತಾಯ್ಗ । ಳಾಣೆ ನಿಮಗೆ । ತಂದರೆ ಜಾ । ನಕಿಯ ಮನೆಗೆ ।
ಕುಂದುವದೈ । ಶ್ವರ್ಯವೆಲ್ಲ । [2]ಮುಂ[2]ದೆನ್ನ ರಮ । ಣ— ॥ ೩೬ ॥

(ಮಂಡೋದರಿಯ ನಿಷ್ಕ್ರಮಣ)

೧೦ ಕಂದ

ಕೋವಿದ ನೀತಿಯ ಮಾತಂ
ಭಾವಕಿ ತಾ ತಿಳಿಯಪೇಳ್ದೊಡಂಬಡಿಸಿದೊಡಂ ।
ರಾವಣ ಕೇಳದೆ ತನ್ನಯ
ಮಾವಂ ಮಾರೀಚನಿದ್ದ ವನಕ್ಕೈತಂದಂ ॥ ೩೭ ॥

(ಮಾರೀಚನ ಪ್ರವೇಶ ತೆರೆಯಲ್ಲಿ, ಆಸನಸ್ಥನಾಗಿ)

೧೧ [3]ರಾಗ ನವರೋಜು—ಆದಿತಾಳ ೩[3]

ರಾವಣ—
ಮಾರೀಚನಿ । ಶಾಚರ । ಸಂತತ ।
ವೀರಮನೋಹರ । ವಿಕ್ರಮ । ಶೌರ್ಯ ।
ಮಾರಾಂಗಶ । ರೀರಮ । ನೋಹರ ।
ಚಾರು[4]ಗುಣಗ । ಭೀರ—ಉ । ದಾರ—[4] ॥ ೩೮ ॥

---

1 ನಾನಂ (ಕಾ, ಅ.) 2 ಇಂ (ಅ) 3 ನೀಲಾಂಬರಿ—ಧ್ರುವೆ (ಓ)
4 ಸುಗುಣಗಂ । ಭೀರ ಪ । ರಾಕ್ರಮ । (ಕಾ)

ದಶರಥನ— | [1]ಇ[1]ಬ್ಬರು | ಹುಡುಗರು |
ವಸುಧೆಯೊಳ[2]ತಿ[2] ಶೋ | ಭಿಸ ರಂ | ತೆ— |
ಕುಶಲದಿ, ಖರ | ದೂಷಣ | ತ್ರಿಶಿರರ |
ಪೆಸರಡಗಿಸಿ ಮೆರೆ | ದಿಹ ರಂ | ತೆ— || ೩೯ ||

ರಾಘವನೆಂ— | [3]ಬ[3]ನಿಗೊ | ರ್ವಳು ಸತಿ |
ನಾಗಕ[4]ನ್ಯೆ ಯಂ | ತಿಹ[4] ಳಂ |, ತೆ |
ಪೋಗುವೆ ನಾ— | ತರಲಿಕೆ | ಪೊಂಮೃಗ |
ವಾಗಿ ನೀನು ನಲಿ | ದಾಡ ಬೇ | ಕಲ್ಲಿ— || ೪೦ ||

೧೨ ರಾಗ ಮಧ್ಯಮಾವತಿ—ಏಕತಾಳ ೩

ಮಾರೀಚ—

ರಾವಣ | ನೀ ಬಲು | ಸಾಹಸಿ | ಯಯ್ಯ |
ದೇವ | ರ್ಕಳ ದೇ | ವನು ಶ್ರೀ | ರಾಮು |
ಕೇವಲ | ನರಜ | ನ್ಮದಿ ಜನಿ | ಸೀಪರಿ |
ಭೂವಲ | ಯದಿ ತಿರು | ಗಾಡುತ | ಲಿಹನು || ೪೧ ||

ತತ್ಕಾಂ | ತೆಯ ತಂ | ದರೆ ವಂ | ಶಕ್ಕೆ ಮ |
ಹತ್ಕಂ | ಟಕವ | ಲ್ಲದೆ [5]ಸುಖ | ವೆ[5]— |
ತತ್ಸಂ | ಗತಿ ಬೇ | ಡಾ ನಿ | ದಾನಿಸು |
ಮತ್ಕಿಂ | ಚಿತ ಮಾ | ತನು ನೀ | ಕೇಳು || ೪೨ ||

೧೩ ರಾಗ ಮಾರವಿ—ಏಕತಾಳ ೩

ರಾವಣ—

ಸಾಕೆಲ | ವೋ ಬ | ಲ್ಲೆನು ನಾ | ನು— |
ಏಕವ | ರನು ಕೊಂ | ಡಾಡುವೆ | ಯು— |
ನಾ ಕೊ | ಲ್ಲುವೆ ನೀ | ಪೋಗದಿ | ರೆ—ಎನೆ |
ತಾ ಕೈ | ಮುಗಿದ್ವೆ | ದುವೆನೆಂ | ದ— || ೪೩ ||

---

1 ಸುತರಿ (ಅ) 2 ಗೆ (ಅ) 3 ಬಾತ (ಕಾ, ಅ) 4 ನ್ನಿಕೆಯ | ಪೋಲುವ | (ಅ) 5 ಬಿಡದು (ಅ)

[1] ರಾಗ ಸೌರಾಷ್ಟ—ಅಷ್ಟತಾಳ ಛಾಪು

ಮಾರೀಚ—

ನಿನ್ನ ಕೈ । ಯಲಿ ಪೆಟ್ಟ । ತಿಂದು ಸಾ । ವುದ[2]ಕಿಂತ ।
ರಾಮ ಬಾ । ಣದಿ ಸಾಯೆ । ಸಾಯುಜ್ಯ । ವಹುದಯ್ಯ[2] ।
ಪೋಗುವೆ । ದಮ್ಮಯ್ಯ । ಪೋಗುವೆ[1] ॥ ೪೪ ॥

(ರಾವಣ ಮಾರೀಚರ ನಿಷ್ಕ್ರಮ)

೧೪ ರಾಗ ಪುನ್ನಾಗ—ಅಷ್ಟತಾಳ ೨

ಅಡವಿಯೊ । ಳಗೆ ರಾಮ । ನಿರುವ ಸು । ದ್ದಿಯ ಕೇಳಿ ।
ಕಡುಚೆಲು । ವಿನ ಮೃಗ । ಬಂತೋ—
ತಂದಾನ । ತಾನೇ । ತಂದನಾ । ನಾ— ॥ ೪೫ ॥

ನೋಡಿ ಜಾ । ನಕಿ ಭ್ರಮೆ । ಗೂಡಿ ತ । ನ್ನರಸನ ।
[3]ಬೇಡಿ ಕಾ । ಡಲು ಮೃಗ । ಬಂತೋ । ಓ ಓ ॥[3]
ತಂದಾನ । ತಾನೇ । ತಂದನಾ । ನಾ— ॥ ೪೬ ॥

(ಚಿನ್ನದ ಮೃಗ—ಸೂತ್ರದ ಬೊಂಬೆ—ಕುಣಿಯುತ್ತ ಬರುವುದು)

೧೫ ಶಾರ್ದೂಲ ವಿಕ್ರೀಡಿತ ವೃತ್ತ

ಮಾರೀಚಂ ಮೃಗವಾಗಿ ಪಂಚವಟಿಗಂ ಬಂದಲ್ಲಿ ಓಡ್ಯಾಡಲು
ಸೌರಮ್ಯಾತಿಶಯಪ್ರಧಾನಕರಮಂ ಕಂಡಾಗಳಾ ಜಾನಕಿ
ಚೋರತ್ವಂಗಳ ಮಾಯದಾಕೃತಿಯಿದೆಂದಾಕಾಂತೆ ತಾ ಕಾಣದೆ
ನಾರೀ ವಿಸ್ಮಿತೆಯಾಗಿ ಕಾಂತನೆಡೆಗಂ ಬಂದಾಗಳಿಂತೆಂದಳು ॥ ೪೭ ॥

---

1 ವಚನ ॥ ಇವನ ಕೈಯ ಸಾವುದಕ್ಕೆ ರಾಘವನ ಕೈಯ ಮಡಿದೆಯಾದರೆ ತನಗೆಸೆವ ಸಾಲೋಕ್ಯಮುಕ್ತಿಯಹುದೆಂದು ಪೋದಂ (ಓ)

2 ರಿಂದ । ನರಕವೇ ಸಾಧ್ಯವ । ಹುದು ತನ ಗಿಂದು ॥ ರಾಮನ ಬಾಣದೊಳಸುವ ನೀಗಿ ದರೆ ನಾ । ನೀರೇಳು ಲೋಕದ ಮೋಕ್ಷವ । ಪಡೆವೆ ॥ (ಅ)

3 ಕೂಡೆ ಬೇಡಿದಳು ತಾನೇಕಾಂತ ದಿಂದ । (ಅ) ತಂದಾನ ತಾನೇ— ಎಂಬ ಸೊಲ್ಲು ಹೆಚ್ಚಿನ ಕಾಗದ ಪ್ರತಿಗಳಲ್ಲಿ ಮತ್ತು ಅಚ್ಚಿನ ಪ್ರತಿಗಳಲ್ಲಿ ಇರುವುದಿಲ್ಲ.

(ರಾಮ ಸೀತೆ ಲಕ್ಷ್ಮಣರ ಪ್ರವೇಶ)

೧೬ ರಾಗ ಪುನ್ನಾಗವರಾಳಿ—ಏಕತಾಳ ೭, ಅಷ್ಟತಾಳ ೨

ಸೀತೆ—

ನೋಡಿದೆ । ಯಾ ರಾಮ । ನೋಡಿದೆ । ಯಾ
ಕಾಡಿನಿಂದ । ಲೋಡಿಬಂದು । ಆಡುವಂಥ । ಪೊಂಮೃಗವ ॥ ಪಲ್ಲವಿ ॥

ಚಿನ್ನದ ಹಾ । ಗಿರುವ ಮೆಯ್ಯ । ಬಣ್ಣದ ಸು । ತ್ತಲೂ ಪಂಚ ।
ವರ್ಣದ ರೇ । ಖೆಗಳು ಬಂದ । ಚೆಂದವ ನೋ । ಡು — ॥
ಸಣ್ಣ ಸಣ್ಣ । ಕಾಲಬೆರಳು । ಸಾಲಿನುಗುರು । ಭಾವಂಗಳ ।
ತನ್ನಂಗ ದಿ । ನ್ನಂಗ ಧಿಕ್ಕಿಟ । ತೋ ಯೆಂದು । ಕುಣಿವ ಮೃಗವ ॥ ೪೮ ॥

ಜಗದೇಕ ವೀ । ರನೆ ಕಯ್ಯ । ಮುಗಿದು ಬೇಡು । ವೆ ದಮ್ಮಯ್ಯ ।
ಹಗಲೂ ಯಿರುಳೂ । ಕಂಡುಕೊಂಡು । ಸೊಗದಿಂದಿರ್ಪೆ । ನು— ॥
ಸುಗುಣ ನಿನಗೆ । ನಾ ಬೇಕೆಂಬ । ಬಗೆಯೊಳು ಸ್ನೇ । ಹವಿದ್ದರೆ ।
ಅಗಲಿ ಓಡಿ । ಹೋಹ ಮುನ್ನ । ಮೃಗವ ಹಿಡಿದು । ತಾ ಮೋಹನ್ನ ॥೪೯॥

೧೭ ರಾಗ ಕೇದಾರಗೌಳ—ಅಷ್ಟತಾಳ ೧

ರಾಮ—

ಅರಸಿ ನೀ । ಸುಮ್ಮನೆ । ಭ್ರಮೆಗೊಳ್ಳ । ಬೇಡವೆ ।
ಸರಸದ । ಮೃಗವಲ್ಲ । ಲೇ— ॥
ಸರಸಿ ಜಾಂ । ಬಕಿ ನಿನ್ನ । ಮರುಳು ಮಾ । ಡಲು ಬಂದ ।
ದುರುಳರ । ಕಪಟ ಕಾ । ಣೆ— ॥ ೫೦ ॥

ಸೀತೆ—

ಕಪಟದಾ । ಕೃತಿಯೆಂದು । ಕಾಂತ ನೀ । ಯೆನ್ನ ಚಾ ।
ಳಿಪುದೆಲ್ಲ । ಬಲ್ಲೆ ನಾ । ನು— ॥
ಅಪರೂಪ । ವಿದಕಂಡು । ಬಯಸಿದ । ರೆನಗೊಂದು ।
ಉಪಕಾರ । ಮಾಡೊ ನೀ । ನು— ॥ ೫೧ ॥

ರಾಮ—

ನಾಡಮಾ । ತಲ್ಲ ರಾ । ಕ್ಷಸರ ಮಾ । ಯಕದಿ ಬಂ ।
ದಾಡುವ । ಮೃಗವು ಕಾ । ಣೆ— ॥

ಬೇಡ ಸು । ಮ್ಮನೆ ಕಡ್ಡಿ । ಮುರಿದು ಸಾ । ರಿದೆನತ್ತ ।
ನೋಡಬೇ । ಡವೆ ಯೆನ್ನಾ । ಣೆ— ॥ ೫೨ ॥

ಸೀತೆ—

ಆಡುವ । ಮೃಗದಿಂದ । ಕೇಡು ಬಂ । ತಾದರೂ ।
ನೋಡಿಕೊಂ । ಬೆನು ಬಂದು । ದ— ॥
ನೋಡದೆ । ಯೆನಗೊಂದು । ಕ್ಷಣ ಜೀವ । ನಿಲ್ಲದು ।
ಬೇಡಿಕೊಂ । ಬೆನು ನಿನ್ನ । ನು— ॥ ೫೩ ॥

ರಾಮ—

ಕೆಟ್ಟ ಮೇ । ಲೇ ಬುದ್ಧಿ । ಬರುವುದು । ನೀ ಗಂಟ ।
ಕಟ್ಟಿಕೊ । ಸೆರಗಿನ । ಲಿ— ॥
ದಿಟ್ಟೆ ಹೆಂ । ಗುಸು , ಛಲ । ಬಿಟ್ಟು ಬಿ । ಡಿದರಿಂದ ।
ಕಷ್ಟಕಾ । ರ್ಯಗಳಹು । ದು— ॥ ೫೪ ॥

ಸೀತೆ—

ಎಷ್ಟು ಚಾ । ಳಿಸಿದರೂ । [1]ಈ ಮಾತೊಂ । ದನು ನಾನು ।
ಬಿಟ್ಟು ಕ । ಳಿವಳಲ್ಲ । ಲೆ[1]— ॥
ಸಿಟ್ಟು ಬಂ । ತಾದರೂ । ತಾರದಿ । ದ್ದರೆ ಪ್ರಾಣ ।
ಬಿಟ್ಟಪೆ । ನಿನ್ನ ಮೇ । ಲೆ— ॥ ೫೫ ॥

ರಾಮ—

ಅನುಜ ನಾ । ಮೃಗವನು । ತರಲು ಪೋ । ಪೆನು ಬರು ।
ವನಕ ಮಾ । ನಿನಿಯ ಬಿ । ಟ್ಟು— ॥
ವನದಿ ಮ । ತ್ತತ್ತಿತ್ತ । ತಿರುಗಾಡ । ಬೇಡೆಂದು ।
ಧನುಶರಂ । ಗಳ ಕೊಂಡ । ನು— ॥ ॥ ೫೬ ॥

---

1 ನಾನೀಮಾ ತನುಕೇಳಿ । ಬಿಟ್ಟಪಳಲ್ಲ ನಿ । ನ್ನ— ॥ ಸಿಟ್ಟುಬಂದರೆ ಬರ । ಲಿದ ತಾರದಿದ್ದರೆ । ಬಿಟ್ಟಪೆ ಪ್ರಾಣವ । ನು— ॥ (ಅ, ಕಾ)

೧೪[1] ರಾಗ ಸವ್ಯಾ—ಏಕತಾಳ ೩

[ತಾವರೆನೊಗದಂ । ಗನೆ ನೀ ಕೇಳೆಾ । ರಾವಣದನುಜನ ।
ಚೇಷ್ಟೆಯ ಮೃಗವಿದು ।
ಭೂವಲಯದೊಳಂ । ಟೇ ಕೇಳಾದರೆ । ಮಾಯೆ
ಯೆನುತ ತಿಳಿ । ದುಂ— ॥ ೫೭ ॥

ಖಳನಂ ಕೊಲುವಡೆ । ವತ್ಸರವೊಂದಿದೆ । ನಳಿನಾಂಬಕಿ ನೀ । ವಹ್ನಿಯೊಳಂ ನಿಲು ।
ನೆಳಲಿಂದಿರು ನೀ । ಅವನಿಯೊಳಂ ನೆಲ । ಸೆಂದಂ ರಘುವೀ । ರಂ[1]—] ॥ ೫೮ ॥

೧೯ ರಾಗ ಸೌರಾಷ್ಟ್ರ—ರೂಪಕತಾಳ ೧

ರಾಮ—

ಸಹಜ ಸೌಮಿ । ತ್ರ — । ಜನಕನಂದ । ನೆ— ।
ಮೃಗಮನೋಚಿ । ತೆ — । ಯಾದಳಲ್ಲ । ಯ್ಯ — ॥ ೫೯ ॥

ತರಲು ಪೋಪೆ । ನಾ — । ಬರುವ ತನಕ । ನೀ — ।
ಧರಣಿಜಾತೆ । ಯ— । ಕಾಯ್ದುಕೊಳ್ಳ । ಯ್ಯ — ॥ ೬೦ ॥

ಲಕ್ಷ್ಮಣ—

ಅಗ್ರಜಾ ವೀ । ರ — ಈ । ಸ್ವಲ್ಪ ಕೆಲಸ । ಕೆ — ।
ವ್ಯಗ್ರದಿಂದ । ನೀ — । ತೆರಳಲೇತ । ಕೆ — ॥ ೬೧ ॥

ನಿಮಿಷ ಮಾತ್ರ । ಕೆ — ನಾ । ತರುವೆನು ಮೃಗ । ವ — ।
ಅಮಮ ರಾಘ । ವ — । ಕೊಡಿಸು ನೇಮ । ವ — ॥ ೬೨ ॥

---

1 ಭಾಮಿನಿ ॥ ಎಲೆಲೆ ಮಾನಿನಿ ಕೇಳು ಅಡವಿಯೊ
ಳಿರುವ ಮೃಗ ಶರವೆಸೆದೆನಾದರೆ
ಉಳಿಯದಿರಲದ ತಂದು ಮಾಡುವ ಕಾರ್ಯವೇನೆಂದ ।
ಪಂಚಬಾಣನ ಪಿತನೆ ಕೇಳಾ
ವಂಚಿತದ ಮೃಗ ಮಡಿದುದಾದರೆ
ಕಂಚುಕವ ರಚಿಸುವೆನು ಚರ್ಮವ ತೆಗೆದು ವಿನಯದಲಿ ॥ (೮)
(ಇದು ತೊರವೆ ರಾಮಾಯಣದ ಪದ್ಯ)

ರಾಮು—

ಆಗದಾಗ । ದು—। ಕಪಟಮೃಗವಿ । ದು—।
ಬೇಗದಿಂದ । ಲೇ—ನಾ । ತರುವೆ ಲಕ್ಷ್ಮ । ಣ— ॥ ೬೩ ॥

ಲಕ್ಷ್ಮಣ—

ಎಷ್ಟು ಕಾಲ । ಕೆ—ಬರುವೆ ರಾಘ । ವ—।
ಸೃಷ್ಟಿಜಾತೆ । ತಾ—ಹೇ । ಗಿರುವಳೊಬ್ಬ । ಳೇ— ॥ ೬೪ ॥

ರಾಮು—

ನಿಮಿಷಮಾತ್ರ । ಕೆ—। ಬರುವೆ ಲಕ್ಷ್ಮ । ಣ—।
ಜನಕ ಸೀತೆ । ಯು—ನೀ । ನೋಡಿಕೊಳ್ಳ । ಯ್ಯ— ॥ ೬೫ ॥

೨೦ ವಾರ್ಧಿಕಷಟ್ಪದಿ

ಎನುತ [1]ಬುದ್ಧಿಯ ಪೇಳಿ ತಮ್ಮನಂ ನಿಲಿಸಿಯಾ
ಕ್ಷಣದಿ ಮುನ್ನಡೆತಂದು ಮೃಗವ ಬೆಂಬತ್ತಿದಡೆ[1]
ಘನತರದ ಘೋರಡವಿಗಯ್ದಿ ತಾ ದನುಜಮೃಗ ರಾಘವಂ ಕೋಪದಿಂದ ।
ದಣಿದು ಶರವಂ ಬಿಡಲು ಹಾ ಲಕ್ಷ್ಮಣಾಯೆಂದು
ದನಿಗೆಯ್ದು ಮಾರೀಚ ಪ್ರಾಣವಂ ಬಿಡಲಾಗ
ವನಿತೆ ಜಾನಕಿ ಕೇಳ್ದು ರಾಮನೇ ಸರಿಯೆಂದು ಲಕ್ಷ್ಮಣನೊಳಿಂತೆಂದಳು ॥ ೬೬ ॥

೨೧ ರಾಗ ತೋಡಿ—ಏಕತಾಳ ೪

ಸೀತೆ—

ನೋಡಿಬಾ । ರಯ್ಯ ಪೋ । ಗಿ—ಏ । ನಾಯ್ತೆಂದು ॥ ಪಲ್ಲವಿ ॥

,ಮುಗುದ ಕೇ । ಳಿದೆನಯ್ಯ ।, ಮೃಗವಲ್ಲ । ರಾಕ್ಷಸ ।
,ರುಗಳು ರಾ । ಮನ ಹೋ ಹೋ ।, ಕೊಲ್ಲುವ । ರೇನ್ನೈ ॥
,ಜಗದೇಕ । ವೀರ ಕೂ ।, ಗುವ ಧ್ವನಿ । ಕೇಳ್ವುದು ।
,ಮಿಗುವರಿ । ಯಿತು ಕಾರ್ಯ ।, ಕಪಟ ಸಾ । ಮಿತ್ರ ॥ ೬೭ ॥

---

1 ತಮ್ಮಗೆ ಬುದ್ಧಿಯಂ ಪೇಳಿದಾಕ್ಷಣವೆ
ಕನಕ ಮೃಗವಂ ರಾಮು ಬೆಂಬತ್ತೆ ವೇಗದೊಳು (ಅ)

ಲಕ್ಷ್ಮಣ—

,ರಾಮನ । ಧ್ವನಿಯಲ್ಲ ।, ಜಾನಕಿ । ನೀ ಕೇಳು ।
,ಯಾಮಿನೀ । ಚರರವ ।, ಸಾನಕಾ । ಲದಲಿ ।
,ತಾಮಸ । ದಿಂ ಕೂಗಿ ।, ದ್ದಲ್ಲದೆ । ಬರಿದೆ ಸಂ ।
,ಗ್ರಾಮಭೀ । ಮನ ದನು ।, ಜರು ಕೊಲ್ವ । ದುಂಟೆ ॥ ೬೮ ॥

, ಬರಿದೆ ಚಿಂ । ತಿಸಬೇಡ । ವೆ—ಜಾ । ನಕೀದೇವಿ ॥ ಪಲ್ಲವಿ ॥

ಸೀತೆ—

,ಎಷ್ಟು ಪೇ । ಳಿದರು ನೀ ।, ಯೆನ್ನರ । ಸನ ಧ್ವನಿ ।
,ಅಷ್ಟಕೆ । ನಾನದ ।, ನರಿಯದ । ಳೇನೋ ॥
,ಸೃಷ್ಟಿಪಾ । ಲಕ ಪ್ರಾಣ ।, ದಟ್ಟುಳಿ[1]ಗೆ । ಕೂಗಿದರೆ ।[1]
,ಬಿಟ್ಟು ಸು । ಮ್ಮನೆ [2]ಇಂಥ[2] ।, ನೆವನ[3]ವಿ । ದೇಕೊ[3] ॥ ೬೯ ॥

೨೨ ರಾಗ ಸೌರಾಷ್ಟ—ರೂಪಕತಾಳ ೧

ಲಕ್ಷ್ಮಣ—

ದೇವಿ ಕೇಳ್ ದೃ । ಢ—। ರಾಮಚಂದ್ರ । ನು—।
ದೇವತಾಂಶ । ಸಂ—। ಭೂತನಲ್ಲ । ವೆ—॥
ಆ ವಿಭುವ । ಸ್ವ—। ತಂತ್ರಮೂರ್ತಿ । ಯ—।
ಆವನಾದ । ರೂ—। ಕೊಲ್ಲಲಾಪ । ನೆ— ॥ ೭೦ ॥

ಸೀತೆ—

ಏನು ಲಕ್ಷ್ಮ । ಣ—। ಮನದ ಸಂಶ । ಯ—।
ಆ ನರೇಂದ್ರ । ಗೆ—। ಪ್ರಾಣಸಂಕ । ಟ—॥
ನೀನು ಸುಮ್ಮ । ನೆ—। ತಡವ ಮಾಡ । ದೆ—।
ಪ್ರಾಣನಾಥ । ನ—। ನೋಡಿಬಾರ । ಯ್ಯ— ॥ ೭೧ ॥

ಲಕ್ಷ್ಮಣ—

ತಾಯೆ ಕೇಳ । ವ್ವ—। ರಾಕ್ಷಸರ್ಕ । ಳ—।
ಮಾಯವಲ್ಲ । ದೆ—। ರಾಮನೇ । ನಲ್ಲ—॥

---

1 ಗೊದಗದೆ (ಕಾ) 2 ಹಾಳು (ಅ) 3 ವ್ಯಾಕಯ್ಯ (ಅ)

ಈಯರಣ್ಯ | ದಿ—ನಿನ್ನ | ಬಿಟ್ಟು ಹೋದ | ರೆ—|
ಕಾಯಜೋಪ | ಮ—| ಕೋಪಿಸುವ ನಿ | ಜ— ॥ ೭೨ ॥

ಸೀತೆ—

ಬಾಲಕ ನಿ | ನ್ನ—| ಭಾವವೇನ | ಯ್ಯ—|
ಶ್ರೀಲಲಾಮ | ತಾ |—ನಳಿದ ವೇಳೆ | ನ್ನ—॥
ಆಳುವೆನೆಂ | ಬ—ದು | ರಾಶೆಯಿಂದ | ಲೆ—|
ಆಲಸ್ಯದಿಂ | ದ—ನೀ | ಕೇಳಿತೆ ನಿಶ್ಚ | ಯ— ॥ ೭೩ ॥

೨೩ ವಾರ್ಧಿಕ ಷಟ್ಪದಿ

ಲಕ್ಷ್ಮಣ—

ಕಾಮಿನಿಯ ಕಠಿಣತರ ವಾಕ್ಯಮಂ ಕೇಳ್ದು ಶ್ರೀ
ರಾಮ ರಾಮಾಯೆಂದು ಕಿವಿಗಳೆರಡಂ ಮುಚ್ಚಿ
ಭೂಮಿಯೊಳಗೇಳಾಣೆಯಂ ಬರೆದಿದರ ಮೀರಿ ಅಡಿಯಿಡದಿರೆಂದುಸಿರ್ದು |
ಸೋಮಾರ್ಕಭೂಮಿದೇವಿಯ ಸಾಕ್ಷಿಯಂ ಮಾಡಿ
ತಾ ಮನದಿ ನೊಂದುಕೊಂಡಾಕ್ಷಣದೊಳಯ್ದಿದಂ
ರಾಮಚಂದ್ರನ ಪಾದದೆಡೆಗಿತ್ತಲಾದ ವೃತ್ತಾಂತಂಗಳಂ ಲಾಲಿಸಿ ॥ ೭೪ ॥

೨೪ ರಾಗ ಸೌರಾಷ್ಟ—ತ್ರಿವುಡೆತಾಳ ೨

ದೇವ ಲಕ್ಷ್ಮಣ | ನಿಂತು ಮಣಿದಾ|
ದೇವಿಯಳ ಬಳಿ | ಯಿಂದ ಪೊರಡಲು |
ದೇವತೆಗಳಿಗೆ | ಸೆರೆಯ ಬಿಡುವಾ | ಕಾಲಬಂತು ॥ ೭೫ ॥

(ಲಕ್ಷ್ಮಣನ ನಿಷ್ಕ್ರಮಣ)

ಕಾವಿ ವಸನದ | ಕೈಯ ಜಪಸರ |
ಕೋವಿ ದಂಡ ಕ | ಮಂಡಲಂಗಳ |
ರಾವಣನು ಸಂ | ನ್ಯಾಸಿವೇಷವ | ತಾಳಿ ಬಂದ ॥ ೭೬ ॥

(ಕಪಟಸನ್ಯಾಸಿಯ ಪ್ರವೇಶ)

೨೫ ರಾಗ ಪಂತುವರಾಳಿ—ಅಷ್ಟತಾಳ ೧

ರಾವಣ—

ಭಿಕ್ಷವ । ನೀಡೆ ದೇ । ವಿ—ಸ । ನ್ಯಾಸಿಗೆ ॥ ಪಲ್ಲವಿ ॥

ಕುಕ್ಷಿಗಾ । ಧಾರವಿ । ಲ್ಲದೆ ದೇಶ । ದೇಶ ಪ್ರ ।
ದಕ್ಷಿಣೆ । ಗೆಯ್ದಿಲ್ಲಿ । ಬಂದೆ ಕಾ । ಣಮ್ಮ ॥ ೭೭ ॥

ಆವ ದೇ । ಶವು ನಿಮ । ಗಾವ ರಾ । ಜ್ಯವಮ್ಮ ।
ಈ ವಿಪಿ । ನದೊಳೊಬ್ಬ । ಳಿರುವೆ ಯೇ । ಕಮ್ಮ ॥ ೭೮ ॥

ಸುರರೊ ಕಿ । ನ್ನರರೊ ಭೂ । ಸುರರೊ ದಾ । ನವರೊ ಯೆಂ ।
ದರಿಯದೆ । ನಾ ಕೇಳ್ವ । ಪರಿಯು । ಕಾಣಮ್ಮ ॥ ೭೯ ॥

೨೬ ಚರಿತೆ (ಸಾಂಗತ್ಯ) ರಾಗ ಪಂತುವರಾಳಿ—ಅಷ್ಟತಾಳ ೨

ಸೀತೆ—

ಲೇಸಾಯಿ । ತಯ್ಯ ಸ । ನ್ಯಾಸಿ ತವ । ಚರಣಕ್ಕೆ ।
ಸಾಸಿರ । ಶರಣೆಂಬೆ । ನಾನು—॥
ಬೇಸರ । ಟ್ಟಿತು ನಿಮ್ಮ । ಪಾದದ । ರ್ಶನದಿಂದ ।
ಏಸು ಪು । ಣ್ಯದ ಫಲ । ವೇನೋ— ॥ ೮೦ ॥

ದೇಶಾಯೋ । ಧ್ಯಾಪುರ । ವಾಸಿಗ । ಳೈ ನಾವು ।
ಆ ಸೂರ್ಯ । ವಂಶದ । ರಸರು ॥
ವಾಸಿಪಂ । ಥದ ಮೇಲೆ । ಅನುಜನ । ಸಹಿತಿಲ್ಲಿ ।
ವಾಸವಾ । ಗಿಹನೆನ್ನ । ರಮಣ— ॥ ೮೧ ॥

ಕಂಡೊಂದು । ಮೃಗವಪೇ । ಕ್ಷಿಸಿದ ಕಾ । ರಣದಿಂದ ।
ಕೊಂಡುಬ । ಹರೆ ರಾಮ । ಪೋದ—॥
ಪುಂಡರೀ । ಕಾಕ್ಷ ಬಾ । ರದೆ ಹೊತ್ತಾ । ದುದರಿಂದ ।
ಅಂಡಲೆ । ಯುತ ತಮ್ಮ । ನಡೆದ— ॥ ೮೨ ॥

ಅಡಿಗೆ ಊ । ಟಗಳೆಂಬ । ಗೊಡವೆಯು । ನಮಗಿಲ್ಲ !
ಅಡವಿಯ । ಫಲಾಹಾರ । ದೊಳಗೆ—॥
ಕೊಡುವೆನೆಂ । ದರೆ ತಮ್ಮ । ನಾಜ್ಞೆ [1]ಇ । ಲ್ಲಿಂದ ಮುಂ ।
ದಡಿಯಿಡ । ಬೇಡವೆಂ । ದೆನುತ—[1] ॥ ೮೩ ॥

೨೭ ರಾಗ ಸಾವೇರಿ—ಅಷ್ಟತಾಳ ೧

ರಾವಣ ಸನ್ಯಾಸಿ—

ನೆವನ ಹೇ । ಳುವುದೇತ । ಕೆ—ನಾ । ದೇಹಿ[2]ಯೆ ।
ನ್ನುವೆ[2] ನಾಸ್ತಿ । ಯೆನಬಹು । ದೆ—॥
ಶಿವನಾಣೆ । ಮೂರು ದಿ । ನಗಳಾರ । ಬ್ಯನ್ನಾಹಾ ।
ರವಗೊಳ್ಳ । ದೀಪರಿ । ಹಸಿದು ಬಂ । ದವನೊಳು ॥ ೮೪ ॥

ಧರ್ಮವು । ಳ್ಳವರು ನೀ । ವು—ದಾ । ಕ್ಷಿಣ್ಯ ಸತ್ ।
ಕರ್ಮದಿ । ನಡೆವವ । ರು—।
ಮರ್ಮಹಿ । ಡಿದು ನಾವು । ಶಪಿಸಿ ಪೋ । ದರೆ ವಂಶ ।
ನಿರ್ಮೂಲ । ವಹುದು ಕಾ । ಣೆ—ಈ । ಶ್ವರನಾಣೆ ॥ ೮೫ ॥

ದನುಜರ । ಟ್ಟುಳಿ ಬಾಧೆ । ಗೆ—ಅಂ । ಬಿನ ತುದಿ ।
ಮೊನೆಯಲ್ಲಿ । ಬರೆದ ಹೀ । ಗೆ—।
ಎನಿತೂ ಬಂ । ದವರಿಗೆ । ಭಿಕ್ಷವ । ಕೊಡಬೇಡೆಂ ।
ದೆನುತ ಪೇ । ಳಿದ ಮಾತುಂ । ಟೇ—ರಾ । ಮನಕಾಂತೆ ॥ ೮೬ ॥

೨೮ ವಾರ್ಧಿಕಷಟ್ಪದಿ

ನಾನಾ ಪ್ರಕಾರದಲಿ ಖಳ ಕಪಟವಂ ನುಡಿದು
ಮಾನಿನಿಯ ಮನದ ಸಂಶಯ ನಿವಾರಿಸಲಾಗ
ಏನು ಬಂದರು ಬರಲಿ ಯೆಂದಾಜ್ಞೆಯಂ ದಾಂಟಿ ಸೀತೆ ಮುಂದಡಿಯಿಡಲ್ಕೆ ।
ದಾನವನು ತನಗೆ ಸಿಕ್ಕಿದಳೆಂದು ನೆಲಸಹಿತ
ಮಾನಿನಿಯ ರಥದಿ ಕುಳ್ಳಿರಿಸಿಕೊಂಡೈದಲಾ
ಭಾನುಮಾರ್ಗದಿ ಪೋಪ ವೇಳೆಯೊಳು ಮೊರೆಯಿಟ್ಟಳಾ ಬಾಲೆ ನೆಲ ನಡುಗಲು

1 ಯ ವಿಾರಿ ಮುಂ । ದಡಿಯಿಡಬೇಡವೆಂದಿಹರು (ಅ) 2 ಯೆಂದರೆ (ಅ,ಕಾ)

೨೯ ರಾಗ ನಾದನಾಮಕ್ರಿಯೆ—ಅಷ್ಟತಾಳ ೧

ಸೀತೆ—

ವಿಪಿನದೊ । ಳಿರಲು ನಾ । ನಿಂದು—।—ಒಬ್ಬ ।
ಕಪಟದ । ಯತಿ ಸಡೆ । ತಂದು—।
ಗುಪಿತದೊ । ಳೊಯ್ವ ತಾ । ನೆಂದು—।—ಆ ।
ಚಪಲಾಕ್ಷಿ । ಕೂಗಿದ । ಳಂದು— ॥ ೮೮ ॥

ಧರಣೀ । ದೇವತೆ । ಗಳಿರ—।—ಎಲೆ ।
ತರಣಿ ನ । ಭೋದೇವ । ರ್ಕಳಿರ—।
ಹರ ಸರ । ಸಿಜಭವಾ । ದ್ಯರಿರ—।—ಏ ।
ಸುರಮುನಿ । ಗಂಧ । ರ್ವರಿರ— ॥ ೮೯ ॥

ದಶರಥ । ಭೂಪನ । ಸೊಸೆಯ ।—ವರ ।
ಬಿಸಜಾಕ್ಷ । ರಾಮನ । ರಸಿಯು—।
ಅಸುರ ಕ । ದ್ದೊಯ್ವ ಜಾ । ನಕಿಯು—।—ವಂ ।
ದಿಸುವೆ ಬಿ । ಡಿಸಿರೀ । ಸತಿಯ— ॥ ೯೦ ॥

೩೦ ರಾಗ ಸೌರಾಷ್ಟ—ಅಷ್ಟತಾಳ ೨

[ಹೆಣ್ಣು ಜ । ನುಮ ಸಾಕು । ಎನ ಕಂಡು । ಮರೆಯಿರೊ ।
—ರಾಮ । ರಾ—। ಮ—।
ಕಣ್ಣಾರೆ । ಕಾಣಬಾ । ರದೆ ಯೆನ್ನ । ವಿಧಿಯನು ।
—ರಾಮ । ರಾ—। ಮ— ॥ ೯೧ ॥

ಜನಕರಾ । ಯಗೆ ಸುತೆ । ಯಾಗಿ ಸಂ । ಭವಿಸಿದೆ ।
—ರಾಮ ।ರಾ—। ಮ—।
ಇನಕುಲ । ದರಸ ರಾ । ಘವನ ಪ । ಟ್ಟದ ರಾಣಿ ।
—ರಾಮ ।ರಾ— । ಮ— ॥ ೯೨ ॥

ಪೊಡವಿಯಾ । ಳುವನೆಂದು । ದೃಢವಾಗಿ । ನಂಬಿದೆ ।
—ರಾಮ । ರಾ—। ಮ—

ಅಡವಿಯೆ । ಗತಿಯೆಂದು । ಬರೆದನಂ । ಬುಜಭವ ।
—ರಾಮು । ರಾ—। ಮು— ॥ ೯೩ ॥

ನಡೆದು ಬಂ । ತ್ತೈ ಕೇಡು । ಕಪಟದ । ಮೃಗವಾಗಿ ।
—ರಾಮು । ರಾ—। ಮು—।
ಕೆಡುವ ಕಾ । ಲಕ್ಕದ । ನಾಕಂಡು । ಬಯಸಿದೆ ।—ರಾಮು ।
ರಾ—। ಮು— ॥ ೯೪ ॥

ತರಲು ಮುಂ । ದರಿವಾಗ । ದಂಡಕ । ವನದಲ್ಲಿ ।
—ರಾಮು ।ರಾ— । ಮು— ।
ಬರೆದ ಮು । ಯ್ಯುದನನೇಳು । ಗೆರೆಗಳ । ದಾಂಟಿದೆ ।
—ರಾಮು । ರಾ—। ಮು—] ॥ ೯೫ ॥

೩೧ ವಾರ್ಧಿಕಷಟ್ಪದಿ

ಪರಿಪರಿಯ ದುಃಖದಲಿ ಮರುಗಿ ಬಾಯ್ಬಿಡುತ ಕೇ
ಸರಿಯ ವಶವಾದ ಮೃಗದಂತೆ ಮಿಡುಕುತ್ತಲಾ
ಧರಣಿನಂದನೆ ಕಠಿಣವಾಗಿ ಕನಿಕರ ದೀರ್ಘಸ್ವರದಿಂದ ಕೂಗುತಿರಲು ।
ಶರಣರೊಳು ಶ್ರೇಷ್ಠ ಸಾಧುಗಳರಸ ಸಾತ್ವೀಕ
ವರಪಾರಿಜಾತ ಸನ್ಮಾರ್ಗಸಂಚರಣ ನೆರೆ
ಕರುಣಸಾಧನ ಜಟಾಯು[1]ವ ಕೇಳ್ದು[1] ದನುಜನಂ [2]ತಡೆದನಂಬರಪಥದೊಳು[2]
॥ ೯೬ ॥

(ಜಟಾಯುವಿನ ಸಂಭ್ರಮದ ಪ್ರವೇಶ)

೩೨ ರಾಗ ನಾದನಾಮಕ್ರಿಯೆ—ಅಷ್ಟತಾಳ ೧

ಜಟಾಯು—

ಎಲ್ಲಿಗೆ । ಒಯ್ವೆಯೊ । ಸೀತೆಯ ।— ಬಿಡು ।
ಕಳ್ಳ ರ । ಕ್ಕಸ ಜಗ । ನ್ಮಾತೆಯ ॥
ಒಳ್ಳಿತೆ । ನಿನಗೀ । ರೀತಿಯ ।—ಕಂಡೆ ।
ನೆಲ್ಲ ನಿ । ನ್ನ ಈ ವಿ । ಘಾತಿಯ ॥ ೯೭ ॥

---

1 ವು ಕಂಡು (ಅ)  2 ಮಾರ್ಗದೊಳ್ ತಡೆದೆಂದನು (ಅ)

ರಾವಣ—

ದಾರಿಯ । ಬಿಟ್ಟೆತ್ತ । ಕಡೆಸಾರೊ ।—ಇಂಥ ।
ಪಾರುಪ । ತ್ಯ ನಿನಗಿ । ತ್ತಪರಾಧೊ ॥
ಗಾರುಗೆ । ಡುತ ಪೆಟ್ಟ । ತಿನಬೇಡ ।—ಕೈ ।
ವಿಾರಿತೆಂ । ದೆನುತ ಮ । ತ್ತೆನಬೇಡ ॥ ೯೮ ॥

ಜಟಾಯು—

ಕಳ್ಳರು । ಕದ್ದುಕೊಂ । ಡೊಯ್ವಾಗ ।—ಕೇಳ್ವ ।
ದುಳ್ಳವಿ । ಚಾರವಿಂ । ದೆನಗೀಗ ॥
ಒಳ್ಳೆ ಮಾ । ತಿನಲಿ ಬಿ । ಡುವೆಯೇ । ನು ।—ಬಿಟ್ಟು ।
ಖುಲ್ಲರ । ಕ್ಕಸ ಅತ್ತ । ನಡೆ ನೀನು ॥ ೯೯ ॥

ರಾವಣ—

ಸತ್ತ ಪ್ರಾ । ಣಿಗಳ ತಿಂ । ಬಾತಗೆ ।—ಇಂಥ ।
ಧೂರ್ತದು । ರ್ವಚನಗ । ಳೇತಕೆ ॥
ಮತ್ತೆ ದಾ । ರಿಯ ಬಿಟ್ಟು । ಬಿಮ್ಮನೆ ।—ಇಲ್ಲಿಂ ।
ದತ್ತತ್ತ । ನಡೆ ನಡೆ । ಸುಮ್ಮನೆ ॥ ೧೦೦ ॥

ಜಟಾಯು—

ಭಕ್ಷಿಸಿ । ದನಕ ಹೋ । ಗೆನು ನಿನ್ನ ।—ಯೆಂದು ।
ಪಕ್ಷೀಂದ್ರ । ಜೊಡೆದ ಪೆ । ಟ್ಟಿಗೆ ಮುನ್ನ ॥
ರಾಕ್ಷಸ । [1]ಕಡುನೊಂದು[1] । ಬೆದರಿದ ।—[2]ಇಪ್ಪ ।
ತ್ತ[2]ಕ್ಷಿಗ । ಳೊಳು ಕಿಡಿ । [3]ಗೆದರಿ[3]ದ ॥ ೧೦೧ ॥

ರಾವಣ—

ಬಾಣವ । ಖಗಪತಿ । ಗೆಸೆದನು ।—ಪಕ್ಷಿ ।

ಜಟಾಯು—

ತ್ರಾಣದಿಂ । ದದನು ಖಂ । ಡಿಸಿದನು ।

---

1 ನದಳಂಡು (ಅ) 2 ಎರಡ (ಅ) 3 ಯುಗುಳಿ (ಅ)

ರಾವಣ—

ಕಾಣುತ್ತ । ಗದೆಯ ಬಿ । ಸಾಡಿದ ।—ಹಕ್ಕಿ ।

ಜಟಾಯು—

ಕೇಣದಿಂ । ದಲೆ ತುಂಡು । ಮಾಡಿದ ॥ ೧೦೨ ॥

ರಾವಣ—

ಅಬ್ಬರಿ । ಸುತ ಹಿಂದೆ । ತಿರಿಗಿದ ।—ಮತ್ತೆ ।
ಕಬ್ಬಿ ಕೈ । ಮುಷ್ಟಿಯೊ । ಳೆರಗಿದ ॥
ಇಬ್ಬರು । ಸರಿನಾವು । ಶಕ್ತಿಗೆ ।—ಕಾದು ।
ವೊಬ್ಬೊಬ್ಬ । ರೊಂದೊಂದು । ಯುಕ್ತಿಗೆ ॥ ೧೦೩ ॥

[1]ಮರ್ಮವಿ । ಡಿದು[1] ಕಾ । ದುವ ನಾವು ।—ಸತ್ಯ ।
ಧರ್ಮ ಯು । ದ್ಧದಲಿ ಬಾ । ರದು ನೋವು ॥
ವರ್ಮವಿ । ಡಿದು ಕಾ । ದಿದೆವಲ್ಲ ।—[2]ಸೋ ।
ಲೊಮ್ಮೆಗೇ । ಲೊಮ್ಮೆ ಕಾ । ಣಿಸಿತಲ್ಲ[2] ॥ ೧೦೪ ॥

ಎನ್ನಸು । [3]ವುಂಗುಟ[3] । ದೆಡೆಯಲ್ಲಿ ।—ಹಕ್ಕಿ ।
ನಿನ್ನ ಪ್ರಾ । ಣವದಾವ । ಕಡೆಯಲ್ಲಿ ॥

ಜಟಾಯು—

ತನ್ನಸು । ಬಲರೆಂಕೆ । ಯಡಿಯಲ್ಲಿ ।—ಸತ್ಯ ।
ವೆನ್ನುವೆ । ಯೆರಡಿಲ್ಲ । ನುಡಿಯಲ್ಲಿ ॥ ೧೦೫ ॥*

೩೩ ರಾಗ ಸೌರಾಷ್ಟ—ತ್ರಿವುಡೆತಾಳ ೨

ಮಾಯಕದ ನುಡಿ । ಯೆಂದು ತಿಳಿಯದೆ ।
ಕಾಯಮರ್ಮವ । ನುಸುರೆ ರಾಕ್ಷಸ ।
ರಾಯ ಬಡಿಯಲು । ಬಿದ್ದನಾಗ ಜ । ಟಾಯು ಶರಣ ॥ ೧೦೬ ॥

---

1 ಧರ್ಮವಾದದಲಿ (ಅ) 2 ಸೋಲ್ಗಲವೊಮ್ಮೆಗೂ ಕಾಣಿಸಲಿಲ್ಲ (ಕಾ) 3 ವಂಗುಷ್ಠ (ಅ)
* ಹಕ್ಕಿ ಪ । ಕ್ಷಿಯ ಪಕ್ಷಜಾತಿಗೆ । ಬಲ । ರೆಕ್ಕೆಯೊಳಿಹುದೆಂಬ ಮಾತಿಗೆ ।
ರಾಕ್ಷಸ । ನದ ಕೇಳಿ ಗ್ರಹಿಸಿದ । ಪಕ್ಷಿ । ಸಿಕ್ಕಿದನೆಂದ್ದುರ್ಪ ತಾಳಿದ ॥
ಮಾಯು ಖ । ತಿಯೊಳದರ ಬಡಿದನು । ಪಕ್ಷಿ । ತ್ರಾಣಗುಂದಿಯೆ ಭೂಮಿಗೊರಗಿದನು । (ಅ)

ಆಹ ಕೆಟ್ಟೆನು । ಕೆಟ್ಟೆನಕಟೀ ।
ಕಾಯದುಷ್ಕೃತ । ಫಲವೊ ನಾನೀ ।
ರಾವಣನ ಕರ । ಹತಿಯೊಳಳಿವರೆ । ಹಾ ವಿಧಾತ ॥ ೧೦೭ ॥

ಎಂದು ಮರುಗುತ । ನಯನ ವಾರಿಯೊ ।
ಳಂದು ಮಿಡಿದಂ । ಘ್ರಿಯಲಿ ಹೊರಳಲು ।
ಮಂದಗಮನೆಯು । ನುಡಿದಳಾ ವಿಹ । ಗೇಂದ್ರಗಂದು ॥ ೧೦೮ ॥

ಸೀತೆ—

ವರವ ಕೊಟ್ಟಳು । ಸೀತೆ ರಾಮನ ।
ಚರಣವನು ಕಂ । ಡರುಹುವನಕವು ।
ಮರಣವಿಲ್ಲೆನೆ । ದುರುಳ ಕೊಂಡಂ । ಬರದಿ ನಡೆದ ॥ ೧೦೯ ॥

೩೪ ಕಂದ

ದುರುಳಂ ಮಾಯದಿ ಸೀತಾ
ತರುಣಿಯ ತಾನೊಯ್ದನೆತ್ತಿಕೊಂಡಂಬರದೊಳ್ ।
ಶರಧಿಯ ದಾಂಟುತ ಲಂಕಾ
ಪುರಕೆಯ್ದಲ್ಕಿತ್ತ ರಾಮಗನುಜಂ ಪೇಳ್ದಂ ॥ ೧೧೦ ॥

(ಜಟಾಯು ರಾವಣರ ನಿಷ್ಕ್ರಮಣ—ರಾಮಲಕ್ಷ್ಮಣರ ಪ್ರವೇಶ)

೩೫ ರಾಗ ಘಂಟಾರವ—ಜಂಪೆತಾಳ ೩

ಲಕ್ಷ್ಮಣ—

ರಾಮು ಸಾ । ಕೇತಪತಿ । ಕೇಳ್ ಕಮಲ । ನೇತ್ರ ॥ ಪಲ್ಲವಿ ॥

ನೀ ಮೃಗವ । ಬೆಂಬತ್ತಿ । ಪೋದವೋ । ಲೆನ್ನೊಡನೆ ।
ಆ ಮಹಾ । ಜನಕಸುತೆ । ಅಸುರನುಲಿ । ಕೇಳ್ದು ॥ ೧೧೧ ॥

ಕಠಿಣತರ । ಮಾತುಗಳ । ಕಾಂತೆ ಪೇ । ಳ್ದುದರಿಂದ ।
ಅಟವಿಗೆ । ಯ್ತಂದೆ ನಾ । ನಿನ್ನರಸ । ಲೆಂದು ॥ ೧೧೨ ॥

ಅಂಜುವಳು । ಜನಕಸುತೆ । ಯೊಬ್ಬಳೇ । ವನದೊಳಗೆ ।
ಕಂಜಸಖ । ಕುಲಜಾತ । ಕೀರ್ತಿವಿ । ಖ್ಯಾತ ॥ ೧೧೩ ॥

ಎನುತ ಪೇ । ಳ್ದುದ ಕೇಳಿ । ಘನಮಹಿಮ । ನಿಂತೆಂದ ।

ರಾಮ—

ಅನುಜ ಲ । ಕ್ಷ್ಮಣ ವೀರ । ಪೋಗಬೇ । ಕಯ್ಯ ॥ ೧೧೪ ॥

೩೬ ವಾರ್ಧಿಕ ಷಟ್ಪದಿ

ಮೃಗವ ಕೊಂದಾ ದಶರಥಾತ್ಮಜರು ಬದಲೊಂದು
ಮೃಗವ ನಿರ್ಮಿಸಿಕೊಂಡು ಜಾನಕಿಗೆ ಕೊಡಲೆಂದು
ಬಿಗೆ ವಹಿಲದಿಂ ಬಂದು ನೋಡಿದರೆ ಪರ್ಣಶಾಲೆಯೊಳಾಕೆಯಿಲ್ಲದಿರಲು ।
ಹಗಲು ಕತ್ತಲೆಯಾಯ್ತು ಸಿಡಿಲೆರಗಿದಂತೆ ನಾ
ಲಗೆ ಸೆಳೆದುದೆದೆಯಾರಿ ಲಕ್ಷ್ಮಣಂ ನಡುಗಿ ಕೈ
ಮುಗಿದು ನಿಂದಿರೆ ಸೀತೆಯೇನಾದಳೋ ಯೆಂದು ತಮ್ಮಗಬುಜಾಕ್ಷ ನುಡಿದ
॥ ೧೧೫ ॥

೩೭ ರಾಗ ನವರೋಜು—ಏಕತಾಳ ೬

ಬಾಲೆಯು । ರ— । ಮಣಿಪ । ರ್ಣ— । ಶಾಲೆಯೊ । ಳೀ— । ತಕೆ ಮು । ನ್ನ— ।
ಕಾಣಲು । ಬಾ— । ರಳು ಎ । ನ್ನ— । ಪ್ರಾಣಸ । ಖಿ— ।
ಪದ್ಮಮು[1] । ಖಿ— । ॥ ೧೧೬ ॥

ಜನಕಸು । ತೇ— । ಜನವಿನು । ತೇ— । ಮನಸಿಜ । ಮೋ— ।
ಹನೆ ರುಚಿ । ರೇ— ।
ಕನಕಮ । ಯ— । ತನುಪುಳ । ಕೇ— । ಮುನಿನಮಿ । ತೇ— ।
ಮಮ ಮನಿ । ತೇ— ॥ ೧೧೭ ॥

ಎಲ್ಲಿಗೆ । ಪೋ— । ದಳೊ ಸೀ । ತೆ— । ಎನ್ನಯ । ಮೋ— ।ಹನೆ
ಪ್ರೀ । ತೆ— ।
ಮಲ್ಲಿಗೆ । ಗಂ— । ಧಿಯ ಕಾ । ಣ— । ದೆನ್ನದು । ನಿ— ।ಲ್ಲದು ಪ್ರಾ । ಣ—
॥೧೧೮॥

೩೮ ಕಂದ

ಎಡಬಲ ದಿಕ್ಕಿನೊಳೆಲ್ಲಂ
ಪುಡುಕಿದರೂ ಕಾಣದಿರಲು ಬಲುದುಃಖಿಸುತಂ ।

---

1 ರಮುಸು (ಅ)

ಮಡದಿಯ ಗುಣವಂ ಪೊಗಳುತ
ಒಡನಿರ್ದನುಜಂಗೆ ಪೇಳ್ದ ಕಡುಮನದಿಂದಂ || ೧೧೯ ||

೩೯ ರಾಗ ಸೌರಾಷ್ಟ—ಮಟ್ಟೆತಾಳ ೧

ಸಹಜ ಲಕ್ಷ್ಮ | ಣ—| ಸರಸಿಜೇಕ್ಷ | ಣ—|
ಮಹೀತಳಸು | ತೆ—| ಮಂಜುಳಾಕಾ | ರೆ—|
ಮಹಿತಕಾರ | ಣೆ—| ಹಿಮಕರಾನ | ನೆ—|
ಗಹನದಿ ಬಿ | ಟ್ಟು—| ಮೋಸವಾಯಿ | ತು— || ೧೨೦ ||

ಎತ್ತಹೋದ | ಳೊ—| ಏನನಾದ | ಳೊ—|
ಮತ್ತಕಾಶಿ | ನಿ—| ಮಂದಗಾಮಿ | ನಿ—||
ಪೃಥ್ವಿಜಾತೆ | ಯು—| ಕಾಣದೆನ್ನ | ಯ—|
ಚಿತ್ತಚಂಚ | ಲ—| ವಾಯಿತಲ್ಲ | ಯ್ಯ— || ೧೨೧ ||

೪೦ ಕಾಂಭೋಜಿ—ಜಂಪೆತಾಳ ೧, ೨

ಅಡವಿ ಗಿಡ | ಮರ ಕಲ್ಲು | ಗಳು ನೋಡೆ | ಅರಸಿನದ |
ಪುಡಿಯಂತೆ | ತೋರುತಿದೆ | ತಮ್ಮ—|
ಒಡಲೊಳುರಿ | ತಾಪ ಬೇ | ರ್ವಿಡಿದು ಜಠ | ರಾಗ್ನಿಯಲಿ |
ನಡುಗುತಿದೆ | ಕೈಕಾಲು | ತಮ್ಮ— || ೧೨೨ ||

ನುಡಿವೆನೆಂ | ದರೆ ಗಂಟ | ಲೆಡೆಗೆ ಕರ | ವೆರಡೊತ್ತಿ |
ಪಿಡಿದಂತೆ | ನೋಯುತಿದೆ | ತಮ್ಮ—|
ಮಡದಿ ಜಾ | ನಕಿಯೆಂಬ | ರತುನವನು | ಕಾಣದಡಿ |
ಯಿಡಲಾರೆ | ನಯ್ಯಯ್ಯೊ | ತಮ್ಮ || ೧೨೩ ||

ತಂದೆತಾ | ಯ್ಗಳ ಬಂಧು | ಬಳಗವೆ | ಲ್ಲವ ಬಿಟ್ಟು |
ಒಂದೇ ಮ | ನಸ್ಸಿನಲಿ | ತಮ್ಮ—|
ಎಂದಿಗಾ | ದರು ಎನ್ನ | ಪಾದವೇ | ಗತಿ | ತನಗೆ |
ಎಂದು ನಂ | ಬಿದಳಲ್ಲೊ | ತಮ್ಮ— || ೧೨೪ ||

ಮುಂದುವರಿ | ಯಿತು ಕಾರ್ಯ | ಕಪಟಮೃಗ | ವೆಸನದಲಿ |
ಬಂದು ಕೇ | ಡಾಯ್ತಲ್ಲ| ತಮ್ಮ—|

ಇಂದು ನೀ । ಏನ ಪೇ । ಳಿದರು ರಾ । ಕ್ಷಸರ ನಿ ।
ರ್ಬಂಧಕ್ಕೆ । ಸಿಕ್ಕಿದಳು । ತಮ್ಮ— ॥ ೧೫ ॥

ಹಾಳುಬದು । ಕಿಗೆ ಹೋಗು । ವಾಗಲೇ । ನಿನ್ನೊಡನೆ ।
ಹೇಳಲಿ । ಲ್ಲವೆ ಮೊದಲೆ । ತಮ್ಮ—।
ಕೇಳು ಮೇ । ಲರಿಯದೆ । ನ್ನಯ ಸತಿಯು । ಬಿರುನುಡಿಯ ।
ಕೇಳಿ ನೀ । ಬರಬಹುದೆ । ತಮ್ಮ— ॥ ೧೬ ॥

ಏಳು ಜ । ನ್ಮಾಂತರದಿ । ತಪವ ಗೈ । ದರು ಇಂಥ ।
ಬಾಲೆ ಕೈ । ಸೇರುವಳೆ । ತಮ್ಮ—।
ಖೂಳ ರ । ಕ್ಕಸರ ನಿ । ರ್ಬಂಧ ದುಃ । ಖವನೆಂತು ।
ತಾಳುವಳು । ದಿನದಿನದಿ । ತಮ್ಮ— ॥ ೧೭ ॥

೪೧ ರಾಗ ಕೇದಾರಗೌಳ—ಮಟ್ಟೆತಾಳ ೩

ಲಕ್ಷ್ಮಣ—
ಅಗ್ರಜಾ ಮ । ಹಾಪರಾಕ್ರ । ಮ—। ಧೀರ ವೀರ ॥ ಪಲ್ಲವಿ ॥

ಪುಂಡರೀಕ । ವದನ ಸುಪ್ರ । ಚಂಡಸಾಹ । ಸಾಗ್ರಗಣ್ಯ ।
ಕುಂಡಲೀಂದ್ರ । ಶಯನ ಭೂ । ಮಂಡಲಾಧಿ । ನಾಯಕ ಶ್ರೀ ।
ಖಂಡಪರಶು । ಮಿತ್ರ ರಾಜಿ । ತ—। ಸಕಲ ಬ್ರ ।
ಹ್ಮಾಂಡ ಸರ್ವ । ಲೋಕಪೂಜಿ । ತ—। ನಿರುತ ಮಾ ।
ರ್ತಂಡಕೋಟಿ । ತೇಜ ಭ್ರಾಜಿ । ತ—। ಧೀರ ವೀರ ॥ ೧೮ ॥

ಲೋಕಮಾತೆ । ಸೀತೆ ಸಪ್ತ । ಲೋಕ ಮಧ್ಯ । ಲೋಕ ಶಿವನ ।
ಲೋಕ ಬ್ರಹ್ಮ । ಲೋಕ ವಿಷ್ಣು । ಲೋಕದ । ಲ್ಲಿದ್ದರೆಯೂ ।
ನಾ, ಕರೆದು । ಕೊಂಡು ಬರುವೆ । ನು—। ನಿನ್ನ ಪಾದ ।
ದಾ, ಕಮಲ । ದೆಡೆಗೆ ತೋರ್ವೆ । ನು—। ಇದಕೆ ಚಿಂತೆ ।
ಏಕೆ ಧೈರ್ಯ । ವಾಗಿರ್ಪೆ ನೀ । ನು—। ಧೀರ ವೀರ— ॥ ೧೯ ॥

ಎಂದು ಲಕ್ಷ್ಮ । ಣಾಂಕ ಕೋಪ । ದಿಂದ ಧನುಶ । ರಗಳ ಪಿಡಿದು ।
ವಂದಿಸುತ್ತ । ಲಣ್ಣನಡಿಗೆ । ಮುಂದೆ ಪರ್ಣ । ಶಾಲೆಯಿಂದ ।

ಬಂದು ಪೊರಡ । [1]ಲಾಗ ಕಾಣು । ತ— । ರಾಮಚಂದ್ರ ।

ರಾಮ—

ನಂದು ವತ್ಸ । ನಿಲು ನಿಲೆನ್ನ । ತ—ಸಂ । ತೈಸಿ ನಡೆದ ।
ರೊಂದೆ ಮನದಿ । ಸತಿಯನ[1]ರಸು । ತ— ॥ ೧೩೦ ॥

೪೨ ಕೇದಾರಗೌಳ—ಜಂಪೆತಾಳ ೩

[ಇದು ಸಮಯ । ವಲ್ಲ ತ । ಮ್ಮ—। ನೀ ಪೋಪ ।
ಹದನವೇ । ನಯ್ಯ ಧ । ರ್ಮ—।
ಮೊದಲೆ ಜಾ । ನಕಿಯನಗ । ಲಿ—। ಮನದೊಳಗೆ ।
ಕುದಿಯುತಿದೆ । ವಿರಹದ । ಲ್ಲಿ— ॥ ೧೩೧ ॥

ಈ ಸಮಯ । ದೊಳಗೆನ್ನ । ನು—। ನೀ ಬಿಟ್ಟು ।
ಬೇಸರದೆ । ಪೋಪುದೇ । ನು—।
ಆಸೆ ಇ । ನ್ನೇನು ತನ । ಗೆ—। ಎಲೊ ತಮ್ಮ ।
ರೋಷ ಬೇ । ಡನಿತು ನಿನ । ಗೆ—] ॥ ೧೩೨ ॥

೪೩ ದ್ವಿಪದೆ

ರಾಮಲಕ್ಷ್ಮಣರುಗಳು ಘನಪರಾಕ್ರಮರು
ಆ ಮಹಾ ಪಂಚವಟಿಯಿಂದ ತೆರಳಿದರು ॥ ೧೩೩ ॥

ಕಾನನಾಂತರದಿ ತಪಸಿರುವ ಋಷಿಗಳನು
ಜ್ಞಾನಶರಧಿಗಳೆನಿಪ ಋಷಿಪತ್ನಿಯರನು ॥ ೧೩೪ ॥

ಕಾಣುತಲೆ ಬೆಸಗೊಳುತ ಕಂಡ ಖಗಮೃಗವ
ಮಾನಿನಿಯ ಕೇಳಿದರು ಮತ್ತೆ ಕೌತುಕವ ॥ ೧೩೫ ॥

ಹುಲಿ ಕರಡಿ ಸಿಂಹ ಶಾರ್ದೂಲಗಳ ನೋಡಿ
ಕಳವಳಿಸದತಿಧೈರ್ಯದಿಂದ ಮಾತಾಡಿ ॥ ೧೩೬ ॥

---

1 ಲೊಂದುಗಳಿಗೆ ಒಡಂಬಡಿಸಿದ ॥
ತಮ್ಮನ ಮನದಿಂದ ಕೋಪವೆಲ್ಲ ತಣಿಸಿದ ।
ನಡೆದರ್ಪ । ರೊಂದು ಬುದ್ಧಿಯಿಂದ (ಅ)

ಅರಸಂಚೆ ನವಿಲು ಕೋಗಿಲೆ ಚಕೋರಗಳ
ಹರಿಯುತಿಪ ನದಿಗಳನು ದಾಟಿದರು ಬಹಳ || ೧೩೭ ||*

ನಾನಾ ಪ್ರಕಾರದಲಿ ಅರಸಿ ನಡೆತಂದು
ಆ ನರೇಶ್ವರರು ಘೋರಡವಿಯಲಿ ಸಂದು || ೧೩೮ ||

ದೂರ ಪಥದಲಿ ನಡೆದು ದಣಿದುದತಿ ಕಾಯ
ದಾರಿಯಲಿ ಕಂಡರಾ ಮಲಗಿದ ಜಟಾಯ || ೧೩೯ ||

ರಾಮ—

ಈತ ನಮ್ಮಯ್ಯನಿಗೆ ಸಖನರುಣತನುಜ
ಮಾತನಾಡಿಸು ತನ್ನ ಸಂಪಾತಿಗನುಜ || ೧೪೦ ||

ಆರಿಂದ ಬಂತು ನಿನಗೀ ಮರಣದೊಸಗೆ
ಕಾರಣವ ನಮಗೆ ತಿಳುಹೆಂದು ದಯವೆಸಗೆ || ೧೪೧ ||

[1]ಕಾರಣಿಕರಿಂತು ಕೇಳಿದರು ಸವಿಮಾತ
ಶ್ರೀರಾಮನೇ ಎಂದು ನೆರೆ ತಿಳಿದನಾತ[1] || ೧೪೨ ||

೪೪ ರಾಗ ತೋಡಿ—ಅಷ್ಟತಾಳ ೩೪

ಜಟಾಯು—

ಪಾಲಯ । ರಘುವೀರ । ಪರನುಪ । ವಿತ್ರ ।
ಮೂಲೋಕ । ದೊಡೆಯನೆ । ಕೇಳು ಬಿ । ನ್ನಪವ || ಪಲ್ಲವಿ ।

ಖೂಳ ರಾ । ವಣ ಕದ್ದು । ಕೊಂಡು ಜಾ । ನಕಿಯನ್ನು ।
ಮೇಲುಮಾ । ರ್ಗದಿ ಪೋಪ । ವೇಳ್ಯದಿ । ನಾನು ।
ಬಾಲೆ ಕೂ । ಗುವ ಧ್ವನಿ । ಕೇಳಿ ರಾ । ವಣನೊಳು ।
ಕಾಳಗಕಿ । ದಿರಾಗಿ । ಕಾದಿದೆ । ಪೋಗಿ || ೧೪೩ ||

---

* ಹರಿಣನರಿ ಶರಭ ಕಾಡ್ಕೋಣಗಳ ಹಿಂಡ । ಪರಿಪರಿಯ ಬಿಲಗಳಲಿ ಮೆರೆವ ಮೃಗತಂಡ (ಓ)

1 ಶ್ರೀರಾಮನೇ ಬಂದ । ನೆಂಬುದನು ತಿಳಿದು । ಭೂರಿಭಯಭಕ್ತಿಯೊಳ। ಗಿಂತೆಂದನೊಲಿದು (ಅ)

ಮುಂಚೆ ಸಂ । ಗರದಲಿ । ಗೆದ್ದಿನಾ । ನಾವೇಲೆ ।
ವಂಚನೆ । ಯಿಂದೆನ್ನ । ಕೊಂದ ರಾ । ಜೇಂದ್ರ ॥
ಪಂಚಪ್ರಾ । ಣಗಳಡ । ಗುವ ತೆರ । ನಾಗೆ ಅರ ।
ಸಂಚಿಗ । ಮನೆ ಇದ । ನೆಲ್ಲವ । ನೋಡಿ ॥ ೧೪೪ ॥

ತರುಣಿ ಜಾ । ನಕಿ ನಿಮು । ಗರುಹಬೇ । ಕೆನಲು ನಾ ।
ನರಳುತ್ತ । ಲಿಹೆನಿಷ್ಟು । ದಿನ ಪರಿ । ಯಂತ ।
ಕರುಣವಿ । ದ್ದಿರಲೆಂದು । ಚರಣ । ದೆಡೆಗೆ ಬಿದ್ದು ।
ಮರಣವಿ । ಟ್ಟ ಜಟಾಯು । ಶರಣರ । ಶ್ರೇಷ್ಠ ॥ ೧೪೫ ॥

೪೫ ಕಂದ

ಸುರಪುರಕಯ್ದಿದ ಖಗಪತಿ
ವರಪಿತಗೆ ಸಮಾನನೆಂದು ಸಂಸ್ಕಾರಗಳಂ
ವಿರಚಿಸಿ ಮತ್ತಾಸೀತೆಯು
ದುರುಳನ ವಶವಾದಳೆಂಬ ಭ್ರಮೆಯೊಳಗೆಂದಂ ॥ ೧೪೬ ॥

೪೬ ರಾಗ ಶೋಕವರಾಳಿ—ಸಾಂಗತ್ಯ—ರೂಪಕತಾಳ

ರಾಮ—

ಸ್ಮರನರ । ಗಿಣಿ ಸತಿ । ಯರ ಶಿರೋ । ಮಣಿ ದಶ ।
ಶಿರನ ವಶ । ವಾದಳ್ಳೆ ।—ತಮ್ಮ—॥
ದುರುಳ ಬಾ । ಧಿಸುವ ನಿ । ರ್ಬಂಧಕ್ಕೆ । ತಾ ಮೆಯ್ಯ ।
ಗುರಿಯಾಗಿ । ಸುವಳಲ್ಲೊ । ತಮ್ಮ— ॥ ೧೪೭ ॥

ಹರಿಣದ । ನೆವದಿಂದ । ಲೆನ್ನ ಕ । ಳುಹಿ ನಿನ್ನ ।
ಭರದಿಂದ । ಟ್ಟಿದಳಲ್ಲೊ । ತಮ್ಮ—॥
ತರುಣಿಯ । ರಂತರಂ । ಗದ ನಿಜ । ವಾರಿಗೂ ।
ಅರಿವಡ । ಸಾಧ್ಯವೈ । ತಮ್ಮ— ॥ ೧೪೮ ॥

ತಾನೇ ಬ । ಯಸಿ ಪೋದ । ಳೋ ಬಲಾ । ತ್ಕಾರದಿಂ ।
ದಾನವ । ನೊಯ್ದನೊ । ತಮ್ಮ—॥

ಏನೆಂದು | ತಿಳಿಯಲಾ | ರದು ಅಂತ | ರಂಗಕೆ |
ಮಾನಿನಿ | ಯ ಮನಸ್ಸು | ತಮ್ಮ || ೧೪೯ ||

ಮೂಢ ರಾ | ಕ್ಷಸ ತನ್ನ | ಕಾಮುಕ | ತನ[1]ದಿ ಕೈ |
ಮಾಡದಿ | ರುವನೇ[1]ನೊ | ತಮ್ಮ—||
ಕಾಡಿನೊ | ಳಗೆ ತಿಳಿ | ಗೇಡಿಂದ | ಸತಿಯ ಹೋ |
ಗಾಡಿ ಕೊಂ | ಡಂತಾಯ್ತು | ತಮ್ಮ— || ೧೫೦ |

ರಾವಣ | ನೆಂಬ ನಿ | ಶಾಚರ | ನಿರುವಂಥ |
ಠಾವನ | ರಿಯೆವಲ್ಲೊ | ತಮ್ಮ—||
ಈ ವಿಪಿ | ನದಿ ಸುತ್ತಿ | ದಣಿದೆವ | ಲ್ಲದೆ ಮುಂದೆ |
ಜೀವವು | ಳಿಯುದಲ್ಲೊ | ತಮ್ಮ— || ೧೫೧ ||

### ೪೭ ವಾರ್ಧಿಕಷಟ್ಪದಿ

ಲಕ್ಷ್ಮಣ—

ರಘುವೀರ ಕೇಳಂಬುನಿಧಿ ಮೇರೆದಪ್ಪಿದರು
ಹಗಲರಸನಿರುಳುದಿಸಿ ಬೆಳಗಿದರು ಜನಕಜೆಯು
ಉಗುರಿಡೆಗೆ ಕಲ್ಮಶವು ಸೋಕುವುದೆ ಕಪಟ[2]ಲಂಡಿಗಳ ದುರ್ನುಡಿಯೇತಕೆ |
ಹಗರಣವ ಬಿಡು ಮುಂದೆ ನಡೆ ಯೆಂಬ ತನ್ನತ
ಮ್ಮಗೆ ಮೆಚ್ಚಿ ನಡೆತಪ್ಪ ವೇಳೆಯೊಳ್ ಮಾರ್ಗದಲಿ
ಪಗೆತನದಿ ಬಾಯ್ಬಿಡುತಲೊದರುತ್ತ ಶೂರ್ಪನಖಿನುಗಳಯೋ
ಮುಖಿ ಕಂಡಳು || ೧೫೨ ||

(ಅಯೋಮುಖಿಯ ಪ್ರವೇಶ, ಅಟ್ಟಹಾಸದಿಂದ)

### ೪೮ ರಾಗದೇಶಿ—ಅಷ್ಟತಾಳ

ಅಯೋಮುಖಿ—

ತಿನಿಸು ಸಿ | ಕ್ಕಿತು ಯೆನ | ಗೊಂದು — | — ಅವು |
ತಣವ ಮಾ | ಡುವೆ ಬಂಧು | ಬಳಗಕ್ಕೆ | ಇಂದು || ಪಲ್ಲವಿ ||

---

1 ದಿಂದಾಕೆಗೆ ಮಾಡುವನೇ (ಅ) 2 ದುರ್ಮುಖರಿಂದ ಭಯವೇತಕೆ (ಅ)

ಮನುಜರ | ಮಾಂಸವ | ಮೆಲದೆ — | — ಬಹು |
ದಿನ ವಾಯಿ | ತದರಿಂದ | ತೊಡುವೆದ್ದು | ನವೆದೆ ||
ಮನೆಗೊಯ್ವೆ | ನಿವರನ್ನು | ಕೊಲದೆ — | — ಭೂತ |
ಗಣಗಳಿ | ಗುಣಬಡಿ | ಸುವೆ ರಕ್ತ | ಕೊಳದೆ || ೧೫೩ ||

ಎದೆಯ ಗುಂ | ಡಿಗೆಯನ್ನೆ | ಮುರಿಜು — | —ತು |
ಪ್ಪದಲಿ ಜಾ | ಳಿಸುತ ಯೆ | ಣ್ಣೆಯಲಿಕ್ಕಿ | ಹುರಿದು ||
ಬದಿಯೆಲು | ಬುಗಳ ಗು | ದ್ದ್ಯರೆದು — | — ಎನ್ನ |
ಮದುವೆಯಾ | ದವನ ಸಂ | ಗಡ ತಿಂಬೆ | ನೆರೆದು || ೧೫೪ ||

ಗಂಟಲ | ಮುರಿದಿವ | ರುಗಳ — | — ಮಾಂಸ |
ದೆಂಟು ಬ | ಗೆಯುಲಿ ಮಾ | ಡುವೆ ಕಜ್ಜಾ | ಯಗಳ ||
ಪಂಟಿಗೆ | ಸೊಗಸು ಚ | ರ್ವಗಳ — | — ಎನ್ನ |
ನೆಂಟರಿ | ಷ್ಟರಿಗಿಕ್ಕು | ವೆನು ಶಾಕಾ | ದಿಗಳ || ೧೫೫ ||

ತಿಂಬೆನೆ | ನುತ ಬಾಯ | ಕಳೆದು — | — ಬಂದ |
ಳೆಂಬುದ | ಲಕ್ಷ್ಮಣ | ಮನದಲ್ಲಿ | ತಿಳಿದು ||

ಲಕ್ಷ್ಮಣ—

ಅಂಬ ಬಿ | ಲ್ಲಿನೊಳಿಟ್ಟು | ಸೆಳೆದು — | — ಕೊಲ್ವೆ |
ನೆಂಬಷ್ಟ | ರೊಳು ರಾಮ | ನಿಲಿಸಿದ | ನೊಲಿದು || ೧೫೬ ||

ರಾಮ—

ಕೊಲಬಾರ | ದಯ್ಯ ಈ | ಹೆಣ್ಣ — | — ಕೊಂದು |
ಫಲವೇನು | ಸ್ತ್ರೀಹತ್ಯೆ | ಗಳು [1]ಲೇಸ | ಲ್ಲ[1]ಣ್ಣ ||
ಕಳೆದು ಬಿ | ಟ್ಟರೆ ಸಾಕು | ಬಣ್ಣ — | — ಯೆನ್ನು |
ತೊಳಗೊಳ | ಗಿಂದ ಸಂ | ಚನೆ ಗೆಯ್ದ | ಕಣ್ಣ* || ೧೫೭ ||

---

1 ಪಬೇಡ (ಓ)

* ತಾಟಕಿಯನು ಹೇಗೆ ಹಿಂದೆ—ನೀನು। ಹಾಟೋಪದೊಳಗೇಕೆ। ಸಮರದಿ ಕೊಂದೆ ॥
ಸೂಟಿಯಿಂ ಬಪ್ಪಳು ಮುಂದೆ—ಇಂಥ। ನಾಟಕತನದ ಮಾತೆನ್ನೊಳೇಕೆಂದೆ ॥
ಗಾಧಿಸುತನ ಮಾತಿನಿಂದ—ನಾ। ನಾದುರಾತ್ಮೆಯ ಛೇದಿಸಿದೆನೆಲೆ ಕಂದ ॥
ಈ ದುಷ್ಟೆಯಳನದರಿಂದ—ಮಾನ | ಛೇದಿಸಿ ಜತನದಿಂ ನೀ ಕಳುಹೆಂದ ॥ (ಅ)

೪೯ ವಾರ್ಧಿಕ ಷಟ್ಪದಿ

ಅಣ್ಣನಂತರ್ಭಾವವರಿತು ಲಕ್ಷ್ಮಣನವಳ
ಉನ್ನತದ ಕುಚವೆರಡ ತರಿದು ನಾಸಿಕವ ಚ್ಛೈ
ತನ್ಯದಿಂ ಕತ್ತರಿಸಲಾಗಧೋಮುಖಿ ದನುಜೆ ತನ್ನ ತಾಯಂ ಪೋಲ್ದಳು ।
ಬನ್ನಬಡುತವಳು ಸಾಗಿದಳು ಮೊರೆಯಿಡುತಲಿವ
ರನ್ನು ಬಯ್ಯು[1]ತ್ತಸಲೆ ರಾಮಲಕ್ಷ್ಮಣರುಗಳು
ಇನ್ನು ಮುಂದೊತ್ತಿಬರೆ ಖಳಕಬಂಧನ ಕರಗಳನ್ನು ಕತ್ತರಿಸಲಾಗಿ[1] ॥ ॥ ೧೫೮ ॥

(ದೇಹ ಕಾಣದಂತೆ ವಸ್ತ್ರ ಮುಸುಕಿಕೊಂಡ ಕಬಂಧನ ಪ್ರವೇಶ)

೫೦ ರಾಗ ಶಂಕರಾಭರಣ—ಝಂಪೆ ತಾಳ ೧

ಕಬಂಧ—

ಜಯ ಜಯ ಶ್ರೀ । ರಾಮಚಂದ್ರ । ಜಾನಕೀಶ । ಸುಗುಣಸಾಂದ್ರ ।
ಮಾಯಾಮೋಹ । ರಹಿತ, ಶುಭ । ಕಾಯ ಪಾಹಿ । ಮಾಂ— ॥ ಪಲ್ಲವಿ ॥

ಹಿಂದಕೆ ದನು । ವೆಂಬ ಪೆಸರ । ಗಂಧರ್ವೇಶ । ನಯ್ಯ ನಾನು ।
ಅಂದಿಗಾ ದೂ । ರ್ವಾಸಮುನಿಯು । ತಂದ ಶಾಪ । ದಿ — ॥ ೧೫೯ ॥

ಬಂದೆನೀ ರಾ । ಕ್ಷಸರ ಜನ್ಮ । ಕೆಂದ್ರ ವಜ್ರ । ದಿಂದ ಶಿರವ ।
ನಂದು ತರಿದ । ಮೇಲೆ, ಕ । ಬಂಧನಾದೆ । ನು— ॥ ೧೬೦ ॥

ಇಂದು ಶಾಪ । [2]ಮುಕ್ತನಾಯ್ತು । ಬಂದುದಕೆ ನಿ । ಮಗೆ ನಮೋಸ್ತು[2]
ಮುಂದೆ ಶಬರಿ । ಪೇಳ್ವಳ್ ಪೋಗಿ । ರೆಂದ ಗಂಧ । ರ್ವ ॥ ೧೬೧ ॥

---

1 ತಮುಂದೆ ಬರೆ ಕಬಂಧಂ ತಡೆಯ। ಲಿನ್ನವನ ಕರವ ತರಿಯಲು। ಶಾಪದಿಂದೆದ್ದು ಕೈಮುಗಿಯುತಿಂತೆಂದನು (ಅ)

2 ವಿಮೋಚನೆ। ಹೊಂದಿಸು ನೀ ಕಾರ್ಯವೆಲ್ಲ

(ಕಂಬಧನ ನಿಷ್ಕ್ರಾಮ; ಶಬರಿಯ ಪ್ರವೇಶ)

[1]೫೧ ಕಂದ

ಕರುಣಿಸಿ ಮುಂದೆಯ್ತ್ತ ರಲಾ
ವರಶಬರಿಯು ಭಕ್ತಿಯಿಂದಲಾ ರಘುಪತಿಯಾ ।
ಚರಣಕೆ ನಮಿಸುತಲಂದಾ
ಗುರುಭಾವದೊಳಂಬುಜಾಕ್ಷಿ ಬಲು ನುತಿಸಿದಳು[1] ॥ ॥ ೧೬೨ ॥

೫೨ ರಾಗ ರೇಗುಪ್ತಿ—ಏಕತಾಳ

ಶಬರಿ—

ಪಾಲಯ । ಮಾಂಪಾಹಿ । ಪರಮಪ । ವಿತ್ರ— ।
ಕಾಲಭ । ಯನಾಶ ಶ್ರೀ । ಲೋಲ ವೈ । ಕುಂಠಾಧೀಶ ॥ ಪಲ್ಲವಿ ॥

ದುರ್ಜನ । ರ ವಿಘಾತ । ಸಜ್ಜನರ । ಸಂಪ್ರೀತ ।
ನಿರ್ಜರಗ । ಣವಂದಿತ । ಗರ್ಜನ ಸಿಂ । ಧುಸಮೇತ ( ? ) ॥ ೧೬೩ ॥

ಅಂಗಜಕೋ । ಟಿಲಾವಣ್ಯ । ಆಶ್ರಿತಜ । ನವರೇಣ್ಯ ।
ತುಂಗವಿಕ್ರ । ಮಕಾರುಣ್ಯ । ಸಂಗೀತಲೋ । ಲಾಗ್ರಗಣ್ಯ* ॥ ೧೬೪ ॥

ಮುಂದೆ ಹೋ । ಪೆಯೊಳ್ಮರುತ । ನಂದನನಿಂ । ಭಾನುಜಾತ ।
ನಿಂದ ರಾವ । ಣನ್ನ ಕೊಲಿಸಿ । ಬಂದಸಳ್ಕೆ । ನಿನ್ನರಸಿ ॥ ೧೬೫ ॥

೫೩ ರಾಗ ನವರೋಜು—ಏಕತಾಳ

ರಾಮ—

ಮಧುರತ । ರಾಂ—। ಬುಜಪದ । ನೇ—।
ಮದಗಜ । ಸ—। ನ್ನಿಭಗಮ । । ನೇ—।

---

1 ವಚನ ॥ ಕರುಣದಿ ಕಬಂಧಗೊಲಿದಾನಂದದಿಂದಾ ಕೋಮಲಕಾಯರಿರ್ವರುಂ ಶಬರಿಯಾಶ್ರಮಕೆ ನಡೆತರಲಾಗಿ ಶಬರಿ ಭಕ್ತಿಯಿಂದ ರಘುಪತಿಯ ಚರಣಕ್ಕೆ ಪೊಡೆವಟ್ಟು ಗುರುಭಾವದೊಳಂದು ಸ್ತುತಿಸಿದಳದೆಂತನೆ—

* ಕಂಬಧನೆಂದ ಮಾರ್ಗಿಗೆ । ಬಂದಕಾರ್ಯದ ನೀತಿಗೆ । (ಅ)

ಪದುಮಮುದ | ಳಾ—| ಯುತನಯ | ನೇ—|
ಪರಮಪತಿ | ವ್ರತೆ ಶಬ | ರೀ—|| || ೧೬೬ ||

ಪಂಚವ | ಟೀ—| ವನದೊಳ | ಗೆ—|
ಮಮ ರಮ | ಣೀ—| ಜನಕಸು | ತೆ—|
ವಂ[1]ಚನೆ | ಯಿಂ—| ಕದ್ದವ | ಳ—|
ನೊಯ್ದಿಹ | ರಾ—| ವಣ ಖೂ | ಳ—|| || ೧೬೭ ||

ಸೀತೆಯು | ಕಾ—| ಣದರಿಂ[1] | ದ—|
ಅರಸುತ | ಬಂ—| ದೆ ಕಬಂ | ಧ—|
[2]ನಾತನು[2] | [3]ಪೇ—| ಳಲು ನಮ | ಗೆ—|
ಬಂದೆವು | ನಾ—ವ್ | ನಿನ್ನೆಡೆ | ಗೆ[3]—||* || ೧೬೮ ||

ದಾರಿಯ | ದಾ—| ವುದು ತರು | ಣಿ—|
ತೋರಿಕೊ | ಡೆ—| ನಾರೀಮ | ಣಿ—|
ತಾರಣ | ಪ—| [4]ನೆಮಗೊಂ[4] | ದು—|
ನೀರೇ | ನೀ—| ತಿಳುಹಿಂ | ದು—|| || ೧೬೯ ||

ಶಬರಿ—

ರಾಘವ | ಕೇ—| ಳೀ ಪಥ | ದಿ—|
ಸಾಗಿದ | ರಾ—| ಪುರವನ | ದಿ—|
ಮೇಗೆ ಸ | ರೋ—| ವರ[5]ದಡ | ದಿ[5]—|
ತೋರುವು | ದೇ—| ಹಂಪೆಯ | ದು—* || ೧೭೦ ||

(ಶಬರಿಯ ನಿಷ್ಕ್ರಮಣ)

---

1 ಚಿಸುತ | ದಶಶಿರನು | ತಾನೊಯ್ದು | ಸೀತೆಯನು || ಆತನಕಾ | ರಣದಿಂ (ಅ)

2 ರೀತಿಯ (ಅ) ; ಪೇಳಿದ (ಅ) 3 ನಾ | ಕಿಗೆ ತರುಣಿ | ಪ್ರಾಣಸಖೀ | ಪರಮ ಸುಖಿ | (ಅ) 4 ರಿಯೆ ಮುಂ (ಅ)

* ಚಾರುಸರೋ | ವರದೆಡೆಗೆ | ಪೋಗಲು ಬೇ | ಕೀಗೆಮಗೆ (ಅ)

5 ವಿಹುದು (ಅ)

* ಸೃಷ್ಟಿಯೊಳುಳ್ಳ | ದುಷ್ಟರ ಗೆಲುವುದಕೆ | ಶಬರಿ | ಕೊಟ್ಟಳೊಂದಸ್ತ್ರವನು || (ಕಾ)

೫೪ ವಾರ್ಧಿಕ ಷಟ್ಪದಿ (ಅರ್ಧ)

[1]ವರಪತಿವ್ರತೆ ಶಬರಿಗೊಲಿದಾಗ ಶ್ರೀ[1]ರಾಮ
ಕರುಣಿಸುತ ಸದ್ಗತಿಯ ಮುಂದೆ ಪಂಪಾಸರೋ
ವರದೆಡೆಗೆ ಬಂದು ಮಜ್ಜನವೆಸಗಿ ಕಮಲವನು ತರುಣಿ
ಯೆಂದೇ ಭ್ರಮಿಸುತ ||* || ೧೭೧ ||

೫೫ ರಾಗ ನೀಲಾಂಬರಿ—ಏಕತಾಳ ೬

ರಾಮ—

ಜಲಜದ | ಳಾ—| ಯತನಯ | ನೆ—|
ಜಲಜಮು | ಖಿ—ಮ | ಹೀತನು | ಜೆ—|
ಜಲದೊಳ | ಗೇ—| ತಕೆ ಬಂ | ದು—|
ನೆಲಸಿಹ | ಳೈ—| ಸತಿಯಿಂ | ದು—|| || ೧೭೨ ||

ನಾರಿಯ | ಕ್ಕೈ—| ಗಳ ನೋ | ಡು—|
ತೋರುತಿ | ದೆ—| ಕುಚವೆರ | ಡು—|
ನೀರೊಳ | ಗೇ—| ತಕೆ ಬಂ | ದು—|
ಸೇರಿಹ | ಳೈ—| ಸತಿಯಿಂ | ದು—|| || ೧೭೩ ||

ಮಾನಿನಿ | ಯಂ—| ಜುವಳೆಂ | ದು—|
ಮಾನದಿ | ಕಾ—| ದಿರು ಯೆಂ | ದು—|
ನಾ ನಿನ | ಗಾ—| ಡಿದ ನುಡಿ | ಯ—|
ಆನದೆ | ಬಂ—| ದೆನ್ನೆಡೆ | ಯ—|| || ೧೭೪ ||

ಕಡು ಕಮ | ಲ—| ಸಖಕಿರ | ಣ—|
ಸುಡುತಿದೆ | ಮೈ—| ಯಾವರ | ಣ—|
ಗಿಡುಮರ | ನ— ತಂಪಿನೊ | ಳೊ—|
ಯ್ದಿಡು ಯೆ | ನ್ನ—| ಮಮ ಸಹ | ಜ—|| || ೧೭೫ ||

---

1 ಕರವ ಮುಗಿದಿಂತೆಂದ ಶಬರಿಗೊಲಿದಾ (ಅ)

* ಸ್ಮರನ ಬಾಣದ ವೇಧೆಯಿಂದ ಸಂತಪಿಸುತ್ತ |
ಮರಿದು ನಿಜದೇಹವಂ ಬಳಿಯೊಳಿಹ ನಿಜಸಹೋ |
ದರನೊಳುರೆ ಚಿತ್ತಚಾಂಚಲ್ಯದಿಂದುಸುರಿದಂ ಮನಬಂದ ತೆರದಿಂದಲಿ || (ಅ)

೫೬ ರಾಗ ಮೋಹನ—ತ್ರಿವುಡೆತಾಳ ೧

ಲಕ್ಷ್ಮಣ—

ರಘುವೀರಾಂ । ಬುಜವದ । ನ—ಈ । ಮರುಳುಮಾ ।
ತಿಗೆ ಯೇನೆಂ । ಬೆನು ಸುಜಾ ।ಣ—॥ ॥ ಪಲ್ಲವಿ ॥

ಇರುಳು ಮೂ । ಡುವನೆ ಸೂ । ರ್ಯ—ನೋ । ಡಲು ಚಂದ್ರ ।
ಕಿರಣವ । ಲ್ಲವೆ ಅಣ್ಣ । ಯ್ಯ—।
ಸರಸಿಜ । ದರಳಲ್ಲ । ವೇ—ಸೀ । ರೊಳು ಸೀತೆ ।
ಇರುವುದಂ । ಟೇ ರಾಘ । ವ— ॥ ೧೭೬ ॥

೫೭ ವಾರ್ಧಿಕ ಷಟ್ಪದಿ (ಅರ್ಧ)

ಇರದೆ[1] ಲಕ್ಷ್ಮಣನೊಡಂಬಡಿಸಲ್ಕೆ ಋಷ್ಯಮೂಕ
ಗಿರಿಯಿಂದ ಕಂಡು ವಾಲಿಯ ಭಯದಿ ಸುಗ್ರೀವ
ಸರಸಿಜೋದ್ಭವಸುತಾದಿಗಳೊಡನೆ ಹತ್ತಿರಕೆ ಕರೆದಾಗಳಿಂತೆಂದನು[1] ॥ ೧೭೭ ॥

(ರಾಮ ಲಕ್ಷ್ಮಣರು ರಂಗಸ್ಥಳಕಕ್ಷೆಯಲ್ಲಿ ನಿಂತಿರುತ್ತಾ ಸುಗ್ರೀವ ಹನುಮಂತ
ಮೊದಲಾದ ಕಪಿಗಳ ಪ್ರವೇಶ)

೫೮ ರಾಗ ಮಧ್ಯಮಾವತಿ—ಏಕತಾಳ ೪

ಗ್ರೀವ—

,ವಾನ । ರೇಶ್ವರ । ,ರೆಲ್ಲರು । ಕೇಳಿ ।
,ಏನು ಚೋ । ದ್ಯವಿದೆಂ ।, ದೆನ್ನೊಳು । ಪೇಳಿ ॥ ॥ ಪಲ್ಲವಿ ॥

,ತರಣಿಪ್ರ । ಕಾಶದಿಂ । ,ಪಂಪಾತೀ । ರಕೆ ಬಂದ ।
ಲ್ಲಿರುವರಿ । ರ್ವರು ವೀರ । ,ರಾರೆಂದು । ನೋಡಿ ॥
,ದುರುಳನ । ಗ್ರಜನು ಸಂ । ,ಹರಿಸಬೇ । ಕೆಂದೆನ್ನ ।
,ಅರಸಿ ಬಂ । ದವರಾಗ । ,ದಿರರೊ ಪೇ । ಳಿ ನೀವೀಗ ॥ ೧೭೮ ॥

---

1 ಮೃದುವಚನದಿಂದಗ್ರಜನ ತಾಪಮಂ । ಪರಿಹರಿಸಿ ಲಕ್ಷ್ಮಣಂ ಸರ್ವೋಪಚಾರದಿಂ ।
ಸಿಜಸದಂಗಳಿಂ ತಣ್ಣೀರಪನಿಗಳಂ ತಳಿದು ಚೇತನಗೊಳಿಸುತ । ತರುನೆರಳನಾಂತಿರಲು
ಷ್ಯಮೂಕದೊಳಿರ್ಪ । ತರಣಿಸುತ ಸುಗ್ರೀವ ಕಂಡು ವಾಲಿಯಭಯದಿ । ಸರಸಿಜೋದ್ಭವಸು
ದಿಗಳ ಪತ್ತಿರ ಕರೆಯುತಾಗಲವರೊಡನೆಂದನು ॥ (ಅ)

,ವೈರಿಗ | ಳಾಗಲಿ | ,ವರಹಿತ | ರಾಗಲಿ |
,ಮಾರುತಾ | ತ್ಮಜ ನೀನು | ,ನೋಡಿ ಬಾ | ರಯ್ಯ ||
,ಬೇರೊಂದು | ರೂಪಿನಿಂ | ,ದಸರ ಬ | ಳಿಗೆ ಹೋಗಿ |
,ಕಾರಣೆ | ಕರ ಕಂಡು | ,ಕರೆತಾರೈ | ಮುಂಕೊಂಡು || ೧೭೯ ||

(ಹನುಮಂತನೊಬ್ಬನುಳಿದು ಇತರ ಕಪಿಗಳ ನಿಷ್ಕ್ರಮಣ)

೫೯ ವಾರ್ಧಿಕಷಟ್ಪದಿ (ಅರ್ಧ)

ಹನುಮಂತ—

[1]ಕೇಳಿದಾಕ್ಷಣದೊಳಗೆ ನಿಜರೂಪವಮಂ ಬಿಟ್ಟು
ಬಾಲಬ್ರಹ್ಮಚಾರಿವೇಷದಲಿ ನಡೆತಂದು
ಬಾಲಕರು ನೀವಾರು ಎಲ್ಲಿಗಯ್ದುವರೆಂದು ಕೇಳಿದನು ಮರುತಾತ್ಮಜ[1] || ೧೮೦ ||

೬೦ ರಾಗ ಗೌಳಮಲಹರಿ—ಏಕತಾಳ

ಯಾವಲ್ಲಿಂದ | ಬಂದಿರಯ್ಯ | ನೀವು ಬಾಲ | ಕರಿರ |
ಯಾವಲ್ಲಿಗೆ | ಪಯಣವಯ್ಯ | ಜಾಣ ಬಾಲ | ಕರಿರ || || ೧೮೧ ||*

ಊರೆಲ್ಲಿರುವ | ತಂದೆತಾಯ್ಗ | ಳಾರು ಬಾಲ | ಕರಿರ |
ಘೋರಾರಣ್ಯ | ಕೆ ಬಂದುದಿ | ದೇನು ಬಾಲ | ಕರಿರ || || ೧೮೨ ||

ಕಾನನ ಕಾ | ನನ ಹುಡುಕುವ | ದೇನು ಬಾಲ | ಕರಿರ |
ಆನನವೇ | ಕೆ ಬಾಡಿದೆ | ಜಾಣ ಬಾಲ | ಕರಿರ || || ೧೮೩ ||

ಋಷಿಗಳ ಹಾ | ಗಿರುವ ವೇಷ | ವೇನು ಬಾಲ | ಕರಿರ |
ಪುಸಿಯದೆನ್ನೊ | ಳುಸುರಿ ಸಾ— | ಹಸಿಗ ಬಾಲ | ಕರಿರ || || ೧೮೪ ||

---

1 ಸಾರತರವಾದ ಸುಗ್ರೀವ ಪೇಳಿದ ಮಾತ
ನೋರಂತೆ ಕೇಳುತಾಕ್ಷಣದೊಳಲ್ಲಿಂದ ಚಿಗಿ
ದ್ವಾರಿ ನಿಜರೂಪವಮಂ ಬಿಟ್ಟು ಬಾಲಬ್ರಹ್ಮಚಾರಿವೇಷವ ತಾಳಿದು |
ವೀರರೆಡೆಯನು ಸಾರ್ದು ವಿನಯದಿಂ ವಂದಿಸುತ
ಶೂರರಘುಕುಲವನಧಿರಾಕಾನಿಶಾಕರರ
ನಾರು ನೀವೆಲ್ಲಿಗಯ್ದುವಿರೆಂದು ಬೆಸಗೊಂಡನಪ್ರತಿಮಮರುತಾತ್ಮಜ ||

* ಇತ್ತ ಬಂದು | ದೇನಿದು ವಿ | ಚಿತ್ರ ಬಾಲ | ಕರಿರ |
ಎತ್ತ ಪಯಣ | ವಯ್ಯ ನಿಮಗೆ | ಮತ್ತೆ ಬಾಲ | ಕರಿರ ||

೬೧ ವಾರ್ಧಿಕಷಟ್ಪದಿ (ಅರ್ಧ)

ರಾಮ—

[ಆಲಿಸಾದಡೆ ನಾವು ಇನವಂಶದರಸುಗಳು
ಮೇಲೆ ದಶರಥನಣುಗರೆನ್ನರಸಿ ಜಾನಕಿಯ
ಖೂಳ ರಾವಣ ಕದ್ದುಕೊಂಡೊಯ್ದನದರಿಂದಲರಸಿಕೊಂಡಯ್ತಂದೆವು] ॥೧೮೫॥

೬೨ ಕೇದಾರಗೌಳ—ಅಷ್ಟತಾಳ ೨

ಧರೆಯೊಳ । ತ್ಯಧಿಕವೆಂ । ದೆನಿಪಯೋ । ಧ್ಯಾಪುರ ।
ದರಸಿನ । ಸುತರು ನಾ । ವು— ।
ವರಪಿತ । ನಾಜ್ಞೆಯಂ । ತಡವಿಯೊ । ಳ್ಪದಿನಾಲ್ಕು ।
ವರುಷ ಕ । ಳೆಯಲೆನ್ನು । ತ— ॥ ೧೮೬ ॥

ಹಿರಿಯಾತ । ನಾ ರಾಮ । ತಮ್ಮ ಲ । ಕ್ಷ್ಮಣನೀತ ।
ಭರತ ಶ । ತ್ರುಘ್ನರೆಂ । ದು— ।
ಇರುವರೂ । ರೊಳಗಿಬ್ಬ । ರನುಜರು । ಎನಗೆನ್ನ ।
ತರುಣಿ ಜಾ । ನಕಿಯೆಂಬ । ಳು— ॥ ೧೮೭ ॥

ದುರುಳ ರಾ । ವಣ ನಾವ । ಲ್ಲಿರದ ವೇ । ಳ್ಯದಿ ಸೀತಾ ।
ತರುಣಿಯ । ನೊಯ್ದನೆಂ । ದು— ।
ಶರಣ ಜ । ಟಾಯು ಪೇ । ಳ್ದಿರವ ಕೇ । ಳಿಲ್ಲಿಗಾ ।
ವರಸಿಕೊಂ । ಡಯ್ತಂದೆ । ವು— ॥ ೧೮೮ ॥

ತೋರುವ । ಗಿರಿಯಾವು । ದಲ್ಲಿರು । ವಾತ ನೀ ।
ನಾರು ನಿ । ನ್ನಯ ಪೆಸ । ರು— ।
[1]ಯಾರಿಗೆ । ಮಗ ನೀನು । ಬಂದುದೇ । ನೆಂದೆನೆ ।
ಮಾರುತಿ । ಶರಣೆ[1]ಂದ । ನು— ॥ ೧೮೯ ॥

1 ಭೋರನೆ ತಿಳುಹೆನ । ಲತಿಭಕ್ತಿಭಾವದಿ । ಮಾರುತಾತ್ಮಜನೆಂ ॥ (ಅ)

೬೩ ರಾಗ ವೃಂದಾವನಸಾರಂಗ—ಏಕತಾಳ ೪

ಹನುಮಂತ—

ಪಾಹಿ—ಪಂ | ಕಜದಳ | ಲೋ—ಚ | ನ—ಮುಕ್ತಿಂ |
ದೇಹಿ—ಯ | ಹಲ್ಯಾಶಾಪ | ಮೋ—ಚ | ನ—|
ಮಹಾಂತ | ಗುಣಸಿಧಿ | ಮಹಿಮು—ಸ | ಜ್ಜನಪಾಲ ॥ ೧೯೦ ॥

ಅಂಗ—ಜ | ಪಿತ ಪಾಪ | ನಾ—ಶ | ನ—ದೇವೋ |
ತ್ತುಂಗ—ಉ | ತ್ತಮಗರು | ಡಾ—ಸ | ನ—|
ಸಂಗ—ರ | ಹಿತ ಬಾಣ | ಭಂಗ—ನೀ | ಲಶುಭಾಂಗ ॥ ೧೯೧ ॥

ಲೋಕ—ನಾ | ಯಕ ಸದ್ವಿ | ಚಾ—ರ | ಣ—[1]ಮತ್ತ |
ನೇಕ—ದು | ಷ್ಟಾತ್ಮ[1]ಸಂ | ಹಾ—ರ | ಣ—|
ಸಾಕೇ—ತ | ಪುರವಾಸ | ಶರಣು ರಾ | ಮಚಂದ್ರೇಶ ॥ ೧೯೨ ॥

೬೪ ರಾಗ ಮಧ್ಯಮಾವತಿ—ಅಷ್ಟತಾಳ ೨*

ನಿಜವೇಷ | ವಿದೆ ನೋಡು | ಹನುಮಂತ | ನ—ನಿನ್ನ |
ಭಜಕನು | ನಾನಾ—| ಗಿರುವೆನ | ಯ್ಯ—|
ಅಜಸುರಾ | ದಿಗಳು ಪೂ | ಜಿಸುವಂಥ | ಪಾದದ |
ನಿಜಭಕ್ತಿ | [2]ಯೆನಗೀಯೊ | ಶ್ರೀರಾಮ | ಕಾಯೋ[2] ॥ ೧೯೩ ॥

ಹಿಂದೆ ಬಾ | ಲ್ಯದೊಳೆನ್ನ | ಮಾತೆಯಂ | ಜನೆದೇವಿ |
ತಂದುಪ | ದೇಶದಿಂ | ದೆನಗಾಯ್ತು | ಯ್ಯ—|
ಸಂದರು | ಷನ ವಿಂದು | ಸಫಲವಾ | ಯಿತು ಜನ್ಮ |
ತಂದೆನ್ನ | ಮನದಭೀ | ಷ್ಟವನೀಯೊ | ಕಾಯೊ ॥ ೧೯೪ ॥

---

1 ಕರು | ಣಾಕರ | ದುರಿತ | (ಅ)
* ಮರುಳು ಮಾ | ತೆನ್ನೊಡ | ನುಸುರುವ | ದೇತಕೊ | ತೆರಳತ್ತ | ಬ್ರಹ್ಮಚಾ | ರಿ—|
ಮರುತಸಂ | ಜಾತನ | ಬಗೆಯ ಕೇ | ಳಿರುವೆ ಭೀ | ಕರಕಳೇ | ವರನವನು | (ಅ)
2 ನೀಡೊ ರಾಮ | ನಿಸ್ಸೀಮ | (ಅ)

ಸುಗ್ರೀವ । ನೆಂಬ ನು । ರ್ಕಟರಾಜ । ತವ ಪದಾ ।
ನು[1]ಗ್ರಹ । ಕಾಗಿ ಕ । ಳುಹಿದನೆ । ನ್ನ[1]—।
ಅಗ್ರಜ । ವಾಲಿಯ । ಭಯದೊಳ । ಗೀ ಪರ್ವ—ರ್ವ ।
ತಾಗ್ರದೊ । ಳಿಹ ದಯೆ । ಮಾಡು ಸಂ । ಪನ್ನ—। ॥ ೧೯೫ ॥

೬೫ ಕಂದ

ಈ ಪರಿಯೆಂದಾ ಮಾರುತಿ
ಭೂಪಾಲರನೆರಡು ಪೆಗಲೊಳೇರಿಸುತಲ್ಲಿಂ
ದಾಪರ್ವ[2]ತಕೊಯ್ದು ವರಸು
ರೂಪೋದಯಚರಿತೆ ಪೇಳ್ದ ಭಾಸ್ಕರಸುತನೊಳ್[2] ॥ ೧೯೬ ॥

೬೬ ರಾಗ ಸೌರಾಷ್ಟ್ರ—ತ್ರಿವುಡೆತಾಳ ೨

ಹನುಮಂತ—

ಭಾನುನಂದ । ನ—। ವಾನರೇಶ್ವ । ರ—।
ನೀನು ಲಾಲಿ । ಸು—। ಸಂತಸವಿ । ಟ್ಟು— ॥ ಪಲ್ಲವಿ ॥

ರಾಮನೀತ । ನು—ರಾಜೀವಾಕ್ಷ । ನು—।
ಭೂಮಿಪಾಲ । ನು—। ಭಾನುವಂಶ । ನು—। ॥ ೧೯೭ ॥

ಸಾಕೇತಾಧಿ । ಪ—। ದಶರಥೇಂದ್ರ ।[3] ನ—।
ಸೌ[3]ಕುಮಾರ । ರು—। ರಾಮಲಕ್ಷ್ಮ । ಣಾ— ॥ ೧೯೮ ॥

[4]ತಾತ[4]ಕೈಕೆ । ರ—। ಮಾತಿಗೋಸು । ಗ—।
ಈತ ರಾಘ । ವ—। ಸೀತೆಯೂ ಸ । ಹ—।* ॥ ೧೯೯ ॥

---

1 ಹಾಪೇಕ್ಷೆಯಿಂದ (ಅ)
2 ಶಿಖರಕೆ ಬಂ । ದೀಪರಿಯಂ ಬಿನ್ನಯಿಸಿದ ಭಾಸ್ಕರಸುತಗಂ । (ಅ)
. . . ಪ್ರ ॥ ತಾಪವನುಸುರಿದನಂದಾ . . . । ಆ
3 ಗೆ—। ಈ (ಅ) 4 ಮಾತೆ(ಅ) * ಧಾರಿಣೀಪ । ತಿ—। ಧರ್ಮ
. ಮಾರ್ಗ । ದಿ—। ಘೋರಡವಿಯ । ಲಿ—। ವಾಸಿಸುತ್ತಿ । ರೆ—

ಪಂಚವಟ್ಯ | [1]ದಿ—| ಇ[1]ರಲು ರಾವ | ಣ—|
ವಂಚನೆ ಗೈ | ದ—| ಸೀತೆಯನೊ |[2] ಯ್ದ || ೨೦೦ ||

ಕದ್ದುಕೊಂಡ | ವ—| ಪೋದ ಕಾರ | ಣ—|
ಎದ್ದು ಬಂದ | ರು—| ಅರಸುತಾತ | ನ—[2] || ೨೦೧ ||

ಕಾರಣೇಕ | ರು—| ಕಂಡರಿರ್ಪ | ರು—|
ಸೂರಿಯಾತ್ಮ | ಜ—| ಸುಲಭರಲ್ಲ | ಯ್ಯ— || ೨೦೨ ||

೬೭ ರಾಗ ಕೇದಾರಗೌಳ—ಅಷ್ಟತಾಳ ೨

ಸುಗ್ರೀವ—

ಇಕ್ಷ್ವಾಕು | ವಂಶದ | ಭೂಮಿಪಾ | ಲರು ಧರ್ಮ |
ರಕ್ಷ[3]ಣಾ | ಧಿಕರಲ್ಲ | ಪೆ[3]—|—[4]ನಮ್ಮ[4] |
ಪೇಕ್ಷೆಯೊಂ | ದುಂಟದ | ಕೇಳ ಸೀ | [5]ನ್ಯಾಯವ |
ರ[5]ಕ್ಷಿ[6]ಸ | ಲಹುದಲ್ಲ | ವೆ[6]— || ೨೦೩ ||

ಅಗ್ರಜ | ನಾಗಿಹ | ವಾಲಿ ಪ | ರಾಕ್ರಮು |
ದುಗ್ರಶ | ರೀರನ | ಲ್ಲೈ—|—ಮನೋ |
ವ್ಯಗ್ರದಿಂ | ದೆನ್ನ ಭಾ | ರ್ಯೆಯನಿಟ್ಟು | ಕೊಂಡಾತ |
ನಿಗ್ರಹಿ | ಸಲು ನೋಡು | ವ— || ೨೦೪ ||

ಶೌರ್ಯಬ | ಲಾನ್ವಿತ | ನಾತನ | ಭಯಕಾಗಿ |
ಸೂರ್ಯನ | ಪ್ಪಣೆಯಿಂದಿ | ಲ್ಲಿ—|
ಧೈರ್ಯ[7]ಗೆ | ಟ್ಟಿಹೆ ನಿಮ್ಮ | ಪಾದಪ | ದ್ಮವ ಕಂಡೆ|
ಮರ್ಯಾದೆ | ಯಿಂದ ಕಾ | ಯೊ[7]— || ೨೦೫ ||

---

1 ಕೆ—| ಬ (ಕಾ, ಅ)
2 ಯ್ದು | ಕೊಂಡು ಪೋದ | ರೆ—| ಕಾಡುದಾರಿ | ಯ—|
ಕಂಡುಕೊಳ್ಳು | ತ್ತೈ—| ತರದರಲ್ಲಿ | ಗೆ—|| (ಅ)
3 ಕರಧಿಕರ | ಲ್ಲೈ (ಅ) 4 ಮಮಾ (ಅ) 5 ನನ್ಯಾಯ | ರಿ (ಕಾ)
6 ಸಿ | ಸಲಹಬೇಕು (ಅ) 7 ಧೈರ್ಯವಾಗಿಹೆನಿಲ್ಲಿ | ತವಪಾದ ಕಂಡು ಸ |
ದ್ಧೈರ್ಯವಾಂ | ತೆನುರಾಘವ |(ಅ)

ರಾವಣ । ನೆಂಬ ನಿ । ಶಾಚರ । ನನು ಹಿಂದೆ ।
ಕೋವಿದ । ಹಿಡಿದು ತಂ । ದು—।—ತಾರಾ ।
ದೇವಿಯ । ಮಗನ ತೊ । ಟ್ಟಿಲಿಗೆ ಕ । ಟ್ಟಿದ ವಾಲಿ ।
ದೇವೇಂದ್ರ । ಸುಕುಮಾರ । ನು— ॥ ೨೦೬ ॥

ದೇವತೆ । ಗಳು ಸಹಿ । ತಂಜುವ । ರಣ್ಣನ ।
ಠೀವಿಗ । ಸಾಧ್ಯವೆಂ । ದು—।—ರಾಮ ।
ದೇವ ನಾ । ವಿಬ್ಬರು । ಜೋಡಾದೆ । ವೀ ವಾಲಿ ।
ರಾವಣ । ದನುಜರಿಂ । ದ— ॥ ೨೦೭ ॥

ರಾಮ—

ಕಣ್ಣಾರೆ । ಕಂಡರೆ । ಬಿಡುವೆನೆ । ಸೀತೆಯ ।
ಎನ್ನ ಮ । ನಃ ಪ್ರೀತೆ । ಯ—।—ನಿನ್ನ ।
ಅಣ್ಣನ । ಪಾಡೇನು । ವಾಲಿಯ । ನಾ ಕೊಂದು ।
ಮಣ್ಣ ಕೂ । ಡಿಸುವೆನೆಂ । ದ— ॥ ೨೦೮ ॥

ಜಾಣ ನೀ । ನಾದರೆ । ನೋಡು ಕೈ । ಯೊಳಗಿಹ ।
ಬಾಣಜಾ । ತಂಗಳ । ನು—।—ಅನನ ।
ಪ್ರಾಣವ । ಕಳೆದೊಂದೇ । ನಿಮಿಷದೊ । ಳಗೆ ನಿನ್ನ ।
ರಾಣಿಯ । ತಂದೀವೆ । ನು—। ॥ ೨೦೯ ॥

೬೮ ರಾಗ ನಾದನಾಮಕ್ರಿಯೆ—ಅಷ್ಟತಾಳ ೧

ಸುಗ್ರೀವ—

ಅಮಮ ವಾ । ಲಿಯ ರಾಮ । ಕೊಂದರೆ ।—ಸತಿ ।
ರುಮೆಯ ನೀ । ಬಿಡಿಸಲ್ಲಿ । ತಂದರೆ ।
ನಿಮಿಷದೊ । ಳೀ ಸೇನೆ । ಸಹ ಬಂದು ।—ಪಾದ
ಕಮಲಸೇ । ವೆಯ ಮಾ—। ಡುವೆ ನಿಂದು ॥ ೨೧೦ ॥

ನುಡಿದ ಮಾ । ತಿಗೆ ಎರ । ಡಿಲ್ಲದೆ ।—ಇಕ್ಕೊ ।
ಕೊಡುವೆ ನಂ । ಬುಗೆಯ ಮ । ತ್ತಿಲ್ಲದೆ ।
ಬಿಡದೆ ಕೈ । ತಟ್ಟಿತೊ । ಬ್ಬೊಬ್ಬರು ।—ಒಂದೇ ।
ದೃಢಮನ । ದವರಾದ । ರಿಬ್ಬರೂ ॥ ೨೧೧ ॥

ಕನ್ನೆ ತಾ । ಖಳ ಕೊಂಡು । ಪೋಪಾಗ ।—ತನ್ನ ।
ಚಿನ್ನಗ । ಳೆಲ್ಲವ । ತೆಗೆದಾಗ ।
ಎನ್ನ ಪ । ರ್ವತಕಿಟ್ಟ । ಡದರನ್ನು ।—ಕಟ್ಟ
ಚೆನ್ನಾಗಿ । ಟ್ಟರುವೆ ನೋ । ಡಿದರನ್ನು ॥ ೨೧೨ ॥

ಎಂದು ಸ । ರ್ವಾಭರ । ಣಗಳನ್ನು ।—ಬೇಗ ।
ತಂದು ಕೈ । ಯಲಿ ಕೊಟ್ಟ । ಡದರನ್ನು ।
ಇಂದಿರೆ । ಯರಸ ತಾ । ನೋಡಿದ ।—ಮನ ।
ನೊಂ[1]ದುಕೊಂ । ಡತಿ[1] ಚಿಂತೆ । ಮಾಡಿದ ॥ ೨೧೩ ॥

೬೯ ನೀಲಾಂಬರಿ—ಏಕತಾಳ ೪ ವಿಲಂಬಿತಲಯ

ರಾಮ—

ಕಂಜಾನನೆ । ಕಲಕೀರವಾಣಿ ।
ಸಂಜೀವನೆ ಸರ । ಸಕಲಾಪೆ—।
ಮಂಜುಳತರಾಂ । ಗಿ ಮನೋಹರಿ ।
ಕುಂಜರಗಮನೆ । ಸುನಿಧಾನೆ— ॥ ೨೧೪ ॥

ಫಣಿವೇಣಿಯಾ । ಕುಚಗಳ ಮಧ್ಯದಿ ।
ಕುಣಿದಾಡುವ ಸರ । ವಿದೆ ಸಹಜಾ—।
ಮಣಿಕಂಕಣ । ಮುದ್ರಿಕೆಗಳ ಸರ ।
ಪಣಿಯಂದವ ಬ । ಣ್ಣಿಸಲಳವೆ— ॥ ೨೧೫ ॥

ಲೋಲಾಕ್ಷಿಯ । ಕರ್ಣದೊಳೊಪ್ಪುವ ।
ಓಲೆಯ [2]ತೆಗೆದಂ । ತಿಹುದೋ ವದನ[2] ।
ಬಾಲಾರ್ಕನ । ತೆರದ ಮೂಗುತಿಯು ।
ನೀಲಾರುಣ । ಹರಳಿದೆ ಸಹಜಾ ॥ ೨೧೬ ॥

ನೋಡಾಕೆಯಾ । ಭರಣಗಳಲ್ಲಿ ।
ಚೂಡಾಮಣಿ ನಾ । ಸ್ತಿ ಇದರಲ್ಲಿ ।

---

1 ದನೇಕ (ಕಾ,ಅ) 2 ಯೊಳಿರಿಸಿದ ಮಾಕ್ತಿಕವು (ಅ)

ಮೂಢಾತ್ಮನೊ। ಯ್ಯುವ ಅಂಜಿಕೆಗೆ ಬಿ।
ಸಾಡಿದಳಿಲ್ಲೋ । ಏನೋ ತನ್ನ ॥ ೨೧೭ ॥

ಲಕ್ಷ್ಮಣ—

ಕಾಲುಂಗುರವ । ಬಲ್ಲೆನು ಹೊರತು ।
ಮೇಲಾದುದರ । ಗುರುತವನರಿಯೆ ।
ನೀಲಾಳಕಿಯ । ನಿರ್ಮಲಗುಣವ ।
ಹೇಳೀಪರಿ ನೀ । ಚಿಂತಿಸಲೇಕೆ ॥ ೨೧೮ ॥

೭೦ ವಾರ್ಧಿಕ ಷಟ್ಪದಿ

ಇನಸುತನು ಕೊಟ್ಟ ಸರ್ವಾಭರಣವಂ ಕಂಡು
ಮನಸಿನಲಿ ಕಡುನೊಂದು ಚಿಂತಿಸುತ ಮತ್ತೊಡನೆ
ಕನಸ ಕಂಡೆಚ್ಚರಿಕೆದೋರ್ದಂತೆ ಕ್ಲೇಶಂಗಳಂ ಮರೆತನಾಕ್ಷಣದೊಳು ।

ರಾಮ—

ಜನಕನಂದನೆಗಿಡುವ ಪುಣ್ಯಫಲವಿರಲು ಬರು
ವನಕ ತೆಗೆದಿರಿಸು ಸುಗ್ರೀವ ನೀನಿನ್ನು ಸುರ
ಪನ ಸುತನ ಸಂಗರಕೆ ಬರಹೇಳು ನಾವು ಶಕ್ತಿಯ ಪರೀಕ್ಷಿಸುವೆವೆಂದ ॥೨೧೯॥

೭೧ ರಾಗ ಘಂಟಾರವ—ಜಂಪೆತಾಳ ೩

ಸುಗ್ರೀವ—

ರಾಘವ ಮ । ಹಾವೀರ । ಕೇಳು ಸುವಿ । ಚಾರ ।
ಈಗೆನ್ನ । ಸಂಶಯವ । ಪರಿಹರಿಸು । ಪೂರ ॥ ಪಲ್ಲವಿ ॥

ದುಂದುಭಿಯು । ಒಡಲನವು । ರೇಂದ್ರಸುತ । ವಾಲಿ ಮದ ।
ದಿಂದ ನೆಗ । ಹುವನೊಂದು । ಮೊಳ ಧರಣಿ । ಯಿಂದ ।
ಒಂದು ಕರ । ಪರಿಮಿತದೊ । ಳೆತ್ತಿದರೆ । ನೀಯೆನ್ನ ।
ಸಂದೇಹ । ಹೋಗಿ ಬಳಿ । ಕೊಂದೆ ಮತ । ನಮಗೆ ॥ ೨೨೦ ॥

ರಾಮ—

ಕಾಲತುದಿ । ಯಿಂದದರ । ಯೋಜನಕೆ । ಬಿಸುಟ ಮೇ ।
ಲೇಳು ತಾ । ಳೆಯ ಮರಗ । ಳನು ಮುರಿಯ । ಲಾಗ ।

ಶ್ರೀಲೋಲ । ಶರಣೆಂದು । ಸ್ತುತಿಗೆಯ್ಯೆ । ಸುಗ್ರೀವ ।
ವಾಲಿಯನು । ರಣಕೆ ಬರ । ಹೇಳೆಂದ । ರಾಮ ॥ ೨೨೧ ॥

೭೩ ವೃತ್ತ (ಕೇಕಯವೃತ್ತ)

ಸುಗ್ರೀವ—

ರಘುವರನ [1]ಸಹಸವನ್ನ । ಕಂಡ ಸುಗ್ರೀವ ತನ್ನ ।
ಅಗಣಿತದ ಧೈರ್ಯದಿಂದ । ಆ ಕ್ಷಣವೆ ಎದ್ದು ಬಂದ ।
ನಗ ತರುವ ಕೈಗಳಲ್ಲಿ । ಬಂದು ಕಿಷ್ಕಿಂಧೆಯಲ್ಲಿ ।
ಅಗರಜ ಬಾರೆನೆ ಕೇಳಿ । ಆಗಲಯ್ತೆಂದು[1] ವಾಲಿ ॥ ೨೨೨ ॥

(ವಾಲಿಯ ಪ್ರವೇಶ ಅಬ್ಬರತಾಳದಲ್ಲಿ)

ಮುಖಾರಿ ೭೪ ರಾಗ ನಾದನಾಮಕ್ರಿಯೆ—ಅಷ್ಟತಾಳ ೧

ವಾಲಿ—

ಭಾನುತನುಜ । ಭಳಿರೆಯನುಜ । ಬಂದೆಯಾ ಮ । ಮ—।
ಏನು ಕಾರ । ಣೆನ್ನ ಕರೆದೆ । ಎಲೆ ಪರಾಕ್ರ । ಮ— ॥ಪಲ್ಲವಿ॥

ಸುಗ್ರೀವ—

ಮಾನಿನಿಯನು । ಬಿಡುವುದಕ್ಕೆ । ಮನಸು ಬಾರ । ದೆ—।
ನೀನು ಕೆಡುವೆ । ನೀತಿಯಲ್ಲ । ನಿನಗೆ ಸಾರಿ । ದೆ— ॥ ೨೨೩ ॥

ವಾಲಿ—

ಏನುಧೈರ್ಯ । ದಿಂದ ಬಂದು । ಎನ್ನ ಕರೆದೆ । ಯ—।
ನೀನು ಹಿಂದೆ । ಪಡೆದ ಭಂಗ । ವೆಲ್ಲ ಮರೆತೆ । ಯ— ॥ ೨೨೪ ॥

ಸುಗ್ರೀವ—

ಅಣಕವಲ್ಲ । ಅಂದಿನಂತೆ । ಅಣ್ಣ ರಣದೊ । ಳು—।
ಸೆಣಸಿ ನೋಡು । ಸಲುಗೆಯಿಂದ । ಶೌರ್ಯಗುಣದೊ । ಳು— ॥ ೨೨೫ ॥

ವಾಲಿ—

ಎಂದ ಮಾತ । ಕೇಳಿ ಕೋಪ । ದಿಂದ ಲನುಜ । ಗೆ—।
ಒಂದು ಗಿರಿಯ । ಕಳಚಿ ಬಿಸುಟ । ನಂದು ರವಿಜ । ಗೆ— ॥ ೨೨೬ ॥

---

1 ಸಾಹಸವ ಮಿಗೆ ಕಂಡು ಸುಗ್ರೀವ । ನಗಲಿ ಭಯವನು ಕೀಶ । ರುಗಳೊಡನೆ ಬಂದು ॥ ಜಗಳಕಣ್ಣನ ಕರೆಯ । ಲಗಣಿತಪರಾಕ್ರಮದಿ । ಹಗರಣ । ಕ್ಕೊದಗಿತ । ವ್ಯಗೆ ನುಡಿದ । (ಅ)

ಸುಗ್ರೀವ—

ಬರುವ ಗಿರಿಯ | ತಡೆದು ದೊಡ್ಡ | ಪರುವತಂಗ | ಳ—|
ಸುರಪನಣುಗ | ನಂಗಕಿಟ್ಟ | ತರತರಂಗ | ಳ— || ೨೨೭ ||

ಮರ ಮರಂಗ | ಳುಭಯ ಬಲದೊ | ಳುರುಳ್ವ ಗಿರಿಗ | ಳ—|
ಮೊರೆವ ರಭಸ | ಕಮರರಂಜು | ತಿರುವ ಪರಿಗ | ಳ— || ೨೨೮ ||

ಅದ್ರಿ ವೃಕ್ಷ | ವೆಲ್ಲ ತೀರಿ | ತಿಬ್ಬರಿದಿರ | ಲಿ—|
ಗುದ್ದು ತೊಡನೆ | ಕಯ್ಯ ಕಾಲಿಂ | ದೊದ್ದು ಭರದ | ಲಿ— || ೨೨೯ ||

ವಾಲಿ—

ಉರಕೆ ಮುಷ್ಟಿ | ಯಿಂದ ತಿವಿದ | ಭರದ ಪೆಟ್ಟಿ | ಗೆ—|
ತಿರುಗಿ ತಲೆಯು | ಭಾನುತನುಜ | ನೊರಗೆ ಸೃಷ್ಟಿ | ಗೆ— || ೨೩೦ ||

ಬೀಳಲನುಜ | ನಂಗಕೆರಡು | ಕಾಲಲೊದ್ದ | ನು—|
ಮೂಳ ಹೋಗು | ಸಾಯೆನುತ್ತ | ವಾಲಿ ನಡೆದ | ನು— || ೨೩೧ ||

ಹೋದನಣ್ಣ | ನೆಂದು ತಿಳಿಯು | ತಾಧರಿಸಿ | ದ—|
ಕ್ರೋಧದಿಂದ | ಜಗದುಪತಿಯ | ಮೂದಲಿಸಿ | ದ— || ೨೩೨ ||

೭೪ ರಾಗ ಸೌರಾಷ್ಟ—ರೂಪಕತಾಳ ೧

ಸುಗ್ರೀವ—

ವಿಶ್ವನಾಯ | ಕ—| ನಿನ್ನ ವಾಕ್ಯ | ವ—|
ವಿಶ್ವಾಸವೆಂ | ದು—| ನಂಬಿದೆನಿಂ | ದು— || ಪಲ್ಲವಿ ||

ಎನ್ನವೈರಿ | ಯು—| ಮುಂದೆ ಮಾಡಿ | ನೀ—|
ಕಣ್ಣಾರೆ ಕಂ | ಡೆ—| ಚೆನ್ನವಾಗಿ | ಯೆ—||
ಇನ್ನು ಸಾಕ | ಯ್ಯ—| ನಿನ್ನ ತಳ್ಳಿ | ಯು—|
ಮನ್ನರಾಧಿ | ಪ—| ಮಂಜುಳಾಕಾ | ರ— || ೨೩೩ ||

ರಾಮ—

ಸೂರ್ಯವಂಶ | ದ—| ರಾಯರಾಡಿ | ದ—|
ಕಾರ್ಯ ತಪ್ಪ | ದು—| ಕಪಟವಲ್ಲಿ | ದು—||

ಧೈರ್ಯತಾಳ | ಯ್ಯ—| ಸೂರ್ಯನಂದ | ನ—|
ಶೌರ್ಯ ಬೇಡ | ನೀ—| ಶಾಂತನಾಗ | ಯ್ಯ— || ೨೩೪ ||

ವಾಲಿಯ ನಿ | ನ್ನ—| ಕಾಣಲಿರ್ವ | ರ—|
ಆಳುಭೇದ | ವ—| ಅರಿಯದಾಡೆ | ನು—||
ನಿನ್ನ ಮೋಸ | ದಿ—| ಕೊಲಿಸೆ ಲೋಕ | ದಿ—|
ಎನ್ನ ನಿಂದಿ | ಸಿ—| ಜರೆವರಲ್ಲ | ಯ್ಯ— || ೨೩೫ ||

ಬಾಲಕ ಗ | ಜ—| ಪುಷ್ಪದ ನಿ | ಜ—|
ಮಾಲೆ ಇಟ್ಟ | ರೆ—| ಇವನ ಕೊರಳಿ | ಗೆ—||
ಮಲ್ಲ ಸಾಹ | ಸ—| ವಾಲಿಯನ್ನು | ನಾ—|
ಕೊಲ್ವೆ ಲಕ್ಷ್ಮ | ಣ—| ಇಲ್ಲ ಸಂಶ | ಯ— || ೨೩೬ ||

ಲಕ್ಷ್ಮಣ—

ಮಗಧ ಜಾ[1]ತೆ | ಯ—| ಮಗನು ನೀತಿ | ಯ—|
ಬಗೆ[1]ದು ಮಾಲೆ | ಯ—| ನಿಟ್ಟ ರವಿಜ | ಗೆ—||

ರಾಮ—

ತರಣಿನಂದ | ನ—| ಕೇಳು ಶೀಘ್ರ |ದಿ—|
ಧುರಕೆ ವಾಲಿ | ಯ—| ಕರೆದು ಬಾರ | ಯ್ಯ— || ೨೩೭ ||

೭೫ ಶಾರ್ದೂಲ ವಿಕ್ರೀಡಿತ ವೃತ್ತ

ಶ್ರೀರಾಮಾಡಿದ ಮಾತ ಕೇಳ್ದು ರವಿಜಂ ಸದ್ಧೈರ್ಯದಿಂದಾಕ್ಷಣಂ |
ಶೂರತ್ವಂಗಳ ತೋರ್ಪೆನೆಂದು ಬರುತಾ ಕಿಷ್ಕಿಂಧದ ದ್ವಾರದಿ |
ಘೋರಾಕಾರದಿ ಕೂಗಲಾ ಸುರಪಜಂ ಕೋಪಾಗ್ನಿಯಿಂದೇಳಲು |
ತಾರಾದೇವಿ ವಿವೇಕದಿಂದ ತಡೆದೂ [2]ತ[2]ತ್ಕಾಂತಗಿಂತೆಂದಳು || ೨೩೮ ||

---

1 ತದ—| ಸೊಗದ ಪೂಗಳ | ತೆ (ಅ, ಕಾ)

2 ಮ (ಅ)

(ವಾಲಿ ತಾರೆಯರ ಪ್ರವೇಶ)

೭೬ ರಾಗ ಎರುಕಲ ಕಾಂಭೋಜಿ—ಏಕತಾಳ ೫ (ತಿಶ್ರಿತ್ರೈ ೨)

ತಾರೆ—

ನೀತಿ | ಯಲ್ಲ | ಪೋಪು | ದಿಂದು | ನೀ ಕೇ | ಳು ಕಾಂ | ತ—| ಮಮ |
ಜಾತ | ನಂಗ | ದ ಪೇ | ಳ್ದೊಂದು | ಮಾತ | ಕೇಳಿ | ದೆ ನಾ | ನಿಂದು || ಪಲ್ಲವಿ ||

ಪುಂಡ | ರೀಕ | ನೇತ್ರ | ನು ಮಾ | ರ್ತಂಡ | ಜಾತ | ಸುಗ್ರೀ | ವನು |
ಕಂಡು | ತವ್ಸೊ | ಳಂತ | ರಂಗ | ಗೊಂಡೇ | ಕಾಂತ | ದಿ—|
ಚಂಡ | ವಿಕ್ರ | ಮ ರಾ | ವಣ | ಹೆಂಡ | ತಿಯ | ನಾ ರಾ | ಪಣ |
ಕೊಂಡು | ಪೋದ | ನಾ ರ | ಕ್ಕಸನ | ಖಂಡಿ | ಸಲಾ | ಗಿ— || ೨೩೯ ||

ನಿನ್ನ | ಕೊಂದಾ | ತನ | ರುಮೆ | ಯನ್ನು | ಬಿಡಿಸಿ | ಕೊಟ್ಟೇ | ನೆಂದು |
ಮನ್ನ | ರಾಧಿ | ಪತಿಯು | ಸತ್ಯ | ವನ್ನಿ | ತ್ತನಂ | ತೆ—|
ನಿನ್ನ | ತಮ್ಮ | ಸೀತಾ | ದೇವಿ | ಯನ್ನು | ತಹ | ಬಗೆ | ಗಾಗಿ |
ತನ್ನ | ಕಪಿ | ಸೇನೆ | ಸಹ | ಸನ್ನ | ಹ ವಾ | ಗಿ— || ೨೪೦ ||

ಬಂದು | ರಾಮ | ಸೇವೆ | ಮಾಳ್ಪೆ | ನೆಂದು | ಭಾಷೆ | ಕೊಟ್ಟ | ನಂತೆ |
ಸಂದೇ | ಹ ವಿ | ಲ್ಲದೆ | ತವ್ಸೊ | ಳೊಂದಾ | ದರಂ | ತೆ—||
ದುಂದು | ಭಿಯ | ಒಡಲ | ಕಾ—| ಲಿಂದ | ಚಿಮ್ಮಿ | ಯೋಜ | ನಕ್ಕೆ |
ಬಂದು | ಬೀಳ | ಲಾಮೋ | ಲೆ ಕೇ | ಳೊ[1]ಂದಾ | ಶ್ಚ[1]ರ್ಯ | ವ— || ೨೪೧ ||

ಏಳು | ತಾಳ | ವೃಕ್ಷ | ವನ್ನು | ಸೀಳು | ಮಾಡಿ | ಈಗ | ನಿಮ್ಮ |
ಮೇಲೆ | ಕೂಡಿ | ಬಪ್ಪ | ರಂತೆ | ಕಾಳ | ಗಕ್ಕೆಂ | ದು—||
ನಾಳೆ | ನೋಡಿ | ಕೊಂಬ | ಇಂದು | ವೇಳೆ | ಯಲ್ಲ | ವೆನುತ | ಲವನ |
ಕಾಲ | ಮೇಲೆ | ಬಿದ್ದು | ತಾರೆ | ಹೇಳಿ | ಕೊಂಡ | ಳು— || ೨೪೨ ||

೭೭ ಘಂಟಾರವ—ಏಕತಾಳ ೪

ವಾಲಿ—

ಚಿತ್ರತರಾಂ | ಗಿ ಕೇಳ್ಬಾಲೆ ವಿ | ಚಿತ್ರವಾಯ್ತು | ನಿನ್ನ ಮಾತು |
ಮಿತ್ರ ಜಾತಂ | ಗಂಜಿ ನಡೆವ | ವರ್ತನ | ವುಂಟೆ— || ಪಲ್ಲವಿ ||

ಧಾತ್ರಿಯೊಳ | ನ್ನ ಶೌರ್ಯಕೆ ತ್ರಿ | ಮೂರ್ತಿಗಳಂ | ಜುವರ್ಬೆಸೆ |
ಮತ್ತೆ ರಾಮ | ಗೀಮರೆಂಬ | ಮರ್ತ್ಯರಿಂದೇ | ನೇ—|

---

1 ದು ಕಾ (ಅ)

ಚಿತ್ತದೊಳು । ಶಂಕೆ ಬೇಡ । ಮತ್ತಕಾಶಿನಿ । ತಡೆಯಬೇಡ ।
ಮತ್ತೆ[1]ನೋಡೆ । ನ್ನ[1] ಕೈವಾಡ । ಅತ್ತಹೋಗೆ । ಲೆ— ॥ ೨೪೩ ॥

(ತಾರೆ ನಿಷ್ಕ್ರಮಿಸುವಷ್ಟರಲ್ಲಿ ಸುಗ್ರೀವನೂ ಅವನ ಹಿಂದಿನಿಂದ ರಾಮನೂ ಪ್ರವೇಶಿಸುತ್ತಾರೆ.)

೭೮ ಕಂದ

ಪತಿಯೊಡನೆಂದುತ್ತರವುಂ
ಖತಿಯಿಂ ತರುಗಿರಿಗಳೆತ್ತಿಕೊಂಡಯ್ತಂದಂ
ಅತಿಶಯ ಛಲದಿಂದಿರ್ವರು
ಜೊತೆಯಾಗಿಹ ರಾಮಭಾನುತನುಜರ ಕಂಡಂ ॥ ೨೪೪ ॥

೭೯ ರಾಗ ಪಂತುವರಾಳಿ—ಜಂಪೆತಾಳ ೪

ವಾಲಿ—

ಮತ್ತು ಮ[1]ತ್ತೆನ್ನಿದಿರು । ನಿತ್ತುಕೊಂ । ಡೀ ರಣದೊ ।
ಳುತ್ತರವ । ಕೊಡುವೆ ಭಲೆ । ಧೂರ್ತ ಸು । ಗ್ರೀವ—॥

ಸುಗ್ರೀವ—

ಧೂರ್ತನ । ಲ್ಲದೊಡನುಜ । ಪತ್ನಿಯನು । ಸೆಳೆದಿಟ್ಟು ।
ರಕ್ತಮದ । [2]ದಿಂದ ಕೊಡ । ದಿರ್ಪೆ[2]ಯಾ । ವಾಲಿ— ॥ ೨೪೫ ॥

ವಾಲಿ—

ತಮ್ಮನೆಂ । [3]ದೀತನಕ । ಧರ್ಮಕ್ಕೆ । ಬಿಟ್ಟಾರೆ ।
ಗಮ್ಮನೇ । ನಿನಗಿಷ್ಟು[3] । ಹೆಮ್ಮೆ ಬಂ । ತಲ್ಲ—॥

ಸುಗ್ರೀವ—

[4]ಬ್ರಹ್ಮಲಿಖಿ । ತಂಗಳಿವು । ದುರ್ಮರಣ । ದಲಿ ನಿನಗೆ ।
ಕರ್ಮವೆಸ । ಗಿತು ಕಡೆಗೆ । ಕಂಡೆಯಾ । ವಾಲಿ—[4] ॥ ೨೪೬ ॥

---

1 ಸ್ಮರಣದ (ಅ) 2 ದುಬ್ಬಿನಲಿ ಕುಣಿವೆ (ಅ)

3 ಧರ್ಮವರಿ । ತೀಗ ಬಿಡೆ । ಶರ್ಮ ವಿಧಿ । ದೀಪರಿಯ । (ಅ)

4 ಹೆಮ್ಮೆಯಲ್ಲಿದಕಿನಿತು । ದುರ್ಮಾರ್ಗಿಯಾಗಿದು
। ಷ್ಕರ್ಮವ ನಡೆಸುವುದು । ಧರ್ಮವೇನಣ್ಣ ॥ (ಅ)

ವಾಲಿ—

ಬಾಯಲ್ಲಿ । ಬಂದಂತೆ । ಬಗುಳಿ ನೀ । ಸುಮ್ಮನೇ ।
ಸಾಯದಿರು । ಪೆಟ್ಟನಲಿ । ಸಟೆಯಲ್ಲ । ತಮ್ಮ—॥

ಸುಗ್ರೀವ—

ನ್ಯಾಯವೇ । ಸರಿ ಮಾತು । ನಡತೆ ತ । ಪ್ಪಿದ ಮೇಲೆ ।
ನಾಯಿಂದ । ಕಡೆಯಾಗಿ । ಬಗುಳುವುದೆ । ಸಿದ್ಧ—।* ॥ ೨೪೭ ॥

ವಾಲಿ—

ಹೆಚ್ಚು ಮಾ । ತುಗಳೇಕೆ । ಎಚ್ಚರಿತು । ಕೊಳ್ಳೆನುತ ।
ಕಿಚ್ಚಿನಂ । ದದ ಕಣೆಯ । ನೆಚ್ಚನಾ । ವಾಲಿ—॥

ಸುಗ್ರೀವ—

ಎಚ್ಚರಿತು । ಮನದ ಹಗೆ । ಹೆಚ್ಚಳದ । ರೋಷದಲಿ ।
ನುಚ್ಚುನೂ । ರ್ಗಡಿಯಾಗಿ । ಕೊಚ್ಚಿದನು । ರವಿಜ ॥ ೨೪೮ ॥

೪೦ ರಾಗ ಮಾರವಿ—ಮಟ್ಟೆತಾಳ

ವಾಲಿ—

ಜಾಣನಹುದೊ । ಭಳಿರೆ ನಿನ್ನ । ತ್ರಾಣವನ್ನು । ಕಂಡೆನೀಗ ।
ಆನಲಾಪ । ಡಿದರ ಕೊಳ್ಳೊ । ಮಾಣದದ್ರಿ । ಯ—॥

ಸುಗ್ರೀವ—

ಮಾಣದಿಟ್ಟ । ಗಿರಿಯ ತಡೆದು । ಕಾಣುವಂತೆ । ಮರನ ಕೊಂಬ ।
ತ್ರಾಣದಿಂದ । ಬಿಟ್ಟ ಸುರಪ । ಸೂನುವಿದಿರಿ । ಗೆ— ॥ ೨೪೯ ॥

ತಂಡತಂಡ । ದದ್ರಿಗಳನು । ಕೊಂಡುಕೊಂಡು । ಬಿಸುಡುತಿರಲು ।
ಚೆಂಡಿನಾಟ । ವಾಯಿತವರ । ತಂಡ ಬೆದರ । ಲು— ॥ ೨೫೦ ॥

---

* ಮೊದಲೆರಡು ಬಾರಿ ಸೋ । ಡಿದೆ ನಿನ್ನ ಶೌರ್ಯವನು ।
ಅದ ಮರೆತು ಮತ್ತೆ ಬಂ । ದಿದಿರಾದೆಯಲ್ಲ ।
ಇದನರಿಯೆ ಹೊಸ ಪರಿಯ । ಕದನವಿದು ನಿಲುಗಡೆಯ ।
ತುದಿಯ ದಿನ ನಿನಗೆ ಬಂ । ದೊದಗಿದುದು ಬರಿದೆ ॥

ವಾಲಿ—

ಮುಸಲಕಂಪ । ಣಂಗಳಿಂದ । ಎಸೆವೆ ಪಟ್ಟ । ಸಂಗಳಿಂದ ।
ಪುಸಿಯದಿದರ । ತಡೆದುಕೊಳ್ಳೊ । ಬಿಸಜಸಖಸು । ತ—॥

ಸುಗ್ರೀವ—

ಪೆಸರ ಬಲ್ಲೆ । ಪಿಂಡಿವಾಳ । ದೆಸುಗೆ ಕುಂತ । ಗಳನೆ ನಾಲ್ಕು।
ನೆಸೆವೆ ನೋಡು । ಕಾರ್ಮುಕವನು । ನೊಸಲ ಸನಿಯ । ಕೆ— ॥ ೨೫೧ ॥

ಅಷ್ಟದೆಸೆಯೊ । ಳಿರುವ ವೃಕ್ಷ । ಬೆಟ್ಟವೆಲ್ಲ । ತೀರಲಾಗ ।
ಜಟ್ಟಿಗಾಳ । ಗಕ್ಕೆ ಬೆದರಿ । ತಪ್ಪ ದಿಗ್ಗ । ಜ— ॥ ೨೫೨ ॥

ಪೆಟ್ಟು ಪೆಟ್ಟಿ । ಗೊಮ್ಮೆ ಕೂಗು । ತಟ್ಟಿಹಿಡಿದು । ಬಡಿದು ಸದೆದು ।
ಮುಷ್ಟಿಯುದ್ಧ । ದಲ್ಲಿ ಹೆಣಗು[1] । ತೊಟ್ಟಯಿಸಿದ । ರ— ॥ ೨೫೩ ॥

ಇಂತು ಹೆಣಗು । ತವರು ಬಿಡದೆ[1] । ಪಂಥವಿಡಿದು । ಕಾದುತಿರಲು ।
ಅಂತರಂಗ । ದೊಳಗೆ ರವಿಜ । ಚಿಂತಿಸಿರ್ದ । ನು—॥

ರಾಮ—

ಅಂತ್ಯಕಾಲ । ಶಣನಿಂಗೆ । ಬಂತೆನುತ್ತ । ಬಗೆದು ರಾಮ ।
ನಿಂತು[2]ಕೊಂಡು । ಮರೆಗೆ ಧನುವ । ಸಂತವಿಸಿ[2]ದ । ನು— ॥ ೨೫೪ ॥

೮೧ ರಾಗ ಶಂಕರಾಭರಣ—ಪಂಚಘಾತಮಟ್ಟೆತಾಳ ೨

ರಾಮ ಶರವ । ಹೊಡಿ ಸು । ತ್ರಾಮನಣುಗ । ನಂಗಕೆಸೆಯೆ ।
ಭೂಮಿಗೆಡರಿ । ಬಿದ್ದು ವಾಲಿ । ತಾಮಸಗೊಂ । ಡ—॥
ಆ ಮಹಾಂತ । ರಾಮ ಶರವ । ವಾಮಹಸ್ತ । ದಲ್ಲಿ ಪಿಡಿದು ।
ಭೂಮಿ[3]ಪಾಲ । ನೊಡನೆ ನುಡಿದ । ನೇಮದಿಂದ । ಲಿ[3]— ॥ ೨೫೫ ॥

ವಾಲಿ—

ಏ ದುರಾತ್ಮ । ಕಪಟವಿದ್ಯ । ಸಾಧಿಸಿದೆಲ । ಭಳಿರೆ ಯೆಂ ।
ತಾದರೂ । ಕೀರ್ತಿ ಬಂತು । ಮೇದಿನಿಯೊ । ಳು—॥
ಬೋಧೆಯಿಂದ । ಸಮರದೊಳಗೆ । ಸೋದರನ್ನ । ಮೊಗವನೋಡಿ ।
ಕ್ರೋಧದಿಂದ । ಜಗದುಪತಿಯ । ಮೂದಲಿಸಿದ । ನು— ॥ ೨೫೬ ॥

---

1 ತಟ್ಟಬಡಿ (ಅ) 2 ಮರೆಯೊಳಿದ್ದು ಶರವನಾಂತು ಬಲಿ (ಕಾ)
3 ಪತಿಯ ಕಂಡು ಲಯದ ಭೀಮನಂದದಿ (ಅ)

೮೨ ರಾಗ ಕುರಂಜಿರಾಗ—ಅಷ್ಟತಾಳ ೧

ಜಾ—ಣ । ನಹುದಹುದು । ದೋ—ಸಂ । ಗರಕೆ ಪ್ರ ।
ವೀಣ । ನಹುದಹುದು । ದೊ—॥
ಕ್ಷೋಣಿಯೊ । ಳಗೆ ನಿನ । ಗೆಣೆಯಿಲ್ಲ । ಭಳಿರೆ ಸು । ಜಾಣ—। ॥ ಪಲ್ಲವಿ ॥

ಇನ ವಂಶ । ದರಸುಗ । ಳೊಳಗೆ ।— ಹಿಂದೆ ।
ಜನಿಸಿದ । ವರು ನಿನ್ನ । ಕೆಳಗೆ ।
ಘನಜೋರ । ತನದ ಶಿ । ಖಂಡಿವಿ । ದ್ಯೆಯನೆಷ್ಟು ।
ದಿನ ಸಾಧಿ । ಸಿದೆಯೊ ನೀ । ನು—ಲಂ । ಡಿಗಳ ಸ ।
ದ್ಗುಣವ ಶೋ । ಧಿಸಿದೆ ತಾ । ನು—ನಿ । ನ್ನಂಥ ಕು ।
ಜನರಿಲ್ಲ । ಸಾಕ್ಷಿಗಿ । ನ್ನು—ರಾ । ಘವ ಬಲು ॥ ೨೫೭ ॥

ಗಂಡನಿ । ಲ್ಲದ ಹೆಂಗ । ಳಂತೆ, ।—ನಾಚಿ ।
ಕೊಂಡು ನೀ । ಮರೆಯಲ್ಲಿ । ನಿಂತೆ ।
ಹೆಂಡತಿ । ಗಾಗಿ ಕಂ । ಡವರ ಮಾ । ತಿನ ಮೇಲೆ ।
ಬಂಡಾಟ । ಗಳ ಮಾಡಿ । ದೆ — ಮೋ । ಸದಲಿ ಬಿಲ್ ।
ಗೊಂಡು ಬಾ । ಣವ ಹೊಡಿ । ದೆ—ಜೋ । ಡಾಗಿರ್ದ ।
ಗಂಡುಸು । ತನ ನೋಡಿ । ದೆ—ರಾ । ಘವ ಬಲು ॥ ೨೫೮ ॥

ಲೇಸಾಯಿ । ತಯ್ಯ ನಿ । ನ್ನಂಗ, ।—ಇನ್ನು ।
ಏಸು ಪೇ । ಳುವರೆ ಪ್ರ । ಸಂಗ ।
ಮೋಸದೊ । ಳೆನ್ನ ಸಂ । ಹರಿಸಿದೆ । ಅದರಿಂದ ।
ಲೇಸು ಕೀ । ರ್ತಿಗಳು ಬಂ । ತು—ಕಾ । ಯದೊಳಿದ್ದ ।
ಆಶಾಪಾ । ಶಗಳು ಸಂ । ತು—ಮು । ತ್ಸರವೆಂಬ ।
ವಾಸಿಪಂ । ಥಗಳ[1]ನ್ನೆಂ । ತು—ರಾ । ಘವ ಬಲು ॥ ೨೫೯ ॥

(ಅಂಗದನೊಡನೆ ತಾರೆಯು ಪ್ರವೇಶಿಸಿ ವಾಲಿಯ ಮೇಲೆ ಬಿದ್ದು ದುಃಖಿಸುತ್ತಾರೆ.)

೮೩ ಭಾಮಿನಿಷಟ್ಪದಿ

ವಾಲಿಯಂಗದ ಶರವಿಡಿದು ಭೂ
ಪಾಲಕನ ಮೂದಲಿಸೆ ವಾನರ
ಜಾಲದೋಸರಿಕೆಯಲಿ ತಾರಾದೇವಿ ನಡೆತಂದು ।

1 ನ್ನುಂಟೇ (ಕಾ)

ತಾರೆ—

ಬಾಲನಂಗದಸಹಿತ ರಮಣನ
ಮೇಲೆ ಬಿದ್ದಳುತಿರಲು ನತಜನ
ಪಾಲ ಸಂತೈಸುತ್ತ ಬಳಿಕಿಂತೆಂದನವನೊಡನೆ ॥ ೨೬೦ ॥

೮೪ ರಾಗ ಮಧ್ಯಮಾವತಿ—ಏಕತಾಳ ೪

ರಾಮ—

,ವಾನ । ರಾಧಿಪ ।, ಕೇಳಿನ್ನ । ಮಾತ—।
,ನೀನೆನ್ನ । ಜರಿವದೇ ।, ತಕೆ ಇಂದ್ರ । ಜಾತ ॥
,ದಾನವ । ರುಗಳ ದು ।, ಷ್ಟರ ತಲೆ । ಯರಿದು ।
,ಕ್ಷೋಣೀಭಾ । ರವನಿಳು ।, ಹುವದೆಮ್ಮ । ಬಿರುದು ॥ ೨೬೧ ॥

,ನ್ಯಾಯವೆ । ತಮ್ಮನ ।, ಸತಿಯ ಮು । ಟ್ಟುವದು ।
,ಹೇಯವಾ । ದುದರಿಂದ ।, ದೋಷ ತ । ಟ್ಟುವದು ।
,ಪ್ರಾಯಶ್ಚಿ । ತ್ತ[1]ಗಳಿದು[1] ।, ಪರದೋಷ । ಗಳಿಗೆ ।
,ಕಾಯಖಂ । ಡನವೆಂಬ ।, [2]ನಿಜಮಾತಿ । ನೊ[2]ಳಗೆ ॥ ೨೬೨ ॥

,ಮುಂದಿನ್ನು । ಬದುಕಬೇ ।, ಕೆಂಬಾಸೆ । ಯುಂಟೆ ।
,ಹಿಂದೆ ತೆ । ಗೆವೆ ಬಾಣ ।, ವದು ನೋಯ ದಂತೆ ।
,ಒಂದೇ ಬು । ದ್ಧಿಯೊಳಿಲ್ಲ ।, ಸತ್ಯವ । ಬಿಡದೆ ।
,ಚಂದವಾ । ಗಿರುವುದು ।, ಸರ್ವರೂ । ಕಡೆಗೆ ॥ ೨೬೩ ॥

ವಚನ ॥ ಇಂತೆಂದು ಶ್ರೀರಾಮದೇವರು ಅಪ್ಪಣೆಯಂ ಕೊಡಲಾಗಿ ಆಗ ವಾಲಿಯು ಈತನು ಸಾಕ್ಷಾತ್ ನಾರಾಯಣನೆಂದೇ ತಿಳಿದು ಇವನ ಬಾಣದಿಂ ಮರಣ ವಿಟ್ಟರೆ ತನಗೆ ಸಾಲೋಕ್ಯ ಮುಕ್ತಿಯಂ ಪಾಲಿಸುವನೆಂದು ಆತನೊಡನೆ ಏನೆಂದನು ಎಂದರೆ—

೮೫ ರಾಗ ಎರುಕಲ ಕಾಂಭೋಜಿ—ಅಷ್ಟತಾಳ ೨

ವಾಲಿ—

ವಿಕಸಿತಾಂ । ಬುಜದಳ । ಲೋಚನ ।—ಪಾಪ । ಮೋಚನ—।
ಸಕಲಾ । ಭರಣ ವಿ । ಭೂಷಣ—।
ಜಯ ಜಯ । ರಾಮಹ । ರೇ— ॥ ೨೬೪ ॥

1 ವನುಂಡೆ (ಕಾ) 2 ಕಡುತಪ (ಕಾ)

ದುರ್ಜನ । ಜನಸಂ । ಹಾರಣ ।—ಸದ್ವಿ । ಚಾರಣ ।
ಸಜ್ಜನ । ಜನಪರಿ । ಪಾಲನ—॥ ಜಯ ಜಯ ॥ ೨೬೫ ॥

ಕಂಜಬಾಂ । ಧವಕುಲ । ಶೇಖರ ।—ಕರು । ಣಾಕರ—।
ಕುಂಜರ । ವರದ ವಿ । ಭಾವರ ॥ ಜಯ ಜಯ ॥ ೨೬೬ ॥

ಅ೬ ರಾಗ ಮೋಹನ—ಅಷ್ಟತಾಳ ೩

ಕರುಣವಿ । ದ್ದರೆ ಸಾ । ಕು—ಪ । ದಾಬ್ಜದ ॥ ಪಲ್ಲವಿ ॥

ಭೂತಪಂ । ಚಕ ದೇಹ । ಏತಕೆ । ಷ್ಟರ ಮೋಹ ।
ಚೇತನಾ । ತ್ಮಕ ನಿಮ್ಮ । ನೀತಿ ಪ । ದಾಂಬುಜದ ॥ ೨೬೭ ॥

ತಂದೆ ತಾ । ಯಿಗಳೆಂಬು । ದೊಂದು ಸ್ವ । ಪ್ನವಿಚಾರ ।
[1]ಎಂದೂ ನಿ । ನ್ನ ಪದಾರ । ವಿಂದ ಪೂ । ಜಿಸು[1]ವಂಥ ॥ ೨೬೮ ॥

ಮೂರು ದಿ । ನದ ಈ ಸಂ । ಸಾರ ಶಾ । ಶ್ವತವಲ್ಲ ।
ಘೋರದುಃ । ಖಗಳ ಸಂ । ಹಾರ ಮಾ । ಡುವದೊಂದು ॥ ೨೬೯ ॥

ಅ೭ ಆನಂದಭೈರವಿ—ಏಕತಾಳ ೪

ರಾಮ ನಿ । ನ್ನಯ ಬಾಣ ।, ತಾಗಿದ । ಮೇಲಿನ್ನುಂಟೆ ।
ಭೂಮಿಯೊ । ಳಾಸೆ ಯೆನ । ಗೆ—।—।
ಕಾಮಿತ । ಬೇರಿಲ್ಲ । ಚಿತ್ತಮು । ಕ್ತಿಯನಿತ್ತು ।
ಪ್ರೇಮದಿ । ಕಳುಹೆನ್ನ । ನು— ।— ॥ ೨೭೦ ॥

ಇತ್ತ ಬಾ । ತಮ್ಮ ಸುಗ್ರೀ । ವ—ಕಿ । ಷ್ಕಿಂಧ ಪಾರು ।
ಪತ್ಯವ । ಪಾಲಿಸ । ಯ್ಯ—।—।
ಸತ್ಯವಂ । ತೆ ಈ ತಾರೆ । ಯ—ಮಾ । ನವ ಕಾಯ್ದು ।
ಸ್ವಸ್ಥದಿ । ಲಾಲಿಸ । ಯ್ಯ—।— ॥ ೨೭೧ ॥

ಬಾಲ, ಬು । ದ್ಧಿಯನರಿ । ಯ—ಈ । ಅಂಗದನ ।
ಮೇಲೆ ಕ । ಟಾಕ್ಷವಿರ । ಲಿ—।—।
ಮೇಲಾದ । ಕಪಿವೀರ । ರು—ನಮ್ಮ । ನಂಬಿಪ್ಪ ।
,ಕಾಲವಿ । ದ್ದಂಥವ । ರು—।— ॥ ೨೭೨ ॥

---

1 ಮುಂದೆ ನಿನ್ನಯ ಪಾದ । ಹೊಂದಿಕೊಂಡಿರುವಂಥ (ಅ)

,ಕಷ್ಟವ | ಮಾಡಿಕೊಳ್ಳ | ದೆ—ಸ | ಜ್ಜನರೊಳು |
,ದುಷ್ಟನೆ | ನಿಸಿ ಕೊಳ್ಳ | ದೆ—|—|
,ಅಷ್ಟಸೌ | ಭಾಗ್ಯದಿಂದ | ಲಿ—ಕಿ | ಷ್ಕಿಂಧಾರಾಜ್ಯ |
ಪಟ್ಟವಾ | ಳಿರು ಸುಖ | ದಿ—|— || ೨೭೩ ||

ಭರತ ಶ | ತ್ರುಘ್ನರಂದ | ದಿ—ಶ್ರೀ |—ರಾಮು ನಮ್ಮ |
ತರಳಸು | ಗ್ರೀವರ | ಲ್ಲಿ— ||
ನಿರುತ ಕ | ಟಾಕ್ಷವಿರ | ಲಿ—ಈ | ವಂಶದವರ |
ಕರುಣಿಸು | ಮುಕ್ತಿಂ ದೇ | ಹಿ—|— || ೨೭೪ ||

ಶ್ರೀರಾಮು, | ರಾಮು ರಾ | ಮು—ರಾ | ಜೀವನೇತ್ರ |
ನಾರಾಯ | ಣ ನಾರಾಯ | ಣ—|— || ೨೭೫ ||

೮೮ ವಾರ್ಧಿಕ ಷಟ್ಪದಿ

ಬಾಣವನು ಸೆಳೆದು ತೆಗೆದಾಕ್ಷಣವೆ ನೋಡಿದರೆ
ಪ್ರಾಣ ಹಾರಿತು ಇಂದ್ರಸುತಗೆ ತಾರಾದೇವಿ
ಕಾಣುತಂಗದ ಸಹಿತ ಸುಗ್ರೀವ ಮೊದಲಾಗಿ ನಾನಾಗುಣವ ಪೊಗಳುತ ||
ಗೇಣವಿಲ್ಲದೆ ಕ್ಲೇಶದಿಂದಳುವ ವೇಳೆಯುಲಿ
ಕ್ಷೋಣಿಪತಿ ರಘುನಾಥ ಸಂತೈಸಿ ಬಳಿಕ ವರ
ಏಣನೇತ್ರೆಯ ಮೊಗವ ನೋಡಿ ಕಂಬನಿ ತೊಡೆದು ತಾನೆಂದನತಿಧೈರ್ಯವ || ೨೭೬ ||

೮೯ ರಾಗ ಮೋಹನ—ಏಕತಾಳ ೭

ರಾಮು—

ಅಳುವ—ದೇ | ತಕೆ ನೀ ತಾ | ರೆ—ನಿ | ನ್ನಯ ಮನ |
ದೊಳು ಧೈ—ರ್ಯ | ತಾಳು ನೀ | ರೆ—|—||
ನೆಲೆಯು—ಲ್ಲ | ಸಂಸಾರ | ವೆಂಬುದು | ಮೊದಲೆ ನೀ |
ತಿಳಿದಿ—ಪ್ಪ | ಕಾರ್ಯ ಕಾ | ಣೆ—ಕೇ | ಳಿಲೆ ಜಾಣೆ || ೨೭೭ ||

ಬಾಲ—ನೀ | ಮರುಗದಿ | ರು—ಲ | ಕ್ಷ್ಮಣನಂತೆ |
ಪಾಲಿ—ಸಿ | ಕೊಂಬೆ ಸೇ | ರು—|—||
ವಾಲಿ—ನಂ | ದನ ಹಿಡಿ | ಕೊಡುವೆ ನಂ | ಬುಗೆಯನ್ನು |
ಜಾಲ—ಮಾ | ತಲ್ಲವೆ | ನ್ನ—ನಂ | ಬಿರು ಮುನ್ನ || ೨೭೮ ||

ತರಣಿ—ನಂ | ದನ ಸುಗ್ರೀ | ವ—ತಾ | ರಾದೇವಿ |
ಗರುಹು—ನೀ | ನತಿಧೈರ್ಯ | ವ—|—||
ಧರೆಯೊ—ಳು | ಸುಜನರೀ | ಪೇಳಿಯು | ನಾಮವ |
ಸ್ಮರಿಸಿ—ಕೊಂ | ಡಿರಲು ಮೋ | ಕ್ಷ—ಎ | ಮ್ಮ ಕಟಾಕ್ಷ || ೨೭೯ ||

೯೦ ವಾರ್ಧಿಕ ಷಟ್ಪದಿ

ಅರಸು ಮಕ್ಕಳು ಕೇಳಿ ನಿಮ್ಮ ಪಿತನೀರೀತಿ
ವರ ಪತಿವ್ರತೆಸುತರ ಸಂತಯ್ಸುತಂದು ವಾ
ನರಶಾಸ್ತ್ರವಿಧಿಯಿಂದ ವಾಲಿಗಾಗುವ ಶೇಷಕರ್ಮಂಗಳಂ ವಿರಚಿಸಿ ||
ಸುರರು ಮುನಿಗಳು ಸಿದ್ಧಸಾಧ್ಯ ಗಂಧರ್ವ ಕಿ
ನ್ನರ ಕಿಂಪುರುಷರು ರಾಘವಸಹಿತ ಕಿಷ್ಕಿಂಧ
ಪುರಕೆ ಯಧಿಪತಿಯಾಗಿ ಸುಗ್ರೀವನಂ ಮಾಡಿದರು ಶಾಸ್ತ್ರವಿಧಿಗಳಿಂದ ||೨೮೦||

೯೧ ಧವಳಾರ—ತ್ರಿವುಡೆತಾಳ ೧

ನಾಕವನಾ | ಳುವ ದೇ | ವತೆಗಳು |
ಶ್ರೀಕರ ಸು | ಗ್ರೀವನ | ಹರಸುತ |
ಈ ಕಪಿಗಳಿ | ಗೆ—| ಲ್ಲ—| ಅರ—| ಸಾ—| ಗು—|
ಅರಸಾಗೆಂ | ದೆನುತಲಿ | ಹರಸುತ |
ಶ್ರೀಕರಾ | ಕ್ಷತೆ | ಯ—| ತಳಿ—| ದ—| ರು— || ೨೮೧ ||

ಗುಪಿತದೊಳನು | ಗಾಲ ವ | ನದೊಳಿಹ |
ತಪಸಿಗಳೈ | ತಂದು ಸು | ಗ್ರೀವನ |
ಕಪಿನಾಯಕ | ರಿಗೆ | ಲ್ಲ—| ಅರ—ಸಾ—| ಗು—||
ಅರಸಾಗೆಂ | ದೆನುತಲೆ | ಹರಸುತ |
ಅಪರಿಮಿತಾ | ಕ್ಷತೆ | ಯ—| ತಳಿ—| ದ—| ರು— || ೨೮೨ ||

ಅಂಬರದಲಿ | ಚರಿಸುವ | ನಾರದ |
ತುಂಬುರರ | ಯ್ತಂದು ಸು | ಗ್ರೀವನ |
ಜಾಂಬವ ಮೊದ | ಲಾ—| ದ—| ಕಪಿ—| ಗ— ಳ—|
ಕಪಿಗಳಿಗರ | ಸಾಗೆಂ | ದೆನುತಲೆ |
ಸಂಭ್ರಮದ | ಕ್ಷತೆ | ಯ—| ತಳಿ—| ದ—| ರು— || ೨೮೩ ||

೯೨ ವಾರ್ಧಿಕ ಷಟ್ಪದಿ

ತರಳ[1] ಕೇಳಿಪ್ಪತ್ತ್ರಯಿಃದು ದಿನಕೆ ಕಿಷ್ಕಿಂಧ
ಪರುವತದಿ ನಿಲಲು ಮಳೆಗಾಲ ಬಂತೆಂದು ವಾ
ನರಸ್ಸೈನ್ಯಮಂ ಕಳುಹಿ[1] ನಾಲ್ಕುತಿಂಗಳ ಮೇಲೆ ಬರುವ ತಹಗಳನೆ ಮಾಡಿ ||
ತರಣಿನಂದನನ [2]ಬೀಳ್ಕೊಟ್ಟು ರಘುರಾಮು ಸೋ
ದರಸಹಿತ ಶ್ರವಣಪರ್ವತಕೆ ನಡೆತಂದಲ್ಲಿ
ಇರುವರೆಂಬಲ್ಲಿಗಾಯಿತು ಸಂಧಿ ಕಣ್ವಪುರಕೃಷ್ಣನ[2] ಕಟಾಕ್ಷದಿಂದ || ೨೮೪ ||

---

1 ರಿರಕೇಳಿರಿಪ್ಪತ್ತಯ್ದು ದಿವಸ ವಾ। ನರರಧಿಪ ನೊಡನಿದ್ದು ಕಿಷ್ಕಿಂಧೆ
ಯೊಳಗೆ ಕಪಿ। ವರರುಗಳ ಬೀಳ್ಕೊಂಡು। (ಅ)

2 ನುಳಿದಾಗ ಲಕ್ಷ್ಮಣನೊಡನೆ।
ಮರಳಿದಂ ರಘುಜನೆಂಬಲ್ಲಿಗಾಯಿತು ಸಂಧಿ।
ವರಕಣ್ವಪುರದೊಡೆಯನಾಗಿರುವ ಶ್ರೀಕೃಷ್ಣರಾಯನ (ಕಾ, ಅ)

# ಉಂಗುರ ಸಂಧಿ

## ಪ್ರಸಂಗದ ಕಥಾಸಾರ

ಸೀತಾನ್ವೇಷಣಕ್ಕಾಗಿ ಸುಗ್ರೀವನು ಕಪಿವೀರರನ್ನು ನೆರವಿಸಿಕೊಂಡು ಸಕಾಲಕ್ಕೆ ಬರಲಿಲ್ಲವೆಂಬುದರಿಂದ ರಾಮನು ಸಂದೇಹಪಟ್ಟು ಲಕ್ಷ್ಮಣನನ್ನು ಕಿಷ್ಕಿಂಧೆಗೆ ಕಳುಹಿಸುತ್ತಾನೆ. ಒಡನೆಯೇ ಸುಗ್ರಿವನು ಎಚ್ಚರಿತು ಹನುಮ, ಜಾಂಬವ, ಅಂಗದಾದಿ ಸಮಸ್ತ ಕಪಿ ಬಲದೊಂದಿಗೆ ಬಂದು ಅವರನ್ನು ನಾಲ್ಕು ತಂಡವಾಗಿ ವಿಂಗಡಿಸಿ, ನಾಲ್ಕು ದಿಕ್ಕಿನ ದೇಶಗಳಲ್ಲಿ ಎಲ್ಲಿದ್ದರೂ ಹುಡುಕಾಡಿ ಒಂದು ತಿಂಗಳೊಳಗೆ ಸೀತೆಯ ಸೋವನ್ನು ತಿಳಿದು ಬರಬೇಕೆಂಬ ಕಟ್ಟಪ್ಪಣೆಯಿಂದ ಕಳುಹಿಸುತ್ತಾನೆ. ಶ್ರೀರಾಮನು ಹನುಮಂತನನ್ನು ಬಳಿಗೆ ಕರೆದು ಏಕಾಂತದಲ್ಲಿ, ಸೀತೆಯನ್ನು ಕಂಡರೆ ನಂಬಿಕೆಯ ಕುರುಹಿಗೆಂದು ತನ್ನ ಮುದ್ರೆಯುಂಗುರವನ್ನು ಆತನ ಕೈಯಲ್ಲಿ ಕೊಡುತ್ತಾನೆ. ಹಾಗೆ ತಿಂಗಳು ದಿನ ಎಲ್ಲೆಲ್ಲಿ ಹುಡುಕಾಡಿದರೂ ಸೀತೆಯ ಹಾಗೂ ರಾವಣನ ಸುಳಿವು ಸಿಕ್ಕದಿರಲಾಗಿ ಕಪಿಗಳೆಲ್ಲ ನಿರಾಶೆಯಿಂದ, ಮುಂದಿನ್ನೇನು ಗತಿಯೆಂದು ಚಿಂತಿಸುತ್ತ ಸಮುದ್ರ ದಡದಲ್ಲಿ ಒಟ್ಟಾಗಿ ಕುಳಿತಿರುತ್ತಾರೆ. ಆಗ ಜಟಾಯುವಿನ ತಮ್ಮ ಸಂಪಾತಿಯು ಬಳಿಗೆ ಬಂದು ವಿಚಾರಿಸಿ, ಸಮುದ್ರ ಮಧ್ಯದಲ್ಲಿ ರಾವಣೇಶ್ವರನ ಲಂಕಾನಗರವಿರುವ ದಿಕ್ಕನ್ನು ತೋರಿಸುತ್ತಾನೆ.

ಸಮುದ್ರವನ್ನು ಲಂಘಿಸಿ ಲಂಕೆಯಲ್ಲಿ ಹುಡುಕಿ ಬರುವುದಕ್ಕೆ ಹನುಮಂತನೇ ಸಮರ್ಥನೆಂದು ವೃದ್ಧನಾದ ಜಾಂಬವನು ನಿರ್ಣೈಸಿದ ಪ್ರಕಾರ, ಹನುಮಂತನು ಹಾರಿ ಲಂಕೆಯನ್ನು ಸೇರಿ, ಅಲ್ಲಿ ದುರ್ಗ ರಕ್ಷಣೆಯಲ್ಲಿದ್ದ ಲಂಕಿಣಿಯೆಂಬ ರಕ್ಕಸಿಯನ್ನು ಹೊಡೆದು ಭಂಗಿಸಿ ಮಧ್ಯರಾತ್ರಿ ಕಾಲದಲ್ಲಿ ಕೋಟೆಯ ಒಳಹೊಕ್ಕು ಹುಡುಕುತ್ತಾ,ರಾವಣನೊಂದಿಗೆ ಶಯ್ಯಾಗೃಹದಲ್ಲಿ ಮಲಗಿರುವ ಮಂಡೋದರಿಯನ್ನು ಸೀತೆಯೆಂದೇ ಭ್ರಮಿಸಿ ಒಮ್ಮೆಗೆ ತಪ್ಪೆಣಿಸುತ್ತಾನೆ. ಮತ್ತೆ ಪರಾಂಬರಿಸುವಲ್ಲಿ ಅದು ಸೀತೆಯಲ್ಲವೆಂದು ತಿಳಿದವನಾಗಿ, ಕೋಟೆಯೊಳಗೆಲ್ಲಿಯೂ ಸೀತೆಯಿರುವ ಠಾವಿಲ್ಲವೆಂದು ಹೊರವಳಯಕ್ಕೆ ಬಂದು ಹುಡುಕಾಡುತ್ತಿರುವಲ್ಲಿ, ಸೀತೆಯನ್ನು ರಾವಣನು ಬಂಧನದಲ್ಲಿಟ್ಟಿರುವ ಅಶೋಕವನವು ಕಣ್ಣಿಗೆ ಬೀಳುತ್ತದೆ. ಹಾಗೂ ಆ ವನದೊಳಗೆ 'ಶಿಂಶುಪ' ಎಂಬೊಂದು ಮರದಡಿಯಲ್ಲಿ ಸುತ್ತಲೂ ರಾಕ್ಷಸಿಯರ ಕಾವಲಿನಲ್ಲಿ ರಾಮಧ್ಯಾನದಿಂದಿರುವ ಸೀತಾದೇವಿಯ ದರ್ಶನವಾಗುವುದು.

ಆಮೇಲೆ ಹನುಮಂತನು ಶ್ರೀರಾಮನ ವೃತ್ತಾಂತಗಳನ್ನೆಲ್ಲ ಸಾಂಗವಾಗಿ ತಿಳಿಸುವುದಲ್ಲದೆ ರಾಮನ ಮುದ್ರೆಯುಂಗುರವನ್ನೂ ಕೊಟ್ಟು ಸೀತೆಯನ್ನು ಸಮಾಧಾನಪಡಿಸುತ್ತಾನೆ. ಸೀತೆಯು ತನ್ನ ಕುರುಹನ್ನು ರಾಮನಿಗೆ ತೋರಿಸುವುದಕ್ಕಾಗಿ ಚೂಡಾಮಣಿಯನ್ನು ಹನುಮಂತನ ಕೈಯಲ್ಲಿ ಕೊಡುತ್ತಾಳೆ.

ಹನುಮಂತನು ಮುಂದೆ ಎಂಟುದಿನದೊಳಗೆ ಶ್ರೀರಾಮನನ್ನು ಕರಕೊಂಡುಬಂದು ರಾವಣನನ್ನು ಕೊಲ್ಲಿಸಿ ಸೀತೆಯನ್ನು ಬಂಧನದಿಂದ ಬಿಡಿಸುವುದಾಗಿ ಭರವಸೆಯಿತ್ತು ಬೀಳ್ಕೊಂಡು ಹೊರಟುಬರುತ್ತಾ ರಾವಣನ ಸುಂದರವಾದ ಉದ್ಯಾನವನವನ್ನು ಹುಡಿಗೆಯ್ಯುತ್ತಾನೆ. ಆಗ ಯುದ್ಧಕ್ಕೆ ಬಂದ ರಾಕ್ಷಸರನ್ನು ಸದೆಬಡಿದು ಕೊನೆಗೆ, ರಾವಣನನ್ನು ಕಂಡು ಜರೆಯಬೇಕೆಂಬ ತವಕದಿಂದ ಇಂದ್ರಜಿತುವಿನೊಡನೆ ಯುದ್ಧದಲ್ಲಿ ಸೋತಂತೆ ನಟಿಸಿ ಆತನ ಬಂಧನಕ್ಕೆ ಒಳಪಡುತ್ತಾನೆ. ಇಂದ್ರಜಿತುವು ಹನುಮಂತನನ್ನು ರಾವಣನ ಸಮ್ಮುಖಕ್ಕೆ ಎಳೆಸಿ ಕೊಂಡೊಯ್ಯುತ್ತಾನೆ. ಹನುಮಂತನ ಜರೆದಾಟಕ್ಕೆ ಕೋಪೋದ್ರಿಕ್ತನಾದ ರಾವಣನು ಹನುಮಂತನ ಬಾಲಕ್ಕೆ ಬಟ್ಟೆಸುತ್ತಿ ಎಣ್ಣೆಯಲ್ಲದ್ದಿ ಬೆಂಕಿ ಹಚ್ಚುವಂತೆ ಆಜ್ಞಾಪಿಸುತ್ತಾನೆ. ಹನುಮಂತನು ತನ್ನ ಬಾಲದ ಬೆಂಕಿಯಿಂದ ರಾವಣನ ಗಲ್ಲಮೀಸೆಗಳನ್ನು ಸುಟ್ಟುದಲ್ಲದೆ, ಪೌಳಿಯ ಮೇಲೇರಿ ರಾಕ್ಷಸರ ಮನೆಮನೆಗಳನ್ನೆಲ್ಲ ಅಗ್ನಿಗೆ ಆಹುತಿ ಕೊಟ್ಟು, ಸಮುದ್ರದಲ್ಲದ್ದಿ ಬಾಲದ ಬೆಂಕಿಯನ್ನಾರಿಸಿಕೊಂಡು ಒಂದೇ ನೆಗೆತದಲ್ಲಿ ಹಿಂದಕ್ಕೆ ಹಾರಿ, ಕಡಲಕರೆಯಲ್ಲಿ ತನಗಾಗಿ ಕಾದಿದ್ದ ಜಾಂಬವಾದಿಗಳನ್ನು ಸೇರಿ, ಎಲ್ಲರೊಂದಾಗಿ ಸಂತೋಷದಿಂದ ಉಬ್ಬೇರಿ ರಾಮಸುಗ್ರೀವರಿದ್ದಲ್ಲಿಗೆ ಬಂದು, ಹನುಮಂತನ ಈ ಸಾಹಸವನ್ನು ಬಣ್ಣಿಸಿ, ಸೀತೆಯ ವರ್ತಮಾನವನ್ನು ತಿಳಿಸಿ, ಆಕೆಯು ಕುರುಹಿಗಾಗಿ ಕೊಟ್ಟ ಚೂಡಾಮಣಿಯನ್ನು ಹನುಮಂತನು ಶ್ರೀರಾಮನಿಗೆ ಕೊಟ್ಟು ಕೈಮುಗಿದನೆಂಬಲ್ಲಿಗೆ 'ಉಂಗುರಸಂಧಿ', ಅಥವಾ 'ಚೂಡಾಮಣಿ'ಯೆಂಬ ಈ ಯಕ್ಷಗಾನ ಪ್ರಸಂಗಕ್ಕೆ ಮಂಗಲವಾಗುವುದು.

## ಮುಖ್ಯ ಪ್ರಕರಣಗಳು

೧. ಸೀತಾನ್ವೇಷಣ
೨. ಸಮುದ್ರಲಂಘನ
೩. ಸೀತಾಸಂದರ್ಶನ
೪. ಲಂಕಾದಹನ

## ಮುಖ್ಯ ಭೂಮಿಕೆಗಳು

ರಾಮ
ಲಕ್ಷ್ಮಣ
ಸುಗ್ರೀವ
ಹನುಮಂತ
ಜಾಂಬವ
ಅಂಗದ
ಕಪಿಗಳು
ಈಶ್ವರ
ಪಾರ್ವತಿ
ಬ್ರಹ್ಮ
ತೃಣಬಿಂದುಮುನಿ
ಸಂಪಾತಿ
ರಾವಣ
ಶೃಂಗಾರರಾವಣ
ಪ್ರಹಸ್ತ
ಇಂದ್ರಜಿತು
ವಿಭೀಷಣ
ಇತರ ರಾಕ್ಷಸರು
ಸೀತೆ
ತಾರೆ
ಸ್ವಯಂಪ್ರಭೆ
ಸರಮೆ
ತ್ರಿಜಟೆ

# ಉಂಗುರಸಂಧಿ

(ರಾಮುಲಕ್ಷ್ಮಣರ ಪ್ರವೇಶ)

೧ ವಾರ್ಧಿಕಷಟ್ಪದಿ

ಕುಶನೆ ಕೇಳ್ ವಾಲಿಯಂ ಸಂಹರಿಸಿ ಕಿಷ್ಕಿಂಧ
ದೆಸೆಯಾಧಿಪತ್ಯಮಂ ಸುಗ್ರೀವನಿಂಗಿತ್ತು
ಕುಶಲದಿಂ ಶ್ರವಣಪರ್ವತಕೆ ನಡೆತಂದಲ್ಲಿ ಮಳೆಗಾಲವಂ ಕಳೆದರು ।
ವಸುಧೆಪಾಲಕನೊಂದು ದಿನ ತನ್ನ ಮನದಿ ಚಿಂ
ತಿಸುತ ಜನಕಾತ್ಮಜೆಯ ನೆನೆ ನೆನೆದು ದುಃಖಿಸುತ
ವಿಸರಿಸುವ ಸ್ವೈರಣೆಯೊಳಂತರಂಗದಿ ಕರೆದು ಸೌಮಿತ್ರಿಗಿಂತೆಂದನು ॥ ೧ ॥

೨ ರಾಗ ಮಧ್ಯಮಾವತಿ—ಏಕತಾಳ ೪

ರಾಮ—

,ಪೋಗು । ಸೌಮಿತ್ರ ।, ಸುಗ್ರೀವ । ಬರಲಿಲ್ಲ ।
,ಬೇಗದಿಂ । ನೀನೀಗ ।, ಕಿಷ್ಕಿಂಧೆ । ಗೆ—।
,ನಾಗ[1]ವೇ । ಣಿಯರೊಳ ।, ಗತಿಚೆಲು । ವೆಯು[1] ಸುಖ ।
,ಭೋಗದಿಂ । ದೆಮ್ಮನು ।, ಮರೆತನೊ । ರವಿಜ ॥ ೨ ॥

,ತನ್ನ ಕಾ । ರ್ಯಗಳಾ ।, ಗುವ ಪ । ರ್ಯಂತ ತಾ ।
,ನಿನ್ನನೆ । [2]ನೀನೆ ಯೆಂ ।, ದೆನುತ ಮ । ತ್ತೆ[2]—।
,ಕನ್ನೆ ರಾ । ಜ್ಯವು ತನ್ನ ।, ತನಗೆ ಸಿ । ಕ್ಕಿದ ಮೇಲೆ ।
,ಇನ್ನು ಹಂ । ಗೇನೆಂದು ।, ಮರೆತನೊ । ರವಿಜ ॥ ೩ ॥

೩ ರಾಗ ಸೌರಾಷ್ಟ್ರ—ರೂಪಕತಾಳ ೧

ಲಕ್ಷ್ಮಣ—

ಅಗ್ರಜಾ ಮ । ಹಾ—। ಅಣ್ಣವಾಲಿ । ಯ—।
ನಿಗ್ರಹಿಸಿ । ದೆ—। ನೀರಜಾಂಬ । ಕ—॥
ಸುಗ್ರೀವಂಗೆ । ನಾ—। ಸಾಲದಾಪೆ । ನೆ—।
ಉಗ್ರಮೂರು । ತಿ—। ಕಳುಹು ಯೆನ್ನ । ನೆ— ॥ ೪ ॥

---

1 ಸನ್ನಿಭವೇಣಿಯಳ । ರತಿಸುಖ (ಕಾ, ಅ) 2 ನಂಬಿದೆನೆಂದು ಚಾಳಿಸಿದ (ಓ)

೪ ರಾಗ ಕಲ್ಯಾಣಿ—ಏಕತಾಳ ೪

ರಾಮ—

,ಕಾರ್ಯಸಂ । ಗ್ರಹಗಳ । ಮಾಡಬೇ । ಕವನಿಂದ ।
,ಶೌರ್ಯ ಬೇ । ಡವೊ ಶಾಂತ ।, ಚಿತ್ತದಿ । ಪೋಗಿ ॥
,ಸೂರ್ಯನಂ । ದನನೊಳು ।, ಸೂಚನೆ । ಯನು ಗೆಯ್ದು ।
,ಧೈರ್ಯಮಾ । ನಿಯನಿಲ್ಲಿ ।, ಕರಕೊಂಡು । ಬಾ ಬೇಗ ॥ ೫ ॥

(ರಾಮನ ನಿಷ್ಕ್ರಾಮ)

೫ ಶಾರ್ದೂಲವಿಕ್ರೀಡಿತ ವೃತ್ತ

ಇಂತೆಂದಗ್ರಜ ನೇಮವಂ ಕೊಡಲದಂ ಕೈಕೊಂಡು ತದ್ವಾಕ್ಯಮಂ
ಶಾಂತಾಕಾರನ ದಿವ್ಯಪಾದಯುಗಳಕ್ಕಭಿವಂದಿಸುತ್ತಾ ಕ್ಷಣಂ
ಮಂತ್ರಾಸ್ತ್ರಂ ಘನಚಾಪ[1]ಹಸ್ತದಿ ಬರಲ್ ಕಂಡಾಗ ತತ್ಕೋಪಮಂ[1]
ಕಾಂತಾರತ್ನವೆನಿಪ್ಪ ತಾರೆ ಪೊಗಳುತ್ತಿಂತೆಂದಳಾ ವೀರಗಂ ॥ ೬ ॥

(ತಾರೆಯ ಪ್ರವೇಶ)

೬ ರಾಗ ಮಧ್ಯಮಾವತಿ—ಏಕತಾಳ ೪

ತಾರೆ—

,ದಶರಥ । ಸುತ ವೀರ ।, ಧರಣಿಪಾ । ಲ ಗಭೀರ ।
,ಕುಸುಮಸಾ । ಯಕರೂಪ ।, ಕೀರ್ತಿಕ । ಲಾ,ಪ— ॥ ಪಲ್ಲವಿ ॥

,ಧರಣಿಯಾ । ಳುವ ಮಹಾ ।, ದೊರೆಗಳು । ನೀ,ವು ।
,ಮರಮರ । ಚರಿಪ ವಾ ।, ನರರಲ್ಲೈ । ನಾ,ವು ॥
,ಸರಿಯೆ ನಿ । ಮ್ಮವರಿಗೆ ।, ಶಾಂತನಾ । ಗ,ಯ್ಯ ।
,ತರಣಿನಂ । ದನನೊಳು ।, ಕೋಪವೇ । ಕ,ಯ್ಯ ॥ ೭ ॥

ಲಕ್ಷ್ಮಣ—

,ಹಿಮಕರ । ಮುಖಿ ಕೇಳು ।, ತಾರೆ ಸು । ನೀ,ತೆ ।
,ಕಮಲಲೋ । ಚನೆ ಪುಣ್ಯ ।, ನಾಮೆ ವಿ । ಖ್ಯಾ,ತೆ ॥
,ಅಮರಾದಿ । ಗಳು ಮೆಚ್ಚ ।, ರಾಡಿ ತ । ಪ್ಪಿದರೆ ।
,ಕಮಲನೇ । ತ್ರನ ಕೂಡೆ ।, ಕಪಟವಾ । ಡುವರೆ ॥ ೮ ॥

---

1 ನೂಂಪಿಡಿದು ಮುಂದಯ್ತಂದುದಂ ಕಾಣುತ (ಜ)

,ಮಳೆಗಾಲ | ವನು ದಾಟೆ |, ಬರುವೆನೆಂ | ದೆನುತ |
,ಇಳೆಯ ಪಾ | ಲಕ[1]ಗೆಂದು |, ಬಂದವ | ನೀ , ತ[1] ||
,ಅಳಿವ ಕಾ | ಯದೊಳಿಂದು |, ಆಡಿ ತ | ಪ್ಪಿದರೆ |
,ಉಳಿವುದೆ | ಕುಲಕೀರ್ತಿ |, ನೀ ಕೇಳು | ತಾ , ರೆ || ೯ ||

ತಾರೆ—
,ಪರದೇಶ | ದೊಳಗಿದ್ದ |, ಕಪಿಗಳ | ನೆ , ಲ್ಲ |
,ಕರೆಸಿಕೊಂ | ಬುದಕಿಷ್ಟು |, ತಡವಾಯಿ | ತ , ಲ್ಲ ||
,ಇರಬೇಕು | ದಯೆ ಯೆಂದು |, ಇನಜನ | ತಂ , ದು |
,ಚರಣಕೊ | ಪ್ಪಿಸಿದಳು |, ಚಪಲಾಕ್ಷಿ | ಯಂ , ದು || ೧೦ ||

(ಸುಗ್ರೀವಾದಿ ಕಪಿಗಳ ಪ್ರವೇಶ)
೭ ವಾರ್ಧಿಕಷಟ್ಪದಿ

ಗುಣದಿಂದೊಡಂಬಡಿಸಿ ಕೋಪಮಂ ತಣಿಸಿ ಲ
ಕ್ಷ್ಮಣನ ಕಾಣಿಸಲೆಂದು ಸುಗ್ರೀವ ತನ್ನ ಕಪಿ
ಗಣಸಹಿತ[2]ಲೊಡಗೂಡಿ ಶೀಘ್ರದಿಂ ಪೊರಮ[2]ಟು ನಡೆತಂದರಾಕ್ಷಣದಲಿ |

(ರಾಮನ ಪ್ರವೇಶ, ಲಕ್ಷ್ಮಣನೂ ಸುಗ್ರೀವಾದಿಗಳೂ ರಾಮನಿದಿರಿಗೆ ಬಂದು ವಂದಿಸುತ್ತಾರೆ)

ಹನುಮ ಜಾಂಬವ ಸುಷೇಣಾಂಗದಂ ನಳ ನೀಲ
ರಣಪರಾಕ್ರಮಿ ಗವಯ ವಿವಿದ ಮೊದಲಾದ ಸಂ
ದಣಿಸಹಿತ ಬಂದು ರಾಮನ ಚರಣಕೆರಗಿ ಲಕ್ಷ್ಮಣನಣ್ಣಗಿಂತೆಂದನು || ೧೧ ||

೮ ರಾಗ ಕಾಂಭೋಜಿ—ಏಕತಾಳ

ಲಕ್ಷ್ಮಣ—
ಅಗ್ರಜಾ ಮ | ಹಾನುಭಾವ | ಆಲಿಸೆನ್ನ | ಬಿನ್ನಪವ |
ಸುಗ್ರೀವ ನಿ | ನ್ನೆ ನಾನಲ್ಲಿ | ಪೋಗುವಂಥ | ವೇಳೆಯಲ್ಲಿ |
ಅಗ್ರಗಣ್ಯ | ರೆಲ್ಲ ಕೂಡಿ | ತವ್ಮೊಳಗೆ ಮಾ | ತಾಡಿಕೊಂಡು |
ಶ್ರೀಘ್ರದಿಂದ | ಬರಬೇಕೆಂದು | ಪಯಣಕನುವಾ | ಗಿದ್ದರಂದು || ೧೨ ||

---

1 ನೊಳು ಈ ಮಾತಪೇಳ್ದ (ಕಾ), ನೆಲೆಮಾತ ಪೇಳ್ದ (ಓ)
2 ಶೀಘ್ರದಿಂ ಕಿಷ್ಕಿಂಧದಿಂ ಪೊರ (ಓ)

ತಪ್ಪುವಾತ । ನಲ್ಲಮಾತ । ತಮ್ಮವರೆ । ಲ್ಲರ ಕರೆಸಿ ।
ಒಪ್ಪವಿಟ್ಟು । ಕೊಂಬುದಕ್ಕೆ । ಇಷ್ಟುತಡ । ವಾಯಿತಂತೆ ॥ ೧೩ ॥

೯ ಕಂದಪದ್ಯ

ರಾಮ—

ಅನುಜನ ವಾಕ್ಯವ ಕೇಳ್ದಾ
ವನಜಾಂಬಕ ಚಿತ್ತ[1]ವಿಟ್ಟು[1] ಸಂತೋಷದೊಳುಂ ।
ಜನಕನ ಮಗಳನ್ನರಸಲು
ಅನುವೆಂತುಟೊ[2] ನೋಡಿ[2]ರೆಂದ ಸುಗ್ರೀವನೊಳುಂ ॥ ೧೪ ॥

೧೦ ರಾಗ ಆಹೇರಿ (ಆಹರಿ)—ಏಕತಾಳ ೫

ಸುಗ್ರೀವ—

ಭೂಮಿಪಾಲ । ಶಿಖಾಮಣಿ । ರಾಮಚಂ । ದ್ರ—[3]ದೇವ ।
ತಾಮರಸ । ನಯನ ಸಾಧು[3] । ಸುಗುಣಸಾಂ । ದ್ರ—॥
[4]ಭೂಮಿಜಾತೆ । [4]ನಾಲ್ಕುದೇಶ । ದಲ್ಲಿದ್ದ । ರೂ—ನಿಮ್ಮ ।
[5]ಕೋಮಲಾಂಗಿ[5]ಯ । ಪಾದದೆಡೆಗೆ । ತಂದು ತೋರ್ಪೆ । ವು— ॥ ೧೫ ॥

ಫುಲ್ಲನೇತ್ರೆ । ಬ್ರಹ್ಮಲೋಕ । ದಲ್ಲಿದ್ದ । ರೂ—ನಿಮ್ಮ ।
ವಲ್ಲಭೆ ಕೈ । ಲಾಸಶಿಖರ । ದಲ್ಲಿದ್ದ । ರೂ— ।
ಬಲ್ಲಿದ ವೈ । ಕುಂಠಭವನ । ದಲ್ಲಿದ್ದ । ರೂ—ಇವ ।
ರೆಲ್ಲರನ್ನು । ಕಳುಹಿ ಸುದ್ದಿ । ತರಿಸದುಳಿಯೆ । ನು— ॥ ೧೬ ॥

ವಚನ ॥ ಇಂತೆಂದು ಶ್ರೀರಘುವರಂಗೆ ಬಿನ್ನಹವಂ ಗೆಯ್ದು ಕಪಿವೀರರಂ ಹತ್ತಿರ ಕರೆದು ಏನೆಂದನು ಎಂದರೆ—

೧೧ ರಾಗ ಕಾಂಭೋಜಿ—ಏಕತಾಳ

ವಾನರರೇ । ಕೇಳಿರೆಲ್ಲ । ಎನ್ನ ಮಾ, । ತ—।
ಜಾನಕೀದೇ । ವಿಯ ನರಸಿ । ಕಾಣಬೇಕು । ನೀವೆಲ್ಲ ॥ ಪಲ್ಲವಿ ॥

---

1 ದಲ್ಲಿ (ಅ) 2 ಪೇಳಿ (ಕಾ) 3 ಭಕ್ತಪ್ರೇಮಿ ಕಮಲ । ಲೋಚನನೆ (ಓ)
4 ನಿಮಿಷದೊಳಗೆ (ಅ, ಕಾ) 5 ಕಮಲಾಕ್ಷಿ (ಕಾ)

ಉತ್ತರದೇ । ಶಕ್ಕೆ ಪೂರ್ವ । [1]ಮತ್ತೆ ಪಶ್ಚಿ । ಮಕ್ಕೆ ತೆಂಕ ।
ಪೃಥ್ವಿಜಾತೆ । ಸೀತೆಯಿರುವ[1] । ವರ್ತಮಾನ । ಕೇಳಬೇಕು ॥ ೧೭ ॥

ಅಷ್ಟದಿಕ್ಪಾ । ಲಕರಿರುವ, । ಪಟ್ಟಣದೊ । ಳಿರಲು ನೋಹ ।
ದೃಷ್ಟಿಯಿಂದ । ನೋಡಿ ಬಂದು । ಸೃಷ್ಟೀಶಂಗೆ । ಪೇಳಿರಿಂದು ॥ ೧೮ ॥

ಅಂಗದನು । ಜಾಂಬವಂತ । ವಾಯುಸುತ । ಹನೂಮಂತ ।
ವಿಂಗಡದಿ । ದೇಶಾದಿದೇ । ಶಂಗಳನ್ನು । ತಿರಿದು ತಿರಿಗಿ ॥ ೧೯ ॥

ತಿಂಗಳ ದಿ । ನದೊಳು ರಾಮ । ನಂಗನೆಯಿ । ದ್ದ ನಿದಾನ ।
ವಿಂಗಡಿಸ । ದಿದ್ದರೆ ನಾ । ಭಂಗಿಸುವೆ । ನಿಮ್ಮನೆಲ್ಲ ॥ ೨೦ ॥

೧೩ [2]ಕಂದ ಪದ್ಯ

ಇಂತಾ ಸಮಯದಿ ರಾಘವ
ನಂತರ್ಯದಿ ಕರೆದು ಪೇಳಿ ಕಿವಿಮಾತಿನೊಳ್ದನು ।
ಮಂತನ ಕಯ್ಯೊಳಗುಂಗುರ
ಮಂ ತಾನಿರಿಸುತ್ತ ಸೀತೆಕುರುಹಂ ಪೇಳ್ದಂ[2] ॥ ೨೧ ॥

೧೪ ರಾಗ ಕೇದಾರಗೌಳ—ಅಷ್ಟತಾಳ ೧

ಸುಷೇಣ—

ಭಾನುನಂ । ದನನೆಂದ । ಬಹಳ ಕ । ಟ್ಟಾಜ್ಞೆಯ ।
ವಾನರೇ । ಶ್ವರರು ಕೇ । ಳಿ—।
ದಾನವಾಂ । ತಕನಂಘ್ರಿ । ಗೆರಗಿ ತ । ವ್ಮೊಳಗಿದ್ದ ।
ಸೇನೆಯ । ವಿಂಗಡಿ । ಸಿ— ॥ ೨೨ ॥

ಜಾನಕಿ । ಯಮ್ಮನ । ವರನು ಕ । ದ್ದೊಯ್ದ ದ ।
ಶಾನನ । ನಾರೆನ್ನು । ತ—।
ನಾಮುನ್ನ । ತಾಮುನ್ನೆಂ । ದೆನುತ ಪ । ಶ್ಚಿಮಕೆ ಸು ।
ಷೇಣ ಚಾ । ಲ್ವರಿದು ಬಂ । ದ— ॥ ೨೩ ॥

---

1 ದಕ್ಷಿಣ ಪಶ್ಚಿಮ ನಾಲ್ಕು । ದಿಕ್ಕಿನೊಳ್ ದ । ಶಾಸ್ಯನಿದ್ದ (ಓ)

2 ವಚನ ॥ ಆಗಲಾ ರಾಮದೇವರು ಹನುಮಂತನಂ ಕರೆದು ಮುದ್ರೆಯುಂಗುರಮಂ ಕೊಟ್ಟು ಕಿವಿಯಲ್ಲಿ ಕುರುಹಿನ ಮಾತಂ ಅಪ್ಪಣೆಕೊಡಲಾಗಿ ಹನುಮಂತಂ ಶ್ರೀರಾಮಚಂದ್ರನ ಚರಣಕ್ಕೆ ಸಾಷ್ಟಾಂಗವೆರಗಿ ಬೀಳ್ಕೊಂಡನದೆಂತೆನೆ—(ಓ, ಕಾ)

ನಳ, ನೀಲ, ಗವಯ ಮುಂತಾದವರು—

ನಳ ನೀಲ । ಗವಯ ಗ । ವಾಕ್ಷ ಕೇ । ಸರಿ ಶತ ।
ಬಲ[1]ಮುಂತಾ । ದವರೆ[1]ಲ್ಲ । ರು—।
ಇಳೆಯ ಪ । ರ್ವತ ಕಾಡು । ಸಂದುಗೊಂ । ದುಗಳೆಲ್ಲ ।
ಹುಳುಕುತ್ತ । ಲಿಯ್ತುಂದ । ರು— ॥ ೨೪ ॥

ಇಳವರ್ತ । ಬದರಿಕ । ಕೇತುಮಾ । ಲಾ[2]ಖ್ಯ ಭೂ ।
ತಳ ನವ । ಖಂಡದೊ । ಳು[2]—।
ಇಳೆಯ ನಂ । ದನೆಯ[3]ನು । ಬೆಸಗೊಂಡು । ತ್ತರದೇಶ[3] ।
ದೊಳು ಹುಡು । ಕಾಡಿದ । ರು— ॥ ೨೫ ॥

ವರುಣ ವಾ । ಯುವ್ಯ ಕು । ಬೇರ ಈ । ಶಾನರ ।
ಪುರವನೊಂ । ದುಳಿಯದಂ । ತೆ—।
ಧರಣಿನಂ । ದನೆಯ [4]ಸೋ । ವರಸುತ್ತ[4] । ಕೇದಾರ ।
ಗಿರಿಯ ಮೇ । ಲ[5]ಯ್ತುಂ[5]ದ । ರು— ॥ ೨೬ ॥

ದಿಕ್ಕು ದಿ । ಕ್ಕಿನೊಳಿಪ್ಪ । ಅರಸುಬ । ಲ್ಲಾಳರ ।
ಸೊಕ್ಕನೆ । ಮುರಿದಿಕ್ಕು । ತ್ತ—।
ಒಕ್ಕಲೊಂ । ದುಳಿಯದೆ । ಮನೆಮನೆ । ಯಲಿ ಕಳ್ಳ ।
ರಕ್ಕಸನ । ನು ಕೇಳು । ತ್ತ— ॥ ೨೭ ॥

ಮಕ್ಕಳು । ಹಿರಿಯರು । ಜವ್ವನ । ರಾ ಹೆಣ್ಣು ।
ಮಕ್ಕಳೊ । ಳ್ಬೆಸಗೊಳು । ತ್ತ—
ಅಕ್ಕರಿಂ । ದಲೆ ಕಂಡು । ದಿಲ್ಲೆಂದು । ಆಣೆಯ ।
ತೆಕ್ಕೊಂಡ । ರವರ ಕ । ಯ್ಯ— ॥ ೨೮ ॥

ಪೂರ್ವ ಪ । ಶ್ಚಿಮ ಉತ್ತ । ರಾದಿ ದೇ । ಶವನಾಳ್ವ ।
ಉರ್ವಿಪಾ । ಲಕರ ಕ । ಯ್ಯ—।

---

1 ಲಿ ಮೊದಲಾದೆ (ಕಾ) 3 ಸುದ್ದಿಯ ಕೇಳುತುತ್ತರ (ಕಾ)
2 ರಭ್ಯಸ್ಥಳನವಖಂಡಗಳ (ಕಾ); ರಣ್ಯಸ್ಥಳ ನವಖಂಡಗಳ (ಅ)
4 ನ್ನು ಬೆಸಗೊಂಡು (ಅ) 5 ಕೆಬಂ (ಕಾ)

ಸರ್ವಥಾ । ದಶಕಂಠ । ನಿಲ್ಲೆಂಬ । ಓಲೆಯ ।
ಗರ್ವದಿ । ಬರೆಸಿಕೊಂ । ಡು— ॥ ೨೯ ॥

ನಿರ್ವಹಿ । ಸಿದರು ಪಾ । ತಾಳಲೋ । ಕಂಗಳೊ ।
ಳಿರುವರ । ಬೆಸಗೊಳ್ಳು । ತ್ತ—।
ಉರ್ವಿಯ । ರಚಿಸಿದಾ । ತನ ಕಂಡು । ಕೈಲಾಸ ।
ಪರ್ವತ । ಕಡರಿದ । ರು— ॥ ೩೦ ॥

ಪಾರ್ವತೀ । ರಮಣನ । ದರುಶನ । ಕವನೆಂದೂ ।
ಬರುಪನೆಂ । ಬುದನು ಕೇ । ಳಿ—।
(ತೆರೆಯಲ್ಲಿ ಶಿವಪಾರ್ವತಿಯರು ಆಸನಸ್ಥರಾಗಿ ಪ್ರವೇಶ)
ಶರ್ವನ । ಹಿಡಿದು ರಾ । ವಣನ ತೋ । ರೆನಲವ ।
ರಿರ್ವರೂ । ನಸುನಕ್ಕ । ರು— ॥ ೩೧ ॥

ವಚನ ॥ ಆಗಳಾ ಸದಾಶಿವನು ಬಲಿಮುಖರ ಪರಾಕ್ರಮಕ್ಕೆ ಮೆಚ್ಚಿದವನಾಗಿ ಪಾರ್ವತೀದೇವಿಯೊಡನೆ ಏನೆಂದನು ಎಂದರೆ—

೧೪ ರಾಗ ಸೌರಾಷ್ಟ—ಅಷ್ಟತಾಳ ೧

ಶಿವ—
ಕಂಡೆಯಾ । ಗಿರಿಜಾತೆ । ಕಪಿಗಳ । ಸಾಹಸ ।—ಕಂಡೆ । ಯೇ
—। ನೆ—।—ವರ ।
ಪುಂಡರೀ । ಕಾಕ್ಷ ಶ್ರೀ । ರಾಮಚಾ । ರಿತ್ರವ ।—ಕಂಡೆ । ಯೇ—। ನೆ— ॥೩೨॥

ಶಿರ ಮೊಗ । ಹಣೆ ಹುಬ್ಬು । ಗಳು ಗಂಟೆ । ಕ್ಕಿರುವುದ ।
—ಕಂಡೆ । ಯೇ—। ನೆ—।—ಬಲು ।
ಉರುತರ । ಕೋಪಾಟೋ । ಪದಿ ಹಲ್ಲ । ಕಿರಿವುದ ।
—ಕಂಡೆ । ಯೇ—। ನೆ— ॥ ೩೩ ॥

ದಶಕಂಠ । ನನು ತೋರಿ । ಸೆಂದೆಮ್ಮ । ತಡೆವುದ ।
—ಕಂಡೆ । ಯೇ—। ನೆ—।—ಮತ್ತೆ ।
ಅಸುರ ರಾ । ವಣನೆಲ್ಲಿ । ತೋರೆಂಬ । ಗರ್ವವ ।—ಕಂಡೆ । ಯೇ—। ನೆ—॥
॥ ೩೪ ॥

ವಚನ ॥ ಇಂತೆಂದು ಪಾರ್ವತಿಗೆ ಪೇಳ್ದು ಮತ್ತಾ ಕಪಿನಾಯಕರೊಡನೆ ಏನೆಂದನು ಎಂದರೆ—

೧೫ ಸಾಂಗತ್ಯ, ರಾಗ ಪಂತುವರಾಳಿ—ರೂಪಕತಾಳ ೨

ಕಪಿನಾಯ । ಕರು ಕೇಳಿ । ನಾನೆಂಬ । ಮಾತನು ।
ಗುಪಿತವ । ಲ್ಲಿದು ವೇದ । ವಚನ ॥
ಚಪಲನೇ । ತ್ರೈಯ ನೊಯ್ದು । ಖೂಳ ರಾ । ವಣನ ಕಂ ।
ಡಪರಿಲ್ಲ । ನಮ್ಮ ಪ । ರ್ವತದಿ ॥ ೩೫ ॥

ನಿಪುಣರು । ನೀವು ಸು । ಮ್ಮನೆ ಬಳ । ಲುವದಿನ್ನು ।
ಗುಪಿತದಿ । ಹನುಮಂತ । ಮುಂದೆ ॥
ತಪನಕು । ಲೇಶನ । ರಾಣಿ ಜಾ । ನಕಿಯ ಕಂ ।
ಡಪನಿದು । ಪುಸಿಯಲ್ಲ । ಮಾತು ॥ ೩೬ ॥

ಭಾಳಲೋ । ಚನನೆಂದ । ನುಡಿಯನು । ಕಪಿಗಳು ।
ಕೇಳುತೆ । ಲ್ಲರು ಕಯ್ಯ । ಮುಗಿದು ।
ಬೀಳುಗೊಂ । ಡಲ್ಲಿಂದ । ನಡೆತಂದು । ರವಿಜಗೆ ।
ಪೇಳಿದ । ರೀ ವೃತ್ತಾಂ । ತಗಳ ॥ ೩೭ ॥

(ಶಿವಪಾರ್ವತಿಯರ ನಿಷ್ಕ್ರಾಮ ; ಸುಗ್ರೀವನ ಪ್ರವೇಶ)

೧೬ ರಾಗ ಭೈರವಿ—ಜಂಪೆತಾಳ ೩

ಕಪಿಗಳು—

ಪಾತಾಳ । ದೊಳಗಿಲ್ಲ । ಬ್ರಹ್ಮಲೋ । ಕದೊಳಿಲ್ಲ ।
ಆತ ದಶ । ಕಂಠ ಕೈ । ಲಾಸದೊಳ । ಗಿಲ್ಲ ॥ ೩೮ ॥

ನವಖಂಡ । ಭೂತಳವ । ನಾವ್ ತಿರಿಗಿ । ನೋಡಿದೆವು ।
ಭುವನದೊಳ । ಗಾರೂ ಕಂ । ಡವರಿಲ್ಲ । ವಂತೆ ॥ ೩೯ ॥

[1]ಮೂಲೋಕ । ದರಸುಗಳು । ಬರೆದ ಬಿ । ನ್ನೊತ್ತ್ರಲೆಯ ।
ಓಲೆಗಳ । ಮುಂದಿರಿಸಿ । ಕೈಮುಗಿದ । ರವರು ॥ ೪೦ ॥

ಓಲೆಗಳ । ತೆಗೆತೆಗೆದು । ವಾಚಿಸುತ । ಮನದೊಳಗೆ ।
ಭಾಳ ಚಿಂ । ತೆಯ ತಾಳ್ದು । ಭಯಗೊಳುತ । ಲಿರ್ದ ॥ ೪೧ ॥

1 ಭೂಲೋಕದಧಿಪತಿಗ । ಳೂ ಬರೆದ ಬಿನ್ನಹದ । (ಕಾ, ಅ)

೧೭ ವಾರ್ಧಿಕ ಷಟ್ಪದಿ

ಲವನೆ ಕೇಳಿಂತು ಸೀತೆಯನರ[1]ಸಲೆಯಿದ್ದ ಬಂ
ದವರ ನುಡಿಕೇಳಿ ಚಿಂತಿಸುತಲಿರಲತ್ತ ಪೋ
ದವರು ಮೂವರು ವಾಲಿಸುತ ಹನುಮ ಮೊದಲಾಗಿ ಉಳಿದ ಕಪಿಸೇನೆ ಸಹಿತ।
ತವಕದಲಿ ದಕ್ಷಿಣಕೆ ಮುಖವಾಗಿ ಬಹಳ ದೇ
ಶವಕಳೆದು ನಡೆತಂದರಲ್ಲಲ್ಲಿ ಹುಡುಕುತ್ತ
ಭುವನದೊಳಗತಿ ಪುಣ್ಯಕ್ಷೇತ್ರ ಬ್ರಹ್ಮಾಲಯಂಗಳ ಕಂಡು
ನೆರೆನವಿುಸುತ ॥ ೪೨ ॥

೧೮ ರಾಗ ಗೌಳಮಲಹರಿ—ಏಕತಾಳ ೭

ಕಪಿಗಳು—

ಬಂದರು ।—ನಡೆ । ತಂದರು ।—ರಾಮ ।
ಚಂದ್ರನ ಕಾಂ । ತೆಯ ಕುರುಹ । ನೊಂದೊಂದನೆ। ಬೆಸಗೊಳ್ಳುತ್ತ ॥ಪಲ್ಲವಿ॥

ಬಲು ಬಲು ದೇ । ಶಗಳ ದಾಟಿ । ಬಳಲಿ ಬಂದ । ರವರೀ ಪಾಟಿ ।
ಹಲವು ಪರ್ವ । ತಂಗಳ ಕಾ । ನನಗಳನ್ನೆ । ಹುಡುಕಾಡುತ್ತ ॥
ತೆಲುಗರಣ್ಯ । ಪಾಂಡ್ಯರಾಜ್ಯ । ಮಲೆಯಾಳ ತು । ಳುವರ ಸೀಮೆ ।
ಗಳಲಿ ದಶ । ಕಂಠ ಸೀತಾ । ಲಲನೆಯರ । ಬೆಸಗೊಳ್ಳುತ್ತ ॥ ೪೩ ॥

ಈ ತೆರದಲಿ । ಬ್ರಹ್ಮ ಕ್ಷತ್ರ । ನೀತಿವಂತ । ವೈಶ್ಯಶೂದ್ರ ।
ನೂತನ ಪಂ । ಚಾಳ ನಾನಾ । ಜಾತಿಯವರ । ಮನೆಗಳಲ್ಲಿ ॥
ರೀತಿಯರಿತು । ಕೊಂಡು ಬಹಳ । ನೀತಿಯಿಂದ । ನುಡಿಸುತ ಪ್ರ ।
ಖ್ಯಾತರು ನಡೆ । ತಂದರವನೀ । ಜಾತೆಯನ್ನು । ಬೆಸಗೊಳುತ್ತ ॥ ೪೪ ॥

೧೯ ರಾಗ ಕಾಂಭೋಜಿ—ಜಂಪೆತಾಳ ೨

ಜಾಂಬವ—

ಆ ಕಡೆಯು । ತಿರಿತಿರಿಗಿ । ಅಲ್ಲಿ ಕಂ । ಡರು ಕಪಟ ।
ದಾಕೃತಿಯೊ । ಳೆಸೆವ ಸರ । ಸಿಯನು ।
ತಾವ್ಕುಡಿವೆ । ವೆಂದು ಜಲ । ದಾಸೆಯಿಂ । ದಿಳಿಯೆ[2]ಮಯ[2] ।
ಲೋಕವದು । ಕಣ್ಗೆರಂ । ಜಿಸಿತು ॥ ೪೫ ॥

---

1 ಸಿಬಂದಕಪಿ । ನಿವಹದ ನುಡಿಯ ಕೇಳಿ ಚಿಂತಿಸುತಲತ್ತ ವಾಟೊ । ವರು ವಾಲಿಸುತ ಹನುಮ ಜಾಂಬವ ಸುಷೇಣ ಮೊದಲಾದ ಕಪಿಸೇನೆ ಸಹಿತ ॥ (ಕಾ)
2 ನರ (ಕಾ)

ಯಾರ ಪ । ಟ್ಟಣಗಳಿವು । ನೋಡಿದರೆ । ಕಣ್ಗೆ ವಿ ।
ಸ್ತಾರವಾ । ಗಿದೆ ಚೆಲ್ವ । ನಗರ ॥
ಶ್ರೀರಾಮ । ನರಸಿ ಜಾ । ನಕಿಯ ಕ । ದ್ದೊಯ್ದಸುರ ।
ಚೋರನನು । ಹುಡುಕಬೇ । ಕಿಲ್ಲಿ— ॥ ೪೬ ॥

ಬಾಗಿಲನು । ದಾಟೆಯೊಳ । ಬಂದು ನೋ । ಡಿದರೆ ಸೊಗ ।
ಸಾಗಿರುವ । ರಾಜಬೀ । ದಿಗಳ ॥
ನಾಗಸುರ । ನರಲೋಕ । ದಿಂದಲತಿ । ಶಯವಿದರ ।
ಹೇಗೆ ನಿ । ರ್ಮಿಸಿದ ಮಯ । ರಾಮಾ— ॥ ೪೭ ॥

ಉಪ್ಪರಿಗೆ । ಕೋಣೆ ನಡು । ಮನೆ ಚೌಕಿ । ಮಾಳಿಗೆಯ ।
ಚಪ್ಪರದ । ಚಾವಡಿಯ । ಬೆಳಕ ॥
ಇಪ್ಪತ್ತ । ನಾಲ್ಕು ಕಂ । ಭದ ನಡುವೆ । ಮಂಟಪಗ ।
ಳೊಪ್ಪುತಿದೆ । ನೋಡಲಾ । ಶ್ಚರ್ಯ— ॥ ೪೮ ॥

ಕಟ್ಟಾಣಿ । ಮುತ್ತುಗಳ । ಕೆತ್ತಿಸಿದ । ಕಂಭಗಳ ।
ಮುಟ್ಟಿದರೆ । ಹ್ಯೊವ ಬೊಂ । ಬೆಗಳ ॥
ಕಟ್ಟಿರುವ । ವಜ್ರವೈ । ಡೂರ್ಯ ಗೋ । ಮೇದಿಕದ ।
ಕಟ್ಟೆಗಳ । ಜಗಲಿ ಗೋ । ಡೆಗಳ— ॥ ೪೯ ॥

ಆರ ಮನೆ । ಯೊಳಗೆ ನೋ । ಡಿದರೆ ನವ । ರತ್ನಗಳ ।
ತೋರಣದ । [1]ಕುರುಜು ಮೋ । ರ್ವೆ[1]ಗಳು ॥
ಊರೂರು । ಮನೆಮನೆಯ । ಕೇರಿಕೇ । ರಿಯೊಳೆಲ್ಲ ।
ನಾರಿಜಾ । ನಕಿಯ ಹುಡು । ಕಿದರು— ॥ ೫೦ ॥

ಎಲ್ಲಿ ನೋ । ಡಿದರು ಜಾ । ನಕಿಯ ಕಂ । ಡಿಹೆನೆಂಬ ।
ರಿಲ್ಲದಾ । ಯ್ತಾ ಗುಹಾಂ । ತರದಿ ॥
ಬಲ್ಲಿದ ಕ । ಪೀಶ್ವರರು । ಬಂದ ದಾ । ರಿಯ ತಪ್ಪಿ ।
ಅಲ್ಲಲ್ಲಿ । ತೊಳಲಾಡಿ । ತಿರಿದು— ॥ ೫೧ ॥

1 ಮೇಲುಗಟ್ಟು

ಮೋಸವಾ । ಯಿತು ಹೊಲಬು । ತಪ್ಪಿದೆವು । ಮಯನಿರ್ಮಿ ।
ತಾಸರೋ । ವರದೆಡೆಗೆ । ಬಂದು ॥
ಈಸು ದಿನ । ದಣಿದೆವೆಂ । ದೆನುತ [1]ಬಳಿ । ಕಲ್ಲಿಕಂ ।
ಡಾ[1]ಸ್ವಯಂ । ಪ್ರಭೆಯ ನುಡಿ । ಸಿದರು ॥ ೫೨ ।

(ಸ್ವಯಂಪ್ರಭೆಯ ಪ್ರವೇಶ)

೨೦ ರಾಗ ಕೇತಾರಗೌಳ—ಅಷ್ಟತಾಳ ೧

ಜಾಂಬವ—

ನಳಿನಾಯ । ತಾಂಬಕಿ । ನಿಲ್ಲೊಂದು । ನಿಮಿಷವೆ ।
ನ್ನೊಳು ಮಾತ । ನಾಡಬ । ಲೆ—॥
ಇಳೆಗೆ ಪೋ । ಗುವ ದಾರಿ । ಯಾವುದೆಂ । ದರಿಯದೆ ।
ಹೊಲಬುದ । ಪ್ಪಿರುವೆವ । ಲ್ಲೆ— ॥ ೫೩ ॥

ಬಲುದಿನ । ವಾಯಿತು । ಬಂದಿಲ್ಲಿ । ನಾವೀಗ ।
ಹೊಳಲ ಸಂ । ಚರಿಸುವ । ಲ್ಲಿ—॥
ಹೊಲಬುದ । ಪ್ಪಿದೆವೊಬ್ಬ । ದೂತನ । ಕೊಟ್ಟೆಮ್ಮ ।
ಇಳೆಯತ್ತ । ಕಳುಹು ಬಾ । ಲೆ— ॥ ೫೪ ॥

ಜಾಂಬವಂ । ತನ ನುಡಿ । ಕೇಳಿ ಸ್ವ । ಯಂಪ್ರಭೆ ।
ಸಂಭ್ರಮ । ದಲಿ ನಗು । ತ—॥
ಡಂಭಕ । ತನದಲಿ । ಹಾಸ್ಯವ । ಮಾಡಿದ ।
ಳಂಬುಜ । ದಳನಯ । ನೆ— ॥ ೫೫ ॥

ಹನುಮಂತ—

ತರುಣಿಯ । ನುಡಿಗೆ ಕೋ । ಪಿಸಿ ಹನು । ಮಂತ ಭೀ ।
ಕರರೂಪ । ನಾಗೆ ಕಂ । ಡು—॥
ಶರಣೆಂದು । ಪೊಗಳ ಕಾ । ಣಿಕೆಯಿತ್ತು । ತಾ ಬಂದು ।
ಧರಣಿಯ । ತೋರ್ದಳಂ । ದು— ॥ ೫೬ ॥

---

1 ನಡೆತಂದು ಬಳಿ । ಕಾ (ಓ)

೨೧ ವಾರ್ಧಿಕಷಟ್ಪದಿ

ಈ ರೀತಿಯಿಂದ ಸ್ವಯಂಪ್ರಭಾನಗರವಂ
ವಿಾರಿ ಬಳಿಕಲ್ಲಿಂದ ನಡೆತಂದರಂದು ಕಾ
ವೇರಿಯಮ್ಮನ ತೀರ ಬಳಿವಿಡಿದು ಬಂದಾ ಮೃಕಂಡುಮುನಿಗಭಿವಂದಿಸಿ ।
ಸಾರಿದರು ತೆಂಕಮುಖವಾಗಿ ಬಳಿಕಲ್ಲಿರುವ
ವೀರಮುನಿ ಕಣ್ವನಾಶ್ರಮಕೆ ನಡೆತಂದಡವ
ನಾರು ನೀವೆಲ್ಲಿಗಯ್ದುವರೆಂದು ಕೇಳೆ [1]ಜಾಂಬವನವನೊಳಿಂತೆಂದನು ॥ ೫೭ ॥

(ಕಣ್ವಮುನಿಯ ಪ್ರವೇಶ)

೨೨ ರಾಗ ಭೈರವಿ—ಜಂಪೆತಾಳ ೧

ಜಾಂಬವ—

ದಶರಥನ । ಸುತನರಸಿ । ಸೀತಾಂಗ । ನಾಮಣಿಯು ।
ದಶಕಂಠ । ನೆಂಬಸುರ । ಕದ್ದೊಯ್ದ । ನಂತೆ ॥
ಬಿಸಜಸಖ । ಸುತನಾದ । ಸುಗ್ರೀವ । ನೆಮ್ಮೊಡನೆ ।
ಬೆಸಸಿ ಕಳು । ಹಿದನವಳ । ಹುಡುಕಬೇ । ಕಂತೆ ॥ ೫೮ ॥

ದೇಶದೇ । ಶವನೆಲ್ಲ । ಹುಡುಕಿ ಬಳ । ಲಿದೆವು ನವು ।
ಗಾ ಸೀತೆ । ಕಂಗಳಿಗೆ । ಗೋಚರಿಸ । ಲಿಲ್ಲ ॥
ಮಾಸವೊಂ । ದರೊಳೆಮಗೆ । ಹೋಗದಿ । ದ್ದರೆ ಕಡೆಗೆ ।
ಘಾಸಿಮಾ । ಡುವನಮ್ಮ । ಭಾನುತನು । ಜಾತ ॥ ೫೯ ॥*

ಎತ್ತ ಪೋ । ಗುವದೆಂದು । ಎಮಗೆ ತಿಳಿಯದೆ । ನಿಮ್ಮ ।
ಹತ್ತಿರಕೆ । ಬಂದೆವಾವ್ । ಕಡುತವಕ । ದಿಂದ ॥
ಚಿತ್ತದಲಿ । ತಿಳಿದು ದಯ । ವಿತ್ತು ನ । ಮ್ಮಳಿವಿಗೊಂ ।
ದುತ್ತರವ । ಕೊಡಬೇಕು । ಉತ್ತಮಮು । ನೀಂದ್ರ ॥ ೬೦ ॥

---

1 ವನಚಾರರ ಶ್ರೇಷ್ಠನೆಂದ (ಅ)

* ಒಂದೊಂದು ಕಡೆಗೆಲ್ಲ । ಕಳುಹಿದರು ವಿಂಗಡಿಸಿ ।
ಬಂದೆವೀಕಡೆಗೆ ನಾ । ವೇ ಮೂವರಯ್ಯ
ಸಂಧಿ ಸಂಧಿಯೊಳೆಲ್ಲ । ಸಾಧಿಸುತ ಹುಡುಕಾಡಿ ।
ಸಂದುದಿಪ್ಪತ್ತೇಳು । ದಿನವಿಂದಿಗಯ್ಯ । (ಕಾ, ಅ)

ಕಣ್ವ—
ಇವರ ನುಡಿ । ಕೇಳ್ದು ಮುನಿ । ಈ ದಾರಿ । ಯಲಿ ಪೋಗಿ ।
ಶಿವನು ದಯೆ । ಮಾಡುವನು । ಶೀಘ್ರದಿಂ । ನಿಮಗೆ ॥
ಅವನಿಜೆಯ । ದರುಶನವು । ಆಗುವುದು । ನಿಮಗೆಂದು ।
ಬಹುಮಾನ । ದಲಿ ಹರಸಿ । ಕಳುಹಿಸಿದ । ನವರ ॥ ೬೧ ॥

೨೩ ರಾಗ ಮಾರವಿ—ಏಕತಾಳ ೨

ಜಾಂಬವ—
ಮುಂದೆ ನ । ಡೆದು ಮಲ । ಯಾಚಲ । ದೆಡೆಗೆ ।
ಯ್ತಂದರು । ಕಪಿವರ । ರು—॥
ಒಂದೇ । ಬುದ್ಧಿಯೊ । ಳಗೆ ಯೋ । ಚಿಸಿದರು ।
ಮುಂದೇನ್ । ಗತಿಯೆನು । ತ— ॥ ೬೨ ॥

ಇಂದಿಗೆ । ದಿನ ಮೂ । ರುಳಿದುವು । ಭಾಸ್ಕರ ।
ನಂದನ । ನಪ್ಪಣೆ । ಗೆ—॥
ಮಂದಗ । ಮನೆಯನು । ಕಾಣದೆ । ಪೋದರೆ ।
ಕೊಂದ । ಲ್ಲದೆ ಬಿಡ । ನು— ॥ ೬೩ ॥

ವಚನ ॥ ಇಂ[1]ತೆಂದು ಜಾಂಬವಂತ'ರು ಪ್ರಸಂಗಿಸಲಾಗಿ ಆಗಲಾ ಅಂಗದನು ತನ್ನೊಳು ತಾನೇ ಏನೆಂದನು ಎಂದರೆ—

೨೪ ಚರಿತೆ (ಸಾಂಗತ್ಯ), ರಾಗ ತೋಡಿ—ರೂಪಕತಾಳ ೨

ಅಂಗದ—
ಹಿಂದೆ ನ । ಮ್ಮಯ್ಯಗೂ । ಭಾನುನಂ । ದನನಿಗೂ ।
ಒಂದಲ್ಲ । ಮನಸು ತ । ನ್ನೊಳಗೆ ॥
ಅಂದಿನ । ಹಗೆ ಬಿಡ । ಸೀತೆಯ । ಕಂಡುದಿ ।
ಲ್ಲೆಂದರೆ । ನ್ನೇನ ಮಾ । ಡುವನೊ ॥ ೬೪ ॥

ಅಲ್ಲಿ ಆ । ತನ ಕಯ್ಯ । ಕೊಲಿಸಿಕೊಂ । ಬುದಕಿಂತ ।
ಇಲ್ಲಿಯೇ । ಉಪವಾಸ । ಬಿದ್ದು ॥
ಇಲ್ಲ ಈ । ಪ್ರಾಣವೆಂ । ದೆನಿಪುದೇ । ಲೇಸೆಂದು ।
ಎಲ್ಲರ । ಮುಂದೆ ಪೇ । ಳಿದನು ॥ ೬೫ ॥

---

1 ತು ಒಬ್ಬರಿಗೊಬ್ಬ (ಅ)

ಜಾಂಬವ—

ಅಂಗದ । ನಿಂತೆಂದ । ಮಾತ ಕೇ । ಳುತ ಕಪಿ ।
ಪುಂಗವ । ಪರಮೇಷ್ಠಿ । ಸುತನು ॥
ಮಂಗಳ । ಮಹಿಮ ಶ್ರೀ । ರಾಮಚಂ । ದ್ರನು ನಮ್ಮ ।
ಭಂಗಿಸು । ವ್ರದಕೊಪ್ಪ । ಗೊಡನು ॥ ೬೬ ॥

ಕೊಂದರೂ । ಕೊಲಲಿ ಕಾ । ಯ್ದರೆ ಕಾಯ । ಲಾ ರಾಮ ।
ಚಂದ್ರನ । ಪಾದದ । ಬಳಿಯ ॥
ಹಿಂದೆ ಜ । ಟಾಯು ಪ್ರಾ । ಣವ ಬಿಟ್ಟು । ಸುರಪನ ।
[1]ಮಂದಿರ । ದೊಳಗಿಪ್ಪ । ದ[1]ರಿಯಾ ॥ ೬೭ ॥

ಈ ತೆರ । ದೊಳು ತಮ್ಮೊ । ಳೊಂದೊಂದಾ । ಲೋಚನೆ ।
ಮಾತಾಡು । ತ್ತಿರುವ ವೇ । ಳೆಯೊಳು ॥
ಆತ ಜ । ಟಾಯುವಿ । ನಣ್ಣನೆಂ । ದೆನಿಪ ಸಂ ।
ಪಾತಿ ಬಂ । ದಿವರ ಕೇ । ಳಿದನು ॥ ೬೮ ॥

೨೫ ರಾಗ ಆಹೇರಿ—ಅಷ್ಟತಾಳ ೧

ಸಂಪಾತಿ—

ಯಾರಯ್ಯ ।—ನೀವು । ಯಾರಯ್ಯ— ॥ ಪಲ್ಲವಿ ॥
ಯಾರಯ್ಯ ।—ನೀವೆಲ್ಲ । ರೊಟ್ಟಾಗಿ । ಸೇರಿ ಈ ।
ಘೋರ ಕಾ । ನನದೊಳು । ಸುಮ್ಮನೆ । ಕುಳಿತಿಪ್ಪ ।
ದಾರಯ್ಯಾ— ॥ ಅನುಪಲ್ಲವಿ ॥

ದಶರಥ । ಸುತ ರಾಮ । ನೆಂಬಾತ । ನಾರು—।
ಪುಸಿಯಲ್ಲ । ಭಾನುನಂ । ದನನೆಂದ । ರೆಲ್ಲಿ—॥
ದಶಕಂಠ । ಅವನಿನಂ । ದನೆಯ । ಸುದ್ದ್ಯೇನು—।
ವಶವಿಲ್ಲ । ದಿನಿತು ಚಿಂ । ತಿಸುವುದಿ । ನ್ನೇನು— ॥ ೬೯ ॥

ತಮ್ಮ ತಾ । ನೆನಗೆ ಜ । ಟಾಯುವೆಂ । ಬಾತ—।
ನಿರ್ಮಲ । ದಲಿ ಸತ್ತ । ನೆಂದೆಂಬ । ಮಾತ— ॥
ನಿಮ್ಮೊಳೆಂ । ದವರಾರು । ಅದ ಕೇಳ್ದು । ದೆಲ್ಲ—।
ಒಮ್ಮೆಗೆ । ನ್ನೊಡನೆ ವಿ । ಸ್ತರಿಸಬೇ । ಕಲ್ಲ ॥ ೭೦ ॥

---

1 ಹೊಂದಿಕೊಂ । ಡಿರ್ಪುದನ (ಕಾ)

೨೬ ರಾಗ ಮಧ್ಯಮಾವತಿ—ಏಕತಾಳ

ಜಾಂಬವ—

,ವಸುಧೆಗು । ತ್ತಮವಾದ ।, ಯೋಧ್ಯಾಪ । ಟ್ಟಣದಿ ।
,ದಶರಥ । ನೃಪನೆಂಬ ।, ಧರಣಿಪಾ । ಲಕಗೆ—॥
,ಕುಸುಮಗಂ । ಧಿಯರು ಮೂ ।, ವರು ಹೆಂಡಿ । ರೊಳಗೆ—।
,ಅಸಮಸಾ । ಹಸರು ನಾ । ,ಲ್ವರು ಮಕ್ಕ । [1]ಳೊಳ[1]ಗೆ— ॥ ೭೧ ॥

,ಪಿತನ ವಾ । ಕ್ಯವ ಕೇಳಿ ।, ಶ್ರೀರಾಮ । [2]ಚಂದ್ರ[2] ।
,ಸತಿ ಸಹಿ । ತಲೆ ಪಂಚ । ವಟಿಯೊ[3]ಳು । ಬಂದ[3]—॥
,ಕಪಟದಿ । ದಶಕಂಠ ।, ಕದ್ದೊಯ್ದ । ಸತಿಯ—।
,ಚಪಲನೇ । ತ್ರೆಯು ಕೂಗು । ತಿರಲು ದು । ಸ್ಥಿತಿಯ— ॥ ೭೨ ॥

,ಮಡದಿಯ । ಧ್ವನಿ ಕೇಳಿ ।, ಮತ್ತೆ ಜ । ಟಾಯು—।
,ತಡೆದು ಮಾ । ರ್ಗದಿ ಹೋಗ । ಗೊಡದೆ ಶುಭ । ಕಾಯು—॥
,ಹೊಡೆದಾಡು । ತಿರೆ ಬಹು ।, ಕಾಲಪ । ರ್ಯಂತ—।
,ಕಡೆಗೆ ನೋ । ಸದೊಳವನ ।, ಕೊಂದ ದು । ಶ್ಶಾಂತ— ॥ ೭೩ ॥

,ಕಾಮಿನಿ । ವರವಿತ್ತ ।, ಬಗೆಯಿಂದ । ಶರಣ—।
,ರಾಮನ । ಚರಣದೆ ।, ಡೆಯೊಳಾಯ್ತು । ಮರಣ—॥
,ಆಮೇಲೆ । ನಮ್ಮರ ।, ಸಿನ ಸ್ನೇಹ । ಬಳಸಿ—।
,[4]ತಾಮಸಾ । ನ್ವಿತ ಇಂ[4]ದ್ರ ।, ಸುತನ ಸಂ । ಹರಿಸಿ— ॥ ೭೪ ।

,ಸೇನಾಧಿ । ಪತ್ಯವ ।, ಸುಗ್ರೀವಂ । ಗಿತ್ತು—।
,ಜಾನಕಿ । ಯರಸಲೆ ।, ಮಗೆ ನೇಮ । ವಿತ್ತು—॥
,ನಾನಾರಾ । ಜ್ಯದೊಳೆಲ್ಲಿ ।, ಹುಡುಕಿದ । ರಿಲ್ಲ—।
,ಏನ ಮಾ । ಡುವುದೆಂದೆ । ಮಗೆ ಕಾಂಬು । ದಿಲ್ಲ— ॥ ೭೫ ॥

---

1 ಳವ (ಅ)

2 ತನ್ನ (ಕಾ) 3 ಳಿರೆಮುನ್ನ (ಕಾ) 4 ಕಾಮುಸನ್ನಿಭನಿಂ (ಅ)

೨೭ ವಾರ್ಧಿಕಷಟ್ಪದಿ

ಸಂಪಾತಿ—

ಸಿರಿರಾಮಚಾರಿತ್ರಮಂ ಕೇಳ್ದು ಹಿಂದೆ ರವಿ
ಕಿರಣದುರಿಯಲಿ ಬೆಂದ ಗರಿ ಮತ್ತೆ ಮೂಡಿದುವು
ಎರಡು ಪಕ್ಕದೊಳಿವರನೆಲ್ಲರಂ ಕುಳ್ಳಿರಿಸಿ ಶರಧಿತಡಿಯೊಳಗಿಳುಹುತ ।
ಬೆರಳ ಸನ್ನೆಯಲಿ ತೋರಿಸಿದು ಲಂಕಾದ್ವೀಪ
ಪುರವದಲ್ಲಿಹುದೆಂದು ತೆರಳೆ ಸಂಪಾತಿ, ಭೋ
ರ್ಗರೆವ ಶರಧಿಯ ಕಂಡು ಕಪಿನಾಯಕರಿಗೆ ವಾನರ [1]ಜ್ಯೇಷ್ಠ[1]
ನಿಂತೆಂದನು ॥ ೭೬ ॥

(ಸಂಪಾತಿಯ ನಿಷ್ಕ್ರಮಣ)

೨೮ ರಾಗ ನೀಲಾಂಬರಿ—ಅಷ್ಟತಾಳ ೧

ಜಾಂಬವ—

ಕಂಡಿರೇ ಸ । ಮುದ್ರರಾಜ । ಕೆಂಡದಂತು । ಜ್ವಲಿಸುತಿಹುದ ।
ಕಂಡಿರೇ ।—ನೀವು । ಕಂಡಿ ರೇ ।— ॥ ಪಲ್ಲವಿ ॥

ಧರೆಯ ಪುಣ್ಯ । ನದಿಗಳೆಲ್ಲ । ಕರೆಸಿ [2]ನೆರೆ[2]ಸಿ । ಕೊಂಡು ಕೊಬ್ಬಿ ।
ನೊರೆವುದ ।—ಭೋ । ರ್ಗರೆವುದ ।— ॥ ೭೭ ॥

ಅಗಣಿತ ಪ । ರ್ವತಂಗಳ । ಮಿಗುವರಿವಂ । ಥ ಮೀನ್ಗಳ ।
ಹೊಳೆವುದ ।—ಬಾಯ । ಕಳೆವುದ ।— ॥ ೭೮ ॥

ಅಂಬರಕ್ಕೆ । ಹಾರಿ ಮುಗುಚಿ । [3]ರಂ[3]ಬಿಸುವ । ಬ್ಬರಣೆ ಹೆಚ್ಚಿ ।
ತೆರೆಗಳ ।—ಬಹು । ನೊರೆಗಳ ।— ॥ ೭೯ ॥

ಹೇಗೆ ದಾಂ । [4]ಟುವದೆಲ್ಲ[4] । ನಾಗಶ । ಯ[5]ನ ಬಲ್ಲ[5]
ತಿಳಿಯದು ।—ಪ್ರಾಣ । ಉಳಿಯದು ।— ॥ ೮೦ ॥

೨೯ ರಾಗ ಕೇತಾರಗೌಳ—ಜಂಪೆತಾಳ ೪

ಕಪಿಗಳು—

ಇದಕೆ ಚಿಂ । ತೆಗಳೇಕೆ । ನಿಮಗೆ—।—ಸ್ವಾಮಿ ।
ಪದುಮನಾ । ಭನ ಕರುಣ । ವಿಲ್ಲವೇ । ನಮಗೆ ॥ ಪಲ್ಲವಿ ॥

---

1 ಶ್ರೇಷ್ಠ (ಅ) 2 ಬೆರ (ಅ) 3 ಲಂ (ಕಾ) 4 ಟಬೇಕಿದರ (ಅ)
5 ನ । ಬಲ್ಲನದರ (ಕಾ)

ಅಂಗದ—

ಜಾಂಬವನ | ನುಡಿಕೇಳಿ | ಬೆದರದು | ಬೈರಿದನು |
ಜಂಭಾರಿ | ಸುತತನಯು | ನುಡಿದನೀ | ಪಾಡೇನು |
ಕುಂಭಿನಿಯ | ಕಿತ್ತು ಕಡೆ | ಗಿರಿಸಹೇ | ಳಿದರು ರವಿ |
ಬಿಂಬವನೆ | ತುಡುಕಹೇ | ಳಿದರೂ |—ಸಮರ |
ಡೊಂಬಿಯಲಿ | ಕಾಲಭೈ | ರವನ ಕೆಡ | ಹುವೆವು || ೮೧ ||

ಹಾರುವೆವು | ಶರಧಿಯನು | ಆರೆನಿಮಿಷ | ದೊಳಗೆ ಕಿಡಿ |
ಕಾರುವೆವು | ರಾವಣನ | ಹತ್ತು ಶಿರ | ಗಳ ದೆಸೆಗೆ |
ಬೀರುವೆವು | ಶಾಕಿನೀ | ಡಾಕಿನಿಯ | ಗೌ—ತಣವ |
ತೋರುವೆವು | ರಕ್ತದೋ | ಕುಳಿಯ |—ಹಿಂದೆ |
ಸಾರುವೆವು | ಕಂಡು ಕೈ | ಮುಗಿದು ಜಾ | ನಕಿಯ || ೮೨ ||

ಶಿವನ ಕೈ | ಲಾಸದಿಂ | ದೋಡಿಸಲ್ | ಪೇಳ್ಕಮಲ |
ಭವನ ಪ | ಟ್ಟವ ಕಿತ್ತು | ಬದಲೊಬ್ಬ | ಗಿಡು ಯೆನ್ನು |
ದಿವಿಜಾಧಿ | ಪತಿಯ ಇಂ | ದ್ರತ್ವವನು | ಕಳೆ ಯೆನ್ನು |
ಜವನ ಹ[1]ಡ | ಮುಡಿಕಟ್ಟಿ | ಲೆನ್ನು—|—ಮುಹಾ |
ರ್ಣವವ ದಾ | ಟುವದಾವ | [2]ಗಣನೆ[2]ಸನು | ಗಿನ್ನು || ೮೩ ||

ವಚನ || ಇಂತೆಂಬ ಅಂಗದಾದಿ ಪುಂಡಕಪಿಗಳೊಬ್ಬೊಬ್ಬರ ಪರಾಕ್ರಮವಂ ಕೇಳ್ದಾ ಜಾಂಬವರು ಹನುಮಂತನೊಡನೆ ಏನೆಂದರು ಎಂದರೆ—

೩೦ ರಾಗ ಶಂಕರಾಭರಣ—ಅಷ್ಟತಾಳ ೨

ಜಾಂಬವ—

ನೀ—ನೆ | ಕಲಿ ಹನು | ಮ—ನ | ಮ್ಮವರೊಳು |
ನೀನೇ, | ಸರಿ ಹನು | ಮ— || ಪಲ್ಲವಿ ||

ನೀನೇ, | ಕಲಿ ನಮ್ಮ | ವಾನರ | ರೊಳಗೆಲ್ಲ |
ಸಾನಂದ | ದಿಂದ ಸಾ | ಗರವ ಲಂ | ಘಿಸುವದಕ್ಕೆ || ೮೪ ||

---

1 ಡೆಗಯ್ಯ ಬಿಗಿಯೆ (ಓ) 2 ಘಡಣೆ (ಕಾ) ; ಗಡನ (ಕಾ)

ಬಣಗುರ | ಕ್ಕಸ ರಾ, | ವಣನ ಪ | ಟ್ಟಣವೆಲ್ಲ |
ಅಣುರೂಪಿ | ನಿಂ ಮನೆ | ಮನೆ ಹುಡು | ಕುವುದಕ್ಕೆ || ೮೫ ||

ಕೊಂಕದೆ | ಕೊನರದೆ | ಲಂಕೆಯೊ | ಳ್ಸಿಲುಕದೆ |
ಪಂಕಜ | ಮುಖಿ ಸೀತೆ | ಯಂ ಕಂಡು | ಬರುವುದಕ್ಕೆ || ೮೬ ||

ಕೆಟ್ಟ ರ | ಕ್ಕಸರಡ್ಡ | ಗಟ್ಟ ಬಂ | ದವರನ್ನು |
ಕುಟ್ಟ ಲಂ | ಕಾಪಟ್ಣ | ಸುಟ್ಟು ಬ | ರುವುದಕ್ಕೆ || ೮೭ ||

(ಹನುಮಂತನುಳಿದು ಜಾಂಬವಾದಿಗಳ ನಿಷ್ಕ್ರಮ)

೬೧ ವಾರ್ಧಿಕಷಟ್ಪದಿ

ಹನುಮಂತ—

ಎಂದ ಜಾಂಬವನರ ನುಡಿಕೇಳ್ದು ಬೊಬ್ಬಿರಿದು ಅಜ
ನಂದನಗೆ ಕೈಮುಗಿಯುತಾಕ್ಷಣವೆ ಚಿಗಿದಾ ಮ
ಹೇಂದ್ರಪರ್ವತವೇರಿ ನಾಲ್ದೆಸೆಯ ನೋಡಿದಂ ಸಿಂಧುಘೋರ್ಗುಡಿಸುತಿಹುದ |
ಇಂದು ಶೇಖರ ಕಮಲ ಬಂಧುವಿಂದ್ರಾದಿ ಸುರ
ವೃಂದ ಶಾರದೆ ಗೌರಿ ಗಣಪ ಮೊದಲಾಗಿ ರಘು
ನಂದನನ ಧ್ಯಾನಿಸುತ ಪುಟನೆಗೆದು ಹಾರಿದಂ ಮೂಲೋಕ ತಲ್ಲಣಿಸಲು || ೮೮ ||

ಒದೆದು ಗಗನಾಂಗಣಕೆ ಲಂಘಿಸುವಡಬ್ಬರಕೆ
ಹದಿನಾಲ್ಕು ಲೋಕವಲ್ಲಾಡಿದುದು ನೆಲವದಿರಿ
ತುದಧಿ ಕಂಪಿಸಿತಷ್ಟಗಜ ಕೂರ್ಮ ಮಾಶೇಷ ಮೊದಲಾದರೆದೆಗೆಟ್ಟರು |
ಬೆದರಿದರು ಸುರರು, ಮಾಯಕದಿಂದ ನಿರ್ಮಿಸಿದ
ಸುದತಿ ಬಂದಡ್ಡಗಟ್ಟಿದಡವಳ ಸದೆಬಡಿದು
ಉದರದೊಳಹೊಕ್ಕು ಛಾಯೆಯ ಸೀಳಿ ಮುಂದಿರುವ ಮೈನಾಕನಂ ಮನ್ನಿಸಿ || ೮೯ ||

೬೨ ರಾಗ ಸೌರಾಷ್ಟ್ರ—ತ್ರಿವುಡೆತಾಳ ೨

ಹಾರಿದನು ಲಂ | ಕೆಯನು ಬಿಟ್ಟೇ |
ಳ್ನೂರು ಯೋಜನ | ಮುಂದೆ[1]ಯೊ[1]ಡದಲಿ |
ಸಾರಿದನು ತೃಣ | ಬಿಂದು ಮುನಿಪನ | ಶಾಲೆಯೆಡೆಗೆ || ೯೦ ||

---

1 ಪ (ಕಾ)

ಊರ ಹೊಲಬನು । ತಿಳಿಯದಲ್ಲಿ ವಿ ।
ಚಾರಿಸಲು ಬೇ । ಕೆನುತ ಮುನಿಯ ಪ ।
ದಾರವಿಂದ । ಕ್ಕೆರಗಿದನು ಕಡು । ವೀರಹನುಮನು ॥ ೯೧ ॥

(ನೆಲದ ಮೇಲೆ ಅಸನಬದ್ಧನಾದ ತೃಣಬಿಂದು ಮುನಿಯ ಪ್ರವೇಶ, ತೆರೆಯೆತ್ತಿ)

ಮಾತನಾಡಿಸಿ । [1]ಕಾಂಬೆನೆನ್ನು ।
[2]ತ್ತ್ರಾ[1]ತಪೋನಿಧಿ । ಯನ್ನು ಸ್ತುತಿಸುತ ।[2]
ವಾತಸಂಭವ । ನುಡಿದನಾ ಮುನಿ । ನಾಥಗಂದು ॥ ೯೨ ॥

೩೩ ರಾಗ ಘಂಟಾರವ—ಜಂಪೆತಾಳ ೩

ಹನುಮ—

ಯಾವ ದೇ । ಶಂಗಳಿವು । ಯಾವ ರಾ । ಜನ್ಯವೈ ।
ನೀವಿಲ್ಲಿ । ನೆಲೆಯಾಗಿ । ಇನ್ನೆಷ್ಟು । ವರುಷ ॥ ೯೩ ॥

ರಾವಣೇ । ಶ್ವರನೆಂಬ । ರಕ್ಕಸನ । ಪುರವೆಲ್ಲಿ ।
ಯಾವ ದಿ । ಕ್ಕಿನೊಳಹುದು । ಲಂಕಾದಿ । ನಗರ ॥ ೯೪ ॥

ಕಾರ್ಯವುಂ । ಟೆಮಗಲ್ಲಿ । ಕಳ್ಳರ । ಕ್ಕಸನಲ್ಲಿ ।
ತೋರಿಕೊ । ಟ್ಟರೆ ತಿಳಿದು । ಬಹುಪುಣ್ಯ । ಬಹುದು ॥ ೯೫ ॥

ವಚನ॥ ಇಂತೆಂದು ಮುನಿಯ ಪಾದಕ್ಕೆ ಸಾಷ್ಟಾಂಗ ವಂದನೆಯಂ ಮಾಡಿ ಹೇಳಿಕೊಂಬಂಥಾ ಹನುಮಂತನ ಭಕ್ತಿಯಂ ಕಂಡು ಈತನು ಮಹಾಸ್ವಾಮಿಕಾರ್ಯ ಸಂಗ್ರಹಿ, ಪರೋಪಕಾರಿ, ಅತಿಧೈರ್ಯವಾನಿ, ಶರಣಶ್ರೇಷ್ಠನೆಂದು ತಿಳಿದು ಈತನ ಸತ್ವವಂ ಪರೀಕ್ಷಿಸಬೇಕೆಂದು ಕಣ್ತೆರೆದು ಕಟಾಕ್ಷದಿಂ ನೋಡಿ ಏನೆಂದನು ಎಂದರೆ—

---

1 ನೋಳ್ಪೆನೆನ್ನುತ । ಲಾ (ಅ) 2 ಮತ್ತೆ ಸ್ತುತಿಸುತ । ಬಹಳ ದೈನ್ಯದಿ (ಅ)

೩೪ ಸಾಂಗತ್ಯ ; ರಾಗ ಆನಂದನೀಲಾಂಬರಿ—ರೂಪಕತಾಳ ೩

ತೃಣಬಿಂದು—

ಕುರುಡನ | ಕಯ್ಯ ಕ | ನ್ನಡಿಯೇಕೆ | ಬಧಿರಗೆ |
ಸ್ವರಸಂಗೀ | ತಗಳ ಮಾ | ತೇಕೆ |
ಎರಡೂ ಕಾ | ಲಿಲ್ಲದ | ಹೆಳವಗೆ | ಯಾತ್ರೆಯು |
ತಿರುಗಾ | ಟದ ಸುದ್ದಿ | ಯೇಕೆ || ೯೬ ||

ತಿರಿದುಂಬಾ | ತನ ಮನ | ಪಲ್ಲಕಿ | ಯೇರುವ |
ತೆರನಂತಾ | ಯಿತು ನಿನ್ನ | ಮನಸು —||
ಮರಮರ | ಚರಿಪ ವಾ | ನರ ನಿನ | ಗಾ ಲಂಕಾ |
ಪುರದರ | ಸಿನ ಸುದ್ದಿ | ಯೇಕೆ || ೯೭ ||

ಏಳು ಸು | ತ್ತಿನ ಕೋಟೆ | ಕಣಿವೆ ಹೆ | ಜ್ಜರಿ ಸುತ್ತ |
ಕಾಳೆರ | ಕ್ಕಸರು ಕಾ | ದಿಹರು—|
ಮೇಲಾದ | ಬ್ರಹ್ಮರಾ | ಕ್ಷಸ ಭೂತ | ಗಣಗಳ |
ಜಾಲವು | ನುಸಿಹೋಗ | ಗೊಡವು || ೯೮ ||

ಹನುಮಂತ—

ಮುನಿರಾಯ | ಕೇಳಯ್ಯ | ಹಿಂದೆ ಮುಂ | ದಾದರೂ |
ತನುವಿದು | ಯೆನಗೆ ಶಾ | ಶ್ವತವೇ |
ವನಜಸಂ | ಭವ ಹಣೆ | ಯೊಳು ಬರೆ | ದಿಟ್ಟಂಥಾ |
ದ್ದನು ವಿಸಾರ | ಳಳವೆ ಜೀ | ವರಿಗೆ || ೯೯ ||

ಸ್ವಾಮಿಕಾ | ರ್ಯದ ಮೇಲೆ | ಸತ್ತರೆ | ನೆನಸಿದ |
ಕಾಮಿತ | ಕೈಲಾಸ | ವಹುದು—|
ಆ ಮಾತು | ನಿಮಗೇಕೆ | ದಶಕಂಠ | ನಿರುವಂಥ |
ಸೀಮೆ ತೋ | ರಿಸಿದರೆ | ಸಾಕು || ೧೦೦ ||

೩೫ ರಾಗ ಘಂಟಾರವ—ಅಷ್ಟತಾಳ ೧ (ವಿಲಂಬಿತ, ದ್ರುತ)

ತೃಣಬಿಂದು—

ಕಪಿವರ |—ವೀರ | ಕೇಳೆನ್ನ | ಮಾತನು |
ಗುಪಿತದಿಂಬಹು | ಕಾಲವಾಯಿತು | ತಪವ ಮಾಡುವ | ದಿಲ್ಲಿನಾವು ||೧೦೧||

ತಲೆಯಿಂದ |—ಜಡೆ |ಯಿಳಿದು ಪಾ | ತಾಳಕ್ಕೆ |
ಬೆಳಸುಕೊಂಡಿದೆ | ಬೇರುವರಿದಿದೆ | ಎಳಸಲಾರದು | ಶಕ್ತಿಗೆ—|
ವೃದ್ಧರು |—ನಾವು | ಏಳಲಾ | ರೆವು ನಮ್ಮ |
ಉದ್ದನೆಗಹಲು | ರಾವಣೇಶ್ವರ | ನಿದ್ದಠಾವನು | ತೋರ್ಪೆವು || ೧೦೨ ||

ಹನುಮಂತ—

ಎಂಬ ಮಾ |—ತಿಗೆ | ಎರಡೂ ತೋ | ಳ್ಪಿಡಿದೆತ್ತಿ |
ಅಂಬರಕೆ ನೆ | ಗ್ಗಿದರೆ ಅಜಹರ | ಶಂಭುಸಖ ಬೆರ | ಗಾಗಲು || ೧೦೩ ||

ತೋರೆಲಾ |—ಮುನಿ | ಲಂಕಾಪ | ಟ್ಟಣವನ್ನು |
ತೋರಿದರೆ ಹನು | ಮಂತ ನಿಮಿಷದಿ | ಹಾರಿದ ಮಹಾ | ದುರ್ಗವ ||೧೦೪||

ನಿಲ್ಲೆಲೋ |—ಕಪಿ | ಯೆನುತ ಬಾ | ಗಿಲ ಬಳಿ |
ಯಲ್ಲಿ ತಡೆವಾ | ಖುಲ್ಲ ರಕ್ಕಸ | ರೆಲ್ಲರನು ಸದೆ | ಬಡಿಯುತ || ೧೦೫ ||

ಹೊಕ್ಕನಾ |—ಲಂಕಾ | ಪಟ್ಟಣ | ದೊಳಗುಳ್ಳ |
ರಕ್ಕಸರು ಘೋ | ರಿಡುವ ನಿದ್ರೆಯ | ಗಕ್ಕಸದ ಭರ | ವೀಕ್ಷಿಸಿ || ೧೦೬ ||

ಅಲ್ಲಲ್ಲಿ |—ರಾತ್ರಿ | ತಿರುಗಾಡು | ತಿಹ ವೇಳೆ |
ಯಲ್ಲಿ ಲಂಕಿನಿ | ಯೆಂಬ ದಾನವಿ | ಬಲ್ಲಿದಾತನ | ತಡೆದಳು || ೧೦೭ ||

೩೬ ರಾಗ ಮಾರವಿ—ಮಟ್ಟೆತಾಳ ೩ ; ಅಷ್ಟತಾಳ ೧, ದ್ರುತಲಯ

ಲಂಕಿನಿ—

ಮಧ್ಯರಾತ್ರಿ | ವೇಳೆಯಲ್ಲಿ | ಮಾತನಾ | ಡದೆ ಸುಮ್ಮ |
ನೆದ್ದು ತಿರು | ಗಾಡುವಾತ | ನಾರೆಲೋ ಕ | ಪಿ— || ೧೦೮ ||

ಹನುಮ—

ನಿದ್ದೆಯಿಲ್ಲ | [1]ವೇನೆ ನಿನಗೆ | ಇರುಳು[1]ಭೂತಂ | ಗಳ ಹಾಗೆ |
ಉದ್ದುರುಟು | ತನವದೇಕೆ | ಯಾರೆ ರಾಕ್ಷ | ಸಿ— || ೧೦೯ ||

ಲಂಕಿನಿ—

ಭದ್ರ ಎನ್ನ | ಕಾವಲಿಲ್ಲಿ | ಲಂಕಿಣಿಯೆಂ | ಬಾಕೆನಾನು |
ಕ್ಷುದ್ರ ಕಳ್ಳ | ಎನ್ನಕೈಗೆ | ಸಿಕ್ಕಿದೆಯ | ಲ್ಲ— || ೧೧೦ ||

---

1 ಕಾಣೆ ಎನಗೆ | ನೀನು (ಕಾ)

ಹನುಮ—

ಕಳ್ಳನಲ್ಲ । ಕಾಣೆ ನಾನು । ಜಾಣೆ ರಾಕ್ಷ । ಸಿ ಕೇಳ್ ನೀನು ।
ಒಳ್ಳೆ ವಾಯು । ಪುತ್ರ ಹನುಮ । ನೆನ್ನಪೆಸರ ।ದು— ॥ ೧೧೧ ॥

ಲಂಕಿನಿ—

ಹೆಣ್ಣುಮಂತ । ನಾದರೇನು । ಕಣ್ಣು ಮೂರುಂ । ಟೇನೊ ನಿನಗೆ ।
ಇನ್ನು ನಾ ಬಿ । ಟ್ಟೇನೆ ನಿನ್ನ । ತಿನ್ನದುಳಿವೆ । ನೆ— ॥ ೧೧೨ ॥

ಹನುಮ—

ಎನ್ನ ಪಂಥ । ನೋಡು ನಿನ್ನ । ಮಣ್ಣ ಮು । ಕ್ಕಿಸುವೆ ಮುನ್ನ ।
ಹೆಣ್ಣುಮೂಳಿ । ದಾರಿಯ ಬಿ । ಟ್ಟತ್ತ ಸಾರೆ । ಲೇ— ॥ ೧೧೩ ॥

ಲಂಕಿನಿ—

ವಾಯುಪುತ್ರ । ನೋಡು ಯೆನ್ನ । ಬಾಯೊಳು ಹ । ಲ್ಲಿಪ್ಪುದನ್ನ ।
ಮಾಯದೆ ನಿ । ನ್ನ ನುಂಗುವೆ । ಮತ್ತೆ ಮಾತುಂ । ಟೇ— ॥ ೧೧೪ ॥

ಹನುಮ—

ನಾಯಿಮುಂಗಳ । ಹಾಗೊಂದೊಂದ । ಬಾಯಿಬಗುಳಿ । ಪೆಟ್ಟತಿಂದು ।
ಸಾಯಬೇಡ । ತ್ತತ್ತ ತೊಲಗೆ । ಹೇಯ ರಾಕ್ಷ । ಸಿ ॥ ೧೧೫ ॥

ಲಂಕಿನಿ—

ಇಷ್ಟು ಪಂಥ । ವಾದ ಮೇಲೆ । ಬಿಟ್ಟು ನಿನ್ನ । ನಾ ಪೋದರೆ ।
ಕಷ್ಟವೆಂದು । ಕೈಯೊಳೊಂದು । ಪೆಟ್ಟನಿಟ್ಟ । ಳು— ॥ ೧೧೬ ॥

ಹನುಮ—

ಕಟ್ಟಮೂಳಿ । ಯೆಂದು ಹನುಮ । ಮುಷ್ಟಿಯಿಂದ । ತಿವಿಯಲವಳು ।
ರಟ್ಟೆ ಮುರಿದು । ಬಿದ್ದಳು ಹೆ । ಜ್ಜೆಟ್ಟದಂದ । ದಿ— ॥ ೧೧೭ ॥

೩೭ ವಾರ್ಧಿಕ ಷಟ್ಪದಿ

ಹಲವು ಪರಿಯಲಿ ಕಾದಿ ದಣಿದು ಲಂಕಾಲಕ್ಷ್ಮಿ
ತೊಲಗಿದಳು ರಾವಣಗೆ ಬಂತು ಕೀಳ್ದೆಸೆಯೆನುತ
ಬಳಿಕ ಹನುಮಂತನಣುರೂಪಿನಿಂದಲ್ಲಲ್ಲಿ ಹುಡುಕಾಡುತಿರುತಿರ್ದನು ।

ಬಲವಂತ ನಿದ್ರೆಯಲಿ ಗೋರಿಡುತ ಮೆಯ್ಮರೆದು[1]
ಮಲಗಿರ್ದ ಕುಂಭಕರ್ಣನ ಸುಯ್ಲೊಳಗೆ ಸಿಕ್ಕಿ
ಸಲೆ ವಜ್ರ[2]ಕಂಭಕ್ಕೆ ಸಿಡಿದು[2]ಬಳಿಕಲ್ಲಿಂದ [3]ಪರುಠವಿಸಿ ಹೊರವಂಟನು[3] ||೧೧೮||

೩೮ ರಾಗ ಸೌರಾಷ್ಟ—ತ್ರಿವುಡೆ ತಾಳ ೨

ಹನುಮಂತ—

ಹತ್ತಿ ನೋಡಿದ | ಗೋಪುರಂಗಳ |
ಸುತ್ತಿ ದಣಿದನು | ಕೋಟೆಕೊತ್ತಳ |
ಪೃಥ್ವಿಜಾತೆಯ | ಕಾಣದಿರೆ ಬೇ | ಸತ್ತ ಹನುಮ ||೧೧೯||

ಮಾಣದಯ್ತಂ | ದಲ್ಲಿ ಸೆರೆಮನೆ |
ಕೋಣೆಗಳ ಬೀ | ಯಗದ ಮುದ್ರೆಯ |
ತ್ರಾಣದಲಿ ಕಿ | ತ್ತೊಳಗೆ ಹೊಕ್ಕನು | ಜಾಣ ಹನುಮ || ೧೨೦ ||

ಲೆಕ್ಕವಿಲ್ಲದ | ಠಾಣೆಠಾಣೆ[4]ಗ |
ಳಕ್ಕೆ[4] ಹುಲಿಮುಖ | ಗೋಪುರಂಗಳ |
ಮಿಕ್ಕ ಮಾಳಿಗೆ | ಗಳೊಳು ಮೆಲ್ಲನೆ | ಹೊಕ್ಕುಕಂಡ || ೧೨೧ ||*

ರಾಕ್ಷಸರ ಮನೆ | ಮನೆಗಳೆಸೆವ ಗ |
ವಾಕ್ಷದೊಳಗೊಳ | ಹೊಕ್ಕು ಬಂದನು |
ಸೂಕ್ಷ್ಮದಲಿ ಮಲ | ಗಿರುವ ದನುಜರ | ನೀಕ್ಷಿಸುತಲೀ || ೧೨೨ ||

ಮುಸುಡ ಸರಿಸಕೆ | ಬಂದು ನೋರೆಯ |
ಮುಸುಕುಗಳ ತೆಗೆ | ತೆಗೆದು ಬೆಳಗುವ |
ಮಿಸುನಿಯುಂಗುರ | ದಿಂದ ಕಾಂಬನು | ಕುಶಲದಿಂದ || ೧೨೩ ||

ಹರಿಗೆ ಯಮರಿಸಿ | ದಂಥ ಕಂಗಳ |
ಕರಿಯ ತುಟಿಗಳ | ಬಿರಿದ ಕೋರೆಯ |
ತೆರೆದ ಬಾಯ್ಗಳ | ಸುರಿವ ಜೊಲ್ಲಿನ | ಹರಿಬ ಕಂಡ || ೧೨೪ ||

---

1 ವನ್ನಾರು ಬಲುನಿದ್ರೆಯಿಂದೊರ್ವ (ಓ, ಕಾ)
2 ಘಾತದಲಿ ಬೆಳೆದು (ಕಾ) 3 ಹೊರವಂಟ ದಣಿದೆನೆಂದು 4 ಗೆ | ತಕ್ಕ (ಅ)
* ಜೋಲು ಕೊದಲ | ಕಾಲನಿಗಳದ | ತೋಳತೆಕ್ಕೆಯೊ | ಳಾರ್ದು ಮಲಗಿದ | ಖೂಳ ರಕ್ಕಸ | ರನ್ನು ಕಾಣುತ | ಗೋಳುಗುಟ್ಟಿ || (ಕಾ)

ನರರ ತೊಗಲಿನ | ಮಂಚದಲಿ ತಲೆ |
ಗಿರಿಸಿದಾನೆಯ | ಹೆಗಲ್ಗಳಲಿ ಮರೆ |
ದೊರಗಿದಸುರರ | ಕಂಡು ಹೇಸಿದ | ನಿರುಳು ಹನುಮನು || ೧೨೫ ||

ಹಟ್ಟಿಯಲಿ ನೋ | ಡಿದನು ಕರುಗಳ |
ಕಟ್ಟುವದರೊಳ | ಗರಸಿ ಬಚ್ಚಲು |
ಕೊಟ್ಟಿಗೆಗಳೊಳು | ಸಹಿತ ಹುಡುಕಿದ | ಸೃಷ್ಟಿಸುತೆಯ || ೧೨೬ ||

ತ್ರಿಣಯಸಖ ಮಧು | ಸೂದನಾಚ್ಯುತ |
ವನಜಲೋಚನ | ನೆಂಬ ಜಪಗಳ |
ನೆಣಿಪ ಶರಣ | ಶ್ರೀಕೃಷ್ಣನ ವಿಭೀ | ಷಣನ ಕಂಡ || ೧೨೭ ||

ಇಲ್ಲಿ[1]ದೇಸ್ ವಿಪ | ರೀತ[1] ರಾಕ್ಷಸ |
ನಲ್ಲಿ ಗುಣವಿದೆ | ಯೆನುತಿರಲು ಮ |
ತ್ತಲ್ಲಿ ಕಂಡನು | ರಾವಣೇಂದ್ರನ | ವಲ್ಲಭೆಯನು || ೧೨೮ ||

೩೯ ರಾಗ ಮಧ್ಯಮಾವತಿ—ಏಕತಾಳ ೪

ಹನುಮಂತ—

[,ಸೆಜ್ಜೆಯ | ಗೃಹದಲಿ |, ಸಲಿಗೆಮಂ | ಚದಲಿ |
,ಪಜ್ಜಳಿ | ಸುವದೀಪ |, ವೆರಡು ಥ | ಟ್ಟಿನಲಿ |
,ವಜ್ರದ | ಹರಳ ಕೆ |, ತ್ತಿದ ಪರ್ಯಂ | ಕದಲಿ |
,ಸಜ್ಜುಗೊಂ | ಡಿಹ ಸುಪ್ಪ | ತ್ತಿಗೆಯ ಹಾ | ಸಿನಲಿ || ೧೨೯ ||

,ದಶಕಂಠ | ನಿರಲು ನಿ |, ದ್ರೆಯ ಭಾ | ರದಲಿ |
,ಶಶಿಮುಖಿ | ಮಂಡೋದ | ರಿಯ ಸಮೀ | ಪದಲಿ |
,ಕುಸುಮ ಗಂ | ಧಿಯರು ಸಾ | ವಿರದ ಸಂ | ಖ್ಯೆಯಲಿ |
,ಅಸುರನ | ತೆಕ್ಕೆಯೊ |, ಳಿರೆ ಸರ್ವೋ | ಹದಲಿ || ೧೩೦ ||

---

1 ನೋಡಿದಡೀತ (ಅ)

,ಹೆತ್ತು ತ | ಲೆಯ ನೋಡಿ |, ದರೆ ಬೆರ | ಗಾಗಿ |
,ಹತ್ತಿರ | ಬಂದಿಣು |, ಕುತ ನಸು | ಬಾಗಿ |
,ಸುತ್ತಲಿ | ರುವ ಸತಿ |, ಯನು ಲೇ | ಸಾಗಿ |
,ಮತ್ತೆ ಕಾ | ಣುತ [1]ತಿರಿ | ,ಗಿದ ತಲೆ | ವಾ[1]ಗಿ || ೧೩೧ ||

,ಜಾನಕೀ | ದೇವಿಯ | ,ನಿದರೊಳ | ಗರಸಿ |
,ಕಾಣ ಜೇ | ಕೆನುತ ತ |, ನ್ನೊಳಗೆ ನಿ | ಶ್ಚೈಸಿ |
,ಠಾಣದೀ | ವಿಗೆಯ ಜ್ಯೋ |, ತಿಗಳನೆ | ತಣಿಸಿ |
,ಮಾಣಿಕ್ಯ | ದಂಥ ಉಂ | ,ಗುರವನ್ನೆ | ಹೊಳಿಸಿ || ೧೩೨ ||

,ಮೆಲ್ಲನೆ | ಒಂದೊಂದೇ | ,ಹೆಜ್ಜೆಯ | ನಿಡುತ |
,ಫುಲ್ಲಲೋ | ಚನೆಯರ | , ಮೊಗನೋಡಿ | ಕೊಳುತ |
,ಗುಲ್ಲು ಮಾ | ಡದೆ ಪರಾಂ | , ಬರಿಸುವೆ | ನೆನುತ |
,ಕಳ್ಳನಂ | ದದಿ ಕಾಂತೆ | ಯರೊಳಗ | ರಸುತ || ೧೩೩ ||

,ಮುಂದೆ ಕಂ | ಡರೆ ರಾವ | ,ಣೇಂದ್ರನ | ಮಡದಿ |
,ಚಂದವಾ | ಗಿರಲು ಚಿಂ | ,ತಿಸಿದನು | ಮನದಿ |
,ಮಂದಗ | ಮನೆ ಸೀತೆ | ,ಯೆಂಬ ಕಾ | ತರದಿ |
,[2]ಕಂದಿ ಕುಂ | ದುತ[2] ಭ್ರಮೆ |, ಗೊಂಡ ತತ್ | ಕ್ಷಣದಿ] || ೧೩೪ ||

## ೪೦. ದ್ವಿಪದೆ

ಹನುಮಂತ—

ಬಲುದೋಷಕೊಳಗಾದ ಪಾಪಿದಶಕಂಠ
ಮಲಗಿರುವ[3]ಳಿವಳು ವೈದೇಹಿಯೆ ಯಿದೆಂಥ[3] || ೧೩೫ ||

ಕಲೆಯಾಯ್ತು ರಾಘವಗೆ ಕಾಂತೆಯಿವಳಿಂದ
ಗೆಲವಿಲ್ಲ ಮುಂದಿನ್ನು [4]ಬಳಲುವುದರಿಂದ[4] || ೧೩೬ ||

---

1 ಅ ಕ್ಷ | ಣವೆ ತಲೆದೂಗಿ (ಅ) 2 ಕುಂದು ಬಂತೆಂದು (ಅ, ಕಾ) 3 ಳೇ ಇವಳು ವೈದೇಹಿಯುಹುದು (ಅ) 4 ದಣವುದಿದು ವ್ಯರ್ಥ (ಅ)

ವರಪತಿವ್ರತೆಯೆಂಬ ಬಿರುದ ನೆರೆ ತೋರೆದು
ಮರುಳಾದಳೀತನಿಗೆ ತನ್ನವರ ಮರೆದು || ೧೩೭ ||

ಇವಳಿಗೋಸುಗ ವಾಲಿ ಸಂಹಾರವಾದ
ಇವಳದೆಸೆಯಿಂ ಜಟಾಯುವು ಮೋಕ್ಷಕಾದ || ೧೩೮ ||

ದಾನವನ ಸಂಹರಿಸಿ ದಾಟಿದರೆ ಮುಂದೆ
ಏನೆಂದು ಹೇಳುವನೊ ನಾಲ್ಮೊಗನ ತಂದೆ || ೧೩೯ ||*

---

*ರಾಘವನು ಪೇಳ್ದ ಕುರುಹುಗಳ ನಾನೀಗ ।
ಹೇಗೆಂದು ತಿಳಿಯಬೇಕೆನುತ ಮತ್ತಾಗ ॥
ಮಂಚದಡಿಯಲಿ ಹೊಕ್ಕು ಮಾಯಗಳ ನಡೆಸಿ ।
ಚಂಚಲಿಸಿದನು ಮನದ ಸ್ವಪ್ನವನು ತಿಳಿಸಿ ॥
ಬೆದರಿ ಮಂಡೋದರಿಯು ಎದ್ದು ರಾವಣನ ।
ಮುದದಿಂದ ಎಚ್ಚರಿಸಿ ಪೇಳ್ದಳೀ ಪದನ ॥

ರಾಗ ಕಾಂಭೋಜಿ—ಏಕತಾಳ

ಮಂಡೋದರಿ— ಕಾಂತ ಕೇಳು । ಕಂಡೆನೊಂದು । ಸ್ವಪ್ನ ನಾನಿ । ಂದು ॥ ಪಲ್ಲವಿ ॥
ರಾಮನು ತಾ । ಕಳುಹಿಸಿದ । ಹನುಮನೆಂಬು । ದೊಂದು
ನಾಮವುಳ್ಳ । ಕಪಿಯು ಸ । ಮುದ್ರದಲ್ಲಿ । ಬಂದು—
ಕಾಮಿನಿ ಲಂ । ಕಿಣಿಯನ್ನು । ಕಾಳಗದಲಿ । ಕೊಂದು
ಭೂಮಿಯಲ್ಲಿ । ಕೆಡಹಿದ—। ನೆಂದು ಕಂಡೆ । ನಿಂದು—॥

ಧರಣಿಸಂ । ದನೆಯನ್ನು । ಕಂಡು ಮಾತ । ನಾಡಿ—।
ತರುವನೋದ್ಯಾ । ನವನ್ನೆಲ್ಲ । ಕಿತ್ತು ಹಾಳು । ಮಾಡಿ—॥

ನಿಶಾರಿ ಅಕ್ಷ । ಯ ಪುತ್ರರ । ತರಿದು ಬೀ । ಸಾಡಿ—।
ಬಾಲ ತುದಿ । ಯೊಳು ಹವ್ಯ । ವಾಹನನ । ನಿಟ್ಟು—।
ಸಾಲು ಸಾಲು । ಕೇರಿ ಕೇರಿ । ಲಂಕೆಯೆಲ್ಲ । ಸುಟ್ಟು....॥

ಪಾಲಿಸಿದ । ನು ವಿಭೀಷ । ಣನ್ನ ಮನೆಯ । ಬಿಟ್ಟು—:
ಹೇಳಲಳ । ವಲ್ಲ ಮುಂದೆ । ಹೇಗೆಂದೆಂಬ । ಗುಟ್ಟು—॥

ಎಷ್ಟು ಹೇಳಿ । ದರೂ ಮಾತ । ಕೇಳದೆಯೆ । ನೀನು—।
ಭ್ರಷ್ಟಬುದ್ಧಿ । ಯಾಯಿತಲ್ಲ । ತಂದು ಜಾನ । ಕಿಯನು ॥
ಕಷ್ಟವಾಗ । ದಿರದೀಗ । ಕಂಡ ಸ್ವಪ್ನ । ವನ್ನು—।
ದುಷ್ಟವಾಗಿ । ತೋರುತಿದೆ । ಕಪಟವಲ್ಲ । ತಾನು—॥—

ತರಹರಿಸಿ ಮನದೊಳಗೆ ತನ್ನೊಡನೆ ರಾಮ
ಕುರುಹುಗಳ ಪೇಳ್ದಿಡೆಯು ಕಂಡನಾ ಹನುಮ || ೧೪೦ ||

ಪದುಮರೇಖೆಗಳಿಲ್ಲ ಪಾದದಲಿ ಮುಂದೆ
ವಿಧವತ್ವ ತೋರುತಿದೆ ಹೆಡತಲೆಯು ಹಿಂದೆ || ೧೪೧ ||

ಮತ್ಸ್ಯಲಾಂಛನವಿಲ್ಲ ಬಲದ ತೊಡೆಯೊಳಗೆ
ಅಚ್ಯುತನ ಸತಿಯು ತಾನಿಲ್ಲ ಇದರೊಳಗೆ || ೧೪೨ ||

---

ರಾವಣ— ಕನಸಿನಲ್ಲಿ । ಕಷ್ಟವಾಗಿ । ಕಂಡರೀಗ । ಇಂದೇ—।
ನೆನಸಿದ ಕಾ । ರ್ಯಗಳೆಲ್ಲ । ಸಿದ್ಧಿಯಹುದು । ಮುಂದೆ—॥
ಮನಸಿನ ವೈ । ಕಾರಿತಕ್ಕೆ । ಸಮ್ಮನ್ಯಾಕೆ । ನೊಂದೆ—।
ಬಣಗು ರಾಮನ । ಭಯವಿದೇಕೆ । ಮನಸಿಗೆ ನೀ । ತಂದೆ—॥

ವಾರ್ಧಿಕ ॥ ಇಂತೆಂದು ರಾವಣನು ಕಾಂತೆಯನೊಡಂಬಡಿಸಿ
ಸಂತಸದಿ ಪವಡಿಸಿರಲಿಂತು ಹನುಮಂತನೇ
ಕಾಂತದಲಿ ಹೊರಟು ಬಲು ಚಿಂತಿಸುತ ರಾಘವನ—
—ಕಾಂತೆಯನ್ನರಸುತಿರಲು ॥

ದ್ವಿಪದೆ ॥ ಆಸುಲಂಕಾಪುರದ ಪಟ್ಟಣದೊಳೊಂದೇ
ಬೇಸರದೆ ತಿರಿತಿರುಗಿ ಅರಸಿ ನಡೆತಂದೇ
ಮೇಲೆ ನೋಡಿದನಾಗ ದನುಜನರಮನೆಯ
ಏಳುತಾಳಿಗಳ ಉಪ್ಪರದ ಮಾಳಿಗೆಯ
ಕಾಣುತೇರಿದನೊಂದುನಿಮಿಷಮಾತ್ರದಲಿ
ಜಾಣತನದಲಿ ಕುಳಿತ ಏರಿ ಶಿಖರದಲಿ
ತಗ್ಗಿನಲಿತೋರುತಿಹ ಸಂದು ಬೀದಿಯನು
ಬಗ್ಗಿ ನೋಡಿದನೊಮ್ಮೆ ನಾಲ್ಕು ಮೂಲೆಯನು
ಎಡದಮೊಗವಿಟ್ಟೊಂದುಗಳಿಗೆ ನೋಡುತ್ತ
ಒಡನೆ ಬಲಮುರಿದೊಂದುಗಳಿಗೆ ಈಕ್ಷಿಸುತ
ತಿರುಗಿ ನೋಡಿದನು ಬೆನ್ನತ್ತ ಮೊಗವಿಟ್ಟು
ಗುರಿಯ ನೋಡಿದನು ಇದಿರೊಳು ದೃಷ್ಟಿಗೊಟ್ಟು
ನಾಕುದೆಸೆಗಳನು ಈಪರಿಯೊಳೀಕ್ಷಿಸುತ
ಆಕಳಿಸಿ ಮೊಗವಿಟ್ಟು ಗಳಿಗೆ ಈಕ್ಷಿಸುತ
ಸುಳಿಸುಳಿದು ತಿರುತಿರುಗಿ ಪಟ್ಟಣವನೆಲ್ಲ

ಇವಳು ಜಾನಕಿಯಲ್ಲವೆಂದು ನಿಶ್ಚಯಿಸಿ
[1]ಜವದಿಂದ[1] ಹೊರವಂಟ ತರುಣಿಯನ್ನರಸಿ || ೧೪೩ ||

ನವರತ್ನಭಿತ್ತಿಗಳ ಕನಕನಿರ್ಮಿತದ
ಭವನಗಳ ಒಳಪೊಕ್ಕು ನೋಡಿ ಸನ್ನುತದ || ೧೪೪ ||

ಸುಳಿಸುಳಿದು ಬಳಲುತ್ತ ಪಟ್ಟಣದಿ ತೊಳಲಿ
ತಿಳಿದು ಯೋಚನೆಗೆಯ್ದನಂತರಂಗದಲಿ || ೧೪೫ ||

ಮನೆಮನೆಯ ದಾಟಿ ತಾ ಮತ್ತಲ್ಲಿ ಬಂದ
ದನುಜನುಜನುಪ್ಪರಿಗೆಯಾ ಮೇಲೇರಿ ನಿಂದ || ೧೪೬ ||

ಅರಸಿಕೊಳಲಿದರೊಳಗೆ ಶ್ರೀರಾಮನೆಂದೇ
ಪುರವನೇ ಕಿತ್ತಿರಿಸುವೆನು ಕಣ್ಣ ಮುಂದೆ || ೧೪೭ ||

ಹೀಗೆಂದು ಮನದೊಳಗೆ ಹನುಮ ನಿಶ್ಚೈಸೆ
ಹಾಗೆ ತ್ರಿಕುಟಾಚಲಕೆ ಬಾಲವನು ಬಳಸೆ || ೧೪೮ ||

ಆ ಸಮಯದಲಿ ಗಗನ ವಾಕ್ಯವನೆ ಕೇಳ್ದು
ಬೀಸುತಿಹ ಮಾರುತನ ವಾಸನೆಯ ತಾಳ್ದು || ೧೪೯ ||

ವನವದೊಂದಿರುವುದೆಂದಾರಯ್ಸಿ ನುಡಿಯ
ಅನುವರಿಸಿ ನೋಡುವೆನು ಎನುತಲಾ ಕಡೆಯ || ೧೫೦ |

ಹಾರಿದಬ್ಬರಕೆ ನೆಲವದಿರಿತಾಕ್ಷಣಕೆ
ಜಾರಿದುವು ಮಣಿಖಚಿತಭವನದುಪ್ಪರಿಗೆ || ೧೫೧ ||

---

ನಳಿನಲೋಚನೆ ಸೀತೆಯನು ಕಾಂಬುದಿಲ್ಲ
ಅರಸಿಕೊಳಲಿದರೊಳಗೆ ಶ್ರೀರಾಮನೆಂದೇ

(ಈ ಪದ್ಯಗಳು ಓಲೆ ಪ್ರತಿಗಳಲ್ಲಿರುವುದಿಲ್ಲ, ಹಳೆಯದೊಂದು ಕಾಗದದ ಪ್ರತಿಯಲ್ಲಿದ್ದುವು. ಇವು ಪ್ರಕ್ಷಿಪ್ತ ಪದ್ಯಗಳೆಂದು ಹೇಳುತ್ತಾರೆ. ರಚನೆಯಿಂದಲೂ ಇದು ಸ್ಪಷ್ಟ).

1 ತವಕದಿಂ (ಓ).

ಮೆಲ್ಲನುದ್ಯಾನಕ್ಕೆ ಮಗುಳೆ ನಡೆತಂದ
ಫುಲ್ಲನೇತ್ರೆಯಶೋಕವನದೊಳಿರಲಂದಾ ॥ ೧೫೨ ॥

ಶಿಂಶುಪದ(?)ಮರನಡಿಯ ಕುಳಿತು ರಾಘವನ
ಚಿಂತಿಸುವ ಜಾನಕಿಯ ಕಂಡನಾ ಹನುಮ ॥ ೧೫೩ ॥

(ಸರಮೆತ್ರಿಜಟೆಯರ ನಡುವೆ ಧ್ಯಾನದಿಂದ ಕುಳಿತಿರುವ
ಸೀತೆಯ ಪ್ರವೇಶ—ತೆರೆಸೀರೆಯನ್ನೆತ್ತಿ.)

೪೧. ರಾಗ ಎರುಕಲಕಾಂಭೋಜಿ—ಅಷ್ಟತಾಳ ೨

ಹನುಮಂತ—

ಜಯ ಜಯ । ತ್ರೈಲೋಕ್ಯ । ಮಾತೆ ಸ । ದ್ಗುಣವಂತೆ ।
ಜಯ ಜಯ । ಸೀತೆ ಭೂ । ಜಾತೆ— ॥ ಪಲ್ಲವಿ ॥

ಜಯ ಜಯ । ಶಕ್ತಿಸ್ವ । ರೂಪೆ ಕೀ । ರ್ತಿಕಲಾಪೆ ।
ಜಯ ಜಯ । ಪುಣ್ಯ ಶ । ರಣ್ಯೆ— ॥ ಅನುಪಲ್ಲವಿ ॥

ಇವಳೀಗ । ರಾಮನ । ಕಾಂತೆ ಸ । ದ್ಗುಣವಂತೆ ।
ಇವಳು ಸ । ಜ್ಜನಪಾಲೆ । ಶೀಲೆ—।
ಇವಳು ಬ್ರ । ಹ್ಮಾದಿಸು । ರೌಘವಂ । ದಿತೆ ಮಾತೆ ।
ಇವಳು ರಾ । ಮನ ಪ್ರೀತೆ । ಸೀತೆ— ॥ ೧೫೪ ॥

ಧರಣಿನಂ । ದನೆಯೊಳು । ದೋಷವ । ನೆಣಿಸಿದೆ ।
ದುರುಳ ರಾ । ವಣನ ಕಂ । ಡಲ್ಲಿ—।
ಕರವೆರ । ಡಲಿ ಬಾಯ । ಹೊಯ್ದು ತ । ಪ್ಪಾಯ್ತೆಂದು ।
ಶಿರವ ಬಾ । ಗಿದ ರಾಮಾ । ಯೆಂದು— ॥ ೧೫೫ ॥

ವಚನ ॥ ಇಂತೆಂದು ಅಶೋಕವನದಲ್ಲಿ ತದೇಕಮನಸ್ಸಿಂದ ಚಿಂತಿಸುತ್ತಾ ರಾಮಧ್ಯಾನದಲ್ಲಿರುವಂಥ ಸೀತಾದೇವಿಯನ್ನು ಕಂಡು ಅನೇಕ ಸ್ತೋತ್ರವಂ ಮಾಡಿ ಆ ವೃಕ್ಷವೊಂದನ್ನೇರಿ ಸುಮ್ಮನೇ ಕುಳಿತಿರಲು, ಮರುದಿವಸ ಅಸ್ತಮಾನವಾಗಲು, ಆ ಸಮಯದಲ್ಲಿ ರಾವಣನು ಸರ್ವಾಭರಣಾಲಂಕಾರಯುಕ್ತನಾಗಿ ಬೊಂಬಾಳ

ದೀವಿಗೆಯೊಡನೆ ಆ ವನಾಂತರಕಂ ಬಂದು ಆಕೆಯ ಸಮೀಪದಲ್ಲಿರುವಂಥ ಸರಮೆತ್ರಿಜಟೆಯರ ಕೂಡೆ ಜಾನಕಿಯ ಅಂತರ್ಭಾವವೇನೆಂದು ಕೇಳಲು ಅವರು ಏನೆಂದರು ಎಂದರೆ—

(ಶೃಂಗಾರರಾವಣನ ಪ್ರವೇಶ)

೪೩. ಸೌರಾಷ್ಟ—ತ್ರಿವುಡೆ ತಾಳ ೨

ಸರಮೆ—

ಧರಣಿಸುತೆಗಾ । ರಾಮಚಂದ್ರನ ।
ಸ್ಮರಣೆಯೇ ಹೊರ । ತಾಗಿ ಮನದಲಿ ।
ಬರಿದೆ ಮತ್ತೊಂ । ದಿಲ್ಲ ಯೋಚನೆ । ಇರುಳುಹಗಲು ॥ ೧೫೬ ॥

ಬೆಕ್ಕುಗಳಿಗೂ । ಕೋಡು ಬಂದರು ।
ಸಕ್ಕರೆಯು ಕಹಿ । ಯಾಗಿ ಸಂದರು ।
ಮಿಕ್ಕುಮಾತಿದು । ನಿನಗೆ ಜಾನಕಿ । ಸಿಕ್ಕಳಯ್ಯ ॥ ೧೫೭ ॥*

ಕಾಗೆ ತಾ ಬಿಳು । ಪಾಗಿ ಹೋದರು ।
ನಾಗರನ ಹ । ಲ್ಲಮೃತವಾದರು ।
ಆಗರುವೆ ಮಾ । ಯಕದ ನುಡಿಗೊಳ । ಗಾಗಳಯ್ಯ ॥ ೧೫೮ ॥

ಕಲ್ಲೊ ಳಂಬುಜ । ವರಳಿತಾದರು ।
ಮಲ್ಲಿಗೆಯು ದು । ರ್ಗಂಥವಾದರು ।
ಎಳ್ಳನಿತು ಬೇ । ಡಾಸೆ ನಿನಗಹ । ಳಲ್ಲ ಸೀತೆ ॥ ೧೫೯ ॥

ಚಂದನವೆ ಉ । ಷ್ಣಕರವಾದರು ।
ಚಂದಿರನು ಬಿಸಿ । ಲಾಗಿ ಕಾದರು ।
ಎಂದಿಗಾದರು । ನಿನಗವಳು ಮನ । ಹೊಂದಳಯ್ಯ ॥ ೧೬೦ ॥

---

*ಪರ್ವತವ ನೊಣ । ನುಂಗಿತಾದರು
ಇರುವೆ ಶರಧಿಯ । ಕುಡಿದುಹೋದರು
ಸರ್ವಥಾ ಜಾ । ನಕಿಯನೊಲಿಸಲು ಸಾಧ್ಯವಲ್ಲ ॥

ಗಿಳಿಗೆ ಲವಣವೆ । ಪಥ್ಯವಾದರು ।
ಅಳಿಗೆ ತಾವರೆ । ಸೇರದ್ಹೋದರು ।
ನಳಿನಲೋಚನೆ । ಸೀತೆ ನಿನಗಹ । ಒಲವ ಕಾಣೆ ॥ ೧೬೧ ॥

ದಕ್ಷಿಣದಿ ರವಿ । ಯುದಿಸಿ ನಿಂದರು ।
ವೃಕ್ಷಗಳು ಸಂ । ಚರಿಸಿ ಬಂದರು ।
ಲಕ್ಷ್ಮಣಾಗ್ರಜ । ಸತಿಯನೊಲಿಸಲು । ಶಕ್ಯವಲ್ಲ ॥ ೧೬೨ ॥

ಗೋವು ವ್ಯಾಘ್ರನ । ಮುರಿದು ತಿಂದರು ।
ಹಾವು ಗರುಡನ । ಹಾರಿ ಕೊಂದರು ।
ದೇವಿ ಜಾನಕಿ । ಸಿಕ್ಕಳೆಂದೇ । ಭಾವವಿರಲಿ ॥ ೧೬೩ ॥

ವಚನ ॥ ಇಂತೆಂದು ಸರಮೆ ತ್ರಿಜಟೆಯರು ಪೇಳಲಾಗಿ ರಾವಣನು ತನ್ನ ಅನುಕೂಲಕ್ಕೆ ತಕ್ಕ ವ್ಯವಹರಿಸುವಂಥ ರಾಕ್ಷಸಸ್ತ್ರೀಯರಂ ಕರೆದು ಅನೇಕ ರತ್ನಾಭರಣಗಳ ಪೆಟ್ಟಿಗೆಯಂ ಮುಂದಿರಿಸಿ, ನಾನಾ ಯತ್ನದಿಂದ ಒಡಂಬಡಿಸಿರೆಂದು ಕಳುಹಲಾಗಿ ಅವರು ಜಾನಕಿಯೆಡೆಗಂ ಬಂದು ಏನೆಂದರು ಎಂದರೆ–

ಆ೩ ರಾಗ ಕಾಂಭೋಜಿ—ಏಕತಾಳ

ರಾಕ್ಷಸಿಯರು—

ದಾನವೇಂದ್ರ । ನ ಕೂಡಲಿ । ನ್ನೇನು ಸಂದೇ । ಹ ॥ ಪಲ್ಲವಿ ॥

ಜಾನಕಿ ಸು । ಮ್ಮನೇಕೆ ಅ । ಜ್ಞಾನವಿನ್ನು । ರಾಮನೆಂಬ ।
ಧ್ಯಾನವನ್ನು । ಬಿಟ್ಟು ನಾನಾ । ಭೂಷಣಂಗ । ಳನ್ನು ತೊಟ್ಟು ॥೧೬೪॥

ಕನ್ನಡಿಯ । ನೋಡಿಕೊಳ್ಳೆ । ಕಣ್ಣಿಗೆ ಕ । ಪ್ಪಿಟ್ಟುಕೊಳ್ಳೆ ।
ಪನ್ನೀರಿಕ್ಕೊ । ಗಂಧದ ಕ । ಮ್ಮಣ್ಣೆಯ ಲೇ । ಪನ ಕೊಳ್ಳೆ ॥ ೧೬೫ ॥

ಪಟ್ಟೆಸೀ, । ರೆಯನುಟ್ಟು । ಪಚ್ಚೆಯ ಕು । ಪ್ಪಸ ತೊಟ್ಟು ।
ಕಟ್ಟಿ ತುಂಬಿ । ಗುರುಳ ಮೇ । ಲಿಟ್ಟು ನಾನಾ । ಪುಷ್ಪಂಗಳ ॥ ೧೬೬ ॥

ವಚನ ॥ ಇಂತೀ ಸತಿಯರು ನಾನಾ ಯತ್ನದಿಂದೊಡಂಬಡಿಸಲಾಗಿ ಆ ಸೀತಾಂಗನೆಯಾದಡೆ ಕಣ್ಣಂ ತೆರೆಯದೆ ಸುಮ್ಮನೇ ಇರಲಾಗಿ ಅವರು ನಾಚಿಕೊಂಡು

ರಾವಣಗೆ ಈ ವೃತ್ತಾಂತವನುಂ ಪೇಳಲಾಗಿ ಆತನು ತಾನೇ ಮಾತನಾಡಿಸಿ ನೋಳ್ಪೆನೆಂಬ ಅಭಿಲಾಷೆಯಿಂದ ಅತಿದೈನ್ಯದಿಂ ಸನಿಯಕ್ಕೆ ಬಂದು ಏನೆಂದನು ಎಂದರೆ—

ಅಅ ರಾಗ ಘಂಟಾರವ—ಏಕತಾಳ ೫

ರಾವಣ—

ಮಾರ । ಸಾಸ್ತ್ರ । ತಾಗಿ । ಬಿಗ. । ವೇರಿ । ತಲ್ಲೆ । ಬಾಲೆ ।
ನಾರಿ । ಎನ್ನ । ಮೇಲೆ । ದಯುವ । ದೋರಿ । ನೀದ । ಮ್ಮಯ್ಯ ॥ ಪಲ್ಲ ॥

ಇಪ್ಪ । ತ್ತೂ ತೋ । ಳಲ್ಲಿ । ತೆಗೆ । ದಪ್ಪಿ । ಕೊಂಬು । ದಕ್ಕೆ ।
ಅಲ್ಪ । ಮನ । ಸಲ್ಲ । ಕೇಳೆ । ಕರ್ಪೂ । ರ ಸು । ಗಂಧಿ ॥ ೧೬೭ ॥

ಚಪ್ಪ । ರ ಮಂ । ಚದ । ಮೇಲೆ । ಚಂದ । ದ ಉ ।ಯ್ಯಾಲೆ ।
ದರ್ಪ । ಕನಾ । ಟದಿ । ನಿನ್ನ । ದಣಿಸು । ವೆ ನಾ । ಮುನ್ನ ॥ ೧೬೮ ॥

ದೇವ । ತೆಗ । ಳೊಳ್ಗಂ । ಧರ್ವ । ದೇವ । ಸ್ತ್ರೀಯ । ರೆಲ್ಲ ।
ದೇವೇಂ । ದ್ರ ಮುಂ । ತಾಗಿ । ಎನ್ನ । ಸೇವೆ । ಮಾಳ್ಪ । ರಲ್ಲ ॥ ೧೬೯ ॥

ಸೃಷ್ಟಿ । ಈರೇ । ಳರೊ । ಳೆಲ್ಲ । ಶ್ರೇಷ್ಠ । ನಹೆ । ಜಾಣೆ ।
ಪಟ್ಟ । ದ ರಾ । ಣಿತ್ವ । ನಿನಗೆ । ಕೊಟ್ಟು । ಬಾಳ್ವೆ । ಕಾಣೆ ॥ ೧೭೦ ॥

ಅ೫ ರಾಗ ಗೌಳೀ ಪಂತು—ಏಕತಾಳ ೪ (ವಿಲಂಬಿತ, ದ್ರುತ)

ಮಾತಾಡ । ಬಾರದೇ । ನೆ—ಸು । ಜಾಣೆ ॥ ಪಲ್ಲವಿ ॥
ಮಾತನಾಡ । ಬಾರದೇನೆ । ಸೀತಾದೇವಿ । ಎನ್ನೊಡನೆ ।
ಸೋತು ಬಂದವನೊ । ಳೀತಕೆ ಬಹು ಛಲ ।
ಭೀತಿಯ ಬಿಟ್ಟತಿ । ಪ್ರೀತಿಯೊಳೊಂದು ॥ ಅನುಪಲ್ಲವಿ ॥

ಕಾಮಿನಿ ನಿ । ನ್ನ ಕಂಡಂದು । ಕಾಮನು ದಂ । ಡೆತ್ತಿ ಬಂದು ।
ಸಾವುಧಾನ । ದಿ ಬಿಲ್ಗೊಂಡು । ನೇಮದಿಂದ । ಸಜ್ಜು ಮಾಡಿ ।
ದ—ತೆ । ಬ್ಬ ರ್ಘೀಂಕರಿಸಿ । ಆ ಮಹಾ ಪೂ । ಶರವ ಹೂಡಿ ।
ದ—ಬಿಡ । ಲೆನಗೆ ತಾಗಿ । ನಾ ಮೂರ್ಛಿತನಾ । ಗಿ ಬಿದ್ದೆನ ।

ಲ್ಲೆ—ವಿರ | ಹನೆಗ್ಗಳಿಸಿ | ಕಾಮುಕನಾಗಿ | ನಿಂತಲ್ಲಿ ನಿ |
ಲ್ಲೆ—ಇದ | ಕೌಷಧಿಯು | ಕೋಮಲಶ | ರೀರೆ ನೀ ಬ |
ಲ್ಲೆ—ನಿ | ನ್ನನು ಬಿಡಲೊಲ್ಲೆ |
ಭೂಮಿಯೊಳಿಹ ಬೇ | ಕಾಗುವ ವಸ್ತುವ | ಪ್ರೇಮದಿ ತರಿಸಿ|, ಕೊಡಿಸುವೆ,|
ಹೇಮಾಭರಣವ |, ತೊಡಿಸುವೆ | ಶ್ಯಾಮಾಂಬರಗಳ | ನುಡಿಸುವೆ, |
ಈಮನವಿದ್ದಂ | ತಾಮನನೆರಗಿ[1]ಸು[1] | ಪ್ರೇಮದೊಳನುದಿನ |
ಕ್ಷೇಮದೊಳಿರುವ್ವೆ ‖ ೧೭೧ ‖

ಕಣ್ಣಿಗೆ ನಿ | ದ್ರೆ ಬಾರದು | ಬಾಯಿಗೆ ಅ | ನ್ನ ಸೇರದು |
ನಿನ್ನ ಹಂಬ | ಲಿಸಿ ನೆನೆದು | ಎನ್ನ ಜೀವ | ವುಳಿಯದೊಮ್ಮೆ |
ಗೆ—ಮಾ | ತಾಡಿಕೊಂಬ | ಕನ್ನೆ ನೀನೆ | ದ್ದು ಬಾ ಸುಮ್ಮ |
ಗೆ—ಸಕ | ಲ ಸೌಭಾಗ್ಯ | ಎನ್ನಲ್ಲಿ ಸೇ | ರಿಹುದೊಮ್ಮೆ |
ಗೆ—ಅ | ಷ್ಟಾಗಿ ಕುಂಭ | ಕರ್ಣನತಿ | ಶೌರ್ಯನೆನ್ನನು |
ಜ—ಸುರ | ಪನ ಜೈಸಿ | ಬನ್ನಬಡಿಸಿ | ದಾತನೆ ತನು |
ಜ—ರಾ | ಮನೆಂಬವ | ಧನ್ಯನಲ್ಲ | ನೋಡಲು ಮನು |
ಜ—ನೋ | ಡೆನ್ನ ದನುಜ |
ಕನ್ನೆಯರೆಲ್ಲರು | ಕಾದಿಹರನುದಿನ | ನಿನ್ನ ಸೇವೆಯೊ, | ಳಿರುವರು—|
[ಮನ್ನಿಸಿ ಕರೆದರೆ | ಬರುವರು— | ಕನ್ನಡಿ ಕಲಶವ | ತರುವರು—]
ಹೆಣ್ಣು ಹೊನ್ನು ಮಣ್ | ಮೂರೊಕ್ಕಯ್ಸು | ತ್ರೆನ್ನಲ್ಲಿಹ ಸಂ |
ಪನ್ನವ ನೋಡ್ವೆ ‖ ೧೭೨ ‖

,ಹಗಲಿರುಳು | ಕೈಯೊಳೆನ್ನ— |, ಬಿಗಿದಪ್ಪಿ | ಕೊಂಬೆ ನಿನ್ನ—|
ಬಗೆಬಗೆ |, ಕಾಮಕಲೆಯ | ಸೊಗಸನರಿತು | [2]ಮಾತನಾ[2]ಡು |*
ವೆ— ಕ | ರ್ಪೂರವೀಳ್ಯ | ಜಗಿದು ಸವಿದಂ | ಬುಲವ ನೀಡು |
ವೆ— ಹೆ | ಚ್ಚಿನ ಮೋಹದ | ಬಗೆಯಿಂದ, | ಮುತ್ತ ಬೇಡು |
ವೆ— ಕು | ಚಕ್ಕೆ ಸೆ |, ಳ್ಳುಗುರನಿಟ್ಟು | ಲಲ್ಲೆಗರೆ |
ವೆ— ಮ | ಲ್ಲಿಗೆಯರ | ಳುಗಳ ಮುಡಿಸಿ | ಮೋಹದೊಳಿರು |
ವೆ— ಒಂ | ದರೆಕ್ಷಣ | ವಗಲದೆ ನಿ | ನ್ನೊಳಗೆ ನಾನಿರು |
ವೆ— ಅಷ್ಟೈ | ಶ್ವರ್ಯಾದಿ ಮೆರೆವೆ |‡

[1]ಸಿ (ಕಾ) [2]ಮತ್ತೆ ಕೂ (ಅ) *ವೆ—ನಿ | ನ್ನೊಳು ನಗೆ । ಮೊಗದಿಂದ ಮಾತನಾಡು।
‡ ರಾಮನೆಂಬ । ಹಗುರ ಮನುಜ ।ಗಾಗಿ ನಾನಾ। ಬಗೆಯ ಭಾಗ್ಯ।ವೆಲ್ಲ ನೀಗಿ । (ಕಾ)

ಮುಗುದೆ ನಿನಗೆ ಛಲ । ವಿದು ಲೇಸಲ್ಲ, । ತೆಗೆದು ಮುರಿದು ಸಾ ।
ರಿದೆನಾ ಹುಲ್ಲ ।
ಮೊಗವ ನೆಗಹಿ ದೃಗು । ಯುಗದಿಂದೀಕ್ಷಿಸು । ನಗೆಯು ಬೀರು ವರ ।
ಮೃಗಮದಗಂಧಿನಿ ॥ ೧೭೩ ।

೪೬. ವಾರ್ಧಿಕಷಟ್ಪದಿ

ಕುಶನೆ ಕೇಳ್ [1]ಜಾನಕಿಗೆ ಖಳನ ನುಡಿ ಕಿವಿ[1]ಗೆ ಕ
ರ್ಕಶವಾಗಿ ನಾಟಿದುವು ಬಳಿಕ ಕಂಗಳಲಿ ಕಿಡಿ
ಮಸಗಿ ಕೈಯೊಳು ತೃಣವ ಮುರಿದಿಕ್ಕಿ ಬಣಗುರಕ್ಕಸಗವನಿಸುತೆ ನುಡಿದಳು ।
ಪಿಸುಣ ಸುರೆಗುಡಿಕ ರಣಹೇಡಿ[2]ದುರಹಂಕಾರಿ[2]
ಅಸುರರೊಳಗಧಮ [3]ಹೆಣದಿನಿ ನೀಚರ[3] ಗುಲಾಮ
[4]ಅಸಮ[4]ದುರ್ಜನಶಿರೋಮಣಿ [5]ಗಳಹ ನಾಯಿ ಹೋಗ[5]ತ್ತತ್ತ
ನಡೆಯೆಂದಳು । ॥ ೧೭೪ ॥

ವಚನ ॥ ಇಂತು ಈ ರೀತಿಯಿಂದ ದಶಾಸ್ಯನಂ ಬಯ್ದು ಸರಮೆಯೊಡನೆ ಏನೆಂದಳು ಎಂದರೆ—

೪೭ ರಾಗ ಸಾವೇರಿ—ಏಕತಾಳ ೪

ಸೀತೆ—

,ಸರಮೇನೀ । ಸಾಕ್ಷಿಯಾಗಿ । ರು—ಈ । ಮಾತಿಗೆಲ್ಲ ॥ ಪಲ್ಲವಿ ॥

ದುರುಳ ತಾನು । ತ್ರಮನಂತೆ । ಸುರರಿಗೆಲ್ಲ । ಶ್ರೇಷ್ಠನಂತೆ ।
ಧುರದೊಳಧಿಕ । ಶೌರ್ಯನಂತೆ । ನಿರುತ ಸರ್ವೈ । ಶ್ವರ್ಯನಂತೆ ॥ ೧೭೫ ॥

,ಬಲ್ಲಿದ ಸಾ । ದರೆ ಶಿವನ । ಬಿಲ್ಲೆತ್ತದೆ । ಪೋದನೇಕೆ ।
ಕಲ್ಲೆದೆಯಾ । ದರೆ ತೊಟ್ಟ । ಲಲ್ಲಿ ಕಟ್ಟಿಸಿ । ಕೊಂಡನೇಕೆ । ॥ ೧೭೬ ॥

ಅಂದು ರಾಮ । ಚಂದ್ರನ ಕಣ್ಣ । ಮುಂದೆ ತಾರ । ದೇತಕೆನ್ನ ।
,ಹೆಂದೆಯಂತೆ । ಕದ್ದಿಲ್ಲಿಗೆ ! ತಂದನೇತ । ಕಮ್ಮ ಹೇಳು ॥ ೧೭೭ ॥

---

1 ರಾವಣನ ಮಾತು ಜಾನಕಿ (ಕಾ, ಅ) 2 ಪಿಶಿತಾಹಾರಿ (ಅ)
3 ದುರ್ನೀತಿವಂತ (ಕಾ) 4 ಎಸೆವ (ಕಾ) 5 ನಾಯಪೊಲ್‌ಗಳಹದ (ಬಿ)

,ಘೋರದೈತ್ಯ | ಪಾಪಿ ಪರರ | ನಾರಿಯೊಳಿಂ | ತಾದನೇಲೆ |
[1]ಮೂರುಜನ್ಮ | ಘೋರನರಕ | ಸೇರದಿಹನೇ | ನಮ್ಮ ಹತಕ[1] || ೧೭೮ ||

ಕಾಣಬಹು | ದಿನ್ನು ಖಳನ | ಗೋಣ ಮುರಿ | ದಿಕ್ಕಿ ಯಮುನ |
ರಾಣೆಯು ಕ | ಟ್ಟಿದ ಮೇಲೆ | ರಾಣಿಯು ಮಾ | ಳ್ಪ ಶ್ರೀರಾಮು || ೧೭೯ ||

ಕೆಟ್ಟಮೂಳ | ನಿವನ ತಲೆಯ | ಕುಟ್ಟಿ ಕಾಲಿಂ | ದೊದ್ದು ಹುಡಿಯ |
ಲ್ಲಿಟ್ಟಮೇಲೆ | ಯೆನ್ನ ರಾಮು | ಪಟ್ಟದ ರಾ | ಣಿಯ ಮಾಳ್ಪ || ೧೮೦ ||

೪೮ ವಾರ್ಧಿಕಷಟ್ಪದಿ

ಕರುಳು ಕತ್ತರಿಸೆ ಜಾನಕಿಯ ವಚನಾಸ್ತ್ರದಲಿ
ದುರುಳ ರಾವಣ ಕೋಪದಿಂದ ಖಡ್ಗವ ಕೊಂಡು
ತರಳೆಯಂ ಕಡಿದು ಬಿಸುಡುವೆನೆಂದು ಬರುತಿರಲು ವರಪತಿವ್ರತೆಯಿದಿರಿಗೆ |
ಅರಿತಳಿಂಗಿತವ ಮಂಡೋದರಿ ಜವದಿ ಬಂದು
ಕರವ ಪಿಡಿದೊಡಬಡಿಸಿ ಪತಿಯ ತನ್ನರಮನೆಗೆ
ಕರೆದೊಯ್ದಳತ್ತ ಜಾನಕಿ ಕ್ಲೇಶದಿಂದಳುತ ಸರಮೆಯೊಡನಿಂತೆಂದಳು ||೧೮೧||

೪೯ ರಾಗ ನೀಲಾಂಬರಿ—ರೂಪಕತಾಳ ೩ (ಸಾಂಗತ್ಯ)

ಸೀತೆ—

ಕಂಡೆಯಾ | ಸರಮೆ ದಾ | ನವ ಬಂದು | ದಿನದಿನ |
ದಂಡಿಸು | ತಿರುವಂಥ | ಪರಿಯ ||
ಭಂಡ ರ | ಕ್ಕಸನ ಪ | ಟ್ಟಣದಿ ಬಾ | ಳ್ವುದರಿಂದ |
ಕೆಂಡಕೆ | ಬೀಳ್ವುದೇ | ಲೇಸು— || ೧೮೨ ||

ಇಂದು ಬ | ರುವ, ನಾಳೆ | ಬರುವನು | ಶ್ರೀರಾಮು |
ನೆಂದಾಸೆ | ಮಾಡಿದೆ | ನಾನು— ||
ಇಂದಿಗೆ | ದಿನವಿಷ್ಟು | ಸಂದರೂ | ರಘುಕುಲ |
ಚಂದ್ರನ | ದರ್ಶನ | ವಿಲ್ಲ— || ೧೮೩ ||

---

1 ನೂರು ಜನ್ಮಾಂತರಕೆ | ನರಕ ಸೇರದಿರ | ನಮ್ಮ ನೋಡು (ಕಾ)

ಪೂರ್ವ ಜ । ನ್ಮದೊಳೆಂಥ । ಪಾಪ ಮಾ । ಡಿದ್ದೆನೊ ।
ದುರ್ವ್ಯಥೆ । ಯೊಳು ಸಿಕ್ಕಿ ! ದಣಿದೆ ॥
ಸರ್ವಥಾ । ಇನ್ನಾಸೆ । ತೀರಿತೆ । ನಗೆ ಮುಂದೆ ।
ಉರ್ವಿಯೊ । ಳ್ಬಾಳಿರ್ಪೆ । ನೆಂಬ— ॥ ೧೬೪ ॥

ಎಲ್ಲಿಯಾ । ರಾಮ ಇ । ನ್ನೆಲ್ಲಿಯಾ । ಲಕ್ಷ್ಮಣ ।
ಎಲ್ಲಿರ್ಪು । ದೀ ಲಂಕಾ । ನಗರ ॥
ಇಲ್ಲಿಗೆ । ಬಂದೆನ್ನ । ಸೋವನೆಂ । ಬುದು ಸ್ವಪ್ನ ।
ದಲ್ಲಿಯೂ । ನಿಜವಲ್ಲ । ಮಾತು— ॥ ೧೬೫ ॥

ಎಂತಿರ್ಪ್ಪ । ರವರು ಹೀ । ಗೆಂಬ ವಾ । ರ್ತೆಗಳನ್ನು ।
ಕಾಂತೆ ಪೇ । ಳುವರಿಲ್ಲ । ದಾಯ್ತು ॥
ಇಂಥ ನಿ । ರ್ಬಂಧ ವೇ । ದನೆ ಯಾವ । ಸತಿಗೂ ಜ ।
ನ್ಮಾಂತರ । ಕ್ಕೂ ಬೇಡ । ಮುಂದೆ— ॥ ೧೬೬ ॥

ನಿನ್ನ ಮಾ । ತಿನ ಮೇಲೆ । ನೀರೆ ನಾ । ಕಾದಿರ್ದೆ ।
ಎನ್ನವ । ರಡಿಯು ನ್ಯೆ । ಸಿರಿಯು ॥
ಅನ್ಯಾಯ । ವಿದು ಮುಂದೆ । ಇನ್ನೂ ಬಾ । ಳಿರುವುದು ।
ಮನ್ನಿಸಿ । ಕೊಡು ಘೋರ । ವಿಷವ— ॥ ೧೬೭ ॥

ಪ್ರಾಣದಾ । ಸೆಯು ಬಿಟ್ಟ । ಳೆಂಬುದ । ನರಿತು ಆ ।
ಕ್ಷೋಣಿನಂ । ದನೆ[1]ಗೆ ಕ್ಷೆ । ಮುಗಿದು[1] ॥
ಏಣಾಕ್ಷಿ । ತ್ರಿಜಟೆ ಪೇ । ಳಿದಳಂತ । ರಂಗದಿ ।
ಕಾಣಿಸಿ । ದಂದಿನ । ಕನಸ— ॥ ೧೬೮ ॥

೫೦ ರಾಗ ತೋಡಿ—ಏಕತಾಳ (ವಿಲಂಬಿತ)

ತ್ರಿಜಟೆ—

ಕಂಡೆ, ನಾ । ನೀ ರೀತಿ ।, ಸ್ವಪ್ನವ । ಕಮಲಾಕ್ಷಿ ।
ಪುಂಡರೀಕ । ನೇತ್ರನೂ ಮಾ । ರ್ತಂಡಜಾತ । ಸುಗ್ರೀವನೂ ।
ಹಿಂಡುಕಪಿಗ । ಳನ್ನು ಕೂಡಿ । ಕೊಂಡು ಬಂದ । ರೆಂಬುದನ್ನು ॥ ಪಲ್ಲವಿ ॥

---

1 ಯ ಕೈವಿಡಿದು (ಅ)

ಹತ್ತುತಲೆ । ಯಾತ ತಾನು । ರಕ್ತವಸ್ತ್ರ । ಗಳನುಟ್ಟು ।
ಕತ್ತೆಯ ಮೇ । ಲೇರಿಕೊಂಡು । ಯಾತ್ರೆಗೆ ಪೋ । ದ ದಕ್ಷಿಣ ॥ ೧೮೯ ॥

ಅಂಗನೆ ಮಂ । ಡೋದರಿ ಕ । ರ್ಣಂಗಳೋಲೆ । ಮೂಗುತಿಯ ।
ಮಂಗಲಸೂ । ತ್ರವ ಹರಿದು । ಕಂಗಳೊಳ್ನೀ । ರಿಳಿಯುತಿಹುದ ॥ ೧೯೦ ॥

ಅಷ್ಟಭಾಗ್ಯ । ವೆಲ್ಲ ಹೋಗಿ । ದುಷ್ಟರು ಸಂ । ಹಾರವಾಗಿ ।
ಥಟ್ಟನೆ ವಿ । ಭೀಷಣ ಈ । ಪಟ್ಟಣವಾ । ಳ್ವ ಸ್ವಪ್ನವ ॥ ೧೯೧ ॥

ಪುಂಡರೀಕ । ನೇತ್ರೆ ನಿನ್ನ । ಗಂಡನಾದ । ರಾಮಚಂದ್ರ ।
ಕೊಂಡುಪೋಗಿ । ನಿಮ್ಮನು ಭೂ । ಮಂಡಲವಾ । ಳ್ವನೆಂಬಂಥ ॥ ೧೯೨ ॥

೫೧ ವಾರ್ಧಿಕಷಟ್ಪದಿ

ಮನಸಿನಲಿ ಕಡುನೊಂದು ಚಿಂತಿಸುವ ಜಾನಕಿಗೆ
ಕನಸಿನೊಳವಂ ಪೇಳ್ದೊಡಂಬಡಿಸೆ ತ್ರಿಜಟೆ, ಮರ
ಗೊನೆಯೊಳಿದ್ದೆಲ್ಲವಂ ಕೇಳ್ದು ಹನುಮಂತ ಶ್ರೀರಾಮರಾಮಾ ಎನ್ನುತ ।
ಇನಕುಲದ ಸೌಭಾಗ್ಯ ಚಿಂತಾಮಣಿಗೆ ತಕ್ಕ
ವನಿತೆಯಹುದೆಂದು ಕೊಂಡಾಡಿದನು [1]ರಘುವರನ
ಮನಸಿನೊಳು ಜಾನಕಿಯು ಕೇಳುತಿರೆ ಕಾವಲಿಹ ರಕ್ಕಸರು ಕೇಳದಂತೆ[1]॥೧೯೩॥

೫೨ ರಾಗ ಘಂಟಾರವ—ಜಂಪೆತಾಳ ೩

ಹನುಮಂತ—

ಸೂರ್ಯಕುಲ । ಸಂಜಾತ । ಭೂಪಾಲ । ಮಣಿಯಾದ ।
ಶೌರ್ಯಜಲ । ನಿಧಿಯಾದ । ದಶರಥ, । ನೃಪಗೆ ॥ ೧೯೪ ॥

ನಾರಿಯರು । ಮೂವರು ಕು । ಮಾರಕರು । ನಾಲುವರು ।
ಧಾರಿಣಿಯ । ನಾಳ್ವಾಗ । ಕೈಕೆಯಾ । ವಚನ ॥ ೧೯೫ ॥

ಶ್ರೀರಾಮ । ಕೇಳಿ ತಾ । ಸೀತೆ ಸೌ । ಮಿತ್ರಿಸಹ ।
ಅರಣ್ಯ । ದೊಳಗೆ ಸಂ । ಚರಿಸುತಿರ । ಲಾಗಿ ॥ ೧೯೬ ॥

---

1 ಜಾನಕಿಯು । ಘನರಾಘವನ ಕೀರ್ತಿಗಳನು ಪೇಳಿದ ಕಾವಲಿಹ ದೂತರರಿಯ ದಂತೆ । (ಕಾ)

೫೩ ಕಂದ

ಮರ[1]ಗೊಂಬಿನೊಳಿಂ[1]ತೆಂದಾ
ಸಿರಿವಾಕ್ಯವಕೇಳ್ದು ಸೀತೆ[2]ಮೊಗವಂ ನೆಗಹಿ[2] ।
[3]ದುರುಳರ ಮಾಯಕವೆಂದೇ
ತಿರುಹಲು, ಹನುಮಂತನಿಳಿದು[3] ನವಿಸುತ್ತೆಂದಂ ॥ ೧೯೭ ॥

೫೪ ರಾಗ ಸೌರಾಷ್ಟ—ಅಷ್ಟತಾಳ ೧

ಹನುಮಂತ—

ಮಂಗಲ । ಮಹಿಮ[4] ರಾ । ಮನ ಪಾದ । ದೆಡೆ[4]ಯಿಂದ ।
,ಬಂದೆ । ನ— । ಮ್ಮ— । —ಕೋಮ ।
ಲಾಂಗ ಲ । ಕ್ಷ್ಮಣದೇವ । ಕಳುಹಿದ । ಬಗೆಯಿಂದ ।
,ಬಂದೆ । ನ— । ಮ್ಮ— ॥ ॥ ೧೯೮ ॥

ವಾತ ಸಂ । ಭವ ಎನ್ನ । ಮಾತೆ ಅಂ । ಜನೆ ದೇವಿ ।
,ಬಂದೆ । ನ— । ಮ್ಮ — । — ಭಾನು ।
ಜಾತ ಎ । ನ್ನೊಡೆಯ ಸಂ । ಪ್ರೀತಿಯಿಂ । ಕಳುಹಲು ।
,ಬಂದೆ । ನ— । ಮ್ಮ— ॥ ೧೯೯ ॥

ಬಲುಬಲು । ದೇಶವ । ಕಳೆದೆಲ್ಲ । ಹುಡುಕುತ್ತ ।
,ಬಂದೆ । ನ— । ಮ್ಮ — । —ಇನ್ನು ।
ಹಲವು ಮಾ । ತೇಕೆ ಸಾ । ಗರವ ಲಂ । ಘಿಸುತಿತ್ತ ।
,ಬಂದೆ । ನ— । ಮ್ಮ— ॥ ೨೦೦ ॥

೫೫ ಕಂದ

ಎಂದಾ ಹನುಮನ ಮಾತಿಗೆ
ಚಂದ್ರಾನನೆ ಕಪಟವೆಂದು ಸುಮ್ಮನೆಯಿರಲಾ
ಹಿಂದಾಗಿದ್ದುದನರುಹಿದ
ಡಿಂದರಿವಳೊ ಎಂಬ ಭ್ರಮೆಗೆ ಮತ್ತಿಂತೆಂದಂ ॥ ೨೦೧ ॥

---

1 ಗೊನೆಯೊಳಗಿಂ (ಓ) 2 ಮಾಯಕವೆಂದೇ (ಓ) 3 ಮರುಗುತ ಮೊಗವಂ ತಿರುಹಲು । ಮರುತಜ ಧರೆಗಿಳಿದು ಮಣಿದು ಮತ್ತಿಂತೆಂದಂ ॥ (ಓ)
4 ಶ್ರೀ ರಾಮನ । ಬಳಿ (ಕಾ)

ಜ೬ ರಾಗ ಕಾಂಭೋಜಿ—ಏಕತಾಳ ೪ ತ್ರಿತ್ರಿತ್ರೈ೬

ಚಿತ್ತಯಿಸಿ । ದೇವಿ ನಿಮ್ಮ । ವರ್ತಮಾನ । ವೆಲ್ಲ ಪೇಳ್ವೆ ।
ಸತ್ಯವೊ ಅ । ಸತ್ಯವೋ । ನೀವೇ ಬಲ್ಲಿ । ರಿ— ॥ ಪಲ್ಲವಿ ॥

ಧಾತ್ರಿಯೊಳ । ಯೋಧ್ಯೆಯಲ್ಲಿ । ಪೃಥ್ವಿಪಾಲ । ದಶರಥಂಗೆ ।
ಸ್ವಸ್ತ್ರೀಯರು । ಮೂವರು ಪ । ತ್ನಿಯರಹು । ದೆ— ॥
ಸತ್ವದಲ್ಲಿ । ನಿಮ್ಮನು ಬಿ । ಲ್ಲೆತ್ತಿ ಜ್ಯೇಷ್ಠ । ನಾದ ರಾಮ ।
ಅರ್ತಿಲಿ ತಾ । ಮಿಥಿಲೆಯಿಂದ । ತಂದುದಾಹು । ದೆ— ॥ ೨೦೨ ॥

ಜನಕನ ಮಾ । ತಿಂಗೋಸುಗ । ದಿನಕರವಂ । ಶಾಬ್ಧಿಚಂದ್ರ ।
ಘನತರವಾ । ಗಿರುವ ಘೋರ । ವನಕೆ ಬರುವಾ । ಗ — ॥
ಮನಸು ಸೊರಗಿ । ನೀವು ಲ । ಕ್ಷ್ಮಣನು ಸಹಿ । ತ ಮೂವರು ।
ನೆಲಸಿದಂಥ । ಪಂಚವಟೀ । ವನಸಮೀಪ । ದಿ— ॥ ೨೦೩ ॥

ತರಿದು ಮೂಗ । ರಕ್ಕಸಿಯ । ಖರದೂಷಣಾ । ದ್ಯರ ಶಿರವ ।
ಮರೆಸಿ ಬಂದ । ಮೃಗವ ಕಂಡ । ಚ್ಚರಿಯದಿ ನೀ । ವು— ॥
ತರಬೇಕೆಂದು । ಪೇಳೆ ರಾಮ । ತೆರ[1]ಳಿದಾಗ । ಲಾ ರಾವಣ ।
ಭರದಿಂದೆತ್ತಿ । ನಿಮ್ಮನು ಅಂ[1] । ಬರದ ಮಾರ್ಗ । ದಿ— ॥ ೨೦೪ ॥

ಬರುವಾಗ ಕಂ । ಡು ಜಟಾಯು । ಶರಣನಡ್ಡ । ಗಟ್ಟಲಾಯು ।
ಸ್ಥಿರವೆಂದಿತ್ತ । ಮೇಲಾದಂಥ । ಪರಿಯ ಲಾಲಿ । ಸಿ— ॥ ೨೦೫ ॥

ಜ೭ ರಾಗ ಕೇದಾರಗೌಳ—ಅಷ್ಟತಾಳ ೧

ಹನುಮಂತ—
ಕುಂಜರ । ಗಮನೆ ಕೇ । ಳಾ ಮೇಲೆ । ಶ್ರೀರಾಮ ।
ಕಂಜದ । ಳಾಯತಾ । ಕ್ಷ — ।
ಮಂಜುಳ । ಕಾಯ ಲ । ಕ್ಷ್ಮಣ ಸಹ । ಖಗಕುಲ ।
ಸಂಜೀವ । ನನು ಕಂಡ । ರು— ॥ ೨೦೬ ॥

ಅಂಜದೆ । ನಿಮ್ಮ ರಾ । ವಣ ಕೊಂಡು । ಬಂದುದ ।
ಮಂಜುಳಾಂ । ಗರು ಕೇಳು । ತ್ತ— ।

---

1 ಳಲಾಗ ಲಕ್ಷ್ಮಣ । ದುರುಳ ನಿಮ್ಮ । ನೆತ್ತಿಕೊಂಡಂ (ಕಾ)

ನಂಜಾಯಿ | ತವ್ಯತನೆಂ | ದೆನುತಲಿ | ಮರುದಿನ |
ಮುಂಜಾನೆ | ಹೊರವಂಟ | ರು— || ೨೦೭ ||

ಚಂದ್ರಗೆ | ರಾಹು ಸೋಂ | ಕಿದ ಹಾಗೆ | ಶ್ರೀರಾಮ |
ಚಂದ್ರ ಲ | ಕ್ಷ್ಮಣರಿರ್ವ | ರು — |
ಒಂದೊಂದು | ಕಡೆ ನಿಮ್ಮ | ನರಸುತ್ತ | ಬಂದು ಕ |
ಬಂಧನ | ಪರಿಹರಿ | ಸಿ — || ೨೦೮ ||

ಮುಂದೆಯ್ದಿ | ಶಬರಿಗೆ | ವರವಿತ್ತು | ಮುನಿಗಳ |
ವೃಂದವ | ಸಂತಯಿ | ಸಿ — |
ಇಂದ್ರಜ | ವಾಲಿಯ | ಭಯದಿಂದ | ಸುಗ್ರೀವ |
ನೊಂದುಕೊಂ | ಡಿರ್ಪಾಗ | ಲು — || ೨೦೯ ||

ಶರವೇದ | ಮೂರ್ತಿಗ | ಳವರು ಪಂ | ಪಾಸರೋ |
ಪರದೆಡೆ | ಗೆಯ್ದುರ | ಲು — |
ತರಣಿನಂ | ದನ ಕಂಡು | ಕರೆಸಲು | [2]ಋಷ್ಯಾಖ್ಯ[2] |
ಗಿರಿಯ ಮೇ | ಲಕೆ ಬಂದ | ರು — || ೨೧೦ ||

ತಾಳೆಯ | ಮರನೇಳ | ತರಿದು ದುಂ | ದುಭಿಯಟ್ಟಿ |
ಕಾಲಿಂದೊ | ದ್ದೆಸೆದ ಮೇ | ಲೆ— |
ವಾಲಿಯ | ಕೊಂದು ಸು | ಗ್ರೀವಗೆ | ಪಟ್ಟವ |
ಪಾಲಿಸಿ | ನವ್ಮೊಡ | ನೆ — || ೨೧೧ ||

ಕಾಲವೇ | ಳೆಯಲಿ ನಿ | ಮ್ಮರಸಬೇ | ಕೆನುತ ಭೂ |
ಪಾಲನ | ಪ್ಪಣೆಯ ಕೊ | ಟ್ಟ — |
ಏಳು ಮ | ತ್ತೆಪ್ಪತ್ತು | ಕೋಟಿ ನಾ | ಯಕರು ಈ |
ರೇಳು ಲೋ | ಕವ ತೊಳ | ಲಿ — || ೨೧೨ ||

ಲೋಲಲೋ | ಚನೆ ಸ್ವಯಂ | ಪ್ರಭೆಯ ಪ | ಟ್ಟಣದಿಂದ |
ಮೇಲೆ ಬಂ | ದಲ್ಲಿ ಮ | ತ್ತೆ — |

---

1 ವೃಷಮುಖ (ಶಾ)

ಕೇಳಿ ಸಂ । ಪಾತಿ ತೋ । ರಿಸಿದ ಕಾ । ರಣದಿಂದ ।
ಬಾಲೆ ಇ । ಲ್ಲಿಗೆ ಬಂದೆ । ನು — ॥ ೨೧೩ ॥

ವೇಲಾದ । ಕಪಿಗಳು । ಶರಧಿಯ । ತಡಿಯಲ್ಲಿ ।
ಬಾಳ ಚಿಂ । ತಿಸುತ್ತಿಪ್ಪ । ರು — ।
ಜಾಲವಾ । ತಲ್ಲ ಜಾ । ನಕಿ ಕೇಳೆಂ । ದೆನುತಲೆ ।
ಕಾಲವೇ । ಲಕೆ ಬಿದ್ದ । ನು — ॥ ೨೧೪ ॥

೫೪ ವಾರ್ಧಿಕಷಟ್ಪದಿ

ಸೀತೆ—

ಕೇಳಿದಾಕ್ಷಣ [1]ಕಣ್ಣೊಳೊಸರಿದುವು ಜಲಬಿಂದು
ತೊಳತಂತಸ್ತಾಪ ರೋಷತೋಷದೊಳು ತನು[1]
ಗಾಳಿಗೊಡ್ಡಿದ ದೀಪದಂತೆ [2]ಕಳಕ[2]ಳಿಸಿ ರೋಮಾಳಿ ನೆಟ್ಟಗೆ ನಿಂತುದು ।
ಬೀಳುಗೊಂಡುದು ಮನದ ಸಂಶಯವದರ್ಥ, ಬಲ
ಗಾಲ ತೊಡೆಯಲಿ ಮಚ್ಚವುಂಟೆಂತೆನಲ್ ನಾಲ್ಕು
ಪಾಲೊಳೊಂದಿಳಿಯೆ ಚಂಚಲ ಕುರುಹುಗಳ ಬಳಿಕ ನೀಲಕುಂತಳೆಗೆಂದನು
॥ ೨೧೫ ॥

೫೫ ರಾಗ ಶಂಕರಾಭರಣ—ಅಷ್ಟತಾಳ ೨ (ಯಾಲಪದ)

ಹನುಮಂತ—

ಚಿತ್ರಕೂ । ಟದಿ ನೀವು । ಜಲಕ್ರೀಡೆ । ಯಾಡುವಾಗ ।
ಎತ್ತಿ ಮುಂ । ಗಯ್ಯಲಿ ನಿ । ಮ್ಮ — ಬಿ । ಸಾಡಲು ।
ಅತ್ತದ್ದು । ಸರಿಯೇನ । ಮ್ಮ— ॥ ೨೧೬ ॥

ಮತ್ತೊಂದು । ಗುರುತ ಕೇ । ಳತ್ರಿಮು । ನೀಂದ್ರನ ।
ಪತ್ನಿಯನ । ಸೂಯಾದೇ । ವಿ — ಭೂ । ಷಣವ ತಂ ।
ದಿತ್ತುದು । ಸರಿಯೇನ । ಮ್ಮ— ॥ ೨೧೭ ॥

---

1 ದೊಳೋಸರಿಸಿದುವು ಕಣ್ಣಾಲಿ । ತಾಳದಂತಸ್ತಾಪದಿಂದುರಿವ ತನುದೇಹ (ಓ)
2 ತಕ್ಕ (ಓ)

ಇನ್ನೊಂದು । ಗುರುತ ಕೇಳ್ । ದಂಡಕ । ವೆನಿಸುವ ।
ರಣ್ಯದೊ । ಳಗ । ಸ್ತ್ರ್ಯ— ಚಾ । ಪವನಿತ್ತು ।
ಮನ್ನಿಸಿ । ದ್ದಹುದೇನ । ಮ್ಮ— ॥ ೨೧೮ ॥

ಅಂಗನೆ । ಕೇಳೀವಾ । ತೆಲ್ಲ ಸು । ಳ್ಳಾದುದೆ ।
ಮಂಗಳ । ಮಹಿಮ ರಾ । ಮ — ಬೆ । ರಳಗಿಟ್ಟ ।
ಉಂಗುರ । ವಹುದೇನ । ಮ್ಮ— ॥ ೨೧೯ ॥

೬೦ ಶಾರ್ದೂಲವಿಕ್ರೀಡಿತವೃತ್ತ

ಸೀತೆ—

ಶ್ರೀರಾಮಂ ಕರಕಂಜದಂಗುಲಿಯೊಳಾಗಿಟ್ಟಿರ್ದ ಮುದ್ರಾಂಕಮಂ ।
ನಾರೀ ಜಾನಕಿ ಕಂಡು ವಿಸ್ಮಿತದೊಳಂ ಕಂಗಳ್ಗದನ್ನೊತ್ತುತ ।
ಹೇರಾಳಾ ಸ್ರುತಶೋಕಬಿಂದುಜಲದಿಂ ಸರ್ವಾಂಗಮಂ ತೋಯಲು ।
ಕಾರುಣ್ಯಾಂಬುಧಿ ರಾಮ ರಾಮ ಯೆನುತಂ ಸದ್ಭಾವದಿಂತೆಂದಳು ॥ ೨೨೦ ॥

೬೧ ರಾಗ ನೀಲಾಂಬರಿ—ಧ್ರುವೆ—ತ್ರಿವುಡೆತಾಳ ೧

ಹರಿಣಾಂಕನಿ । ಭಾನನ । ಪೂರ್ಣ ।
ಹರಿಶೋಭಿತ । ಹರಿರಿಪು । ಗಮನ ।
ಹರಿ ವಂಶಜ । ಕೀರ್ತಿವಿ । ಶಾಲ ।
ಹರಿ ಮಂಜುಳ । ಕಾಯ । ಮತ್ಪ್ರಿಯ ॥ ೨೨೧ ।

ಪರಮೇಶ್ವರ । ಪಂಕಜ । ಲೋಚನ ।
ಪರಮಾನಂ । ದ ಪರಮ । ಪಾವನ ।
ಸುರಸೇವ್ಯ, । ಭೂಸುರ । ಭಾವಿತ ।
ನಿರತಾಸುರ । ಕುಲಸಂ । ಹರಣ ॥ ೨೨೨ ॥

ರಘುಕುಲಪುಂ । ಗವ ರಾ । ಜೇಶ್ವರ ।
ಜಗದಾತ್ಮಕ । ಜಗದಭಿ । ರಾಮ ।
ಸುಗುಣಾಬ್ಧಿ, । ಸುರಮುನಿ । ಸೇವಿತ ।
ಅಗಜಾಪತಿ । ಪ್ರಿಯಸೋ । ದರ್ಯ ॥ ೨೨೩ ॥

### ೬೨. ಶಾರ್ದೂಲವಿಕ್ರೀಡಿತವೃತ್ತ

ಎಂದಾ ರಾಮನ ಮುದ್ರೆಯುಂಗುರವ ತನ್ನಂಗಯ್ಯೊಳಿ[1]ಟ್ಟೀಕ್ಷಿ[1]ಸಿ ।
ಸೌಂದರ್ಯಾತ್ಮನ ದಿವ್ಯಮೂರ್ತಿ[2]ಯನೆ ತಾ ಕಂಡಂತೆ ಕೊಂಡಾ[2]ಡುತ ।
ಕಂದಿರ್ಪಾನನಪಂಕಜಕ್ಕೆ ರವಿ ತಾ ಬಂದಂತೆ ಚೆಂದಾಗಲು ।
ಮುಂ[3]ದಾ ರಾಮನ ಕ್ಷೇಮವಾರ್ತೆಗಳ ತಾ ಕೇಳುತ್ತ ನಿಂತಿರ್ದ[3]ಳು ॥ ೨೨೪ ॥

### ೬೩. ರಾಗ ವೃಂದಾವನಸಾರಂಗ—ಅಷ್ಟತಾಳ ೧

ಕ್ಷೇ,ಮ । ವೇ ಹನು । ಮ — ನ । ವ್ಮವರಿಗೆ ।
ರಾಮ ಲ । ಕ್ಷ್ಮಣರಾರಾ । ಜ್ಯದಲಿ ಸು । ಸ್ಥಿರವಾಗಿ ॥ ಪಲ್ಲವಿ ॥

ಮದನಸಂ । ಗವ ಪ್ರೋಲ್ವ । ರಾಮ — । — ತಮ್ಮ ।
ಚದುರ ಲ । ಕ್ಷ್ಮಣನು ನಿ । ಸ್ಸೀಮ — ॥
ಮೊದಲಿನಂ । ಗದ ಕಾಂತಿ । ಕಳವಳಿ । ಸುತ ಮತ್ತೆ ।
ಹದಗುಂದ । ಲಿಲ್ಲವ । ಲ್ಲ — ಎ । ನ್ನೊಳು ಮೋಹ ।
ವದು ಕುಂದ । ಲಿಲ್ಲವ । ಲ್ಲ — ನೀ । ಬರುವ ದಿ ।
ನದೊಳಗೆಂ । ತಿರ್ದರೆ । ಲ್ಲ — ನ । ಮ್ಮವರಿಗೆ ॥ ಕ್ಷೇಮ—॥ ॥ ೨೨೫ ॥

ದಶಕಂಠ । ಕಳವಿನೊ । ಳ್ತಂದ — । — ಯಾರಿ ।
ಗುಸುರುವೆ । ನಧಿಕ ನಿ । ರ್ಬಂಧ ॥
ಪಶುಪತಿ । ಯೊಬ್ಬನೆ । ಬಲ್ಲನ । ಲ್ಲದೆ ಬೇರಿ ।
ನ್ನುಸುರುವೆ । ನಾರ್ಗೆ ನಾ । ನು — ಇ । ನ್ನೊಮ್ಮೆ ಜೀ ।
ವಿಸುವಂಗ । ಕಾಣೆ ನಿ । ನ್ನು — ನೋ ।ಡಿದೆಯಾ ರಾ ।
ಕ್ಷಸ ಮಾಳ್ಪ । ಬಗೆಗಳ । ನ್ನು — ನ । ಮ್ಮವರಿಗೆ ॥ ಕ್ಷೇಮವೇ— ॥ ೨೨೬ ॥

ಭೂತಳ । ದೊಳಗೆ ಯೆ । ನ್ನಂಥ — । — ಕಡು ।
ಪಾತಕ । ರುಂಟೆ ಹನು । ಮಂತ — ॥
ಮಾತಾ ಪಿ । ತರ ಬಂಧು । ಬಳಗವೆ । ಲ್ಲವ ಬಿಟ್ಟು ।
ಈತೆರ । ನಾದೆನ । ಲ್ಲ — ರಾ । ಕ್ಷಸರ ವಿ ।

---

1 ಟ್ಟೈರ್ಜಿ (ಓ) 2 ಮನಕಂ ಬಂದಂತೆ ಮುದ್ದಾ (ಕಾ) 3 ದಿರ್ಪಾ ಹನುಮಂತನಂ ಪೊಗಳುತಾ ವೃತ್ತಾಂತಮಂ ಕೇಳ್ದಳು (ಕಾ)

ಘಾತಿಯು । ಕಂಡೆಯು । ಲ್ಲ—ಯೆ । ನ್ನಯ ಪ್ರಾಣ ।
ನಾಥನ । ಕಾಂಬೆಯು । ಲ್ಲ — ನ । ನ್ನವರಿಗೆ ॥ ಕ್ಷೇಮವೇ— ॥ ೨೨೭ ॥

ವಚನ ॥ ಇಂತೆಂದು ಜಾನಕಿ ನುಡಿಯಲಾಗಿ ರಾಮಸೇವಕನಾದ ಹನುಮಂತ ತಾನೇ ನೆಂದನು ಎಂದರೆ

೬೪ ರಾಗ ಶಂಕರಾಭರಣ—ಅಷ್ಟತಾಳ ೨

ಹನುಮಂತ—

ಮನಸನೇ । ನೆಂಬೆ ನ । ಮ್ಮ — ಯಾ । ವಾಗಲೂ ।
ನೆನಸುವ । ಗುಣದಿ ನಿ । ಮ್ಮ — ॥
ಕನಸು ಮ । ನಸಿನಲ್ಲಿ । ಹಗಲಿರು । ಳೆನ್ನದೆ ।
ಘನಕ್ಲೇಶ । [1]ದಲಿ ರಾಮ । ಕನಲಿ[1]ರ್ಪು । ದಲ್ಲದೆ ॥ ೨೨೮ ॥

ಹಣ್ಣು ಹಂ । ಪಲ ನೋಡ । ನು — ಯಾ । ರೊಡನೆಯೂ ।
ಚೆನ್ನಾಗಿ । ಮಾತಾಡ । ನು —॥
ಕಣ್ಣಿಗೆ । ನಿದ್ರೆ ಬಾ । ರದೆ ಕಂಡ । ಕಡೆಯಲ್ಲಿ ।
ಬಣ್ಣಗೆ । ಟ್ಟಡವಿಯೊ । ಳಲೆದಿರ್ಪು । ದಲ್ಲದೆ ॥ ೨೨೯ ॥

ಅನುಜ ಲ । ಕ್ಷ್ಮಣನು ತಾ । ನು — ಅಂ । ತರಂಗದಿ ।
ಕನಲಿ ಕಂ । ಗೆಡುವುದ । ನು — ॥
ಮನಕೆ ಮ । ನವೆ ಸಾಕ್ಷಿ । ಯಲ್ಲದೆ । ಬೇರಿನ್ನು ।
ವನಿತೆ [2]ಸಾ । ಪೇಳಲೇ । ನು—[2]ಕಾ । ರ್ಯಗಳನ್ನು ॥ ೨೩೦ ॥

ತರಣಿನಂ । ದನನೂ ತಾ । ನೂ — ಏ । ಕಾಂತದಿ ।
ಕರೆದು ಈ । ಗುರುತವ । ನು — ॥
ಒರೆದು ರಾ । ಘವ ಕಯ್ಯೊ । ಳಿತ್ತ ಮು । ದ್ರಿಕೆಯನ್ನು ।
ಬರುವ ದಿ । ನದ ಸುದ್ದಿ । ಇದು ಮತ್ತೆ । ಬೇರೇನು ॥ ೨೩೧ ॥

ತಿಂಗಳ । ದಿವಸದ । ಲಿ — ಬಹ । ದೆಂಬ ತ ।
ಹೆಂಗಳ । ನೇಮದ । ಲಿ — ॥

---

1 ದಿಂ ಮನಕರಗಿ (ಓ) 2. ಪೇಳುವೆ ನಾನು ಬಂದ (ಕಾ)

ಉಂಗುರ । ಕೈಗಿತ್ತು । ಕಳುಹಿದ । ಮೇಲೆ ಕೇ ।
ಳಂಗನೆ । ನಾನಿತ್ತ । ಬಂದ ಪ । ರಿಗಳನು ॥ ೨೩೨ ॥

೬೫ ರಾಗ ಘಂಟಾರವ—ಜಂಪೆತಾಳ ೨

ಹನುಮಂತ—

ನಾಳೆ ಸಂ । ಜೆಗೆ ಪೋಗಿ । ಪೇಳದಿ । ದ್ದರೆ ಸುದ್ದಿ ।
ನಾಲಿಗೆಯ । ಕೊಯ್ಸುವದು । [1]ನವ್ನೊಡೆಯ । ನಾಜ್ಞೆ[1] ॥ ೨೩೩ ॥

ಗುರುತವನು । ಕೇಳಿದರೆ । ಏನೆಂಬೆ । ರಾಘವಗೆ ।
ಅರಿತು ಯೆ । ನ್ನೊಳು ಪೇಳು । ಅಂತರಂ । ಗದಲಿ ॥ ೨೩೪ ॥

೬೬ ಕಂದಪದ್ಯ

ಸೀತೆ—

ಹನುಮನ ಕಯ್ಯಲಿ ಚೂಡಾ
ಮಣಿಯಂ ತಾ ಕೊಟ್ಟು ಮತ್ತೆ ಭರವಸದಿಂದಂ ।
ಮನಸಿನೊಳಿದ್ದುದನೆಲ್ಲವ
ನೆನಸುತಲಾ ಕಾಂತೆ ಪೇಳ್ದಳಂಜನೆಸುತಗಂ ॥ ೨೩೫ ॥

೬೭ ರಾಗ ಆನಂದಭೈರವಿ—ಅಷ್ಟತಾಳ ೧ (ವಿಲಂಬಿತ)

ಏಸುದಿನ ಬೇ । ಕೆನ್ನ ಪ್ರಾ । ಣೇಶನ ಕಾಂ । ಬುದಕಿನ್ನು ।
ಬೇಸರಿಕೆ । ಯೆಂಬುದೇನ । ಹೇಳಲಿ । — ಎಂತು । ತಾಳಲಿ— ॥ ೨೩೬ ॥

ಬೇಟೆಗಾರ । ನಿಟ್ಟ ಬಲೆಯು । ಕೋಟಲೆಗೆ ಸಿ । ಕ್ಕಿದ ಹುಲ್ಲೆ ।
ಯಾಟದಂತೆ । ಕಣ್ಣು ಕಣ್ಣು । ಬಿಡುವೆನು ।—ಎಂತು । ತಡೆವೆನು—॥ ೨೩೭ ॥

ಗರುಡನ ಬಾ । ಯೊಳಗೆ ಸಿಕ್ಕಿ । ದುರಗನಾಯಾ । ಸದಿ ಸುಕ್ಕಿ ।
ಸುರುಟಿದ ಹಾ । ಗಾಯಿತೆನ್ನ । ಬಾಳುವೆ । — ಏನ । ಹೇಳುವೆ—। ॥ ೨೩೮ ॥

---

1 ಎನ್ನೊಡೆಯ ರಾಮ (ಕಾ)

ಕಾಗೆಹಿಂಡಿ । ನೊಳಗೆ ಸಿಕ್ಕಿ । ಕೋಗಿಲೆ [1]ಬಾಯ್ಸ್ । ಬಿಡುವತೆರದೊ ।
ಳೀಗ ದುರುಳ । ರುಪಟಳಕ್ಕೆ । ನಿಲ್ಲೆನು । — ತನುವ । ನೊಲ್ಲೆನು— ॥ ೨೩೯ ॥

೬೮. ರಾಗ ಸೌರಾಷ್ಟ—ತ್ರಿವುಡೆತಾಳ ೨

ಹನುಮ—

ದೇವಿ ಚಿಂತಿಸ । ಬೇಡ ರಾಘವ ।
ದೇವನನು ಕರ । ಕೊಂಡು ಬಂದೀ ।
ರಾವಣನ ಸಂ । ಹರಿಸದಿದ್ದರೆ । ಸೇವಿಯಲ್ಲ ॥ ೨೪೦ ॥

ಎಂಟು ದಿನದೊಳ । ಗೀ ದುರುಳ ದಶ ।
ಕಂಠನಿಗೆ ಗತಿ । ಮಾಡದಡೆ ವೈ ।
ಕುಂಠವಲ್ಲಭ । ರಾಮಚಂದ್ರನ । ಬಂಟನಲ್ಲ ॥ ೨೪೧ ॥

ಚಿಂತೆ ಯೇತಕೆ । ನಿಮಗೆ ರಾಮನೊ ।
ಳಂತರಂಗವ । ನೆಸಗದಿದ್ದರೆ ।
ಪಂಥ ಕೇಳಿದು । ಮುಂದೆ ನಾ ಹನು । ಮಂತನಲ್ಲ ॥ ೨೪೨ ॥

೬೯ ಕಂದ

[2]ಪಂಥದಿ[2] ಬಲು ಧೈರ್ಯಂಗಳ
[3]ನಂತರಿಸದೆ ಪೇಳ್ದು ದೇವಿ ಪೋಗುವೆನೆನಲು[3] ।
ಚಿಂತೆಯ ಕಡೆಗಿಟ್ಟಾ ಹನು
ಮಂತನ ಕರೆದಿಂತು ಪೇಳ್ದಳಂಬುಜನಯನೆ ॥ ೨೪೩ ॥

೭೦. ರಾಗ ದೇಶಿ—ಅಷ್ಟತಾಳ ೨

ಸೀತೆ—

ದಿಟವೇನೋ । — ನೀನು । ಕಡೆಗೆಂದ । ಮಾತು — ।
ಸಟೆಯಾಗ । ದಲ್ಲ ರಾ । ಘವನಿಲ್ಲಿ । ಬರುವುದು ॥ ಪಲ್ಲವಿ ॥

---

1 ಸಂತಾಪ ಉಕ್ಕಿ । ಕೂಗುವಂತೆ ಖಳರ ಹತಿಗೆ । ಸಂದೆನು — ಬಹು ನೊಂದೆನು (ಕಾ). 2 ಇಂತೀ (ಕಾ) 3 ನಿಂತುಸುರಿದು ಕೇಳಿ ದೇವಿಯೊಡನಪ್ಪಣೆಯಂ

ಹಂಬಲಿ । ಸುತ ಹಗ । ಲಿರುಳು ನಾ । ಬಲು ಚಿಂತೆ ।
ಯೆಂಬ ಕ । ತ್ತಲೆಯೊಳ । ಗಿರೆ ನಿನ್ನ । ನುಡಿ ರವಿ ।
ಬಿಂಬ ಕಂ । ಡಂತಾಯಿ । ತು — ದುಃ । ಖಗಳ ಕ ।
ದಂಬವೆ । ಲ್ಲವು ಹೋಯಿ । ತು — ಸಾ । ವಿರವೆಂದು ।
ನಂಬಿಕೊಂ । ಡಿರುವೆ ನಿಂ । ತು — ಲೇ । ಸಾಯಿತು ॥ ೨೪೪ ॥

ಸೆರೆಬೆಳ । ಗಾದರೆ । ಮಲಗಿರ್ಪ । ಖಳರು ನಿ ।
ನ್ನರಿತುಕೊಂ । ಬರು ಸಾ — । ವಿರ ನಿರ್ಬಂ । ಧನ ಮಾಡಿ ।
ಸೆರೆಮನೆ । ಗಿಕ್ಕುವ । ರು — ಮು । ತ್ತ[1]ಲ್ಲಿ ನಿ ।
ಷ್ಠುರದಿ ಕೊಂ । ದಿಕ್ಕುವ । ರು — [1]ಅ । ಲ್ಲದೆ ಯೆನ್ನೀ ।
ಸರವೆತ್ರಿಜ । ಟಿಯರ ಧಿ । ಕ್ಕರಿಸಲ । ಟ್ಟುವರು ॥ ೨೪೫ ॥

೬೧ ಕಂದ

ಹನುಮಂತ—

ತಪ್ಪದೆ ಬಲು ಧೈರ್ಯಂಗಳ
ನೊಪ್ಪದಿ ತಾ ಪೇಳ್ದು ದೇವಿ ಪೋಗುವೆ ಎನಗಿಂ ।
ದಪ್ಪಣೆಯೆಂದಲ್ಲಿಂದೆ
ಯ್ತಪ್ಪಾಗಳ್ ಕಂಡ ದನುಜನುದ್ಯಾನವನುಂ ॥ ೨೪೬ ॥

೬೨ ದ್ವಿಪದೆ

ಶಿವಶಿವಾ ಇದ ನೋಡದವ ಮನುಜನಲ್ಲ ।
ಬಹು ರಮ್ಯತರವಾದ ವನಸಿರಿಯುನೆಲ್ಲ ॥ ೨೪೭ ॥

ತೋಟ ಕೆರೆ ಬಾವಿ ಬಹು ತೆಂಗು ದಾಳಿಂಬ ।
ಮಿಾಟಾದ ಮಾವು ಫಲಸಿನ ಸಾಲ್ಕದಂಬ ॥ ೨೪೮ ॥

ಜಂಬುನೇರಳೆ ಮಾದ ಕದಳಿ ದ್ರಾಕ್ಷೆಗಳ ।
ನಿಂಬೆ ಕಿತ್ತಿಳೆ ಬಿಲ್ವ ಖರ್ಜುರಾದಿಗಳ ॥ ೨೪೯ ॥

---

1 ಲ್ಲದೆ ಕರಕರೆಗೊಳಿಸುವರು । ಮತ್ತೆನ್ನ ಈ ಸರಮೆಯುನಟ್ಟುವ । ರು—ಒಟ್ಟೆಲ್ಲರು । (ಕಾ).

ಜಾಜಿ ಮಲ್ಲಿಗೆ ಚಂಪಕಾದಿ ಪುಷ್ಪಗಳ ।
ರಾಜಿಸುವ ಪೂಗ ಪುನ್ನಾಗ ಚೇದಿಗಳ ॥ ೨೫೦ ॥

ಪಾರಿಜಾತಾಂಭೋಜ ಪೊಸದ ನೆಯ್ದಿಲೆಯು ।
ಭೂರಿಸಾರಂಗ ಗಿಳಿ ಹಂಸ ಕೋಗಿಲೆಯು ॥ ೨೫೧ ॥

ಇಂದ್ರಪುರದೊಳಗೆಸೆಯುತಿರುವ ನಂದನವ ।
ಇಂದಿಗಿದು ಸರಿಮಿಗಿಲೆನಿಪ್ಪ ಭೂವನವ ॥ ೨೫೨ ॥

೭೩ ರಾಗ ಕುರಂಜಿ—ಅಷ್ಟತಾಳ ೧

ಹನುಮಂತ—

ಸಿಕ್ಕಿತು । ಯೆನಗೊಂದು । ತೋಟ — । — ಇಲ್ಲಿ ।
ರಕ್ಕಸ । ರಿಹರೊಂದು । ಕಾಟ ॥
ಮುಕ್ಕುವೆ । ನಿದರೊಳ । ಗಿದ್ದ ಪ । ಣ್ಗಳನೆಂದು ।
ಕಿಕ್ಕಿರೀಕಿರಿ । ಗುಟ್ಟಿ ಚೀರುತ । ಘಕ್ಕನೆದ್ದು । ಹಾರಿದ — ॥ ೨೫೩ ॥

ಮರದಿಂದ । ಮರಕೆ ಲಂ । ಘಿಸಿದ — । —ಮಲ ।
ಗಿರುವ ರಾ । ಕ್ಷಸರ ಭಂ । ಗಿಸಿದ — ॥
ಪರಿಪರಿ । ಬಗೆಯ ಪ । ಣ್ಗಳ ಕೊಯ್ದು । ತಿಂದು ತಾ ।
ಬರಿಯು ಗೊಂಚಲ । ಮರದ ಕೊಂಬನು । ಮುರಿಮುರಿದು ಬೀ ।
ಸಾಡಿದ — ॥ ೨೫೪ ॥

ಬಾಳೆಯು । ಗಿಡವೆಲ್ಲ । ಹರಿದ — । — ರಸ ।
ದಾಳಿಕ । ಬ್ಬುಗಳ ಚ । ಪ್ಪರಿದ — ॥
ಹೇಳಿ ನಿ । ಮ್ಮಪ್ಪ ರಾ । ವಣನಿಗೆಂ । ದೆನುತಲೆ ।
ಧೂಳಿಪಟಲವ । ಮಾಡಿ ವನವನು । ಹಾಳುಗೆಡವಿದ । ನಿಮಿಷದಿ—॥೨೫೫॥

ಹೂವಿನ । ಸಸಿಯೆಲ್ಲ ! ಕಿತ್ತ — । — ಕೊಳ ।
ತಾವರೆ । ಗಳ ಕಲ । ಕುತ್ತ — ॥
ಕಾವಲು । ಮಲಗಿದ್ದ । ಜಂಬುಮಾ । ಲಿಯ [1]ಗುದ್ದಿ[1] ।
ಜೀವ ಮಾತ್ರವ । ನುಳುಹಿ ಕಳುಹಿದ । ರಾವಣೇಶ್ವರ । ನಲ್ಲಿಗೆ— ॥೨೫೬॥

---

1 ಕೊಂದು (ಅ)

ಅಕ್ಷಯ | ಕುವರರ | ಬಡಿದ—|—ಕಳ್ಳ |
ರಾಕ್ಷಸ | ರ್ಕಳ ಮಂಡೆ | ಯೊಡೆದ—||
ಆ ಕ್ಷಣ | ದಲಿ ಶಕ್ರ | ಜಿತು ಬಲು | [1]ಬೆಡಗಿಂದ[1] |
ಲಕ್ಷಗಜರಥ | ತುರಗಸಹ ಬಂ | ದೀಕ್ಷಿಸಿದ ಹನು | ಮಂತನ ||೨೫೭||

(ರಾಕ್ಷಸ ಭಟರೊಡನೆ ಇಂದ್ರಜಿತುವಿನ ಸಂಭ್ರಮದ ಪ್ರವೇಶ)

೭೪ ವಾರ್ಧಿಕಷಟ್ಪದಿ

ಇಂದ್ರಜಿತು—

ಕೊಲ್ಲು ಕಡಿ ತಿವಿ ಕುಟ್ಟು ಇರಿ ಬಾಣ ತೊಡು ಕಪಿಯ
ಹಲ್ಲ ಮುರಿ ಹಾಯ್ಕು ಹ್ಯೊ ಕರುಳನುಗಿ ಬಗಿ ತಿನ್ನು
ಬಿಲ್ಲಿಲೆಸೆ ಖಡ್ಗ ತೋಮರ ಪರಶು ಮುಸಲ ಮುದ್ಗರ ಕಂಪಣಂಗಳಿಂದ |
ಚೆಲ್ಲಬಡಿ ಕೆಡಹು ಹಾಯ್ಕೆನುತ ಶಸ್ತ್ರಗಳ ಬಿಡ
ಲಲ್ಲಿಗಲ್ಲಿಗೆ ಮುರಿದುವಲ್ಲದೇ ಹನುಮನದ
ಹುಲ್ಲಕಡ್ಡಿಗೆ ಬಗೆಯದಿರೆ ಇಂದ್ರಜಿತು ಬಳಿಕ ಎಲ್ಲರೊಡನಿಂತೆಂದನು || ೨೫೮ ||

೭೫ ರಾಗ ಪಂತುವರಾಳಿ—ಅಷ್ಟತಾಳ ೧

ಸಾಕು ಬಿ | ಡಿರೊ ಬಿಡಿ | ಸಾಯದೀ | ಕಪಿ ಸುಮ್ಮ |
ನೇಕೆ ದ | ಣಿದುಕೊಂಬಿ | ರಿ— || ಪಲ್ಲವಿ ||

ಅಂಬು ಕೊ | ಳ್ಳದು ಬಾಣ | ತಾಗದು | ಬರಿಯ ಬಾಯ್ |
ಡಂಭಕ | ಕ್ಕಿದು ಬೆದ | ರದು ಕಾಣಿ | ರೊ—|
ಕುಂಭಕ | ರ್ಣನ ವಜ್ರ | ರಥದಮೇ | ಲೇರಿಸಿ |
ಕುಂಭಿನೀ | ಪತಿಯಲ್ಲಿ | ಗ್ಯೊರೆಂದ | ನು— || ೨೫೯ ||

ಎತ್ತಲು | ಕಪಿ ಮೆಯ್ಯ | ನೊಲೆದ ಕಾ | ರಣದಿಂದ |
ಹತ್ತುಸಾ | ವಿರ ರಾಕ್ಷ | ಸರು ಸತ್ತ | ರು—|
ಒತ್ತಿ ಕುಂ | ಭಸ್ಥಳ | ಒಡೆದಾನೆ | ಮಡಿದಂಥ |
ವಿಸ್ತಾರ | ಗಳ ಶಕ್ರ | ಜಿತು ನೋಡು | ತ್ತ— || ೨೬೦ ||

---

1 ಖತಿಗೊಂಡು

ಪೆಟ್ಟಿಗಂ | ಜುವುದಲ್ಲಾ | ಸಾಧ್ಯವೆ | ತ್ತುವುದಕ್ಕೆ |
ಬೆಟ್ಟದ | ಹಾಗಿದು | ಬೆಳಕೊಂಡಿ | ದೆ— |
ಕಟ್ಟಿಗೆ | ಗಳ ತಂ, | ದೊಟ್ಟಿ ಅ | ಗ್ನಿಯನಿಟ್ಟು |
ಸುಟ್ಟು ಬೂ | ದಿಯಮಾಡಿ | ರೋ ಯೆಂದ | ನು— || ೨೬೧ ||

ಹನುಮಂತ—

ನಗರವ | ದಹಿಸುವ | ಡಿದುವೆ ಮ | ದ್ದೆಂದು ನಾ |
ಲಗೆ ಬಿಚ್ಚಿ | ಬೆದರುವಂ | ದದಿ ಕಾಣಿ | ಸಿ— |
ಅಗಣಿತ | ರಾಕ್ಷಸ | ರುಗಳು ಖೊ | ಖೋ ಯೆಂದು |
ನಗುವಂತೆ | ರಥದ ಮೇ | ಲಕೆ ಬಿದ್ದ | ನು— || ೨೬೨ ||

೭೬ ಭಾಮಿನಿಷಟ್ಪದಿ

ಕೆಲರುಹಿಡಿದರು ಮಿಣಿಗಳಲಿ ಕೆಲ
ಕೆಲರುಡಿವ ಸರಪಣಿಗಳಲಿ ಬಲು
ಖಳರು ಅಚ್ಚಿನ ಕೊಂಬಿನಲಿ ಕೋಲಿನಲಿ ಕೀಲಿನಲಿ |
ಕೆಲರು ಅಶ್ವಾಳಿಗಳ ಗಳದಲಿ
ಕೆಲರು ವಜ್ರದ ಭಂಡಿಯಲಿ ಗಜ
ವೆಳೆದವಾ ಸುಂಡಿಲಲಿ ಖಳ ಹೆಮ್ಮಾರು ಕೈಗಳಲಿ | || ೨೬೩ |

೭೭ ರಾಗ ಕುರಂಜಿ—ಅಷ್ಟತಾಳ ೧

ಎಳೆದರು | ರಥದಿ ವಾ | ನರನ— | —| ಬಲು |
ಬಲವಂತ | [1]ವೃಕ್ಷಸಂ | ಚ[1]ರನ— |
ಛಲದಂಕ | ನಿಭಶುಭಾ | ಕರನ— | —ಮದ |
ಖಳಕುಲ | ತಿಮಿರಭಾ | ಸ್ಕರನ— | —ದಾರಿ |
ಯಲಿ ಹೋ— | ಗುವ ಮಾರಿ | ಯನು ಕಟ್ಟಿ | ತಂದು ಊ |
ರೊಳಗೆ ಬಿ | ಟ್ಟಂತೆ ವೆ | ಗ್ಗಳ ಪರಾ | ಕ್ರಮನ— || ೨೬೪ ||

ಇತ್ತಡಿ | ಯೊಳು ಮದ್ದಾ | ನೆಗಳು— | —ಬಲು |
ಶಕ್ತಿಯಿಂ | ದೆಳೆವ ಕೋ | ಣಗಳು— |

---

1 ವಜ್ರಪಂಜ (ಕಾ)

ಸುತ್ತಲು | ಬಿಗಿದ ನೇ | ಣುಗಳು—|—ಪಿಡಿ |
ದೆತ್ತುತ | ಲ್ಯೊವ ತ್ರಾ | ಣಿಗಳು—|—ಭೋರೆ |
ನುತ್ತ ವಾ | ದ್ಯಗಳ ಕೇ | ಳುತ್ತಲಂ | ಬರದೊಳು |
ನಿತ್ತು ನೋ | ಡಲು ಸುರ | ಮೊತ್ತ ಸಂ | ಭ್ರಮದೊಳು || ೨೬೫ ||

ಮೇರುಪ | ರ್ವತದ ಹಾ | ಗಿರುವ—|—ಕಪಿ |
ವೀರನ | ನೊಯ್ವ ಭೀ | ಕರವ—|
[1]ಬಾರಿಬಾ | ರಿಗೆ ಧ್ವನಿ | ಗರೆವ—|—ಹತ್ತು |
ನೂರು ಸಾ | ವಿರ ಭೇರಿ | ಮೊರೆವ[1]—|—ಮುಂದೆ |
ಕಾರಣ | ವರಿತವ | ರ್ನಾರೀಪು | ರುಷರು ಆ |
ಊರಿಂದೊ | ಕ್ಕಲು ಬಿಟ್ಟು | ಸೇರಿ ಮ | ತ್ತೊಂದೂರ || ೨೬೬ ||

ಈ ವಿಭ | ವದೊಳಿಳೆ | ತಂದು—|—ಬಂದು |
ರಾವಣ | ನಿದಿರಲಿ | ನಿಂದು—|
ದೇವೇಂದ್ರ | ಜಿತು ತಂದೆ | ಗಂದು—|—ಪೇಳ್ದ |
ಸೇವೆ ಇಂ | ದಿಗೆ ಸಂದಿ | ತೆಂದು—|—ಕಪಿ |
ಭಾವವ | ನೋಡುತ್ತ | ಠೀವಿಯ | ಕಪಿಯೆಂದು |
ಪ್ರಾಹಸ್ತ | ಮಾತಾಡಿ | ಸಿದನು ಹ | ತ್ತಿರೆ ಬಂದು || ೨೬೭ ||

(ಪ್ರಹಸ್ತನೊಡನೆ ರಾವಣನ ಪ್ರವೇಶ)

೭೮ ರಾಗ ಪಂತುವರಾಳಿ—ಏಕತಾಳ ೭

ಪ್ರಹಸ್ತ—

ಯಾವದೇಶ | ದಿಂದ ಬಂದೆ | ವೀರ ಕಪಿರಾ | ಯ—ಮುಂದೆ |
ಯಾವಲ್ಲಿಗೆ | ಪಯಣವಯ್ಯ | ಈ ವಿಚಾರ | ವೇನಯ್ಯ— || ಪಲ್ಲವಿ ||

ಹೆತ್ತ ತಾಯಿ | ತಂದೆ ಯಾರೊ | ಇತ್ತ ಬಂದು | ದೇಕೊ ಮತ್ತೆ |
ಕಿತ್ತು ವನವ | ಕೆಡಿಸಿದಂಥ | ವೃತ್ತವೇನ | ಯ್ಯಾ—|
ಹತ್ತುಸಾವಿ | ರ ರಾಕ್ಷಸರ | ಅಕ್ಷಯುಕು | ಮಾರರನ್ನು |
ಮತ್ತಗಜ | ಸಹಿತ ಕೊಂದ | ಧೂರ್ತತನವೇ | ನೈ— || ೨೬೮ ||

---

1 ಭೋರೆಂದು ವಾದ್ಯಗಳ್ ಮೊರೆಯೆ | ಸುರ | ವಾರವಂಬರದಲ್ಲಿ ನೆರೆಯೆ (ಓ)

ಅರಮನೆ ಆ । ಸ್ಥಾನವೆಂಬ । ಮರಿಯಾದೆಯ । ನರಿಯದೆ ಈ ।
ಪರಿಯ ಗರ್ವ । ದಿಂದ ಕು, । ಳ್ಳಿರುವದೇತ । ಕೊ—।
ಅರಸುಗಳ । ಪ್ಪಣೆಯಿಂದ । ವಿವರಕೇಳ್ವೆ । ನೀಗ ನಿನ್ನ ।
ಮರುಳುತನವ । ಬಿಟ್ಟು ಎನ್ನೊ । ಳರುಹು ಕಾರ್ಯ । ವ— ॥ ೨೬೯ ॥

೭೯ ರಾಗ ಮಧ್ಯಮಾವತಿ—ಏಕತಾಳ ೩

ಹನುಮಂತ—

,ದಶಕಂಠ । ನೆಂಬಾತ ।, ನಾರು ತೋ । ರಬೇಕಯ್ಯ ।
,ಉಸುರುವೆ । ನೆಲ್ಲ ನಿ ।, ವ್ಮೊಳು ಕಾರ್ಯ । ದಂತರ್ಯ ॥ ಪಲ್ಲವಿ ॥

,ಜಗದೊಳು । ಜನಕನ ।, ಮಗಳು ಸೀ । ತೆಯ ಹತ್ತು ।
,ಮೊಗದಾತ । ಕದ್ದು ತಂ । ದಿರುವನಂ । ತೆ—।
,ಜಗದೇಕ । ವೀರರಾ ।, ಘವ ನೋಡಿ । ಬರಲೆನ್ನ ।
,ಮಿಗೆ ಹರು । ಷದಿ ಕಳು ।, ಹಲು ಬಂದೆ । ನಾ,ನು— ॥ ೨೭೦ ॥

,ಬೇಹಿನ । ಚರರನ್ನು ।, ಬೆದರಿಸಿ । ಕೊಲುವದು ।
,ಯಾವ ರಾ । ಜ್ಯದ ರಾಜ । ನೀತಿಯು । ದು—।
,ನಾವು ಮಾ । ಡಿದ ಹೊಲ್ಲೆ ।, ಹೇನು ಕ । ಟ್ಟುವುದಕ್ಕೆ ।
,ನೋವು ವೆ । ಗ್ಗಳವಾಯ್ತು ।, ನುಡಿಯಲಿ । ನ್ನೆಂತು— ॥ ೨೭೧ ॥

,ಬೇಡವೆಂ । ದರೆ ಮಾತ ।, ಕೇಳದೆ । ಎನಗಿಂಥ ।
,ಕೇಡುಮಾ । ಡಿದ್ದೆನ್ನ ।, ಬಾಲವ್ನೆ । ಸೆ—।
,ರೂಢಿಪಾ । ಲಕನುದ್ಯಾ । ನವನಿಂದು । ನಿರ್ಮೂಲ ।
,ಮಾಡಿ ರಾ । ಕ್ಷಸರನ್ನು ।, ಕೊಂದ ಪಾ । ಪಿಯದು— ॥ ೨೭೨ ॥

೮೦ ವಾರ್ಧಿಕಷಟ್ಪದಿ

ರಾವಣ—

ಮಾತಿನಲಿ ಜಾಣ ಕಪಿ ನೋಡಿದರೆ ಬಲವಂತ
ಈತನಿಚ್ಛೆಯ ಬಾಲವಲ್ಲ ಗಡ, ಇದನು ತೈ
ಲಾತಿಶಯವಸ್ತ್ರದಿಂ ಸುತ್ತಿ ಸುಡಬೇಕೆಂದು ದಶಕಂಠ ಕೋಪದಿಂದ ।

ದೂತರಿಗೆ ನೇಮವಂ ಕೊಡಲಾಗ ಮನೆಮನೆಯ
ಪೀತಾಂಬರಾದಿಗಳಸಹ ತಂದು ಸುತ್ತಿ ವಿಪ
ರೀತದಿಂದೆಣ್ಣೆಯೊಳಗದ್ದಿ ಕಿಚ್ಚಿಕ್ಕಿದರೆ 'ಜ್ಯೋತಿರ್ಮಯೋಕ್ತ'ವಾಯ್ತು॥ ೨೭೩ ॥

೮೧ ರಾಗ ಸೌರಾಷ್ಟ—ತ್ರಿವುಡೆತಾಳ ೨

ಹನುಮಂತ—

ಬಾಲತುದಿಯಲಿ । ಮೊಳೆತು ರಂಜಿಸಿ ।
ಮೇಲುವಾಯ್ದುದು । ನಾಲ್ಕುದೆಸೆಯಲಿ ।
ಕಾಳಭೈರವ । ಮುಖದ ವಹ್ನಿ । ಜ್ವಾಲೆಯಂತೆ ॥ ೨೭೪ ॥

ಕೋವಿದರ ಮನೆ । ಗೋಪುರಂಗಳ ।
ನಾವಿಧದ ಚಾ । ವಡಿಯ ಚೌಕಿಯ ।
ರಾವಣನ ಕೊನೆ । ಮಾಸೆಸಹಿತಲೆ । ಹೋಮಿಸಿದನು ॥೨೭೫ ॥

ಹಾರಿದನು ಬಳಿ । ಕುಪ್ಪರಿಗೆಗಳ ।
ಕೇರಿಕೇರಿಯ । ಜನರ ಮನೆಗಳ ।
ತೋರಿದನು ಕೊ । ಟ್ಟಗ್ನಿಗೌತಣ । ವೀರಹನುಮ ॥ ೨೭೬ ॥

ಕರಗಿದವು ನವ । ರತ್ನಖಚಿತದ ।
ನೆರವಿಗಳ ಬೊಂ । ಬೆಗಳು ಸಹಿತಲೆ ।
ಪರಿಪರಿಯ ನೂ । ತನದ ಪೀತಾಂ । ಬರಗಳೆಲ್ಲ ॥ ೨೭೭ ॥

ಆಸು ಲಂಕಾ । ನಗರದೊಳಗೆ ವಿ ।
ಭೀಷಣನ ಮನೆ । ಹೊರತು ಅಗ್ನಿಯ ।
ರಾಸಿಯಾದುದು । ಪುರದ ರಚನೆಯ । ಮಾಸಲಳಿದು ॥ ೨೭೮ ॥

೮೨ ವಾರ್ಧಿಕಷಟ್ಪದಿ

ಕೆಡಿಸಿದಂ ನಂದನವ ನಗರವಂ ಬಾಲದಲಿ
ಸುಡಿಸಿ, ಚೂಡಾಮಣಿಯು ಸಹಿತ ಹಾರಿದ ತಿರಿಗಿ
ಕಡಲೊಳದ್ದಿಯೆ ಕಿಚ್ಚ ನಂದಿಸುತ ಕಪಿಸೇನೆಯೆಡೆಗೆ ನಡೆತಂದು ಬಳಿಕ ।

[1]ನುಡಿದ ಲಂಕೆಯ ಪಾರುಪತ್ಯಮಂ ಎಲ್ಲರಿಗೆ
ನಡೆದುದಿಂದಿನ ದಿವಸ ಉಳಿದೆವೆಂದೆನುತ ಜಗ
ದೊಡೆಯು ರಘುಪತಿಗೆ ಕಾಣಿಸಿಕೊಂಡು ಹನುಮಂತ ಪೊಡೆಮಟ್ಟು ಬಿನ್ನೈಸಿದ[1]
|| ೨೭೯ ||

(ರಾಮುಲಕ್ಷ್ಮಣರ ಪ್ರವೇಶ)

(ಹನುಮಂತನೊಡನೆ ಕಪಿಗಳೆಲ್ಲರೂ ಬಂದು ನಮಸ್ಕರಿಸುತ್ತಾರೆ)

೮೩ ರಾಗ ರೇಗುಪ್ತಿ—ಅಷ್ಟತಾಳ ೨

ಹನುಮಂತ—

ರಾಘವ | ಸ್ವಾಮಿ ಲಾ | ಲಿಸಿ ಕೇಳು |—|
ಈಗ ನಾ | ವೆಲ್ಲ ಪೋಗಿ | ದಣಿದಂಥ | ಬಗೆಯನು || ಪಲ್ಲವಿ ||

ದೇಶ ವಿ | ದೇಶವ | ತೊಳಲಿ ಬ | ಳಲಿ ಬಳಿ |
ಕಾ ಸ್ವಯಂ | ಪ್ರಭೆಯ ಪ | ಟ್ಟಣದಿ ಸು | ತ್ತಿ—|
ಬೇಸತ್ತು | ಕಣ್ವಮು | ನ್ಯಾಶ್ರಮ | ವನು ದಾಟಿ |
ಆ ಶರ | ಧಿಯ ತಡಿ | ಯೋಚಿಸು | ತ್ತಿರುವಾಗ || ೨೮೦ ||

ಶರಣ ಸಂ | ಪಾತಿ ಲಂ | ಕಾಪುರ | ವದೇ ಯೆಂದು |
ಬೆರಳ ಸ | ನ್ನೆಯಲಿ ತೋ | ರಿಸಿದ ಮೇ | ಲೆ—|
ಶರಧಿಯ | ದಾಂಟಿ ಲಂ | ಕಾಪುರ | ದ್ವಾರದಿ |
ಇರುಳು ಲಂ | ಕಿಣಿಯ ಸಂ | ಹರಿಸಿದ | ಬಗೆಯನು || ೨೮೧ ||

ಕುಂಭಕ | ರ್ಣನ ಶ್ವಾಸ | ದೊಳು ಸಿಕ್ಕಿ | ಕೊಂಡೊಜ್ರ |
ಕಂಭಕ್ಕೆ | ಬಡಿದು ಪೇ | ಚಾಡಿ ಮ | ತ್ತೆ—|
ಹಂಬಲಿ | ಸುತ ಹಗ | ಲಿರುಳಶೋ | ಕಾವನದಿ |
ಕುಂಭಿನೀ | ಸುತೆಯನು | ಕಂಡು ಕೈ | ಮುಗಿದೆನು || ೨೮೨ ||

ಅರಿತು ನಿ | ಮ್ಮಪ್ಪಣೆ | ಗುರುತವೆ | ಲ್ಲವ ಪೇಳಿ |
ಕರತಲ | ದೊಳಗೆ ಉಂ | ಗುರವನಿ | ತ್ತೆ—|

---

1 ತಡಿಯೊಳಗೆ ಕಾದಿದ್ದ ಕಪಿವೀರರೊಡಗೂಡಿ
ನಡೆತಂದು ಬಳಿಕ ರಾಘವನಡಿಗೆ ಪೊಡೆಮಟ್ಟು
ಬಿಡದೆ ಬಿನ್ನಯ್ಸಿದಂ ಲಂಕಾಪುರದಿ ನಡೆದ ಸಕಲ ವೃತ್ತಾಂತಗಳನು || (ಓ, ಕಾ)

ಬರುತೇವೆಂ | ಟೀ ದಿನದಿ | ಕರಕೊಂಡು | ನಿಮ್ಮನೆಂ |
ದುರುತರ | ದಲಿ ಭಾಷೆ | ಕೊಟ್ಟು ಬಂ | ದೆನು ಸ್ವಾಮಿ || ೨೮೩ ||

ಬಳಿಕುದ್ಯಾ | ನದಿ ಫಲಾ | ಹಾರವ | ಮಾಳ್ಪಾಗ |
ಖಳರೆನ್ನ | ಹೆಡೆ [1]ಮುಡಿ[1] | ಬಿಗಿದರ | ಯ್ಯ— |
[2]ಹಲವು ಶ | ಸ್ತ್ರವ ಬಿಟ್ಟು | ಕೊಲಿಸಿ[2] ಬಾ | ಲವ ಸುಟ್ಟು |
ಉಳಿದು ಜೀ |, ವಮಾತ್ರ | ಬಳಲಿ ಬಂ | ದೆನು ದೇವ || ೨೮೪ ||

೮೫ ಭಾಮಿನಿಷಟ್ಪದಿ

ಅಣಿಯರಿತು ಬಿನ್ನೈಸಿ ಶೌರ್ಯಾ
ಗ್ರಣಿಯು ಪಾದಕೆ ನಮಿಸಿ ಚೂಡಾ
ಮಣಿಯು ಕೈಯೊಳಗಿತ್ತನಮರೇಂದ್ರಾದಿಗಳು ನಲಿಯೆ |
ತ್ರಿಣಯಸಖ ಬೆರಗಾಗೆ ಕಪಿಸಂ
ದಣಿಯು ಮಧ್ಯದೊಳೆಸೆಯುತಿಹ ದಿನ
ಮಣಿಯಸುತಮೊದಲಾಗಿ ಸ್ತುತಿಸಿದರಾಗ ರಘುವರನ || ೨೮೫ ||

೮೫ ಡವಳಾರ—ಏಕತಾಳ ೨

ಜಯಜಯ | ರಘುಕುಲ | ನಂದ | ನ— |
ಭಯನಿವಾ | ರಣ ಸುರ | ವಂ,ದ | ನ— || ಪಲ್ಲವಿ ||

ಅಂಬುಜ | ಲೋಚನ | ಅಘಕುಲ | ನಾಶನ |
ಕಂಬುಕಂ | ಧರ ಕಮ | ನೀಯಕ | ರ— |
ತುಂಬುರು | ನಾರದ | ಗೀತವಿ | ನೋದ ತ್ರಿ |
ಯಂಬಕ | ಸಖ ಹರಿ | ನಮೋ ನ | ಮೋ— || ೨೮೬ ||

ಭಾಸುರ | ಭೂಷಣ | ಬಹುಸುರ | ಪೋಷಣ |
ದೂಷಣ | ಖಳಕುಲ | ನಾಶಣು | ರೇ— |
ಶ್ರೀಶ ಪ | ರಮಗರು | ಡಾಸನ | ಸರ್ವಲೋ |
ಕೇಶ ಜಾ | ನಕೀಪತಿ | ನಮೋ ನ | ಮೊ— || ೨೮೭ ||

1 ಗೈಯ (ಕಾ, ಅ) 2 ಮುಳಿದು ವಸ್ತ್ರವ ತಂದು ಸುತ್ತಿ (ಕಾ)

ಭಕ್ತವ | ತ್ಸಲ ಭವ | ರೋಗ ಸಂ | ಹಾರಣ |
ಮುಕ್ತಿದಾ | ಯಕ ಮಂ | ಜುಳರೂ | ಪ—|
ಉತ್ತಮ | ಪುರುಷ ಸಾ | ಕೇತಪ | ಟ್ಟಣವಾಸ |
ಪೃಥ್ವೀಪಾ | ಲಕ ತೇ | ನಮೋ ನ | ಮೋ— || ೨೮೮ ||

೮೬ ವಾರ್ಧಿಕಷಟ್ಪದಿ

ಅರಸುಮಕ್ಕಳು ಕೇಳಿ, ಆಗ ಚೂಡಾಮಣಿಯು
ಮರುತಸುತ ರಾಮಚಂದ್ರನ ಕೈಯ ಕೊಟ್ಟಲ್ಲಿ
ಭರಿತವಾಯಿತು ಸಂಧಿಯೆಂದು ವಾಲ್ಮೀಕಿಮುನಿವರನುಸುರ್ದ ಪುಣ್ಯಕಥೆಯ |
ಅರಿತು ಹೇಳುವ ಕೇಳ್ವ ಪುಣ್ಯವಂತರಿಗೆ ಬಹ
ದುರಿತಗಳ[1] ಪರಿಹರಿಸಿ ಸಂತೋಷದಲಿ ಕಣ್ವ
ಪುರದೊಡೆಯ ಮುದದಿಂದ ಸಕಲಭಾಗ್ಯವನಿತ್ತು[1] ಪೊರೆವನನುಗಾಲ ಬಿಡದೆ
|| ೨೮೯ ||

1 ನೆಲ್ಲವಂ ಪರಿಹರಿಸಿ ಕಣ್ವಪುರ |
ದೆರೆಯ ಶ್ರೀ ಗೋಪಾಲಕೃಷ್ಣ ಸಂತೋಷದಿಂ (ಪ್ರ, ಕಾ)

# ಸೇತುಬಂಧನ

## ಪ್ರಸಂಗದ ಕಥಾಸಾರ

ಶ್ರೀರಾಮನು ದಂಡೆತ್ತಿ ಬಂದು ಸಮುದ್ರ ದಡದಲ್ಲಿ ಬೀಡುಬಿಟ್ಟಿರುವನೆಂಬ ವಾರ್ತೆಯನ್ನು ದೂತರ ಮುಖದಿಂದ ತಿಳಿದವನಾದ ರಾವಣನು ಲಂಕಾನಗರದ ಕೋಟೆಕೊತ್ತಳಗಳನ್ನೆಲ್ಲ ಭದ್ರಪಡಿಸಿ ಸುತ್ತಲೂ ಬಲವಾದ ಕಾವಲನ್ನಿರಿಸುತ್ತಾನೆ. ಅಣ್ಣನ ಈ ಸಮರಸನ್ನಾಹವನ್ನರಿತ ವಿಭೀಷಣನು ರಾವಣನ ಒಡ್ಡೋಲಗಕ್ಕೆ ಬಂದು ಆತನಿಗೆ ರಾಜನೀತಿಯನ್ನು ಬೋಧಿಸುತ್ತಾನೆ. ಕೋಪೋದ್ರಿಕ್ತನಾದ ರಾವಣನೂ ಮಗನಾದ ಇಂದ್ರಜಿತುವೂ ವಿಭೀಷಣನನ್ನು ಹೀನಾಯಮಾನವಾಗಿ ಜರೆದಾಡಲು ಆತನು ತಾಯಿಯಾದ ಕೈಕಸೆಗೆ ರಾವಣನ ಧೂರ್ತತನವನ್ನರುಹಿ, ತಾನು ಶ್ರೀರಾಮನನ್ನು ಶರಣು ಹೋಗುವುದಾಗಿ ವಿಜ್ಞಾಪಿಸಿಕೊಳ್ಳಲು, ಕೈಕಸೆಯು ಬಂದು ರಾವಣನಿಗೆ ಬುದ್ಧಿನೀತಿಯನ್ನು ಹೇಳುತ್ತಾಳೆ. ರಾವಣನಾದರೆ ತಾಯಿಯ ಮಾತನ್ನೂ ಧಿಕ್ಕರಿಸುವುದಲ್ಲದೆ ವಿಭೀಷಣನನ್ನು ಸಭೆಯಿಂದ ಹೊರನೂಕಿಸುತ್ತಾನೆ. ವಿಭೀಷಣನು ತನಗೆ ಸಮ್ಮತರಾಗಿದ್ದ ನಾಲ್ವರು ಮಂತ್ರಿಗಳೊಡನೆ ಲಂಕೆಯನ್ನು ಬಿಟ್ಟು ಶ್ರೀರಾಮನಿಗೆ ಶರಣುಬರಲು ರಾಮನು ಆತನನ್ನು ಅತ್ಯಾದರದಿಂದ ಮನ್ನಿಸಿ, ಮುಂದೆ ಲಂಕಾರಾಜ್ಯಕ್ಕೆ ಆತನೇ ಅಧಿಪತಿಯೆಂದು ಪಟ್ಟಾಭಿಷೇಕವನ್ನೆಸಗಿ ಅನುಗ್ರಹಿಸುತ್ತಾನೆ.

ತದನಂತರ ಸಮುದ್ರಕ್ಕೆ ಸೇತುವನ್ನು ಬಂಧಿಸಲಿಕ್ಕಾಗಿ ವರುಣನ ಅನುಗ್ರಹವನ್ನು ಪಡೆದು, ಆತನ ಸಲಹೆಯಂತೆ ವಿಶ್ವಕರ್ಮಾಂಶಸಂಭೂತನಾದ ನಳನನ್ನು ಬರಮಾಡಿ ಸೇತುವನ್ನು ರಚಿಸುವಂತೆ ಕಪಿನಾಯಕರಿಗೆ ಅಪ್ಪಣೆ ಕೊಡಿಸುತ್ತಾನೆ. ಆ ಪ್ರಕಾರ ಹನುಮಾಂಗದಾದಿಕಪಿವೀರರು ಭರತಖಂಡದ ವಿಸ್ತಾರದಲ್ಲಿರುವ ನಾನಾ ಪರ್ವತಗಳನ್ನು ಕಿತ್ತು ತಂದುಕೊಡುತ್ತಿರಲು ನಳನು ಮಹಾ ಸಾಹಸದಿಂದ ಸೇತುಬಂಧನದಲ್ಲಿ ಉದ್ಯುಕ್ತನಾಗುತ್ತಾನೆ. ಎಷ್ಟೊಂದು ಪರ್ವತಗಳನ್ನು ತಂದೊಟ್ಟಿದರೂ ಸಾಕಾಗದಿರುವಲ್ಲಿ ಅಂಗದನು ಪರಶಿವನ ವಾಸಸ್ಥಾನವಾದ ಕೈಲಾಸಪರ್ವತವನ್ನೂ, ಹನುಮಂತನು ಸಕಲ ಲೋಕಾಧಾರವಾದ ಹಾಗೂ ಸುರಾಲಯವಾಗಿರುವಂಥ ಮಹಾ ಮೇರುಪರ್ವತವನ್ನೂ ಕೀಳಲು ಉದ್ಯುಕ್ತರಾಗುತ್ತಾರೆ. ಆಗ ಪರಶಿವನೂ ಬ್ರಹ್ಮನೂ ತಕ್ಕ ನಯೋಕ್ತಿಗಳಿಂದ ಅವರನ್ನು ಸಾಂತ್ವನಗೊಳಿಸಿ ಹೇಗೂ ಆ ಪರ್ವತಗಳನ್ನು ಉಳಿಸಿಕೊಳ್ಳುತ್ತಾರೆ. ಕೊನೆಗೆ ಹನುಮಂತನು ಆ ಮೇರುವಿಗೆ ಸಮಾನವಾಗುವಷ್ಟು ಉಪಪರ್ವತಗಳನ್ನುರುಳಿಸಿ ತಂದುಕೊಟ್ಟಲ್ಲಿಗೆ ಪರ್ಯಾಪ್ತವಾಗಿ ಆ ಮಹಾರಂಭವು ಕೊನೆಗೊಂಡು, ಸಂತುಷ್ಟರಾದ ದೇವತೆಗಳು ಹೂಮಳೆಗರೆದರೆಂಬಲ್ಲಿಗೆ ಈ ಸೇತುಬಂಧನಪ್ರಸಂಗಕ್ಕೆ ಮಂಗಲವಾಗುವುದು.

| ಮುಖ್ಯ ಪ್ರಕರಣಗಳು | ಭೂಮಿಕೆಗಳು |
|---|---|
| ೧. ವಿಭೀಷಣನ ರಾಜನೀತಿ | ರಾಮ |
| ೨. ವಿಭೀಷಣನ ಶರಣಾಗತಿ | ಲಕ್ಷ್ಮಣ |
| ೩. ಸಮುದ್ರರಾಜನ ಅನುಗ್ರಹ | ಹನುಮಂತ |
| ೪. ಮಹಾ ಸೇತುಸಮಾರಂಭ | ಸುಗ್ರೀವ |
| | ಜಾಂಬವ |
| | ಅಂಗದ |
| | ನಳ |
| | ನೀಲ |
| | ಗವಾಕ್ಷ |
| | ವರುಣ |
| | ಈಶ್ವರ |
| | ಬ್ರಹ್ಮ |
| | ನಾರದ |
| | ರಾವಣ |
| | ಇಂದ್ರಜಿತು |
| | ಶುಕ |
| | ಸಾರಣ |
| | ನೀಲನಾಯಕ |
| | ಮೇನಕೆ |
| | ಕೈಕಸೆ |
| | ವರುಣಸ್ತ್ರೀಯರು |

# ಸೇತುಬಂಧನ

## ೧. ಮತ್ತೇಭವಿಕ್ರೀಡಿತವೃತ್ತ

ಘನವಾಲ್ಮೀಕಿಮುನೀಂದ್ರಪಾದಯುಗಕಂ ಬೀಳುತ್ತಲಾ ಬಾಲರು ।
ಮನಸಂತೋಷದಿ ಸೇತುಬಂಧನಗಳಂ ಪ್ರಾರಂಭ ಸಂಪೂರ್ಣವಂ ।
ವನಸಂಚಾರಿಗಳೆಂತು ದಾಂಟಿದರದಂ ಶ್ರೀರಾಮಚಾರಿತ್ರವಂ ।
ಇನಿತಾನಂದದಿ ಕೇಳ್ವೆವೆಂಬ ಸುತರಂ ಕೊಂಡಾಡುತಿಂತೆಂದನು ॥ ೧ ॥

(ರಾಮಲಕ್ಷ್ಮಣರ ಹಾಗೂ ಕಪಿನಾಯಕರುಗಳ ಪ್ರವೇಶ)

## ೨. ಸಾಂಗತ್ಯ (ಚರಿತೆ) ರೂಪಕತಾಳ—೩

ರಾಮ—

ತನಯರು । ಕೇಳಿ ರಾ । ಘವನು ಕೈ । ಯಲಿ ಚೂಡಾ ।
ಮಣಿಯನು । ಕೊಂಡು ದುಃ । ಖಿಸುತ— ॥
ವನಿತೆಯ । ಮೇಲಿದ್ದ । ಮಮಕಾರ । ದಿಂದಲಾ ।
ದಿನಕರ । ತನುಜಗಿಂ । ತೆಂದ — ॥ ೨ ॥

## ೩ ರಾಗ ಭೈರವಿ—ಜಂಪೆತಾಳ ೧

ಅತಿಶಯದ । ಸಾಗರದ । ಮಥನದೊಳು । ಜನಿಸಿ ಸುರ ।
ಪತಿಯಿಂದ । ಬಂತು ಮಣಿ । ಜನಕನೃಪ । ಗೆ— ॥ ೩ ॥

ಮಗಳ ವೈ । ವಾಹದಲಿ । ವಶವಾಯಿ । ತೆನ್ನೊಡನೆ ।
ತೆಗೆದು ಸಲೆ । ಮೋಹದಲಿ । ಕೊಟ್ಟೆ ಸತಿ । ಗೆ— ॥ ೪ ॥

ಏನುಪಾ ।ಯದೊಳಿದರ । ಉಳುಹಿಕೊಂ । ಡಳೊ ಕಾಣೆ ।
ಮಾನಿನೀ । ಮಣಿ ನೋಡೆ । ಜಾಣೆಯುಹು । ದು— ॥ ೫ ॥

ಎಂದಿಗಾ । ದರು ಸತಿಗೆ । ಭೋಗಿಸುವ । ಫಲವಿರಲು ।
ಅಂದುಪರಿ । ಯಂತ ತೆಗೆ । ದಿರಿಸೊ ತ । ಮ್ಮ— ॥ ೬ ॥

ಮರುತಸುತ । ನಮಗಾಗಿ । ಮಾಡಿದತಿ । ಸಾಹಸಕೆ ।
ನೆರೆಯದುಪ । 1ಚಾರಗಳ[1] । ಏನಿತ್ತ । ರೂ— ॥ ೭ ॥

---

1 ಕಾರವದು (ಕಾ)

ಧರ್ಮಶಾ । ಶ್ವತವಾಗಿ । ಧಾರೆಯೆರೆ । ದೆವು ಬರುವ ।
ಬ್ರಹ್ಮಪದ । ವಿಯ ಭಾಗ್ಯ । ಹನುಮಂತ । ಗೆ— ॥ ೮ ॥

೪ ವಾರ್ಧಿಕಷಟ್ಪದಿ

ಮರುತನಂದನಗಾಯ್ತು ಅಜನ ಸಂಪದವೆಂದು ।
ಸುರಪತಿಯು ಮುಂತಾದ ಸುರರೆಲ್ಲ ಜಯವೆಂದು ।
ಸುರಿದರಂಬರದಿಂದ ಪೂಮಳೆಯ ದೇವದುಂದುಭಿ ಮೊಳಗಿತಾಕಾಶದಿ ॥
ಕರಿ ತುರಗ ರಥ ಪಾದಚಾರಿಗಳು ತಾವೆ ವಾ ।
ನರರೊಬ್ಬರೊಬ್ಬರೊಳಗಾಯ್ತು [1]ಚತುರಂಗ [1]ಮಾ ।
ರ್ಗಲ, ಮಾರ್ಗಶಿರಶುದ್ಧದಷ್ಟಮಿಯೊಳೆಲ್ಲರುಂ ಹೊರಪಯಣಮಂ ಗೈದರು ॥೯॥

೫ ರಾಗ ಮಾರವಿ—ಅಷ್ಟತಾಳ ೨

ವರಶ್ರವ । ಣಾದ್ರಿಯಿಂ । ದೆದ್ದು ಬಂ । ದು ಸುರ ।
ಗಿರಿಯೊಳು । ನೆಲೆಸಿದ । ರು— ॥
ಮರುದಿನ । ಮೇಚಕ । ಪರ್ವತ । ದಿಂದೆದ್ದು ।
ಬರುತಿ । ರ್ದುದು ಕಟ । ಕ— ॥ ೧೦ ॥

ಅಲ್ಲಿಂದ । ಮಲಯಾ, । ಚಲಕಾಗಿ । ದಿನ ನಾಲ್ಕ ।
ರಲ್ಲಿ ಸಾ । ಗರ ತಡಿ । ಗೆ— ॥
ಎಲ್ಲರೂ । ಬಂದಿಳಿ । ಕಾಣುತೋ । ಡಿದರು ಮ ।
ತ್ತಲ್ಲಿದ್ದ । ದಾನವ । ರು— ॥ ೧೧ ॥

೬ ವಾರ್ಧಿಕಷಟ್ಪದಿ

ರಾಮ—

ಧಾಳಿವರಿದೈತಂದು ಗಂಧಮಾದನ ಗಿರಿಯು ।
ಮೂಲದೆಡೆಯಲಿ ರಾಮ ಸೈನ್ಯಮಂ ಕೆದರೆ, ಕಪಿ ।
ಪಾಳೆಯವ ಕಂಡಂಜಿ ಕಾವಲಿಹ ರಾಕ್ಷಸರು ಬೀಳುತೇಳುತ ನಡೆದರು ॥

---

1 ಮರುದಿವಸ (ಕಾ)

ನೀಲನಾಯಕ—

ಓಲಗದೊಳಿರುವ ದಶಕಂಠನಂಘ್ರಿಗೆ ಮಣಿದು |
ನೀಲನಾಯಕನಂಜುತಂಜುತಳುಕುತ ಬೆದರಿ |
ದಾಲಿಗಳ ನೀರೊ[2]ತ್ತಿ[2] ಗದ್ಗದಸ್ವರದಿಂದ ಪೇಳಿದನು ದನುಜೇಂದ್ರಗೆ || ೧೨ ||

೭ ಶಂಕರಾಭರಣ—ಅಷ್ಟತಾಳ ೧, ೨

ನೀಲ—

ದಂಡು ಬಂ | ತಯ್ಯಾ ರಾ | ಘವನ— | —ನಾವು |
ಕಂಡೆವು | ದಳ[2]ದ[2] ಸು | ಗ್ರೀವನ ||
ತಂಡತಂ | ಡದೊಳಿಪ್ಪ | ತ್ತೇಳು ಕೋ | ಟಿಯು ಕೈಯ. |
ತುಂಡುಮರಗಳ | ಗುಂಡುಗಿರಿಗಳ | ಹಿಂಡುಹಿಂಡಿನ | ಕಪಿಗಳ— || ೧೩ ||

ದಿನಕರ | ವಂಶಲ | ಲಾಮ— | —ರಾಮ |
ನನುಜ ಲ | ಕ್ಷ್ಮಣನು ನಿ | ಸ್ಸೀಮ— ||
ಧನುಶರ | ಗಳ ಕೊಂಡು | ದನುಜರ | ವಧೆಗೆಂದು |
ಘನಪರಾಕ್ರಮಿ | ವೀರಸುಗ್ರೀ | ವನ ಮಹಾಬಲ | ಕೂಡಿದ || ೧೪ ||

ಕರಿರಥ | ತುರಗ[3] ಕಾ | ಲಾಳು— | —ತಾವೇ |
ಪರಿವಾರಾ | ಗಿಹರಯ್ಯ | ಕೇಳು[3]— |
ಕರಡಿ ಸಿಂ | ಗಳಿಕ ವಾ | ನರ ಮುಸು | ಕೆಂಜಣಿಲ್ |
ಮರಿಗಳೈದವೆ | ಕೆಲವು ಬಿಳುಪಾ | ಗಿರುವ ಮುದಿಮುದಿ | ಕಪಿಗಳ— || ೧೫ ||

ಕೇಳಿದ | ದಶಕಂಠ | ನುಡಿಯು— | —ರಾಮ |
ಪಾಳ್ಯ ಸ | ಮುದ್ರದ | ತಡಿಯು— ||
ಓಲಗ | ದೊಳು ಕುಳಿ | ತೆಲ್ಲರ | ಕರೆಸಿದ |
ಕಾಳಗಕೆ ಸ | ನ್ನಾಹದಿಂ ಬರ | ಹೇಳಿದನು ಖಳ | ಕೋಟಿಯು— || ೧೬ ||

೮ ರಾಗ ಭೈರವಿ—ತ್ರಿವುಡೆ ತಾಳ ೩

ಬಂದರಾಗ— | —ಧುರಕ್ಕೆ | ತಂದರಾಗ— || ಪಲ್ಲವಿ ||

---

1 ರಸಿ (ಕಾ) 2 ವಾಯೆ (ಕಾ, ಅ) 3 ವು। ತಾವೇ—ಪಾದ। ಚರಿಗಳಂತದರೊಳ್ಳೈ। ದಾವ — | (ಕಾ)

ರಾವಣ—

ನೀಲನಾಯಕ । ನೆಂದವಾರ್ತೆಯು ।
ಲಾಲಿಸುತ ನೆರೆ । ಕೇಳಿದ — ॥

ಕಾಲಭೈರವ । ನಂತೆ ರೋಷದ !
ನೇಲೆ ಖತಿಯನು । ತಾಳಿದ — ॥

ಕಾಳರಕ್ಕಸ । ದಿಗುತಟದ ಬೇ ।
ತಾಳರನು ಬರ । ಹೇಳಿದ — ॥

ಸಾಲುಸಾಲೀ । ರೇಳು ಲೋಕಕೆ ।
ಓಲೆತಾಳೆಯು । ಬರೆಸಿದಾಗಲೆ ॥ ೧೭ ॥

ಬಂದರಾಗ — । — [1]ಖಳನಿದಿ । ರ್ನಿಂ[1]ದರಾಗ — ॥ ಪಲ್ಲವಿ ॥

(ಯುದ್ಧಸನ್ನದ್ಧರಾದ ರಾಕ್ಷಸಭಟರ ಸಂಭ್ರಮದ ಪ್ರವೇಶ)

ಕೋಟಿ ದಾನವ । ರುಗಳ ಶರಧಿಯ ।
ದಾಟದಂದದಿ । ನಿಲಸಿದ — ॥

ಕೋಟೆಯದ ಹೊರ । ವಳಯ ಸುತ್ತಲು ।
ನೀಟಿನಲಿ ಕಣಿ । ಯಗೆಸಿದ — ॥

ಪಾಟಿಯಲಿ ರಣ । ಭೂಮಿಗಖಿಳ ಸ ।
ಲೂಟಿಯಂಕವ । ಸುಳಿಸಿದ ॥

[2]ಕಾಟಿಕರ ಕೈ । ಯಸ್ತ್ರಶಸ್ತ್ರದ[2] ।
[3]ಕೋಟಲೆಗೆ ಛಲ । ವೆಳಸಿತಾ[3]ಗಲೆ ॥ ೧೮ ॥

೯ ಕಂದಪದ್ಯ

(ವಿಭೀಷಣನ ಪ್ರವೇಶ)

ಅಂದಿನ ಓಲಗದೆಡೆಗೈ
ತಂದಗ್ರಜಗೆರಗಲಾ ವಿಭೀಷಣದೇವಂ ।

---

1 ಜಯಜಯವೆಂ (ಕಾ) 2 ಗೋಟ ಗಾಳ ಮರಾಟರಾ ಸುರ (ಕಾ, ಅ) 3 ಸಾಟ ನೂಡುತ ಕರೆಸಿದಾ (ಕಾ, ಅ)

ಬಂದಾರಾಮನ ವಾರ್ತೆಯ
ನಂದರುಹಲು ಕೇಳ್ದ ರಾಜನೀತಿಯ ಪೇಳ್ದಂ ॥ ೧೯ ॥*

೧೦ ರಾಗ ಕಾಪಿ—ಅಷ್ಟತಾಳ ೧

ವಿಭೀಷಣ—

ಇನ್ನಾ । ದರು ಬಿಡು । ಬಿಡು ನಿನ್ನ । ಛಲವ ।
ಮೊನ್ನೆ ಹೇ । ಳಿದ ಮಾತು । ನಿಜವಾಯಿ । ತಲ್ಲ— ॥ ಪಲ್ಲವಿ ॥

ಮೊದಲು ಪ । ಟ್ಟಣವನ । ಗ್ನಿಗೆ ಕೊಟ್ಟ । ಕಪಿಯಂಥ ।
ಅದುಭುತ । ವೀರ ವಾ । ನರಸೈನ್ಯ । ವೈತಂದು ।
ಚೆದರಿತು । ಪಾಳ್ಯವಂ । ತೆ—ಈ । ಜೆಗೆ ದಾಟು ।
ವುದಕಲ್ಪ । ವೇಳ್ಯವಂ । ತೆ—ಎ । ಚ್ಚರಿತುಕೊಂ ।
ಬುದಕೀಗ । ಸಮಯ ಬಂ । ದಿದೆ ಮುನ್ನಿ । ನಂತೆ— ॥ ೨೦ ॥

ಅಣ್ಣ ಕೇ । ಳೀ ರಾಮ । ಚಂದ್ರನೀ । ಭೂಮಿಯ ।
ತಿಣ್ಣವಿ । ಳುಹಲಾಗಿ । ಅವತರಿ । ಸಿದನೊಂದು ।
ಹೆಣ್ಣ ನೆ । ವನ ಹಿಡಿ । ದು—ನ । ಮ್ಮೆಲ್ಲರ ।
ಮಣ್ಣಿಗಿ । ಕ್ಕುವ ಬಡಿ । ದು—ಈ । ಕಾರ್ಯದೊ ।
ಳುಣ್ಣದು । ರಿಪುದುಚಿ । ತಗಳಲ್ಲ । ಮರಿದು— ॥ ೨೧ ॥

ಜಾರೆಯೆ । ಜಾನಕಿ । ಸಾಕ್ಷಾಲ್ಲ । ಕ್ಷುಮಿದೇವಿ ।
ನಾರಾ, । ಯಣ ರಾಮ । ಚಂದ್ರ ಮಾ । ಶೇಷಾವ ।
ತಾರಿ ಲ । ಕ್ಷ್ಮಣರು ಬಂ । ದು—ದೇ । ವತೆಗಳ ।
ದೂರಿಗೋ । ಸ್ಕರದೊಳಿಂ । ದು—ನ । ಮ್ಮಂತಕ ।
ನೂರಿಗ । ಟ್ಟದೆ ಬಿಡ । ರರಿತುಕೊ । ಮುಂದು— ॥ ೨೨ ॥

---

* ಕೇಳಿದೆ । ಯಾ ಅಣ್ಣ ಕೇಳಿದೆ । ಯಾ — ॥ ಪಲ್ಲವಿ ॥
ಪಾಳೆಯ ಗೂ । ಡಿ ನಮ್ಮೊಡನೆ । ಕಾಳಗಕ್ಕೆ । ಬಂದ ಪರಿಯ ॥ ಅನುಪಲ್ಲವಿ ॥
ಬಾಲವುಳ್ಳ । ಕಪಿಗಳೆಪ್ಪ । ತ್ತೇಳು ಕೋಟಿ । ಯಂತೆ ಕೆಲವು ।
ನೀಲ ಕೆಂಪು । ಬಿಳಿದು ಮತ್ತೆ । ಬಾಲಕರಂ । ತೆ— ।
ಮೇಲೆ ಸುಗ್ರೀ । ವನೆಂಬಾತ । ಪಾಲಿಸುವ । ನರಸನಂತೆ ।
ನೀಲನೆಂಬ । ನಿವರಿಗೆಲ್ಲ । ಪಾಳ್ಯದ ನಾ । ಯಕನಂತೆ ॥ (ಅ)

೧೧ ರಾಗ ಭೈರವಿ—ಅಷ್ಟತಾಳ ೧

ರಾವಣ—

ಏನೆಂದೇ |—ತಮ್ಮ | ಏನೆಂದೆ— || ಪಲ್ಲವಿ ||

ಏನೆಂದೇ |, ತಮ್ಮ | ಏತಕೆ | ಮರುಳಾದೆ |
ದಾನವ | ರುಗಳ ಶಕ್ತಿ | ಯನು ನೀ | ನರಿಯದೆ || ಅನುಪಲ್ಲವಿ ||

ದನುಜರ | ಸೈನ್ಯ ಲಂ | ಕಾದುರ್ಗ | ವೆಮಗೆ |
ಅನುಜಗೆ | ಸರಿ ಯಾರು | ಕುಂಭಕ | ರ್ಣನಿಗೆ |
ಧನಪತಿ | ಜ್ಯೇಷ್ಠ ತಾ | ನೈಶ್ವರ್ಯ | ದೊಳಗೆ |
ಘನಪರಾ | ಕ್ರಮಿ ಶಕ್ರ | ಜಿತು ಕಂದ | ನೆನಗೆ || ೨೩ ||

ಈರೇಳು | ಜಗದೊಡೆ | ತನ ನಮ | ಗುಂಟು |
ಮಾರವೈ | ರಿಯ ಭಕ್ತಿ | ಮನದಿ ಬೇ | ರುಂಟು |
ಸೇರಿಪ್ಪ | ದಿಕ್ಪಾಲ | ರೊಳೆ ನಮ್ಮ | ನಂಟು |
ಬೇರಿನ್ನು | ಯೋಚಿಸ | [1]ಲಿಕೆ ಮತ್ತೇ[1] | ನುಂಟು || ೨೪ ||

ಸೀತೆಯ | ನಾ ಬಿಟ್ಟು | ಕೊಟ್ಟರೆ | ಮುಂದೆ |
ಪೇತುಗ | ನೆಂ[2]ದೆಂಬ | ಪೆಸರಿಡು | ತಂದೆ[2] |
ಮಾತಲಿ | ಬೆದರಿಸಿ | ಬಿಡಿಸಲು | ನಿನ್ನ |
ತಾತನಿಂ | ದಾಗದು | ಛೀ ಹೋಗೋ | ತಮ್ಮ || ೨೫ ||

ಆತನಿ | ಗುಪಕಾರ | ವೆಂಬಡೆ | ನಿನ್ನ |
ತಾತನೊ | ತಮ್ಮನೊ | ಮಗನೊ ವೈ | ದುನನೊ |
ಕೋತಿಗ | ಳರಸನ | ಕೊಂಡಾ[3]ಡು | ವೆಲೆಲೇ[3] |
ಸೀತೆಯು | ಬಂಟ [4]ನೀ | ಛೀ ಹೋಗೊ | ಮರುಳೇ[4] || ೨೬ ||

೧೨ ರಾಗ ಕಾಪಿ—ಅಷ್ಟತಾಳ ೧

ವಿಭೀಷಣ—

ನೀನೇಕೆ | ಮರುಳಪ್ಪ | ದಣ್ಣ |—ಇನ್ನು |
ಜಾನಕಿ | ಯನು ಬಿಟ್ಟು | ಕೊಡುವುದೆ | ಬಣ್ಣ — || ಪಲ್ಲವಿ ||

---

1 ಲದರೊಳೇ(ಅ) 2 ನುತಲಿ ಕರೆವರು ಹಿಂದೆ(ಕಾ) 3 ಡುವದಕೆ(ಕಾ); ಡಲೇಕೆ(ಕಾ)
4 ನೊ | ಬಳಿಯ ದಾಯಾದಿಯೊ (ಕಾ, ಅ)

ಕೊಬ್ಬಿದು । ನ್ನದವೆಲ್ಲ । ಬಿಡುಗು ।—ಕಪಿ ।
ವಾರ್ಬಲ । ಗಳು ಬಂದು । ಮಂಡೆಯು । ಬಡಿಗು ॥
ಪರ್ಬಿ ಪ । ಟ್ಟಣವೆಲ್ಲ । ಸುಡುಗು ।—ಜಗ ।
ದಬ್ಬೆ ಜಾ । ನಕಿಯಿಂದ । ಸೌಭಾಗ್ಯ । ಕೆಡುಗು ॥ ೨೭ ॥

ಸೀತಾದೇ । ವಿಯ ಕರ । ಕೊಣಕು ।—ಒಳ್ಳೆ ।
ಜಾತಿಮಾ । ಣಿಕ್ಯ ಮು । ತ್ತುಗಳ ತೆ । ಕ್ಕೊಣಕು ॥
ಈ ತಪ್ಪ । ಪಾಲಿಸೆಂ । ದೆನಕು ।—ರಘು ।
ನಾಥಸ್ವಾ । ಮಿಯ ಪಾದ । ಗಳ ಕಟ್ಟಿ । ಕೊಣಕು ॥ ೨೮ ॥

ರಾಮ ಚಂ । ದ್ರಗೆ ಪೊಡ । ಮಡುವೊ ।—ನಮ್ಮ ।
ಸೀಮೆಯ । ಒಡೆಯಂಗೆ । ಕಪ್ಪವ । ಕೊಡುವೊ ॥
ಕಾಮುಕ । ತನವೆಲ್ಲ । ಬಿಡುವೊ ।—ಆ ।
ಸ್ವಾಮಿಯ । ಮನದೊಳ । ಗಿದ್ದಂತೆ । ನಡವೊ ॥ ೨೯ ॥

೧೩ ರಾಗ ಘಂಟಾರವ—ಜಂಪೆತಾಳ ೨

ರಾವಣ—

ತಮ್ಮನ ಸ್ವ । ರೂಪಕ್ಕೆ । ತಕ್ಕ ಮಾ । ತಾಡಿದರೆ ।
ಒಮ್ಮೆ ಸೈ । ರಿಸಿದೆ ನ । ಮ್ಮಮ್ಮ ಕೈ । ಕಸೆಗೆ ॥ ೩೦ ॥

ಅಮಮ ಸಗ । ರಾನ್ವಯದ । ಮಮಕಾರ । ವುಳ್ಳಾತ ।
ನಮಗೆ ಬು । ದ್ಧಿಯ ಸಾರ । ಲಿವನೆಷ್ಟ । ರವನು ॥ ೩೧ ॥

ಆ ಕಪಿಗ । ಳುಗ್ರಭಯ । ಸೋಕಿತೀ ।ಪಿಸುಣನಿಗೆ ।
ಈ ಕುಟಿಲ । ತನ ಬೇಡ । ಸಾಕು ನಡೆ । ಗಾಢ ॥ ೩೨ ॥

ಗಂಡುಸ । ಲ್ಲವರ ಭಯ । ಗೊಂಡೆಯಾ । ದರೆ ನಿನ್ನ ।
ಹೆಂಡತಿಯ । ಕೊಟ್ಟು ಬೀ । ಳ್ಕೊಂಡು ಬಾ । ಮನೆಗೆ ॥ ೩೩ ॥

ನಿಷ್ಠೂರ । ಗಳ ಮಾತ । ನೀನೊಂದ । ನಾಡಿದರೆ ।
ಪೆಟ್ಟಾಗ । ದಿರದಿನ್ನು । ಒಡೆದಪುದು । ಬೆನ್ನು ॥ ೩೪ ॥

ಜೋಡಾಗಿ । ಜನಿಸಿರ್ದ । ಜಾಣ್ಮೆಗಳ । ಬಗೆ ಬೇರೆ ।
ಹೇಡಿತನ । ದುದಯ ಕ್ಕೆ । ಗೂಡಿತನು । ಜನಿಗೆ ॥ ೩೫ ॥

ಬಂಟತನ | ಮರ್ಯಾದೆ | ಜಾಣ್ಮೆಗಳ | ಬಗೆ ಬೇರೆ |
ಕಂಠರಿಗೆ | ದೊರಕುವುದೆ | ಶೂರತನ | ದೊಸಗೆ || ೩೬ ||

ಇಂದ್ರಜಿತು | ನಿನ್ನ ಕಿರಿ | ತಂದೆಯಾ | ಡಿದ ಮಾತು |
ಬಂದುದೇ | ಮನಕೆ ಪೇ | ಳೆಂದು ಬೆಸ | ಗೊಂಡ || ೩೭ ||

೧೪ ಸಾಂಗತ್ಯ, ರಾಗ ಪಂತುವರಾಳಿ—ರೂಪಕತಾಳ ೩

ಇಂದ್ರಜಿತು—

ತಂದೆ ಕೇ | ಳೈ ಪರ | ಸತಿಯರ | ವಂಚಿಸಿ |
ತಂದುದ | ನ್ಯಾಯ ರಾ | ಜಸಕೆ—||
ಮುಂದಿನ್ನು | ಬೆದರುತ್ತ | ಬಿಟ್ಟೆವಾ | ದರೆ ನಮ್ಮ |
ನಿಂದಿಸು | ವರು ಲೋಕ | ದೊಳಗೆ— || ೩೮ ||

ಸಿಂಧುವ | ನುತ್ತರಿ | ಸುವಡೆ ಕೂ | ಡದು ಬಲ |
ಬಂದರೆ | ಬರಲಿ ರಾ | ಘವನ—||
ತಂದೆಯ | ತಂದೆಗ | ಸಾಧ್ಯ ಜಾ | ನಕಿಯನ್ನು |
ಹಿಂದಕ್ಕೆ | ಒಯ್ವುದಂ | ತಿರಲಿ— || ೩೯ ||

ಹಿರಿದಾದ | ವನವ ಸಂ | ಚರಿಸುವ | ಕಪಿಗಳ |
ಕರಕೊಂಡು | ಬಂದು ರಾ | ಕ್ಷಸರ—||
ಧುರದೊಳೆ | ಚ್ಚಾಡಿ ಸೋ | ಲಿಸುವನೆಂ | ಬಾ ಮಾತಂ |
ತಿರಲಿ ಏ | ಚಿಕ್ಕಯ್ಯ | ನವರೆ— || ೪೦ ||

ವಿಭೀಷಣ—

ಎಂದಾ ಪೌ | ರುಷದ ಮಾ | ತನು ಕೇಳಿ | ಭುಗಿ ಭುಗಿ |
ಲೆಂದು ಕೋ | ಪಿಸಿ ವಿಭೀ | ಷಣನು—||
ಹಿಂದೊಂದು | ಕಪಿ ನಡೆ | ತಂದಾಗೋ | ಡಿಸಿದಂಥ |
ಕಂದ ನೀ | ನಲ್ಲದಿ | ನ್ನಾರು— || ೪೧ ||

ಅಣ್ಣ ಕೇ | ಳೀತಗ | ಳೆಂದ ಮಾ | ತಿನ ಮೇಲೆ |
ಮಣ್ಣ ಕೂ | ಡುವ ಪಂತಿ | ನನಗೆ—||

ಹೆಣ್ಣಾ ಸಿ | ಕ್ಕುವದಲ್ಲ | ಬಯಲಭ್ರಾಂ | ತುಗಳಿಂದ |
ಉಣ್ಣದು | ರಿಯಬೇಡ | ಬರಿದೆ— || ೪೨ ||

ಜಾರೆಯೆ | ಸೀತೆ ಸಾ | ಕ್ಷಾತ ಲ | ಕ್ಷ್ಮಿದೇವಿ |
ನಾರಾ, | ಯಣ ರಾಮ | ಚಂದ್ರ—||
ಧಾರಿಣಿ | ಯೊಳಗವ | ತರಿಸಿದ | ರೀ ಭೂಮಿ |
ಭಾರವ | ನಿಳುಹುವ | ಬಗೆಗೆ— || ೪೩ ||

ಜನಕನ | ನಗರದೊ | ಳಾದವ | ಮಾನವ |
ಮನಸಿಲಿ | ಕ್ಕದೆಹೋದೆ | ಹಿಂದೆ —||
ಘನಕುಂಭ | ಕುಜ ಮೂಗ | ಕೊಯ್ಸಿಕೊಂ | ಡಂಥ ಶೂ |
ರ್ಪನಖಿ ಏ | ನಾದಳೆಂ | ದರಿಯ— || ೪೪ ||

ಅಲ್ಪದಾ | ನವರೆ ದೂ | ಷಣ ಖರ | ತ್ರಿಶಿರರು |
ಸ್ವಲ್ಪನೆ | ಮಾವ ಮಾ | ರೀಚ—||
ಅಪ್ರಯೋ | ಜಿಗನಾಗಿ | ಕೆಡಬೇಡ | ಸೀತೆಯ |
ನೊಪ್ಪಿಸಿ | ಕೊಡು ಬಾ ರಾ | ಮನಿಗೆ— || ೪೫ ||

ಒಟ್ಟಾದ | ಕಪಿಗಳು | ಮೃಗವೆಂದು | ನಂಬಿ ನೀ |
ಕೆಟ್ಟೆ ನಾ | ಸಾರಿಹೇ | ಳಿದೆನು—||
ಕಟ್ಟಾಳು | ತನವಿದು | ಸಮಯ ಜಾ | ನಕಿಯನ್ನು |
ಕೊಟ್ಟುಬಾ | ರಾಮಚಂ | ದ್ರನಿಗೆ— || ೪೬ ||

ಸ್ವಲ್ಪಕಾ | ರ್ಯಕ್ಕಾಗಿ | ಸುಮ್ಮನೆ | ತ್ರೈಜಗ |
ದಪ್ಪ ರಾ | ಮನೊಳೇಕೆ | ಕಲಹ—||
ತಪ್ಪಾಯಿ | ತೆಂದರೆ | ತರಣಿವಂ |ಶಜರಿಗೆ |
ಒಪ್ಪುಕೊಂ | ಬುದು ವಂಶ | ಬಿರುದು— || ೪೭ ||

'ಪರನಾರಿ | ಗಳುಪಿದ | ಪಾತಕಿ | ಗಳ ಭೂಮಿ |
ಹೊರದು' ಎಂ | ಬುದು ವೇದ | ಸಿದ್ಧ—||
ನರಕದೊ |ಳಿಳುಹುವ | ರಲ್ಲಿ ಎಂ | ಬುದನು ನೀ |
ನರಿತು ಜಾ | ನಕಿಯನ್ನು | ಕಳುಹೋ— || ೪೮ ||

ನಿನಗೆ ಸಾ । ಚಿಕೆಯಾದ । ರೆನ[1]ಗಾದ । ರರುಹೆಯ್ಯ[1] ।
ವನದೊಳಿ । ದ್ದವಳ ಕೊಂ । ಡೊಯ್ದು—॥
ಇನಕುಲಾ । ಧಿಪಗಿತ್ತು ಈಗ ನ । ವ್ಮೊಳು ಮನ ।
ಮುನಿಸಿಲ್ಲ । ದಂತೆ ಮಾ । ಡುವೆನು— ॥ ೪೯ ॥

೧೫ ಭಾಮಿನಿಷಟ್ಪದಿ

ರಾವಣ—

ಸಾಕು ಸಾಕೀ ಸಭೆಯೊಳಗೆ ಕುಳಿ ।
ತೀ ಕುಟಿಲತನವೆಂಬ ಕಪಿಗ್ರಹ ।
ಸೋಕಿದೀ ಚಂಡಾಲಹೇಡಿಯ ನೂಕಿರೆಂದೆನಲು ॥

ವಿಭೀಷಣ—

ನೂಕಲೇತಕೆ ಚರರು ನಾವೇ ।
ನೂಕಿಕೊಂಬೆವೆನುತ್ತ ಕಂಗಳ ।
ಲೌಕಿದುದಕದ ಶರಣ ಬಂದನು ಮಾತೆಯಿದ್ದೆಡೆಗೆ ॥ ೫೦ ॥

೧೬ (ತೋಡಿ ರಾಗ) ಸಾಂಗತ್ಯ, ರೂಪಕತಾಳ ೧

ವಿಭೀಷಣ—

ಅಮ್ಮ ಕೇ ! ಳಣ್ಣನ ! ದೆಸೆಯಿಂದ । ಖಳವಂಶ ।
ನಿರ್ಮೂಲ । ವಹ ದಿನ । ಬಂತು — ॥
ಸುಮ್ಮನೆ ! 'ಮ[2]ಧುಬಿಂ[2]ದು ! ಕಲಹ' ಬೇ ! ಡೆಂದರೆ ।
ಧರ್ಮಕ್ಕೆ ! ಮನಸೊಡಂ! ಬಡ[3]ನು[3]— ॥ ೫೧ ॥

ಸಾಕ್ಷಾತ ! ಹರಿ ರಾಮ । ಚಂದ್ರ ಜಾ ! ನಕಿ ಮಹಾ !
ಲಕ್ಷ್ಮೀ ದೇ । ,ವಿಯೆಂಬು । ದರಿತು—॥
ರಾಕ್ಷಸಾ । ರಿಯ ಕೂಡೆ । ಕಲಹ ಬೇ । ಡೆಂದರು ।
ಪೇಕ್ಷಿಸಿ ! ಕಳೆದ ವಾ । ಕ್ಯಗಳ — ॥ ೫೨ ॥

ನಗರವ । ಸುಟ್ಟಂಥ । ಮೊಗವುಳ್ಳ । ಕಪಿಗಳು ।
ಅಗಣಿತ । ವಾಗಿ ಕೂ । ಡಿಹವು — ॥

---

1 ಗೇನು ಸೆರೆಯಲ್ಲಿ (ಅ) ; ಗೆನ್ನ ಸೆರೆಯಾಗಿ (ಕಾ) 2 ಪಟಂ (ಕಾ) 3 ದು (ಅ)

ಜಗದ ಪ್ರೈ । ವದಕೊಡೆ । ಕಲಹ ಬೇ । ಡೆಂದರೆ ।
ಜಗಳಕ್ಕೊ । ಡ್ಡಿಹನು ಪಾ । ರ್ಬಲವ — ॥ ೫೩ ॥

ಇದಿರಾಗಿ । ರಾಮಬಾ । ಣದಲಿ ಸಾ । ವುದರಿಂದ ।
ಮೊದಲಾಗಿ । ಪೋಪೆ ರಾ । ಘವನ — ॥
ಪದಕಮ । ಲವ ಸೇರಿ । ಪಡೆದು ಕಾ । ರುಣ್ಯವ ।
ಬದುಕುವೆ । ಪಾಲಿಸ । ಪ್ಪಣೆಯ — ॥ ೫೪ ॥

ಕೈಕಸೆ—

ಇಂತೆಂಬ । ಮಗನ ಮಾ । ತಿಗೆ ಕೈಕ । ಸಾದೇವಿ ।
ಸಂತಾಪ । ಒಡಲೊಳು । ಪ್ಪಿರಿದು — ॥
ಅಂತರಂ । ಗದಿ ಬಂದು । ದಶಕಂಠ । ನಿದಿರಲಿ ।
ನಿಂತುಕೊಂ । ಡಬಲೆ ಪೇ । ಳಿದಳು — ॥ ೫೫ ॥

೧೭ ರಾಗ ಶಂಕರಾಭರಣ—ತ್ರಿವುಡೆ ತಾಳ ೨

ಕೈಕಸೆ—

ಕಂದ ನಿನಗೀ । ಕುಟಿಲತನಗಳು । ಬಂದುದೇಕೆ । —ಸೀತೆಯ ।
ತಂದು ಕುಲಕಪ । ಕೀರ್ತಿ ನಮ್ಮನು । ಹೊಂದಿದುದಕೆ ॥ ೫೬ ॥

ಬಿಟ್ಟುಕೊಡು ಜಾ । ನಕಿಯನೆಂದರೆ । ಸಿಟ್ಟು ಮಾಡಿ । —ತಮ್ಮನ ।
ಕಷ್ಟದಲಿ ಕಳು । ಹುವರೆ ಸಾನಿ । ದ್ದಷ್ಟು ದಿನಕೆ ॥ ೫೭ ॥

ಪರರ ಸತಿಯನು । ಬಯಸುವಾತನೆ । ಭಾಗ್ಯಹೀನ । —ದೈವದ ।
ಕರುಣೆ ತಪ್ಪದೆ । ಮಾಣದನಿತರ । ಹೊರದು ಭೂಮಿ ॥ ೫೮ ॥

ಬಾಹದಕೆ ಮೊದ । ಲಾಗಿ ಸೀತೆಯ । ಕಳುಹಿಕೊಟ್ಟು । —ರಾಮನ ।
ಸ್ನೇಹದಲಿ ಸುಖ । ಬಾಳು ತಮ್ಮನ । ಕೂಡಿಕೊಂಡು ॥ ೫೯ ॥

೧೮ ವಾರ್ಧಿಕಷಟ್ಪದಿ

ರಾವಣ—

ಕ್ಷಿತಿಜೆಯನು ಬಿಡಹೇಳ್ದ ಜನನಿಯಾ ನುಡಿಗೆ ಖಳ ।
ಖತಿಗೊಳಲು, ತನ್ನ ಪೂರ್ವದ ಮಂತ್ರಿಗಳು ಸಹಿತ ।
ರಥವೇರಿ ಮುಂದಪ್ಪ ಕಾರಣಂಗಳ ತಿಳಿದು ವರವಿಭೀಷಣದೇವನು ॥

ವಿಭೀಷಣ—

ರಥವಿಡಿದು ಭಾನುಮಾರ್ಗವನಡರುತಗ್ರಜನ।
ಜೊತೆಯು ಬಿಡಲಾರದಣ್ಣನ ದೂರದಿಂ ಕರೆದು।
ಅತಿವಿವೇಕದ ಮಾತ ಕಡೆಗೊಂದನೆಂಬೆ ಕೋಪಿತನಾದಡಾಗಲೆಂದ ॥ ೬೦ ॥

೧೯ ರಾಗ ಸೌರಾಷ್ಟ—ಅಷ್ಟತಾಳ ೧

ವಿಭೀಷಣ—

ಕಂಡದ್ದ । ನುಡಿದರೆ । ಕೋಪ ವೆ । ಗ್ಗಳಿಸುವ ।
,ದಣ್ಣ । ದೇ — । ವ — । — ತನ್ನ।
ಮಂಡೆ ಘು । ಟ್ಯಾದರೆ । ಮರಕೆ ಜೆ । ಪ್ಪುವದುಂಟೆ ।
,ಅಣ್ಣ । ದೇ—। ವ— ॥ ೬೧ ॥

ರೋಗಿಗೌ । ಷಧ ಪಥ್ಯ । ವಾಗಿ ತೋ । ರುವದುಂಟೆ[1] ।
,ಅಣ್ಣ । ದೇ—। ವ—।—ನಿನ ।
ಗೀಗೆನ್ನ ! ನುಡಿ ವಿಷ । ವಾಗಿ ಸಂ । ಭವಿಸಿತೆ ।
,ಅಣ್ಣ । ದೇ—। ವ— ॥ ೬೨ ॥

ಎಚ್ಚರಿ । ತಿರುವರೆ । ಸಮಯ ಬಂ । ದೊದಗಿದೆ ।
,ಅಣ್ಣ । ದೇ—। ವ—।—ಇಂಥ ।
ಹುಚ್ಚುಬು । ದ್ಧಿಯಲಿ ನೀ । ಸಂದು ಶಾ । ಕೆಡಬೇಡ ।
,ಅಣ್ಣ । ದೇ—। ವ— ॥ ೬೩ ॥

ಅಪ್ಪಡೆ । ನಿನಗೆ ನಾ । ಚಿಕೆ ಯೇನ । ಗರುಹಯ್ಯ ।
,ಅಣ್ಣ । ದೇ—। ವ—।—ನಾ ಕೊಂ ।
ಡೊಪ್ಪಿಸಿ । ಬರುವೆ ರಾ । ಮನಿಗೆ ಜಾ । ನಕಿಯನ್ನು ।
,ಅಣ್ಣ । ದೇ—। ವ— ॥ ೬೪ ॥

ಧೂರ್ತರ । ಮತ ನಿನ । ಗಾಯ್ತೆಷ್ಟ । ಪೇಳ್ದರೂ ।
,ಅಣ್ಣ । ದೇ—। ವ—।— ಪುರು ।

---

1 ಗೆ ಮದ್ದು ಬಾಯಿಗೆ ಸೊಗಸಪ್ಪುದೆ (ಶಾ)

,ಷಾರ್ಥವಿ | ವಿಲ್ಲದೆ ಪಂ, | ಶಕೆ ನೀರ | ಕೊಡಿಸಿದೆ |
,ಅಣ್ಣ | ದೇ— | ವ— || ೬೫ ||

,ದಾಶರ | ಥಿಯ ಕೂಡೆ | ಕಲಹ ಬೇ | ಡೆಂದರೆ |
,ಅಣ್ಣ | ದೇ—| ವ—|—ವಿ |
ನಾಶಕಾ | ಲಕೆ ಬುದ್ಧಿ | ವಿಪರೀತ | ವಾಯಿತೆ |
,ಅಣ್ಣ | ದೇ—| ವ— || ೬೬ ||

ಲೇಸು ಬಾ | ರದು ನಿನ | ಗಿದರಿಂದ | ತಿಳಿದುಕೊ |
,ಅಣ್ಣ | ದೇ—| ವ—|—ಬೇಡ |
ನಾ ಸಾ, | ರಿದೆ ಗಂಟ | ಕಟ್ಟಿಕೊ | ಸೆರಗಿಲಿ |
,ಅಣ್ಣ | ದೇ—| ವ— || ೬೭ ||

೨೦ ವಾರ್ಧಿಕಷಟ್ಪದಿ

ವಿಭೀಷಣ—

ಕೂಗಿ ಗಗನದೊಳುನಿಂದಗ್ರಜಗೆ ನೀತಿಯಂ |
[1]ರಾ[1]ಗದಲಿ ಪೇಳೆ ಖಳನಾಜ್ಞೆಯಿಂ ಪಟುಭಟರು |
ತಾಗಿದರು ಖಡ್ಗ ತೋಮರ ಪರಶು ಕಣೆಯು ಕಂಪಣದಸ್ತ್ರಶಸ್ತ್ರದಿಂದ ||

(ವಿಭೀಷಣನನ್ನು ಬೆರಸಿಕೊಂಡು ಎಲ್ಲರೂ ನಿಷ್ಕ್ರಮಿಸುತ್ತಾರೆ)

(ರಾಮಲಕ್ಷ್ಮಣರ ಹಾಗೂ ಕಪಿಗಳ ಪ್ರವೇಶ)

ಭಾಗವತಜನಪರುಷ ಬಲುಭಟರ ನುಗ್ಗರೆದು |
ಸಾಗರವನುತ್ತರಿಸಿ ಕಪಿಸೈನ್ಯವಂ ಕಂಡು |
ರಾಘವ ಪರಾಕು ಜಯ ಚಿತ್ತಾವಧಾನವೆಂಬಾಗ ರಥವಂ ಕಂಡರು || ೬೮ ||

೨೧ ರಾಗ ಕಾಂಭೋಜಿ—ಜಂಪೆತಾಳ ೧ ಮತ್ತು ೨

ಸುಗ್ರೀವ—

ಅರಿವನು |ಗಗನದಲಿ | ರಥದಿಂದ | [2]ಕೈಮುಗಿದು[2] |
[3]ನಾರಾಯ | ಣಾ ಯೆಂ[3]ಬ | ಶರಣ—||

---

1 ಬೇ (ಕಾ) 2 ನುತಿಗೈವ (ಅ) 3 ಶ್ರೀರಾಮ ಶರಣೆಂ (ಕಾ, ಅ)

ಮಾರುತನ | ಸುತ ಹೋಗಿ | ತಿಳಿದುಬಾ | ರೆಂದೆನುತ |
ವೀರ ಸು | ಗ್ರೀವ ಕಳು | ಹಿದನು— || ೬೯ ||

ಹನುಮಂತ—

ಬಂದು ಮಾ | ತಾಡಿಸಿದ | ನಾ ವಿಭೀ | ಷಣನ ದಶ |
ಕಂಧರನ | ಕಲಹಕಾ | ರಣವ ||
ಹೊಂದಿಕೆಯ | ತಿಳಿದು ರಘು | ಪತಿಗೆ ಸೂ | ಚನೆಗೈಯ |
ಲಂದು ಪೊಡ | ಮಡುತ ನಡೆ | ತಂದ— || ೭೦ ||

೨೨ ರಾಗ ಭೈರವಿ—ತ್ರಿವುಡೆತಾಳ ೨

ವಿಭೀಷಣ—

ರಾಮು ರಾಮಾ | ರಾಮು ಸೀತಾ— || ಪಲ್ಲವಿ ||

ರಾಮ ರವಿಕುಲ | ಸೋಮ ಜಗದಭಿ |
ರಾಮ ನೀರದ | ಶ್ಯಾಮ ರಘುವರ |
ಕಾಮಪಿತ ಕಮ | ಲಾಕ್ಷ ಸಂಗರ |
ಭೀಮ ಬಹುನಿ | ಸ್ಸೀಮ ದಶರಥ || ಅನು ಪಲ್ಲವಿ ||

ವೀರವಿತರಣ | ವಿಜಯ[1]ಘನಭೋಷಿಂ |
ಕಾರ ಮಣಿ[1]ಕೇ | ಯೂರಕಂಕಣ |
ಹಾರ ಶರಧಿಗ | ಭೀರ ಖಳಸಂ |
ಹಾರ ಮತಿವಿ | ಸ್ತಾರ ನತಮಂ |
ದಾರ ಶಾಸ್ತ್ರವಿ | ಚಾರ ಧನುರ್ಗೋ |
ದ್ಧಾರ ನಿಗಮವಿ | ದೂರ[2]ಸಾಧುಮ |
ನೋರಥಾರ್ಥಾ | ಧಾರ ಶುಭದಯ |
ಸಾರ ಪಾರಾ | ವಾರ ತಾರಕ[2] || ೭೧ ||

ತಂದೆಯಾಡಿದ | ಮಾತಿಗೋಸ್ಕರ |
ಬಂದೆ ಪಂಚವ | ಟಿಪ್ರದೇಶದಿ |

1 ಸದ್ಗುಣ ಸಾರವರ (ಅ) 2 ಸತ್ವವಿ | ಚಾರ ಶುಭಿದಯ | ಸಾರಕರುಣಾ |
ಪಾರ ಶ್ರೀ ರಘು (ಅ)

ನಿಂದೆ ಖರದೂ । ಷಣರ ರಣದಲಿ ।
ಕೊಂದೆ ಮಾಯಾ । ಹರಿಣವನು ಎಸೆ ।
ದಂದೆ ಸೀತೆಯ । ನೊಯ್ದ ರಾವಣ ।
ನೆಂದು ಬಿನ್ನೈ । ಸಿದ ಜಟಾಯುವ ।
ನಂದು ಕಾಯ್ದ ಮ । ಹಾತ್ಮನಾದರೆ ।
ತಂದೆ ಸಲಹೊ ಪ । ರಾಕು ಜಯಜಯ || ೭೨ ||

೨೩ ಭಾಮಿನಿಷಟ್ಪದಿ

ವಿಭೀಷಣ—

ಫಣಿಶಯನ ಪರಮಾತ್ಮ ಮಾಧವ
ತ್ರಿಣಯಸಖ[1]ಜಗದಾದಿ[1]ರಕ್ಷಕ
ಪ್ರಣವರೂಪ ಪರೇಶ ನಾರಾಯಣ ನಮೋಯೆಂದು ||
ಮಣಿಯುತ್ತೈತಹ ಮಂತ್ರಿಗಳಸಹ
ವನಜನಾಭನು ಕಾಣುತಲೆ ಲ
ಕ್ಷ್ಮಣನ ನೋಡಲು ಕರವ ಮುಗಿದಾ ಹನುಮನಿಂತೆಂದ | ೭೩ ||

೨೪ ರಾಗ ಎರುಕಲ ಕಾಂಭೋಜಿ—ಅಷ್ಟತಾಳ ೧

ಹನುಮಂತ—

ದೇವ ಚಿ । ತ್ತೈ[2]ಸಯ್ಯ । ಬಂದ ರಾ । ಕ್ಷಸ[2]ನೀತ ।
ರಾವಣ । ಸಹಜಾ, । ತ—ಸ । ಜ್ಜನರೊಳು ।
ಕೋವಿದಾ । ತನು ಪ್ರಖ್ಯಾ । ತ— || ೭೪ ||

ಇಂದ್ರಜಿ । ತನು ಕಟ್ಟಿ । ತಂದಾಗ । ಳಿವನ ಮಾ ।
ತಿಂದ ಬಿ । ಟ್ಟರು ಎನ್ನ । ಸ—ಬ । ಲ್ಲವನೀತ ।
ಮುಂದಹ । ಕಾರ್ಯವ । ನು— || ೭೫ ||

ಸೀತೆಯ । ಬಿಡುಯೆಂಬ । ಮಾತ ಪೇ । ಳಿದನೆಂದು ।
ಈತನ । ಜರೆದನಂ । ತೆ—ಪ । ಟ್ಟಣದಿಂದ ।
ಆತ ನೂ । ಕಿಸಿದನಂ । ತೆ— || ೭೬ ||

---

1 ತ್ರೈಜಗದ (ಅ) 2 ಸುಸಾತ್ವಿಕ ಸಜ್ಜನ (ಅ)

ಕಾರ್ಯಗ | ಳೆಲ್ಲವ | ತಿಳಿದು ಮುಂ |,ದೆ ಬಪ್ಪ |
ಮಾರಿಗೆ | ಬೆದರಿಕೊಂ | ಡು—ಅ | ನ್ಯಾಯಕೆ |
ಸೇರದಿ | ಲ್ಲಿಗೆ ಬಂದ | ನು—||
ಚಾರುಪ | ದಾಂಬುಜ | ಸೇರಿ ಬ | ದುಕಬಂದ |
ವೀರ ವಿ | ಭೀಷಣ | ನು— || ೭೭ ||

೨೫ ರಾಗ ಬೇಗಡೆ—ಅಷ್ಟತಾಳ ೨

ಸುಗ್ರೀವ—

ನೆಚ್ಚಬಾ |, ರದೀತ | ನಂತರಂ | ಗವ ಕೇಳಿ |
ಆಶ್ಚರ್ಯ | ವಾಯಿತು | ನಮಗೆಲ್ಲ—||
ಹುಚ್ಚುಮಾ | ತಣ್ಣ ತ | ಮ್ಮಂದ್ಯರು | ಎಂಬಂಥ |
ವಾತ್ಸಲ್ಯ | ವನು ಬಿಟ್ಟು | ವೈರತ್ವ | ವೆಂಬುದ || ೭೮ ||

ದೇವೇಂದ್ರ | ಮೊದಲಾದ | ದೇವತೆ |,ಗಳು ನಿತ್ಯ |
ಸೇವೆಯು | ಮಾಡಿಕೊಂ | ಡಿಹರಂತೆ—
ಜೀವವೊಂ | ದೊಡಲೆರ | ಡೆಂಬ ತ | ನ್ನಗ್ರಜ |
ರಾವಣೇ | ಶನ ಸೌಭಾ | ಗ್ಯವ ಬಿಟ್ಟು | ಬಂದುದ || ೭೯ ||

ತಂದೆಯೊ |, ಬ್ಬತಾಯೊ | ಬ್ಬಳಿಗೆ ಪು | ಟ್ಟದ ಮೇಲೆ |
ಬಂದು ವೈ | ರಗಳಲ್ಲಿ | ಬಾಳ್ವದು—||
ಹೊಂದಿಕೆ ! ಹೊಲಬಿನ | ಮಾತಲ್ಲ | ಹೊಸಪರಿ |
ಎಂದಿನ | ಸುತ ವಾಯು ! ನಂದನ | ಗೆನಲೆಂದ || ೮೦ ||

ಹನುಮಂತ—

ಹಿಂದುದ್ಯಾ |, ನದಿಂದ | ಹಿಡಿದು ಕ | ಟ್ಟೈಳಕೊಂಡು |
ಬಂದೆನ್ನ | ಸಭೆಯಲ್ಲಿ | ಕೊಲುವಾಗ—||
[1]ಬಂದು ಸ | ಜ್ಜನಮಾ, | ರ್ಗದ ಮಾತಾ | ಡಿದನೀತ[1] |
ನೆಂದಡಾ | ಹನುಮನ | ನುಡಿಗೊಡಂ | ಬಡೆ ರಾಮ || ೮೧ ||

---

1 ಬಂದಾತ | ಸಜ್ಜನ ಮಾರ್ಗವ | ಪೇಳಿದ (ಅ)

ರಾಗ ಘಂಟಾರವ—ಜಂಪೆತಾಳ ೨

ರಾಮು—

ಕಪಿರಾಯ | ಕೇಳು ಕೈ | ಮುಗಿದು ಮರೆ | ಹೊಕ್ಕವರು |
ಕಪಟದವ | ರಾದರೂ | ಕಾವುದೇ | ಬಿರುದು || ೮೨ ||

ಜನನಿಯೊಂ | ದಾದರೆಯು | ಮನಸಿನಂ | ತರಬೇರೆ |
ಕನಕವೊಂ | ದರಲಿ ಕಾಂ | ಚನದಿ[1] ಹಲ | ವ್ಯೆಸೆ[1] || ೮೩ ||

ಏಕವ್ಯ | ಕ್ತಿಂಡದೊಳ | ನೇಕ ಪಾ | ತ್ರೆಗಳಹವು |
ಲೋಕೇಶ | ಬರೆದ ಲಿ[2]ಪಿ | ತಾ ಕಡಿಮೆ | ಯಹುದೆ[2] || ೮೪ ||

ಪ್ರಾರಬ್ಧ | ಶೇಷ[3]ವೆ | ಯ್ಸೇರಿದಂ | ತಾಹುದಕೆ[3] |
ಬೇರೇಕೆ | ನಿನ್ನಣ್ಣ | ವಾಲಿಯೇ | ಸಾಕ್ಷಿ || ೮೫ ||

೨೬ ವಾರ್ಧಿಕಷಟ್ಪದಿ

ರಾಮು—

ಶಿರವ ಪಿಡಿದೆತ್ತಿ ಪತಿಕರಿಸಿ ಲಂಕಾಪುರದ |
ಅರಸ ರಾವಣನಿಂದ ಮೇಲೀತನೆಂದು ಸ |
ರ್ವರ ಮುಂದೆ ಪಟ್ಟಾಭಿಷೇಕಮಂ ಮಾಡಿಸಿದ ವರವಿಭೀಷಣದೇವಗೆ ||
ಸುರರ ದುಂದುಭಿ ಮೊಳಗಿತಾಗ ಜಯಜಯವೆಂದು |
ಸುರಿದರಂಬರದಿಂದ ಪೂಮಳೆಯ, [4]ರಾಮು ಸಾ |
ಗರದ[4] ತಡಿಯಲಿ ನಿಂದು [5]ಸಕಲಕಪಿನಾಯಕರ ಕರೆದಾಗಳಿಂ[5]ತೆಂದನು || ೮೬ ||

೨೭ ರಾಗ ಸೌರಾಷ್ಟ್ರ—ಅಷ್ಟತಾಳ ೧

ರಾಮು—

ಕಂಡಿರೆ | ಶರಧಿಯು | ಗಂಭೀರ | ತನವನು |
,ಕಂಡಿ | ರೇ— | ನ್ನೆ— | —ನಭೋ ||
ಮಂಡಲ | ಪರ್ಯಂತ | ತುಡುಕುವ | ತೆರೆಗಳ |
,ಕಂಡಿ | ರೇ— | ನ್ನೆ— || ೮೭ ||

---

1 ಪೊಡವೆ ಹಲವು (ಅ) 2 ಖಿತಕೆ ಕಡಿಮೆಯುಂಟೇ, (ಅ)
3 ಮತಿಸೇರಿದಂತೊದಗುವುದು (ಕಾ) 4 ಶ್ರೀರಾಮು ಶರಧಿ (ಅ)
5 ಮನದಿ ಬಲು ಚಿಂತಿಸುತ ಕಪಿವರರೊ (ಅ)

ಘೋರೆಂಬ | ನಾದ ಘೋಂ | ಕಾರ.ನೀ | ರ್ಸೂಳಿಗಳ |
,ಕಂಡಿ | ರೇ—| ನೈ— | —ಮದ ||
ವಾರಣ | ದಂ[1]ತಿಹ | ಮಕರನಿ | ಕರವನು[1] |
,ಕಂಡಿ | ರೇ—| ನೈ— || ೮೮ ||

ಪಂಕ್ತಿ ಪಂ | ಕ್ತಿ[2]ಯಲಿ ಪ | ರ್ವತದಂಥ | ಮಿಾನ್ಗಳ[2] |
,ಕಂಡಿ | ರೇ—| ನೈ—| —ಬಲ ||
ವಂತವಾ | ಗಿರುವಂಥ | ತೆರೆಗಳ | ಬ್ಬರಗಳ |
,ಕಂಡಿ | ರೇ—| ನೈ— || ೮೯ ||

ಎಂತು ದಾ | ಟುವದೆಂದು | ಎಮಗೆ ತಿ | ಳಿಯದೊಂದು |
,ಕಂಡಿ | ರೇ—| ನೈ—| —ಗೌರೀ ||
ಕಾಂತನೊ | ಬ್ಬನೆ ಬಲ್ಲ | ಅಂತರಂ | ಗವನೆಲ್ಲ |
,ಕಂಡಿ | ರೇ—| ನೈ— || ೯೦ ||

೨೮ ಚರಿತೆ–ರಾಗ ಪಂತುವರಾಳಿ—ರೂಪಕತಾಳ ೨

ಸುಗ್ರೀವ—

ದಿನಕರ | ಕುಲಜಾತ | ನಿಂತೆಂದ | ಮಾತಿಗೆ |
ದಿನಕರ | ತನುಜ ಬೊ | ಬ್ಬಿರಿದ—||
ವನಧಿಯು | ಕಡಿದು ದಾ | ರಿಯ ಮಾಳ್ಪ | ಲಂಕೆಗೆಂ |
ದೆನುತ ಕ | ಣ್ಣಲಿ ಕಿಡಿ | ಗರೆದ— || ೯೧ ||

ನೀಲ—

ಸೀಳುವ | ದೇತಕಂ | ಬುಧಿಯನ್ನು | ಲಂಕೆಗೆ |
ಪಾಳೆಯ | ನಡೆವದಿ | ನ್ನೇಕೆ—||
ಬಾಲವ | ಕಳುಹಿ ರಾ| ವಣನ[3]ಕ | ಟ್ಟೆಳೆತಪ್ಪ |
ಊಳಿಗ | ವೆನಗೆಂದ | ನೀಲ[3]— || ೯೨ ||

---

1 ತೆ ಮುಂದ್ಬರಿದು ಘೋರ್ಗರೆವುದ (ಅ)
2 ಗಳಿಂದ ಪಾರ್ವ ಮಿಾನುಗಳನ್ನು (ಅ); ಗಳ ಪರ್ವಗಳ ಮಿಾನುಗಳನು (ಕಾ)
3 ತರುವೆನೆಂದು ನೀಲ ಕೈಮುಗಿದ ರಾಮುನಿಗೆ (ಅ)

ಗವಾಕ್ಷ—

ಎಳೆದು ತ | ರುವುದೇನು | ದೊಡ್ಡ[1]ತ್ತೈ | ದನುಜನ[1] |
ಬಲವೆಲ್ಲ | ಲಂಕೆಯ | ಸಹಿತ—||
ಇಳುಹುವೆ | ಕಣ್ಣ ಮುಂ | ದೆನುತ ಗ | ವಾಕ್ಷನಂ |
ದಿಳಿಯೆ ಸು | ಗ್ರೀವ ಬೋ | ಧಿಸಿದ— || ೯೩ ||

ಅಂಗದ—

ಪುರವೊಂದ | ತರುವುದು | ಹೆಚ್ಚೆ ಬ್ರ | ಹ್ಮಾಂಡಖ |
ರ್ಪರವನ್ನೇ | ತರುವೆನೀ | ಕ್ಷಣದಿ—||
ಹರಿಹರ | ಬ್ರಹ್ಮಾದಿ | ಗಳ ತಂದು | ಕಣ್ಣ ಮುಂ |
ದಿರಿಸುವೆ | ನೆಂದನಂ | ಗದನು— || ೯೪ ||

ರಾಮ—

ಜಾಂಬವಾ | ದಿಗಳು ಮಿ | ಕ್ಕವರೆಲ್ಲ | ರೊಂದೊಂದು |
ಸಂಭ್ರಮ | ಗಳ ಮಾತಾ | ಡಬರೆ—||
ಕುಂಭ | ಕರ್ಣನ ತಮ್ಮ | ನೀ ಹೇಳೆಂ | ದೆನಲು ಪ |
ದಾಂಬುಜ | ಕೆರಗುತಿಂ | ತೆಂದ— || ೯೫ ||

೨೯ ರಾಗ ಸುರಟಿ—ಏಕತಾಳ ೩

ವಿಭೀಷಣ—

ಸರ್ವೋ | ತ್ತಮ ನೀ | ನು—ಪ್ರ | ಪಂಚವ |
ನರಿಯದ | ಬಗೆ ಯೋ | ನು— || ಪಲ್ಲವಿ ||

ಮಾಡುವ | ತಪಗಳ | ನು— ಸ | ಮುದ್ರನ |
ಬೇಡುವ | ದಾರಿಯ | ನು— ||
ನೋಡುವ | ಗುಣಗಳ | ನು— ನ | ಮ್ಮನಸಡ್ಡೆ |
ಮಾ[2]ಡುವ[2] | ಪರಿಗಳ | ನು— || ೯೬ ||

ಉಗುರಲಿ | ಸೀಳ್ವುದ | ಕೆ—| ಕೊಡಲಿಯ |
ತೆಗೆದುಕೊ | ಳ್ಳುವದೇ | ಕೆ— ||
ಮಿಗುವರಿ | ದರೆ ವರು | ಣ— ನೋ | ಡುವನೇಲಾ |
ತಗೆ ಮಾ | ಡುವ ಶಿರ | ನ— || ೯೭ ||

---

1 ತೆ ರಾವಣ (ಕಾ)  2 ಡದ (ಕಾ)

### ೩೦ ರಾಗ ಪುನ್ನಾಗ (ತೋಡಿ) ವರಾಳಿ—ಏಕತಾಳ ೫

ಕಪಿಗಳು—

ಶರಣ । ನೆಂದ । ಮಾತ । ಕೇಳಿ । ಸರಿ ಯೆಂ । ದರವ । ರೆಲ್ಲ ।
ಶರಧಿ । ರಾಜ । ನೊಡನೆ । ಬಟ್ಟೆ। ಕೇಳ್ವ। ದೆಂಬ । ಸೊಲ್ಲ ॥ ಪಲ್ಲವಿ ॥

ಬಂದು । ಶೋಧಿ । ಸಿ ಸು । ಸ್ಥಳವ । ವಿಂದು । ಮಡಿಯು । ನುಟ್ಟು।
ಚಂದ । ದಿಂದ । ಹಣೆಗೆ । ಗೋಪೀ । ಚಂದ । ನವ । ನಿಟ್ಟು ॥
ಒಂದೊಂ । ದು ತುಳ । ಸಿಯು । ಸರನ । ನಂದು । ಕೊರಳಿ । ಗಿಟ್ಟು।
ಸಿಂಧು । ರಾಜ । ಕರುಣಿ । ಸು ಶರ । ಹೊಂದು । ಪೊಡ । ಮಟ್ಟು ॥ ೯೮ ॥

ಅಷ್ಟ । ಮದಂ । ಗಳ । ಬಾಯು । ಕಟ್ಟಿ । ಮನವ । ಸೆಳೆದು।
ಕಷ್ಟ । ವಾ[1]ದಾ । ರ್ವ[1]ರ । ಸೆರೆಯೊ । ಳಿಟ್ಟು । [2]ಬಾಯು[2] । ಕಳೆದು।
[3]ಶ್ರೇಷ್ಠ । ನಾದ । ಸೂರ್ಯ । ನೆಡೆಗೆ । ಮುಟ್ಟು । ವಂತೆ । ನಲಿದು[3]
. . . . . . . . . . . . . ॥ ೯೯ ॥

### ೩೧ ರಾಗ ಸೌರಾಷ್ಟ್ರ—ತ್ರಿವುಡೆತಾಳ ೨

ಶುಕ—

ಕುಶನೆ ಕೇಳೊಲಿ । ದಿತ್ತಲಾರಾ ।
ಕ್ಷಸಶಿರೋಮಣಿ । ಕಳುಹೆ ಬೇಹಿಗೆ ।
ಕುಶಲದಲಿ ನಡೆ । ತಂದು ಪಾಳ್ಯದೊ । ಳೊಸೆಯುತಿರ್ದು ॥ ೧೦೦ ॥

ಹಸನವೆಲ್ಲವ । ತಿಳಿದು ಬಳಿಕಾ ।
ಗಸಕೆ ಚಿಗಿ[4]ಯುವ । ಶುಕನ[4] ಪಿಡಿದಾ ।
ಹಸುರೆರಂಕೆಯ । ಮುರಿದು ಸೆರೆಯಲಿ । ಜಿಸುಡಿಸಿದರು ॥ ೧೦೧ ॥

ರಾಮ—

ಅತ್ರರಾಘವ । ನಾಲ್ಕುದಿನ ತಪ ।
[5]ಚಿತ್ತದಲಿ ಧ್ಯಾ । ನಿಸೆ ಸಮುದ್ರನು[5] ।
ಮತ್ತನಾಗಿರೆ । ರೋಷವ[6]ನ[6]ತಲೆ । ವೆತ್ತಿತಾಗ — ॥ ೧೦೨ ॥

---

1 ದೈವ (ಅ)  2 ಮುಂದೆ (ಅ)
3 ಇಷ್ಟವಾದ ಮೂವರಡೆಯು । ಕಟ್ಟಿ ಹೊಳ ಹೊಳೆದು (ಅ)
4 ಯಲು ಹನುಮ (ಅ)  5 ವೆತ್ತಿರಲ್ಕೆ ಸಮುದ್ರರಾಜನು (ಅ)  6 ಯ (ಅ)

೩೨ ವಾರ್ಧಿಕಷಟ್ಪದಿ

ಸೆಳೆದು ಲಕ್ಷ್ಮಣನ ಕೈಯಿಂದ ಧನುಶರವದಕೆ ।
ಪ್ರಳಯಕಾ[1]ಲದ ರುದ್ರನಂತೆ ಕ್ರೋಧಾ[1]ಗ್ನಿಯಿಂ ।
[2]ಒಲಿದು ವಾಹಿಸಿ ವರುಣನಿರವ ಕಳಿಯೆನಲು[2] ತಲ್ಲಣಿಸಿತೀರೇಳು ಲೋಕ— ॥
ಜಲನಿಧಿಯು ಬತ್ತಿತಲ್ಲಿರುವ ಜಂತುಗಳು ತಳ ।
ಮಳಿಸಿದವು ರತ್ನಗಳು ಕರಗಿದುರಿಹಾರಿದವು ।
ಭರದಿ ವರುಣನ ತಗಲಿ[3]ದಂಬುಜಾಕ್ಷಿಯರರಿತು ಬಲುಬೇಗ[2] ನಡೆತಂದರು— ॥ ೧೦೩ ॥

(ವರುಣನ ಪತ್ನಿಯರ ಪ್ರವೇಶ)

೩೩ ರಾಗ ಘಂಟಾರವ—ಅಷ್ಟತಾಳ ೨

ವರುಣಸ್ತ್ರೀಯರು—

ಚಂದವೇ ।, ರಾಮ । ಚಂದ್ರ ಅ । ಯ್ಯಯ್ಯೋ ।
ಇಂದು ಕೆಂಡ, । ದಿಂದ ಗಂಡ, । ಬೆಂದ ಬೇಗ ನಿ । ವಾರಿಸೋ— ॥ ೧೦೪ ॥

ಪಾಲಿಸೋ ।, ಕರ್ಣ । ದೋಲೆ ಮೂ । ಗುತಿಯನ್ನು ।
ಕೋಲ ಕಿಚ್ಚು ಛ । ಡಾಳ ಹೆಚ್ಚು, । ಆಲಯಗಳು, । ಸುಡುತಿವೆ— ॥ ೧೦೫ ॥

ತಂದೆಯು ।, ಲ್ಲವೆ । ಎಮಗೆ ನೀ । ಮನ್ನಿಸಿ ।
ಮಂದಮತಿಯಾ । ದೆಮ್ಮ ಪತಿಯು ಯಿ । ದೊಂದು ತಪ್ಪನು । ಪಾಲಿಸೋ—॥ ೧೦೬ ॥

ಮಂಗಳಾ ।, ಕರ । ಮಾಧವ । ಮಹಿಮ ಭು ।
ಜಂಗಶಾಯಿಯೊ । ರಂಗದೇಹೀ । ತುಂಗಕರುಣಾ । ಪಾಂಗನೇ— ॥ ೧೦೭ ॥

ಗಂಗೆ ಗೌ ।, ತಮಿ । ಗಂಡಕಿ । ಕಾವೇರಿ ।
ತುಂಗ ಭದ್ರೇ । ಮಂಗಳಾದ್ರ್ರೇ । ಕಂಗಳಿಂದಭಿ । ವಂದಿಸೇ— ॥ ೧೦೮ ॥

ರಾಮ ರಾ ।, ಜೀವ । ನೇತ್ರ ಸ । ದಾನಂದ ।
ಸೋಮ ಸದ್ಗುಣ । ಧಾಮ ನಿರುಪಮ । ಕಾಮಪಿತ ಕರು । ಣಾಕರ— ॥ ೧೦೯ ॥

---

1 ಕ್ಕಿಂತಲಧಿಕರೋಷಾ (ಅ) 2 ತಳೆದುವರುಣಗೆ ತೀಕ್ಷ್ಣ ಶರವ ಮೋಳವಿಸೆ (ಅ)
3 ತುಂಬು ವರುಣಾಂಗನೆಯರಳಲುತ್ತ (ಅ)

೩೪ ಭಾಮಿನಿಷಟ್ಪದಿ

ಮಡದಿಯರು ಬಾಯ್ಬಿಡುತ ಹರಿಸದ ।
ದೆಡೆಗೆ ನಮಿಸಿ ಸಮುದ್ರರಾಜನ ।
ತೊಡರ ಪರಿಹರಿಸೆಂದು ಕಪಿನಾಯಕರು ಮುಂತಾಗಿ ॥

ರಾಮ—

ಒಡನೊಡನೆ ಕೈಮುಗಿಯೆ ಬಾಣದೊ ।
ಳಡರಿದುರಿ ತಗ್ಗಿಸುತ ಮತ್ತಾ ।
ಕಡಲಧಿಪಗಭಯವನು ಕರುಣಿಸಿ ಕೊಡುವಡಿಂತೆಂದ ॥ ೧೧೦ ॥

೩೫ ರಾಗ ನವರೋಜು—ಏಕತಾಳ ೬

ರಾಮ—

ಪದುಮದಳಾಂ — । ಬಕಿಯರಿರ — । ಪತಿಭಕ್ತಿ — । ಯುಳ್ಳ ರಿರ — ॥
ವದನವ ನೋ— । ಡಲು ಪಾಪ— ಅದ । ಕಾಗಿ ಬಿ— । ಟ್ಟೆವು ಕೋಪ—॥೧೧೧॥

ತಾನೇ ಬಾ— । ರನು ಎಂದು— । ತಪಗಳ ಮಾ— । ಡಿದೆವಿಂದು — ॥
ಏನೇನಾ— । ದರು ವರುಣ— । ಗಿಲ್ಲದಾ— । ಯಿತು ಕರುಣ — ॥ ೧೧೨ ॥

ಕಾರಿಯವುಂ— । ಟಿಮಗವನ — । ತನ್ನಿ ರ—। ತ್ನಾಕರನ — ॥
ಮೋರೆಯ ನೋ— । ಡುವೆನೆನಲು — । ನಾರಿಯರಾ— । ಕ್ಷಣ ಬರಲು ॥ ೧೧೩ ॥

ವರುಣನ ಬೇ—। ಗದಿ ಕರೆದು—। ಚರಣವ ಕಾ—। ಣಿಸಲರಿದು—॥
ಇರಿಸಿದ ಕಾ—। ಣಿಕೆಗಳನು—। ಪರಿಪರಿ ರ—। ತುನಗಳನು— ॥ ೧೧೪ ॥*

(ವರುಣನು ಕಾಣಿಕೆ ಸಮೇತ ಪ್ರವೇಶಿಸುತ್ತಾನೆ)

---

*ರಾಗ ಸುರಟಿ—ಆದಿತಾಳ

ರಾಮ—

ದಾರಿಯ ಕೊಡು ನಮ । ಗೆ—ಲಂಕಾಪುರ । ದೂರಿಗೆ ನಡೆವುದಕೆ ।
ದಾನವ ರಾವಣ । ನು—। ಆತ ನಮ್ಮ । ಮಾನಗೊಂಡ ಬಗೆಗೆ ।
ಏನಾದರೂ ಕಡೆ । ಗೆ—ಪೋಗುವೆವೀ । ಸೇನೆ ಸಹಿತ ತಡಿಗೆ ॥
ಉಗಿದ ಬಾಣ ಬಿಡ । ಲು—ಯಾರಾದರೂ । ಪಗೆಗಳಿದ್ದರೆ ತೋರು ।
ಮುಗುಳು ನಗೆಯ ನಗು । ತ—ಸುಗ್ರೀವನ । ಮೊಗವೀಕ್ಷಿಸಿಕೊಳುತ ॥ (೪)

೩೬ ರಾಗ ಘಂಟಾರವ—ಜಂಪೆತಾಳ ೩

ರಾಮ—

ಸಾಗರನ | ಕೈವಿಡಿದು | ಸಾಕು ಬಳ | ಲಿಕೆಯೆಂದು |
ರಾಘವನು | ಮನ್ನಿಸಿದ | ನಾಗ ವಿನ | ಯದಲಿ || ೧೧೫ ||

ದಾರಿಯನು | ಕೊಡು ನಮಗೆ | ದಾಟಿ ಲಂ | ಕಾಪುರಕೆ |
ಸೇರಬೇ | ಕೆಮಗೆ ಕಪಿ | ಸೇನೆಸಹಿ | ತಾಗಿ || ೧೧೬ ||

ದಶಕಂಠ | ಗೂ ನಮಗು | ಧರಣಿಜೆಯ | ದೆಸೆಯಿಂದ |
ಕಸರಿಕೆಯು | ಕಲಹ ಬಂ | ದೊದಗಿಹುದು | ಮನಕೆ || ೧೧೭ ||

ತಪವ ಮಾ | ಡಿದೆವೀಗ | ಯೆಮ್ಮ ಕಾ | ರ್ಯಕೆ ಬೇಗ |
ಕಪಿಸೇನೆ | ದಾಟುವಂ | ತುಪಕರಿಸ | ಬೇಕು || ೧೧೮ ||

ಉಗಿದ ಬಾ | ಣವ ಬಿಡಲು | ಊರೊಳಾ | ರಾದರೂ |
ಹಗೆಗಳಿ | ದ್ದರೆ ತೋರು | ಹಳುವಿಲ್ಲ | ನಮಗೆ || ೧೧೯ ||

೩೭ ರಾಗ ಶಂಕರಾಭರಣ—ಅಷ್ಟತಾಳ ೧

ಸಮುದ್ರರಾಜ—

ರಾ—ಮ | ರಘುನಾಯ | ಕ—ಸ | ಜ್ಜನಭಕ್ತ |
ಸ್ತೋ—ಮ | ಶುಭದಾಯ | ಕ— ||
ಕಾ[1]ಮುಕ | ನಾದೆ,[1] | ನ್ನಪರಾಧ | ಶತಗಳ |
ನೀ ಮನ | ದೊಳಗಿಟ್ಟು | ಕೊಳದೆ ರ | ಕ್ಷಿಸಿದೆ— || ೧೨೦ ||

ಸೃಷ್ಟಿಯು | ಮನುಜರಿ | ಗೆ—ಆ | ಶ್ಚರ್ಯವ |
ಪುಟ್ಟಿಸು | ವ—ಬಗೆ | ಗೆ— ||
ಬೆಟ್ಟಬೆ | ಟ್ಟವ ತಂದು | ಕೊಡಲಿ ನ | ಳನ ಕೈಯು |
ಕಟ್ಟಿಸಿ | ಕೊಂಬೆ ಥ | ಟ್ಟನೆ ದಾ, | ಟಲಿ ಸೇನೆ || ೧೨೧ ||

ತೊಟ್ಟ ಬಾ | ಣವ ಬಿಡ | ಲು—ದ್ವೀ | ಪಾಂತದೊ |
ಳೊಟ್ಟಾಗಿ | ಬಲಿದಿಹ |ರು— ||

1 ಮುಪಿತನೆಯೆ (ಅ)

ಕುಟ್ಟಲಿ । ಬಾಣ ನಿ । ಶಾಟಕೋ । ಟಿಗಳನೆಂ ।
ಬಪ್ಪರೊ । ಳಗೆ ಸೆಳೆ । ದಿಟ್ಟನಾ । ಶರವನು ॥ ೧೨೨ ॥

೩೮ ಭಾಮಿನಿಷಟ್ಪದಿ

ಸಮುದ್ರರಾಜ—

[ಪ್ರತಿಯು ತೋರಿ ನಿಶಾಟಕುಲಸಂ ।
ತತಿಯು ಕೊಲಿಸಿಯೆ ರತುನಗಳ ರಘು ।
ಪತಿಗೆ ಕಾಣಿಕೆಯಿತ್ತು ಜಯಜಯವೆಂದು ಕೊಂಡಾಡಿ ॥
ಸ್ತುತಿಯು ಮಾಡುತ ನಳನ ಕೈಯಲಿ ।
ಪಥವ ಕೊಡುವೆನೆನುತ್ತ ತನ್ನಯು ।
ಸತಿಯರನು ಕರಕೊಂಡು ಸಾಗರ ನಡೆದ ನಿಜಗತಿಗೆ]* ॥ ೧೨೩ ॥

(ವರುಣನ ನಿಷ್ಕ್ರಮಣ)

೩೯ ಕಂದ

ರಾಮ—

ಶರಧಿಯು ಬಂಧಿಸಿರೆನುತಾ ।
[1]ಕರುಣಾಂಬುಧಿ ರಾಮಚಂದ್ರನಪ್ಪಣೆಗೊಡಲು ।

ನಳ—

ಸುರಪುರದಿಂದಾ ನಳನಂ ।
ತರಣಿಸುತಂ ಕರೆಸೆ, ಬಂದು ಪೊಡಮಡು[1]ತೆಂದಂ ॥ ೧೨೪ ॥

---

1 ತರಣಿಜನಿಂದಲೆ ತರಿಸಲ್ಕಾಗಳೆ ನಳನುಂ। ತ್ವರ್ಯದೊಳ್ಳೈತಂದಾ ರಘು। ವರನಂಘ್ರಿ
ಯೊಳೆರಗಲಪ್ಪುತವಗಿಂತೆಂದಂ ॥ (ಅ)

ರಾಗ ಭೈರವಿ—ಜಂಪೆತಾಳ

* ಶರಧಿಯನು । ಬಂಧಿಸಲು । ಬೇಕೆಂದು । ಶ್ರೀರಾಮು ।
ತರಣಿನಂ । ದನನಿಂದ । ಕರೆಸಿದನು । ನಳನ ॥
ನಳ ನಿನ್ನ । ಕೈಯಿಂದ । ಬಳಗೊಂಬು । ದೀ ಜಲಧಿ ।
ಛಲದಿಂದ । ತೋರು ಭುಜ । ಬಲಪರಾ । ಕ್ರಮವ ॥
ಎನೆ ಹಸಾ । ದವೆನುತ್ತ । ಹನುಮ ಹಾ । ರಿದ ಗಿರಿಯ ।
ಕೊನೆಬೆರಳಿ । ನಿಂದುಗಿದ । ಘನಬೇಗ । ದಿಂದ ॥
ಅಂಬುಧಿಯು । ನೆತ್ತಿಯೊಳ । ಗದನಿಳುಹಿ । ರಾಮಪಾ ।
ದಾಂಬುಜಕೆ । ಕೈಮುಗಿಯು । ತದರ ಬಂ । ಧಿಸಿದ ॥ (ಅ)

೪೦ ರಾಗ ಗೌಳೀಪಂತು—ಏಕತಾಳ ೪

ರಘುವೀ,ರ । ಪಾಹಿ ಪಾಹಿ । ಮಾಂ—ಶ್ರೀ । ರಾಮಚಂದ್ರ ॥ ಪಲ್ಲವಿ ॥

ಪುಂಡರೀಕ । ಲೋಚನ ಭೂ । ಮಂಡಲಾದಿ । ಸಂರಕ್ಷಣಾ ।
ಖಂಡಲಪೂ । ಜಿತ ಸುಪ್ರ । ಚಂಡಸಾಹ । ಸಾಗ್ರಗಣ್ಯ ॥ ೧೨೫ ॥

ಎನ್ನಿಂದಾಗು । ವಂಥ ಸೇವೆ । ಯನ್ನು ಕಟ್ಟು । ಮಾಡಿಸು ಪ್ರ ।
ಸನ್ನ ತ್ರೈಲೋ । ಕ್ಯಮೂರುತಿ । ಎನ್ನ ಪಾಲಿ । ಸೋ ವಿಶ್ವೇಶ ॥ ೧೨೬ ॥

೪೧ ರಾಗ ಗೌಳಮಲಹರಿ—ಅಷ್ಟತಾಳ ೧

ರಾಮ—

ನಳ ನಿನ್ನ । ಕೈಯಿಂದಾ । ಗಲಿ ಸೇತು ।— ।
ಒಳಗೊಂಬು । ದೀಗ ಸಾ । ಗರನೆಂದ । ಮಾತು— ॥ ಪಲ್ಲವಿ ॥

ಬೆಟ್ಟ ಬೆ । ಟ್ಟವ ತಂದು । ಕೊಟ್ಟರೆ । ಕಪಿಗಳು ।
ಕಟ್ಟಿಗೆ । ಹವಣಿಸಿ । ಚಂದದಿ । ನೀ ಕೈ, ।
ಮುಟ್ಟ ಬಂ । ಧಿಸಿದರೆ । ಮುಂದೆ ಲಂ । ಕೆಗೆ ದಾರಿ ।
ಕೊಟ್ಟೆನೆಂ । ದೆನುತ ಸಾ । ಗರನೆಂದ । ಮಾತು— ॥ ೧೨೭ ॥

ಹನುಮಂತ—

ವನಜಲೋ । ಚನನೆಂದ । ಮಾತ ಕೇ । ಳುತಲಂದಾ ।
ಹನುಮ ಹಾ । ರಿದ ಪರ್ವ । ತವನೊಂದ । ಕಿತ್ತು— ॥
ಕೊನೆಬೆರ । ಳಿಂದುರು । ಳಿಸಿದರೆ । ನಳ ತಂದು ।

ನಳ—

ವನಧಿಯೊ । ಳಿಟ್ಟು ರಾ । ಘವಗೆ ಕೈ । ಮುಗಿದ— ॥ ೧೨೮ ॥

೪೨ ಚರಿತೆ (ಸಾಂಗತ್ಯ)—ರೂಪಕತಾಳ ೩

ಸುರರು ಪೂ । ಮಳೆಗಳ । ಕರೆದರು । ರಾಮನ ।
ಚರಣದೆ । ಡೆಗೆ ನಮೋ । ಎಂದು— ॥
ಭರದಿಂದ । ಶತಬಲಿ । ಮತ್ತೊಂದು । ಗಿರಿತಂದು ।
ಶರಧಿಯ । ಲಿಟ್ಟು ಬೊ । ಬ್ಬಿರಿದ ॥ ೧೨೯ ॥

ನುಂಗಿತು । ತಿಮಿಯೆಂಬ । ಮೀನು ಪ । ರ್ವತವ ತಿ ।
ಮಿಂಗಿಲ । ನದರ ನುಂ । ಗಿದುದು ॥
ಸಂಗಡ । ತಿಮಿಯ ತಿ । ಮಿಂಗಿಲ । ಗಿರಿಸಹ ।
ನುಂಗಿತು । ಬಳಿಕೊಂದು । ಮಕರ ॥ ೧೩೦ ॥

ವೃಷಭ ಕೇ । ಸರಿ ಗಜ । ಗವಯು ಗ । ವಾಕ್ಷ ಪ ।
ನಸರು ಒಂ । ದೊಂದು ಪ । ರ್ವತವ ॥
ವಸುಧೆಯಿಂ । ದೆತ್ತಿ ಸ । ಮುದ್ರದೊ । ಳಡಲು ಭ ।
ಕ್ಷಿಸಿ ಬಾಯ । ಕಳೆಯೆ ಮೊ । ನುಗಳು ॥ ೧೩೧ ॥

ನೆಗಳು ನೀ । ರೊಳಗಿಪ್ಪ । ನೆಗಳು ನಾ । ಯಿಗಳು ಮೊ ।
ನುಗಳು ಕೋ । ಳಿಗಳು ಕೋ । ಣಗಳು ॥
ಬಗೆಬಗೆ । ಜೀವಜಂ । ತುಗಳೀ, । ಧ್ವನಿ ಕೇಳಿ ।
ಅಗಣಿತ । ವಾಗಿ ಕೂ । ಡಿದವು ॥ ೧೩೨ ॥

ದಡಸರಿ । ಯಂತ ಬಾ । ಯ್ಗಳೆದು ಚ । ಪ್ಪರಿಸುವ ।
ಬಿಡುಗಣ್ಣ । ಜಲ[1]ಚರಾ । ದಿಗಳ[1] ॥
ಕಡುಹಿನ । ಬ್ಬರಕಂಜಿ । ಸುಗ್ರೀವ । ನಜಸುತ।
ನೊಡನೆ ಪೇ । ಳಿದನೊಂದು । ಮಾತ ॥ ೧೩೩ ॥

೪೩ ದ್ವಿಪದಿ

ಸುಗ್ರೀವ—
ಕಂಡಿರೇ ಜಾಂಬವರು ಕಡುವಿಚಿತ್ರಗಳ ।
ತಂಡತಂಡದಿ ಗಿರಿಯ ತಿಂಬ ಮೀನುಗಳ ॥ ೧೩೪ ॥

ನೂತನವಿದೇನೆಂದು ನೀವು ಕಂಡುದನು ।
ಪ್ರೀತಿಯಿಂ ಪೇಳಿ ಮುಂದಣ ಕಾರ್ಯವನ್ನು ॥ ೧೩೫ ॥

ಸಾಧಿಸುವುದೆಂತೀಗ ಸೇತುಬಂಧನವ ।
ಹಾದಿಯನು ತೋರಿ ಹಿರಿಯರು ನೀವರಿವುದ ॥ ೧೩೬ ॥

ಎಂದ ಮಾತನು ಕೇಳಿ ಯೆಲ್ಲವರು ಕಡೆಗೆ ।
ಬಂದರಾ ನಳನೆಡೆಗೆ [2]ತರಣಿಜನ ನುಡಿಗೆ[2] ॥ ೧೩೭ ॥

---

1 ದ ಪ್ರಾಣಿಗಳು (ಅ); ದೃಷ್ಟಿಯಲ್ಲಿ (ಕಾ)
2 ಭಾಸ್ಕರಜ ಕೂಡಿ (ಅ)

೪೪ ರಾಗ ಕೇದಾರಗೌಳ—ಅಷ್ಟತಾಳ ೧

ನಳ—

ತಂದು ತಂ | ದೆಡಗಿದ | ಪರ್ವತ | ಗಳನೆಲ್ಲ |
ತಿಂದ ವಿೂ | ನುಗಳ ನೋ | ಡಿ— ||
ಬಂದನು | ನಳ ರಾಮು | ನೆಡೆಗೆ ಹೇ | ರಂಬನ |
ನಿಂದು ಪ್ರಾ | ರ್ಥಿಸಿದರೆ | ಲ್ಲ — || ೧೩೮ ||

ಸಕಲ ವಿ | ಘ್ನಗಳೆಲ್ಲ | ಪರಿಹರಿ | ಸಯ್ಯ ಮೂ |
ಷಿಕರೂಢ | ನೀನೆ ಯೆಂ | ದು — ||
ಭಕುತಿಯಿಂ | ದೆರಗಿ ಬೇ | ಡುವೆವು ನೀ | ರೊಳಗೆ ಕಂ |
ಟಕ ಬಾರ | ದಂತೆ ಕಾ | ಯೊ— || ೧೩೯ ||

೪೫ ಚರಿತೆ—ರೂಪಕತಾಳ ೩ (ರಾಗ ಸೌರಾಷ್ಟ್ರ)

ನಳ—

ಕಟ್ಟುವ | ಭಣಿತೆ ಇ | ದಲ್ಲ ಸ | ಮುದ್ರವ |
ಘಟ್ಯಾಗಿ | ಇರಬೇಕು | ಸೇತು— ||
ಕಟ್ಟಿನ | ವೊದಲಿಂದ ! ಬುಡವ ಶೋ | ಧಿಸಿಕೊಂಡು |
ಬಿಟ್ಟವ | ನಡಿಗಲ್ಲೊ | ಳಡಲಿ || ೧೪೦ ||

[1]ಶತಯೋಜ | ನಗಲ ವಿ | ಸ್ತೀರ್ಣಕ್ಕೆ | ಪಾಷಾಣ |
ತತಿಯಿಂದ | ಸೂತ್ರ ಸಂ | ಕಲೆಯ ||
ಜೊತೆಯಾಗಿ | ಭದ್ರಘ | ಟ್ಟಣೆ ಸೂಕ್ಷ್ಮ | ಕೆಲಸದ |
ವಿತಿಯಿಂದ | ನಡೆಯಲಿ | ಸೇತು || ೧೪೧ ||

ತರುವವ | ರಿವರು ತಂ | ದಿಡುಕಿದ | ಗಿರಿಗಳ |
ಕರಕೆತ್ತಿ | ಕೊಡುವವ | ರಿವರು ||
ಸರಪಣಿ | ಗಟ್ಟಣೆ | ಯುವರಿವ | ರೆಂದು ವಿ |
ಸ್ತರಿಸಿ ವಿಂ | ಗಡಿಸಿದನವರ[1] || ೧೪೨ ||

---

1 ದಶಯೋಜನಗಲದ | ವಿಸ್ತೀರ್ಣ ಪಾಷಾಣ | ವಿಸರವನೆಡೆಗೆಡೆ | ಗಿಟ್ಟು—!
ಕುಶಲದಿಂದುನ್ನತ | ಪರ್ವತಗಳನೆತ್ತಿ ! ರಿಸಲೆಂದು ನಳಗೆ ನೇ | ಮಿಸಿದ— ||
ಬೆಟ್ಟವ ತರುವವ | ರಿವರು ತಂದರೆ ಕೆಳ | ಗಿಟ್ಟು ನಳನ ಕರ | ದೊಳಗೆ— |
ಕೊಟ್ಟು ಬಂಧಿಸುವವ | ರಿವರೆಂದು ಸುಗ್ರೀವ | ಕಟ್ಟಳೆಗಳನು ಮಾ | ಡಿಸಿದ || (ಅ)

ವಿಭೀಷಣ—

ಖಳರಿಂದ । ತೊಡರಾಗ । ಬಾರದಂ । ತಾಜೆಯ ।
ಒಳಿಯಲಿ । ಟ್ಟರು ವಿಭೀ । ಷಣನ ॥
ಜಲಧಿಯ । ಮಥನಕ್ಕೆ । ನೂರ್ಮಡಿ । ಯಲಿ ಬೊಬ್ಬೆ ।
ಕಳೆದು ಕ । ಟ್ಟಿದರು ಸೇ । ತುವನು ॥ ೧೪೩ ॥

ಬಂಗಾಳ । ಗೌಳ ಗು । ಜ್ಜರಿಯಂಗ । ವಂಗ ಕ ।
ಳಿಂಗ ಕಾಂ । ಭೋಜ ದೇ । ಶಗಳ ॥
ಸಿಂಗಳ । ದ್ವೀಪದ್ವೀ । ಪಂಗಳ । ಲ್ಲಿಹ ಪರ್ವ ।
ತಂಗಳ । ತಂದಡ । ಕಿದರು ॥ ೧೪೪ ॥

ಒಂದರ । ಮೇಲೊಂದು । ತಂದು ತಂ । ದಿಡುವಾಗ ।
ಅಂದಾದ । ನೀರ ಗ । ರ್ಜನೆಗೆ ॥
[1]ಹಿಂದಿನ । ಶರಧಿಯ । ಮಥನಕೆ । ಇದು ಮಿಗಿ ।
ಲೆಂ[1]ದರಾ । ಕಾಶದಿ । ಸುರರು ॥ ೧೪೫ ॥

ಕೊಟ್ಟ ಪ । ರ್ವತಗಳ । ಕಟ್ಟಿಗೆ । [2]ಸೇರಿಸಿ[2] ।
ಥಟ್ಟನೆ । ಬರಬರ । ಲೆನುತ ॥
ಸಿಟ್ಟಿನ್ಮಾ । ಡುವ [3]ಬರ[3] । ಲಿಲ್ಲ ಬೇ । [4]ಗ ಎಂದಿ[4] ।
ನ್ನೆಷ್ಟರ । ಶೌರ್ಯನೊ । ನಳನು ॥ ೧೪೬ ॥

೪೬ ವಾರ್ಧಿಕಷಟ್ಪದಿ

ಅಂಗದ—

ಎನ್ನ ಮೇಲತಿ ಪ್ರೀತಿಯಿಂದ ಲಕ್ಷ್ಮಣನಂತೆ ।
ಮನ್ನಿಸುವ ಶ್ರೀರಾಮನದಕೆ ತನುವಿನೊಳು ಜೈ ।
ತನ್ಯವುಳ್ಳನಿತು ಸಾಹಸಪಡುವೆನೆಂದೆನುತ ಚಿಣ್ಣನಂಗದ ನಡೆದನು ॥
ಸಣ್ಣವರು ನಮಗಿದೇ ಸಾಕೆಂದು [5]ಕೈಲಾಸ ।
ವನ್ನು ಕೀಳುವ ಸಾಹಸವ ನೋಡಿ ಹರಗಿರಿಜೆ[5] ।
ಸನ್ನೆಗಳ ನೆರೆ ತಿಳಿದು [6]ಬಳಿಕ ಪುರಹರನು ಗಿರಿಜಾತೆಯೊಡನಿಂತೆಂದನು[6] ॥೧೪೭॥

1 ಇಂದ್ರಲೋಕಕೆ ಮುಟ್ಟ । ಲಾಗ ನೀರ್ವನಿಯು ಘೇಯೆಂ (ಅ)
2 ಹವಣಿಸಿ (ಕಾ) 3 ತರ (ಅ) 4 ಗೆಂಬನಿ (ಅ)
5 ನೋಡಿ ಮು । ಕ್ಕಣ್ಣನಿಹ ಕೈಲಾಸ ಪರ್ವತವ ಪಿಡಿದಲುಗೆ (ಅ)
6 ಬಂದು ಕಪಿಯಂ ನೋಡಿ ಮಿಗೆ ತವೊ್ಮಳಿಂತೆಂದರು ॥ (ಅ)

(ತೆರೆಯಲ್ಲಿ ಶಿವಪಾರ್ವತಿಯರ ಪ್ರವೇಶ)

೪೭ ರಾಗ ಕೇತಾರಗೌಳ—ಅಷ್ಟತಾಳ ೧

ಈಶ್ವರ—

ನೋಡಿದೆ । ಯಾ ಗೌರಿ । ರಾಮನಾ । ಟಗಳ ಈ ।
ರೂಢಿಯೊ । ಳತಿಶಯ । ದ—॥
ಕಾಡ ಕ । ಪಿಗಳೆಲ್ಲ । ಮನುಜರಂ । ದದಲಿ ಪೇ ।
ಚಾಡುವ । ಪಂಥಗ । ಳ— ॥ ೧೪೮ ॥

ನಾಡ ಪ । ರ್ವತವೆಲ್ಲ । ಕಿತ್ತುಕೊಂ । ಡೊಯ್ದು ಬೀ ।
ಸಾಡಿ ಸ । ಮುದ್ರದ । ಲಿ—॥
ಕೇಡುಬಂ । ತಿದಕೊ ನ । ವ್ಮ್ಯಾಗಿರಿ । ಗೆನುತಲಿ ।
ಜೋಡಾಗಿ । ನಡೆತಂದ । ರು— ॥ ೧೪೯ ॥*

ತರಳನಂ । ಗದನ ಸಾ । ಹಸವನ್ನು । ಕಂಡಾಗ ।
ಪುರಹರ । ನಸುನಗು । ತ—।
ಪರಿಕಿಪೆ । ನಿವನ ಶೌ । ರ್ಯಗಳನೆಂ । ದೆನುತ ಶಂ ।
ಕರನು ವಾ । ನರಗೆಂದ । ನು— ॥ ೧೫೦ ॥

೪೮ ರಾಗ ಕುರಂಜಿ —ಅಷ್ಟತಾಳ ೧

ಈಶ್ವರ—

ಯಾರಯ್ಯಾ ।—ನೀ ನೀ । ಗಿರಿಯನು । ಕೀಳ್ವವ । ನಾರಯ್ಯ—॥ ಪಲ್ಲವಿ ॥

ಯಾರಯ್ಯ । ಇದುವೆ ಕೈ । ಲಾಸ—।—ನನ್ನ ।
ಮಾಠವು । ರ್ದನನಿಪ್ಪ । ವಾಸ—।—ಅಲ್ಲಿ ।

---

* ತರಳ ನೀನ್ಯಾರ ಹೇ । ಳಿಕೆಯಿಂದ ನಾವಿದ್ದ । ಗಿರಿಯ ಶಕ್ತಿಯಲಿ ಕೀಳ್ವೆ ।
ಮರುಳೆ ನಮ್ಮೊಡನಿರ್ದ । ಗಣಗಳ ಪರಿಯ ನೀ । ನರಿಯೆ ಬಿಟ್ಟತ್ತ ಸಾರೊ ॥
ಯಾರು ಹೇಳಿದರೆಂದು । ನಮ್ಮನು ಕೇಳ್ವ ವಿ । ಚಾರವೆಲ್ಲಿಂದ ಬಂತು ।
ಶ್ರೀರಾಮನವರು ಕ । ಟ್ಟಿಸುವ ಸೇತುವೆಗಾಗಿ । ಹೋರುವೆನಿದರೊಳಗೆ ॥
ಕಪಿವರ ಕೇಳು ಕೈ । ಲಾಸದ ಮಹಿಮೆಯು । ಗುಪಿತವನರಿಯೆ ನೀನು ।
ತ್ರಿಪುರಾರಿ ನಾನು ಪಾ । ರ್ವತಿಯೆಂಬಾಕಿವಳೀಗ । ಕಪಟ ಮಾತಲ್ಲವಯ್ಯ ॥
ಹರನಾಗಲ್ಲದಡೆ ಶಂ । ಕರನಾದಡೆನಗೆ ಗೋ । ಚರವಿಲ್ಲ ಮತ್ತೂರ್ವರ ।
ತರಣಿನಂದನನಾಜ್ಞೆ । ಕಂಡ ಪರ್ವತಗಳ । ಹೊರುವದೆ ಛಲ ನಮಗೆ ॥ (ಅ)

ದೂರು ಮು । ಟ್ಟಲು ದೊಡ್ಡ । ದೋಸ—॥
ವೀರಭ । ದ್ರಾದಿ ಭೈ । ರವರು ಕಂ । ಡರೆ ನಿನ್ನ ।
ಚೂರುಚೂ । ರನೆ ಮಾಡ । ದಿರರು ಮ । ರ್ಕಟಪೋರ ॥ ೧೫೧ ॥

ತರವಲ್ಲ । ನಿನಗಿಂಥ । ಚಾಳಿ—।—ನೀನೀ ।
ಗಿರಿಯನ್ನು । ಕಿತ್ತರೆ । ಕೇಳಿ—।—ಬಾರ ।
ದಿರದಿನ್ನು । ಕ್ಷಣಕೆ ಭೂ । ತಾಳಿ—॥
ಮರುಳು ಮ । ರ್ಕಟ ನಿನ್ನ । ಕಂಡಮಾ । ತ್ರದಲಿ ಚ ।
ಪ್ಪರಿಸಿ ನುಂ । ಗುವವು ಎ । ಚ್ಚರಿಕೆತ । ಪ್ಪಿದ ವೀರ ॥ ೧೫೨ ॥

ಬ್ರಹ್ಮಾದಿ । ಸುರರು ಮುಂ । ತಾಗಿ—।—ತಮ್ಮ ।
ಕರ್ಮಸಾ । ಧನವೆಲ್ಲ । ನೀಗಿ—।—ತಾವು ।
ಪೆರ್ಮೆಯಿಂ । ದಲೆ ವಾಸ । ವಾಗಿ—॥
ನಿರ್ಮಲಾ । ನಂದದೊ । ಳಿಪ್ಪ ಪ । ರ್ವತವಿದು ।
ಧರ್ಮವ । ಲ್ಲವೊ ಶಕ್ತಿ । ಯಿಂದ ಕೀ । ಳುವ ವೀರ ॥ ೧೫೩ ॥

೪೯ ರಾಗ ದೇಶಿ—ಅಷ್ಟತಾಳ ೧

ಅಂಗದ—

ಬಳಲಿದೆ । ನಡೆ ಸಾಕು । ಮನೆಗೆ—।—ಇಂಥ ।
ಬಲುಮಾತ । ಕಲಿಸಿಕೊ । ಟ್ಟವರಾರೊ । ನಿನಗೆ ॥ ಪಲ್ಲವಿ ॥

ಯಾರು ನೀ । ವೆಲ್ಲಿ ಇಂ । ದೆನ್ನ—।—ಕೇಳ್ವ ।
ಪಾರುಪ । ತ್ಯವನಾರು । ಕೊಟ್ಟರು । ಮುನ್ನ—॥
ದೂರಿಗಂ । ಜುವನಲ್ಲ । ಗನ್ನ—।—ಚಮ ।
ತ್ಕಾರದ । ನುಡಿಗೆ ಪ । ರ್ವತ ಬಿಡೆ । ನಿನ್ನ— ॥ ೧೫೪ ॥

ಬೇರೆ ಮಾ । ತುಗಳೇಕೆ । ನಮಗೆ—।—ನಮ್ಮ ।
ಶ್ರೀರಾಮ । ನವರು ಕ । ಟ್ಟಿಸುವ ಸೇ । ತುವಿಗೆ—॥
ಹೋರುವೆ । ಸಾನಿದ । ರೊಳಗೆ—।—ಕಟ್ಟ ।
ತೀರಿಸ । ಬೇಕು ಕೊಂ । ಡೊಯ್ದಿತ್ತು । ನಳಗೆ— ॥ ೧೫೫ ॥

ಭೂತ ಪ್ರೇ । ತಗಳ್ಳಿ, । ತರಲಿ—।—ಭೂತ ।
ನಾಥನೆ । ಜಗಳಕ್ಕೆ । ನವುಗಿದಿ । ಬ್ಯರಲಿ ॥
ಭೂತಳ । ವೆಲ್ಲ ವುಃ । ಳುಗಲಿ—।—ಬಿಟ್ಟು ।
ನಾ ತಿರಿ । [1]ಗಿದರೆ ವಾ । ನರನಲ್ಲ । ದಿ[1]ರಲಿ ।

೫೦ ದ್ವಿಪದಿ

ಈಶ್ವರ—

ಕಂಡೆಯಾ ಗಿರಿಜಾತೆ ಕಡುವಿಚಿತ್ರಗಳ ।
ಪುಂಡರೀಕಾಕ್ಷ ಶ್ರೀರಾಮಚರಿತೆಗಳ ॥ ೧೫೬ ॥

ಕಾಡ ಗಿಡಗಳಲಿರುವ ಕಪಿಗಳೈತಂದು ।
ಈಡರಿತು ನರರ ಸೇವೆಯ ಮಾಳ್ಪರಿಂದು ॥ ೧೫೭ ॥

ಧರೆಯೊಳತಿ ಸೋಜಿಗವಿದೆನುತ ಸತಿಗೆಂದು ।
ಮರಳಿ ಶಿವ ನುಡಿದನಾ ವಾನರನೊಳಂದು ॥ ೧೫೮ ॥

ಏ ಕಪೀಶ್ವರ ಕೇಳು ಎನಗೂ ರಾಮನಿಗೂ ।
ಏಕಸ್ವಭಾವಗಳು ಎಲ್ಲರರಿತಿಹರು ॥ ೧೫೯ ॥

ಶಿವ ನಾನು, ಎನಗೆ ಸತಿ ಇವಳು ಗಿರಿಜಾತೆ ।
ಪ್ಲವಗ ಪೋತಕ ಕೇಳು ಬಧಲಿನ್ನು ಮಾತೇ ॥ ೧೬೦ ॥

ಹರಿಹರರು ನಮ್ಮೊಳಗೆ ಭೇದವಿಕ್ಕಿದರೆ ।
ಧರೆಯೊಳಿರುವರು ನರಕ ಹೊಂದದಿನ್ನಿಹರೆ ॥ ೧೬೧ ॥

ರಾಮ ನಾರಾಯಣನು ನರನಾಗಿ ಬಂದು ।
ಆ ಮಹಾರಾಕ್ಷಸರ ಕೊಲುವ ಬಗೆಗೆಂದು ॥ ೧೬೨ ॥

೫೧ ರಾಗ ಘಂಟಾರವ—ಜಂಪೆತಾಳ ೨

ಅಂಗದ—

ಇಂದು ಶೇ । ಖರನೆತ್ರ । ಇನಕುಲಾ । ಧಿಪನೆತ್ರ ।
ಹೊಂದಿಕೆಯು । ಮಾತಲ್ಲ । ಹೊಗಳಿ ಫಲ । ವಿಲ್ಲ— ॥ ೧೬೩ ॥

1 ಗುವೆನೆಂಬ । ಮಾತದಂತಿ (ಕಾ)

ಎರಕವಾ । ದರೆ ನೀವು । ಎನಗೆ ಮ । ತ್ಸರವಿಲ್ಲ ।
[1]ತರಿಸೊಂದು । ಗುರುತವನು । ತಿರಿಗಿ ಸಾ । ರು[1]ವೆನು || ೧೬೪ ||

ಹೊರಳಾಗಿ । ಮಾತಿಲ್ಲ । ಹೋಗುನವ । ನಾನಲ್ಲ ।
ಬರಿಯ ಬೂ । ಟುಗಳಿಂದ । ಬಳಲಬೇ । ಡೆಂದ || ೧೬೫ ||

ವಚನ ॥ ಇಂತೆಂದು ಅಂಗದನಾಡಿದ ಮಾತಿಗೆ ಪರಮೇಶ್ವರನು ಸಂತೋಷಚಿತ್ತದಿಂದ ತಾನೇ ರಾಮಮೂರ್ತಿಯಾಗಿರಲು ಅಂಗದನದಂ ಕಂಡನದೆಂತೆನೆ—

೫೨ ವಾರ್ಧಿಕಷಟ್ಪದಿ

ರಾಮಾವತಾರವಂ ನೆರೆಕಂಡು ಬೆರಗಾಗಿ ।
ಆ ಮಹಾ ಪರ್ವತವನಲ್ಲಿಯೇ ಬಿಟ್ಟದರ ।
ಸಾಮೀಪ್ಯದಲ್ಲಿರುವ ಉಪಪರ್ವತಂಗಳಂ ಧರಿಸುತಂಗದ ನಡೆದನು ॥
ಭೂಮಿಯನ್ನೇ ಹೊತ್ತು ತಂದನೋ ಎಂಬಂತೆ ।
ರಾಮಲಕ್ಷ್ಮಣರು ಕಂಡತಿಚೋದ್ಯಮಂ ಬಡಲು ।
ಪ್ರೇಮದಿಂ ನಳನ ಕೈಗಿಡಲು ನಡೆದುದು ಸೇತು ದಶಯೋಜನಾಂತರದಲಿ|| ೧೬೬ ||

೫೩ ಸಾಂಗತ್ಯ—ರೂಪಕ ತಾಳ ೩ (ತೋಡಿರಾಗ)

ನೀಲ—

ಬಾಲನಂ । ಗದನ ಸಾ । ಹಸವನ್ನು । ನೆರೆಕಂಡು ।
ನೀಲನು । ತ್ವರಕಾಗಿ । ಬಂದು—||
ಕೀಳಲು । ಮಂದರ । ಗಿರಿಯನ್ನು । ಸುರರಂಜಿ ।
ಕೇಳಿದ । ರಾ ಕಪೀ । ಶ್ವರನ— || ೧೬೭ ||

ತರುಚರಾ । ಧಿಪಕೇಳ್ನೀ । ನರಿಯೆಯ । ಮಂದರ ।
ಗಿರಿಯ ಸೌ । ಭಾಗ್ಯಲ । ಕ್ಷಣವ—||
ಸುರರಿಗೆ । ಬೇಕಾದ । ದಿವ್ಯವ ।,ಸ್ತುಗಳು ಇ ।
ಲ್ಲಿರುವವಿಂ । ತೆಂಬ ವಾ । ರ್ತೆಗಳ— || ೧೬೮ ||

ಭೂಮಿಯೊ । ಳತಿರೇಕ । ವಾದ ದು । ಶ್ಚರ್ಯವ ।
ರಾಮಸೇ । ವಕರು ಮಾ । ಡುವರೆ ||

---

1 ಗುರುತ ತೋರಿದರೆ ನಾ । ಮರಳಿ ಪೋಗು (ಕಾ)

ನಾರದ—

ಆ ಮಾತ | ಕೇಳದೆ | ಕೇಳ್ವಾಗ | ನಾರದ |
ಮಾಮುನಿ | ಬಂದು ಬೋ | ಧಿಸಿದ— ॥ ೧೬೯ ॥

ನೀಲ—

ಮತ್ತಾಗ | ಮುನಿಯ ಮಾ | ತಿನ ಮೇಲೆ | ಬಿಟ್ಟಲ್ಲಿ |
ಸುತ್ತಣ | ಗಿರಿಗಳ | ಕಿತ್ತು—॥
ಹೊತ್ತುಕೊಂ | ಡೈತಂದು | ಕೊಡಲು ಸಾ | ಗಿತು ಸೇತು |
ಹತ್ತು ಯೋ | ಜನದಗ | ಲದಲಿ— ॥ ೧೭೦ ॥

೫೪ ರಾಗ ಕಾಂಭೋಜಿ—ಅಷ್ಟ ತಾಳ ೨

ಜಾಂಬವ—

ಇವರ ವಿ | ಕ್ರಮ ಒಂದು | ಕಡೆಗಿಡು | ಕಮಲಸಂ |
ಭವಜಾತ | ನೆನೆದಂಥ | ಹವಣ ನೀ | ನೋಡು ॥
ತವಕದಿಂ | ದೆದ್ದು ವಿಂ | ಧ್ಯವ ದಾಟಿ | ಮುಂದೆ ಜಾಂ |
ಬವರು ಸಂ | ಧಿಸಿಕೊಂಡ | ರೈ ಹಿಮ | ವಂತನ ॥ ೧೭೧ ॥

ನೆಗಹಿ ಜೋ | ಲುವ ಜೂಲು | ಗೂದಲ | ನಗಲಿಸಿ |
ಮಿಗೆ ತುದಿ | ಮೊದಲ ನೋ | ಡಿದರೆ ಅ | ಜ್ಜಯ್ಯ ॥
ನೆಗಹಲು | ಚೈತನ್ಯ | ವಿಲ್ಲ ವೃ | ದ್ಧರು ನಾವು |
ನಗುವವ | ರ್ನಕ್ಕರೆ | ನಗಲೆಮ | ಗಿದೇ ಸಾಕು ॥ ೧೭೨ ।

೫೫ ವಾರ್ಧಿಕಷಟ್ಪದಿ

ಎರಡು ಸಾವಿರ ಯೋಜನಗಲ ಬಳಿಕೈವತ್ತು |
ಯೆರಡು ಸಾವಿರ ಯೋಜನೋನ್ನತದ ಪರ್ವತವ |
ನೆರಡು ಕೈಯಿಂದಲುಗಿ ಕೀಳುತಿರೆ ಸಪ್ತಸಾಗರ ಕಲಕಿ ನೆಲವದಿರ್ತು ॥
ಇರದಿದೇನಾಶ್ಚರ್ಯವೆಂದು ಮೇನಕೆದೇವಿ |
ಬೆರಗಾಗಿ ಮನಗುಂದಿ ಭರದಿಂದ ನಡೆತಂದು
ಹಿರಿಯರಿದು ನೆನೆದ ಕಟ್ಟಾಳುತನ ಲೇಸೆಂದು ಹಿರಿಮನದೊಳಿಂತೆಂದಳು
॥ ೧೭೩ ॥

(ಮೇನಕೆಯ ಪ್ರವೇಶ)

೫೬ ರಾಗ ಮಧ್ಯಮಾವತಿ—ಏಕತಾಳ ೪

ಮೇನಕೆ—

ಏಕೆ ಕೇ | ಳುವೆಯಾ ಪಿ | ನಾಕಿ ಶಂ | ಕರನಿಗೆ |
ಬೇಕಾ, | ದವ ನೀ | ನು— ||
ಲೋಕದೊ | ಳಗೆ ಬಲು | ಹಿರಿಯರಾ | ದವರಿಂಥ |
ಅಕೃತ್ಯ | ಕರ್ಮವ | ನಡೆಸುವ | ದುಂಟೆ— || ೧೭೪ ||

ಶಿವನಿಗೆ | ಮದುವೆ ಯಾ | ದವಳೆನ್ನ | ಮಗಳು ಮ |
ತ್ತಿವನೆನ್ನ | ರಮಣ ಮೇ | ನಕೆಯು ನಾ | ನು—|
ದಿವಿಜರು | ಸಹಿತಲಂ | ಜುವರೆಮ್ಮ | ಬಳಗಕ್ಕೆ |
ಪ್ಲವಗಾಧಿ | ಪತಿ ನೀನೇ | ನೋಡು ಸ | ನ್ಮತದಿಂದ || ೧೭೫ ||

ಜಾಂಬವ—

ಮಾರವೈ | ರಿಯು ಚಿತ್ತ | ದೂರವಾ | ಗುವದೆಂದು |
ಬೇರುಡಿ | ಯದ ಹಾಗೆ | ನೆಲ್ಲನ | ಲ್ಲಿರಿಸಿ—||
ನಾರಿ ನ | ಮ್ಮನ್ಮ ನೀ | ಹೋಗೆನು | ತಲ್ಲಿದ್ದ |
ಬೇರೆ ಪ | ರ್ವತಗಳ | ಬಿಡಿಸಿದ | ನಜಸುತ || ೧೭೬ ||

(ಮೇನಕೆಯ ನಿಷ್ಕ್ರಮಣ)

೫೭ ವಾರ್ಧಿಕಷಟ್ಪದಿ

ರಾಮ—

[1]ಶಿರದೊಳೆಂಟದ್ರಿ ಭುಜವೆರಡರಲಿ ನಾಲ್ಕು ನಿಜ |
ಕರದಳೊಂದೊಂದು ಗಿರಿ ಕೌಂಕುಳೊಳಗೆರಡೆರಡು |
ಚರಣಗಳನೆರಡೆರಡನುರುಳಿಸುತ ಭರದಿ ನಡೆತರುವ ಸಂಭ್ರಮವ ಕಂಡು ||
ಬೆರಳ ಮೂಗಿನೊಳಿಟ್ಟು ಶಿರವ ತೂಗಿದ ರಾಮು |
ತ್ವರಿತದೊಳಿದಿರ್ಬಂದು ನಳನಧಿಕಶಕ್ತಿಯಿಂ |
ದಿರದೆ ಕೈಗೊಟ್ಟು ಕಟ್ಟೆಗೆ ಸೇರಿಸಲು ಸೇತುಹಲವು ಯೋಜನ ನಡೆದುದು[1] || ೧೭೭ ||

---

1 ವಾರ್ಧಿಕಷಟ್ಪದಿಗೆ ಬದಲು ೫೬ ನೇ ಪದ್ಯಕ್ಕೆ ಈ ಎರಡು ಚರಣಗಳು ಸೇರಿಕೊಂಡಿವೆ :—

೫೮ ಚರಿತೆ (ಸಾಂಗತ್ಯ)—ರೂಪಕತಾಳ ೩ (ರಾಗ ಸೌರಾಷ್ಟ)

ಹನುಮಂತ—

ಈ ಸರ । ಬಗೆಯೆಲ್ಲ । ಕಂಡನು । ಮುಖ್ಯ ಪ್ರಾ ।
ಣೇಶನ । ಸುತ ಹನು । ಮಂತ — ॥
ಈ ಸಮ । ಯದಿ ಸುಮ್ಮ । ನಿದ್ದರೆ । ಒಡೆಯಗೆ ।
ಬೇಸರಾ । ಗುವುದು ಚಿ । ತ್ತದಲಿ— ॥ ೧೭೮ ॥

ಖಂಡ ಖಂ । ಡವ ದಾಟಿ । ಬಂದು ಹ । ತ್ತಿರೆ ನಿಂದು ।
ಕಂಡನೆ । ಮೇರುಪ । ರ್ವತವ— ॥
ಪುಂಡರೀ । ಕಾಕ್ಷನ । ಸೇವೆಗೀ । ಗಿರಿಯನ್ನು ।
ಕೊಂಡೊಯ್ದು । ಕೊ[1]ಡುವೆ ನಾ । ನಳಗೆ[1]— ॥ ೧೭೯ ॥

ಲಕ್ಷ ಯೋ । ಜನದುದ್ದ । ಮೇಲೆ ನೋ । ಡಿದರೊಂದು ।
ಲಕ್ಷ ಯೋ । ಜನದ ವಿ । ಸ್ತಾರ— ॥
ಲಕ್ಷ್ಮಣಾ । ಗ್ರಜ ಕಂಡಿಂ । ದೆನ್ನ ಕ । ಕ್ಷಕೆ ಮೆಚ್ಚಿ ।
ಸುಕ್ಷೇಮ । ದಿಂದ ಪಾ । ಲಿಸುವ— ॥ ೧೮೦ ॥

ಅಬ್ಬರಿ । ಸುತ ಕೈಯ । ಚಪ್ಪಳಿ । ಸುತ ಹಾರಿ ।
ಉಬ್ಬಿ ಶ । ಕ್ತಿಯೊಳಲು । ಗಿದರೆ— ॥
ತಬ್ಬಿಬ್ಬಾ । ಯಿತು ಸಪ್ತ । ಲೋಕ ಮಾ । ನಸದಿಂದ ।
ಎಬ್ಬಿಸಿ । ತಬುಜಸಂ । ಭವನ— ॥ ೧೮೧ ॥

---

ಶಿರದೊಳೆಂ । ಟದ್ರಿಭುಜ । ವೆರಡರೊ । ಳ್ನಾಲುಕು ।
ಕರದೊಳೊಂ । ದೊಂದು ಕಂ । ಕುಳೊಳಗೊಂ । ದೊಂದು ।
ಚರಣದೊ । ಳುರುಳಿಸಿ । ಬಹದ ಕಾ । ಣುತಲಾಗ ।
ಬೆರಳ ಮೂ । ಗಿನೊಳಿಟ್ಟು । ಶಿರವ ತೂ । ಗಿದ ರಾಮ ॥
ಮೊದಲಿಗ । ರಿವರು ಮಾ । ಡಿದ ಕಷ್ಟ । ಕತಿ ಮೆಚ್ಚಿ ।
ಇದಿರು ಬಂ । ದಾಕ್ಷಣ । ಭಯಭಕ್ತಿ । ಯಿಂದ ।
ಮುದದಿ ಬೊ । ಬ್ಬಿಡುತ ಕ । ಟ್ಟೆಗೆ ಸೇರಿ । ಸಲು ಸೇತು ।
ಒದಗಿತು । ಹಲವು ಯೋ । ಜನದ ಪ । ರ್ಯಂತ ॥ (ಅ)

1 ಡೆ ಹೆಚ್ಚಾಗುವುದು

೫೯ ವಾರ್ಧಿಕಷಟ್ಪದಿ

ನಳ—

2ಇಳೆಯದಿರಿ ದಿಕ್ತಟಂಗಳ ಬೆಸುಗೆ ಸಡಿಲಿ ತ ।
ಲ್ಲಣಿಸಿದವು ಕರಿಕಮಠರೆದೆಗುಂದಿ ಬಳಿಕ ತಳ ।
ಮಳಿಸುತಂದೇನಿದೇನಾಶ್ಚರ್ಯದುತ್ಪಾತ ಪ್ರಳಯಕಂಪನವೊ ಯೆನುತ ॥
ನಳನು ಸೇತುವೆಗಿಟ್ಟ ಕುರುಹು ಮುಳುಗಲು ಕಂಡು ।
ನಳಿನಲೋಚನಗೆ ಬಿನ್ನಯಿಸ್ಸಿದನಿದೇನೆಂದು ।

ರಾಮ—

ತಿಳಿದು ರಘುಪತಿ ನೀವು ಬೆದರದಿರಿ ಹನುಮಂತ ನಮ್ಮ ಸೇವೆಗೆ ಮಾಡುವ² ॥೧೮೨॥

ಕೆಲಸವಿದು ಇದನರಿಯುಬಹುದು ಅರೆನಿಮಿಷದೊಳು
ಕಲಿಹನುಮನಾಗಮವನೆಂದೆನುತ ಬಲಿಮುಖರ
ಬಲದೊಳಗೆ ಸುಗ್ರೀವ ಜಾಂಬವಂತರ ಕೂಡೆ ಮಾತಾಡುತಿರಲಿತ್ತಲು ॥

ಬ್ರಹ್ಮ—

ಜಲಜಸಂಭವನರಿತು ಬೆರಗಾಗಿ ತನ್ನ ಮನ ।
3ದಲಿ ನೋಡಿದರೆ ಪ್ರಳಯ ದೂ3ರವಿಹುದೆಂದೆನುತ ।
ಬಲು ಬೇಗ ನಡೆತಂದು ಪವನಸಂಜಾತನಂ ಕಂಡವನೊಳಿಂತೆಂದನು ॥೧೮೩॥

(ಬ್ರಹ್ಮನ ಪ್ರವೇಶ)

೬೦ ರಾಗ ಮೋಹನ—ಏಕತಾಳ ೮

ಬ್ರಹ್ಮ—

ಜಾಣ—ನೀ । ನಹುದೊ ಕ । ಪಿ—ನಿ । ನ್ನಂಥ ಸುಪ್ರ ।
ವೀಣ—ರಿ । ಲ್ಲೈ ಜಗ । ದಿ — । — ॥
ಕಾಣ—ಲಂ । ಜುವರು ಗೀ । ರ್ವಾಣ—ರೀ । ಗಿರಿಯನ್ನು ।
ತ್ರಾಣದಿಂದಿದರ ।.ಕೀಳುವೆನೆಂಬ ವಿ । ಧಾನ ಬಳ್ಕೆತದ । ಕೇನು ಮತ್ಸರವೆ॥೧೮೪॥

---

2 ಪ್ರಳಯ ಕಂಪನದಿಂದ ಸಡಿಲಿತೆನೆ ಸೇತು ಕಳ
ವಳ ಬೇಡ ಹನುಮಂತ ನಮ್ಮ ಸೇವೆಗೆ ಮಾಳ್ಪ
ಕೆಲಸವಿದು ಬೆದರಲ್ಯಾಕರೆನಿಮಿಷ ಮಾತ್ರದಲಿ ತಿಳಿಯಬಹುದೆಂದ ರಾಮು ।
ನಳಿನಸಂಭವನಿತ್ತಲರಿದು ರಾಮನ ಕೆಲಸ
ದೊಳವು ಲೇಸೆನುತ ಹತ್ತಿರ ಬಂದು ನೋಡಿದನು
ಭಳಿರೆ ಹನುಮಂತ ಮೆಚ್ಚಿದೆ ನಿನಗೆ ನೀ ಮೂರ್ಖರೊಳಗೆ ಸಲೆ ಜಾಣನಹುದೋ ॥

3 ದೊಳಗೆ ಕಲ್ಪಪ್ರಳಯ ಸದ (ಕಾ)

ಲೋಕ—ಲೋ | ಕಂಗಳಿಗೆ | ಲ್ಲ— ಆ | ಧಾರವಾದ |
ಶ್ರೀಕ—ರ | ಭೂಧರ | ವ — | — ||
ನೀ ಕೀ,ಳ | ಲಾಗಿ ಮತ್ತಿ | ನ್ನೇಕೆ, ಸೇ | ತ.ಗಳಲ್ಲಿ |
ಸಾಕರಿಸಿತು ಬ್ರ | ಹ್ಮಾಂಡಚತುಷ್ಟಯು | ಚಾಕರಿ ಸಂತೆವು |
ಗೀ ಕೆಲಸದಲಿ || ೧೮೫ ||

ಚಂದ್ರಾ,ದಿ | ತ್ಯಾದಿ ಗ್ರಹ | ರ-ಕಾ | ಲದ ಚಕ್ರ |
ನಿಂದಿ, ರ್ಪು | ದೀ ಪ್ರಪಂ | ಚ — | — ||
ಮಂದ—ರ | ವಿದರ ನೀ | ನಿಂದು— ಕಿ |ತ್ತಿಡಲು ಮ |
ಹೇಂದ್ರಮುಖ್ಯ ಸುರ | ವೃಂದ ಜಾನಕಿ ರಾಮ | ಚಂದ್ರ ಸೇತುಸಹ |
ಮುಂದೆಲ್ಲಿಹುದ್ಕೆ || ೧೮೬ ||

೬೧ ರಾಗ ಘಂಟಾರವ—ಜಂಪೆತಾಳ ೩

ಹನುಮಂತ—

ಸರಸಿಜೋ | ದ್ಭವ ಕೇಳು | ಸಾಕು ಕೋ | ಪಿಸಬೇಡ |
ಅರಿತುಕೊಂ | ಡೆನು ನಾನು | ಅಂತರಂ | ಗವನು— || ೧೮೭ ||

ಬೇರಾದ | ಪರ್ವತವ | ನಾ ಕೊಂಡು | ಪೋದರೀ |
ಲೋಕಾನು | ಲೋಕಗಳು | ತಾ ಕೆಡುವ | ವ್ಪೆಸೆ— || ೧೮೮ ||

ಬಾಲವನು | ಸಲೆ ಬಳಸಿ | ಕೊಂಡೊಯ್ವೆ | ನೀ ಗಿರಿಯ
ಊಳಿಗವ | ಮುಗಿಸಿ ತಹೆ | ಹಾಳಾಗ | ದಂತೆ—|| || ೧೮೯ ||

ಎಂಬ ಮಾ | ತಿನಮೇಲೊ | ಡಂಬಡಿಸಿ | ದನು ಕಮಲ |
ಸಂಭವನ | ಕೈವಿಡಿದು | ನಂಬಿಸಿದ | ನಾಗ || ೧೯೦ ||

ಬ್ರಹ್ಮ—

ನಾಳಿ ನ | ವ್ನೊಡೆತನವ | ಪಾಲಿಸುವ | ನೀನಾದ |
ಮೇಲೆ ನಾ | ಹೆಚ್ಚಿನ್ನು | ಹೇಳಿ ಫಲ | ವೇನು— || ೧೯೧ ||

ತನ್ನ ಮನೆ! | ಬದುಕುಗಳ | ತಾನೆ ಕೆಡಿ | ಸುವರುಂಟೆ !
ಇನ್ನು ನೀ | ನೇ ನೋಡು | ನಿನ್ನ ಮನ | ದೊಳಗೆ || ೧೯೨ ||

೬೨ ವಾರ್ಧಿಕಷಟ್ಪದಿ

ಹನುಮಂತ—

ಮಾತಿನೊಳೊಡಂಬಡಿಸೆ ಹನುಮಂತ ಕಮಲಸಂ[1]
ಜಾತನಂ ಬೀಳ್ಕೊಟ್ಟು [1]ಆ ಮಹಾಮೇರುಗೆ ಸ[1]
ಮೇತವಾಗಿರುವ ಕಾಂಚನಶೃಂಗಗಳ ಹೊತ್ತು ನಾನೂರ[1]ರೆಣಿಕೆಯಿಂದ ॥

ರಾಮ—

ವಾತಸಂಭವನ ಸೇವಾಮಹಿಮೆಗಂದು ರಘು ।
ನಾಥಲಕ್ಷ್ಮಣರು ಕಂಡತಿಚೋದ್ಯಬಡೆ ನಳನ ।

ನಳ—

ಕೈತುದಿಗೆ ಪಸರಿಸಿತು, ಹನುಮ ತಂದದರೊಳಗೆ ಸೇತು ಸಂಪೂರ್ಣ
ವಾಯ್ತು ॥ ೧೯೩ ॥

೬೩ ರಾಗ ಸೌರಾಷ್ಟ್ರ—ರೂಪಕತಾಳ ೩

॥ ಚರಿತೆ॥

ನಳ—

ತುಂಬಿತು । ಸೇತು ಹೋ । ಹೋ ಸಾಕು । ತರಬೇಡ ।
ವೆಂಬ ಬೊ । ಬ್ಬೆಗಳ ಸಂ । ಭ್ರಮಕೆ—।
ಮುಂಬರಿ । ದಲ್ಲಲ್ಲೇ । ಬಿಸುಟು ಸು । ಗ್ರೀವಪ ।
ದಾಂಬುಜ । ಕಭಿನಮಿ । ಸಿದರು— ॥ ೧೯೪ ॥

ಕಲ್ಲೆಡೆ । ಯಲಿ ಮಣ್ಣು । ಜರಿದು ಬೀ । ಳದ ತೆರ ।
ನಲ್ಲಿಗ । ಲ್ಲಿಗೆ ಭದ್ರ । ವಾಗಿ—॥
ಚೆಲ್ಲುತ್ತ । ತೆರೆ ಬಡಿ । ವಲ್ಲಿಗೊ । ತ್ತೊತ್ತಾಗಿ ।
ಕಲ್ಲಸಂ । ಕಲೆಯನಿ । ಕ್ಕಿದರು— ॥ ೧೯೫ ॥

ಪಂಕಜಾಂ । ಬಕ ನಿಂತ । ಪಾದದ । ಬಳಿಂದ ।
ಲಂಕೆಯ । ದಡಪರಿ । ಯಂತ ।
ಸಂಕಲೆ । ಸರಪಣಿ । [2]ಗೊಣಸು ಗ । ಟ್ಟಣೆಯಿಂ[2]ದ ।
ಲಂಕರಿ । ಸಿತು ಸೇತು । ಸಮೆದು ॥ ೧೯೬ ॥

---

1 ಮೇರುಪರ್ವತದ ಸಂ । ಗಾತದಲ್ಲಿದ್ದ ಕಾಂಚನ ಸಾಲು ಗಿರಿಗಳಂ ಹೊತ್ತನೂ (ಕಾ)
2 ಗಟ್ಟಣೆ ಮಣ್ಣಂ (ಕಾ)

ಬಣ್ಣ ಸಾ | ರಣೆ ಮೇಲು | ಗಟ್ಟು ತೋ | ರಣಗಳ |
ಚಿನ್ನದ | ಕಲಶ ಕ | ನ್ನಡಿಯ— ||
ಚೆನ್ನಾಗಿ | ರಚಿಸಿದ | ನಾ ವಿಶ್ವ | ಕರ್ಮನ |
ಬಿನ್ನಾಣ | ವೆಂತು ಹೆ | ಚ್ಚಿನದು — || ೧೯೭ ||

ವೊಳಗಿತು | ಭೇರಿ ತ | ಮ್ಮಟೆ ವಾದ್ಯ | ಸುರಪುರ |
ದೊಳಗೆ ಕ | ಟ್ಟಿದರು ತೋ | ರಣವ — ||
ನಳಿನಲೋ | ಚನ ರಾಮ | ಜಯ ಜಯ | ವೆಂದು ಪೂ |
ಮಳೆಗರೆ | ದರು [1]ಸುರ | ವರರು[1] — || ೧೯೮ ||

೬೪ ಭಾಮಿನಿಷಟ್ಪದಿ

ಕುಶನೆ ಕೇಳ್ಪೈ ಪುಷ್ಯ ಶುದ್ಧದ
ದಶಮಿಯಲಿ ಪ್ರಾರಂಭವಾಯಿತು
ಹಸರಿಸಿತು ಸಂಪೂರ್ಣವಾಗಿ ತ್ರಯೋದಶಿಯೊಳಂದು |
ವಸುಧೆ ಬೆಳಗಿದಳೆಂಟುದೆಸೆಯಲಿ
ಕುಸುಮ ಮಳೆಗಳ ಸುರಿದರಮರರು
ಪೆಸರಿಡಿಸಿತೀ ಸಂಧಿ ಕಣ್ವಪುರೇಶನೊಲವಿನಲಿ || ೧೯೯ ||

---

1 ನಭದಿಂದ (ಅ)

# ಅಂಗದಸಂಧಾನ

## ಪ್ರಸಂಗದ ಕಥಾಸಾರ

ಮಹಾಸಾಹಸದಿಂದ ಸೇತುಬಂಧನವನ್ನು ನಿರ್ವಹಿಸಿದ ಕಪಿವೀರರಿಗೆಲ್ಲ ಶ್ರೀ ರಾಮನು ಆದರದಿಂದ ಉಪಚಾರದ ಮಾತುಗಳನ್ನು ಹೇಳಿ ಕೊಂಡಾಡಿ, ಹನುಮಂತನು ಮಾಡಿದ ಅತಿಸಾಹಸಕ್ಕಾಗಿ ಆತನಿಗೆ ಮುಂದಿನ ಕಲ್ಪದ ಬ್ರಹ್ಮಪದವಿಯನ್ನು ಅನುಗ್ರಹಿಸುತ್ತಾನೆ.

ಅನಂತರ ಸೇತುವಿನ ಮೇಲೆ ಸೇನೆ ದಾಟುವುದಕ್ಕೆ ಅಪ್ಪಣೆ ಕೊಡುವುದಲ್ಲದೆ ತಾನೇ ಮೊದಲ ಹೆಜ್ಜೆಯನ್ನಿಟ್ಟು ಮುನ್ನಡೆಯುತ್ತಾನೆ. ಕಪಿಸೇನೆಯು ಸಮುದ್ರವನ್ನು ದಾಟಿ ಲಂಕಾದುರ್ಗದ ಹೊರವಲಯದಲ್ಲಿ ಬೀಡೆತ್ತಿತೆಂಬ ವಾರ್ತೆಯನ್ನು ರಾವಣನ ಮಂತ್ರಿಯಾದ ಪ್ರಹಸ್ತನು ಅರಿತವನಾಗಿ ಮಧ್ಯರಾತ್ರಿವೇಳೆಯಲ್ಲಿ ರಾವಣನ ನಿದ್ರಾಲಯಕ್ಕೆ ಹೋಗಿ ತಿಳಿಸುತ್ತಾನೆ.

ಒಡನೆಯೆ ರಾವಣನು ಶತ್ರುಸೈನ್ಯದ ಕಾರ್ಯಾಚರಣೆಯನ್ನು ತಿಳಿದುಬರುವುದಕ್ಕಾಗಿ ಶುಕಸಾರಣರೆಂಬ ಇಬ್ಬರು ಗೂಢಚಾರರನ್ನು ಕಳುಹಿಸುತ್ತಾನೆ. ಅವರು ಗಿಳಿಗಳಾಗಿ ಕಪಿಸೇನೆಯಲ್ಲಿ ಸುಳಿದಾಡುತ್ತಿರಲು, ಬೇಹಿನವರಾದ ಇವರ ಸೋವರಿತ ಅಂಗದನು ಇವರನ್ನು ಬಂಧಿಸಿ ಶ್ರೀರಾಮನೆದುರಿಗೆ ಕೊಂಡೊಯ್ಯಲು ರಾಮನು ಅವರನ್ನು ಮನ್ನಿಸಿ ನಯದಿಂದ ಕಳುಹಿಸುತ್ತಾನೆ.

ಹಿಂತಿರುಗಿ ಬಂದ ಅವರು, ಕಪಿಗಳ ಅದ್ಭುತ ಪರಾಕ್ರಮವನ್ನು ರಾವಣನಿಗೆ ಅರುಹುತ್ತಾರೆ. ಅದನ್ನು ಕೇಳಿದ ರಾವಣನು ರಾಕ್ಷಸಬಲವನ್ನು ಯುದ್ಧಕ್ಕೆ ಸನ್ನದ್ಧರಾಗುವಂತೆ ಆಜ್ಞಾಪಿಸಿ, ತಾನು ಶತ್ರುಸೇನೆಯನ್ನು ಸಮೀಕ್ಷಿಸುವುದಕ್ಕಾಗಿ ಶುಕಸಾರಣರೊಡನೆ ಕೋಟೆಯ ಪೌಳಿಯ ಮೇಲೇರುತ್ತಾನೆ, ಮತ್ತು ಅವರು ತೋರಿಸಿಕೊಡುವ ಪ್ರಕಾರ ರಾಮಲಕ್ಷ್ಮಣಸುಗ್ರೀವಾದಿಗಳಲ್ಲಿ ಒಬ್ಬೊಬ್ಬರನ್ನೂ ದಿಟ್ಟಿಸುತ್ತಿರುವಾಗ ಶ್ರೀರಾಮನೆಸೆದ ಬಾಣದಿಂದ ಆತನ ಶ್ವೇತಚ್ಛತ್ರವು ತುಂಡಾಗಿ ಕೆಳಗುರುಳುತ್ತದೆ. ಇದರಿಂದ ಕೆರಳಿದ ರಾವಣನು ಮರಳಿ, ಯುದ್ಧಕ್ಕೆ ಸರ್ವಸಿದ್ಧತೆಯನ್ನು ಮಾಡಿಸುತ್ತಾನೆ.

ಶ್ರೀರಾಮನು, ಯುದ್ಧಾರಂಭಕ್ಕೆ ಮೊದಲು ರಾವಣನಿಗೆ ಕೊನೆಯದಾಗಿ ಸಾರಿ ಹೇಳುವುದು ನೀತಿಯೆಂದು ಅಂಗದನನ್ನು ದೂತಕಾರ್ಯಕ್ಕೆ ನೇಮಿಸಿ ಕಳುಹಿಸುತ್ತಾನೆ. ಆ ಪ್ರಕಾರ ಸಂಧಾನಾರ್ಥವಾಗಿ ಬಂದ ಅಂಗದನ ಮಾತನ್ನು ರಾವಣನು ಧಿಕ್ಕರಿಸುವುದಲ್ಲದೆ ರಾಕ್ಷಸಭಟರು ಆತನನ್ನು ಹೊಡೆದು ಹಿಂಸಿಸಲಾಗಿ ಅಂಗದನು ಅವರೊಡನೆ ವೀರಾವೇಷ

ದಿಂದ ಕಾದುತ್ತಾನೆ. ಈ ಹೋರಾಟದ ಬೊಬ್ಬೆಯನ್ನು ಕೇಳಿ ಶಂಕಿಸಿದ ವಿಭೀಷಣನು ಅಂಗದನನ್ನು ಹಿಂದಕ್ಕೆ ಕರೆತರುವಂತೆ ಹನುಮಂತನಿಗೆ ಸೂಚಿಸುತ್ತಾನೆ. ಹನುಮಂತನು ಹೋಗಿ ಅಂಗದನನ್ನು ಸಮಾಧಾನಕ್ಕೆ ತಂದು, ರಾವಣನಿಗೆ ಕೊನೆಯ ಮಾತನ್ನು ಸಾರಿ ಅಂಗದನೊಡನೆ ಹಿಂದಿರುಗುತ್ತಾನೆ.

ಸಂಧಿಕಾರ್ಯವು ವಿಫಲವಾದುದನ್ನರಿತೊಡನೆಯೆ ಶ್ರೀರಾಮನು,ಲಗ್ಗೆ ಹತ್ತಿ ಮುತ್ತಿಗೆ ಹಾಕುವಂತೆ ಕಪಿಸೇನೆಗೆ ಅಪ್ಪಣೆಕೊಡಲು,ಕಪಿವೀರರು ಆಕ್ಷಣವೇ ಸಿಡಿಲೆರಗಿದಂತೆ ಕೋಟೆಯನ್ನು ಹುಡಿಹಾರಿಸಿ ಎದುರಾದ ರಾಕ್ಷಸರನ್ನು ಸದೆಬಡಿಯುತ್ತಾರೆ. ಉಭಯಬಲಗಳಿಗೂ ತುಮುಲಯುದ್ಧವಾಗುತ್ತಿರುವಾಗ ರಾವಣನ ಅಪ್ಪಣೆಯಂತೆ ವಿದ್ಯುಜ್ಜಿಹ್ವನು ರಾಮನ ಮಾಯಾಶಿರವನ್ನು ತಂದು ಸೀತೆಯ ಮುಂದೆ ತೋರಿಸುತ್ತಾನೆ. ಅನಂತರ ರಾವಣನ ಮಗನಾದ ಇಂದ್ರಜಿತುವು ಯುದ್ಧಕ್ಕೆ ಬಂದು ವಿಷಪೂರಿತವಾದ ಉರಗಾಸ್ತ್ರದಿಂದ ರಾಮಲಕ್ಷ್ಮಣರ ಸಮೇತ ಸಮಗ್ರ ಕಪಿವಾಹಿನಿಯನ್ನು ಮೂರ್ಛೆಗೊಳಿಸುತ್ತಾನೆ. ಇದನ್ನರಿತು ಆ ರಾತ್ರಿಯಲ್ಲಿ ಗರುಡನು ಬಂದು ವಿಷವೇಗವನ್ನು ಪರಿಹರಿಸಿ ಎಲ್ಲರನ್ನೂ ಎಬ್ಬಿಸುತ್ತಾನೆ. ಮರುದಿನ ಯುದ್ಧದಲ್ಲಿ ರಾವಣನು ಸ್ವತಃ ರಾಮನಿಗಿದಿರಾಗಿ ನಿಲ್ಲಲು, ಶ್ರೀರಾಮನು ತನ್ನ ಮೊದಲ ಬಾಣದಿಂದ ರಾವಣನ ಉಟ್ಟವಸ್ತ್ರಗಳನ್ನು ಕಳೆದೆಸೆದು ಬತ್ತಲೆಯಾಗಿ ನಿಲ್ಲಿಸಿದನೆಂಬಲ್ಲಿಗೆ ಯುದ್ಧಕಾಂಡದ 'ಅಂಗದಸಂಧಾನ'ವೆಂಬ ಈ ಪ್ರಸಂಗಕ್ಕೆ ಮಂಗಲವಾಗುವುದು.

**ಮುಖ್ಯ ಪ್ರಕರಣಗಳು**

೧. ಕಪಿಸೇನೆಯ ದಂಡಯಾತ್ರೆ
೨. ರಾವಣನ ಯುದ್ಧಸನ್ನಾಹ
೩. ಅಂಗದನ ದೂತಕಾರ್ಯ
೪. ಯುದ್ಧಾರಂಭ

**ಭೂಮಿಕೆಗಳು**

ರಾಮ
ಲಕ್ಷ್ಮಣ
ವಿಭೀಷಣ
ಸುಗ್ರೀವ
ಹನುಮ
ಅಂಗದ
ಜಾಂಬವ
ನೀಲ
ಕಪಿಗಳು
ರಾವಣ
ಪ್ರಹಸ್ತ
ಇಂದ್ರಜಿತು
ಶುಕ
ಸಾರಣ
ವಿದ್ಯುಜ್ಜಿಹ್ವ
ರಾಕ್ಷಸಭಟರು
ಸೀತೆ
ತ್ರಿಜಟೆ

# ಅಂಗದಸಂಧಾನ

೧ ರಾಗ ಸೌರಾಷ್ಟ್ರ—ತ್ರಿವುಡೆತಾಳ ೨

ಕುಶನೆ ಕೇಳ್ಳೈ | ಪುಷ್ಯಶುದ್ಧದ |
ದಶಮಿಯಲಿ ಪ್ರಾ | ರಂಭವಾಯಿತು |
ಉಸುರಲದು ಸಂ | ಪೂರ್ಣವು ತ್ರಯೋ | ದಶಿಯೊಳಾಯ್ತು ‖ ೧ ‖

ಆ ಕಪೀಂದ್ರರ | ಸಹಸವೆಂತುಟೊ |
ನಾಲ್ಕು ದಿವಸದಿ | ಸೇತು ನಡೆದುದು |
ನಾಕದಿಂ ಬಲು | ಭೇರಿ ಮೊಳಗಿತ | ನೇಕರಭಸ ‖ ೨ ‖

ಭಾನುನಂದನ | ನಾಗಳಾ ಕಪಿ |
ಸೇನೆಸಹಿತೊಡ | ಗೊಂಡು ಬಂದಾ |
ದಾನವಾಂತಕ | ಗೆರಗಿ ಪೇಳ್ದ ನಿ | ದಾನಗಳನು ‖ ೩ ‖

೨ ರಾಗ ದೇಶಿ—ಅಷ್ಟತಾಳ ೧

(ರಾಮಲಕ್ಷ್ಮಣರ ಪ್ರವೇಶ. ಆಮೇಲೆ ಸುಗ್ರೀವನು ಇತರ ಕಪಿಗಳೊಡನೆ ಬಂದು ವಂದಿಸುತ್ತಾನೆ)

ಸುಗ್ರೀವ—

ಆಯಿತು |—ಸೇತು | ಕಟ್ಟ ರಾ | ಜೇಂದ್ರ—|
ವಾಯುನಂ| ದನ ತಂದ | ಪರ್ವತ | ವಿಡೆ ಪೂರ್ಣ | ವಾಯಿತು ‖ ಪಲ್ಲವಿ ‖

ಜಾಂಬವ | ನೀಲಾಂಗ | ದರ ಸಾಹ | ಸವ ನಾನೇ |
ನೆಂಬೆನು | ಹತ್ತು ಯೋ | ಜನದಗ | ಲದ ಸೇತು |
ಎಂಬ ಮಾ | ತಿಗೆ ಶ್ರೀರಾ | ಮ—ವಾ | ನರರ ಕ |
ದಂಬವೀ | ಕ್ಷಿಸಿ ನಿಸ್ಸೀ | ಮ—ಲ | ಕ್ಷ್ಮಣನ ಮು |
ಖಾಂಬುಜ | ವನು ನೋಡಿ | ನಗುತ ಸು | ಪ್ರೇಮ— ‖ ೪ ‖

ಸುರರ ಪ | ಟ್ಟಣದಿಂದ ತರಿಸಿ ಬೇ | ಕಾದಂಥ |
ವರಸೋಪ | ಸ್ಕರಫಲಾ | ಹಾರವ | ನಿತ್ತು ಪ |
ಚರದ ಮಾ | ತುಗಳ ಹೇ | ಳಿ—ಅ | ನೇಕ ವಿ |

ಸ್ಮರದ ಸಂ । ತಸವ ತಾ । ಳಿ—ಮುಂ । ದೇನೆಂದು ।
ಶರಣಿನಂ । ದನ ವಿಭೀ । ಷಣನೊಳು । ಕೇಳಿ— ॥ ೫ ॥

ಹೇಳಿ ಚಿ । ತ್ರದೊಳಿದ್ದ । ಹದನ ಮಾ । ಳ್ಪುದಕೆಂದು ।
ಕೇಳಿಕೊ । ಳ್ಳಲು ಭಾನು । ಸುತ ಮುಂತಾ । ದವರು ಭೂ ।
ಪಾಲನ । ಪ್ಪಣೆಯೊಳಂ । ದು—ಸು । ಗ್ರೀವನ ।
ಪಾಳೆಯ । ಸಹಿತ ಬಂ । ದು—ಕ । ಟ್ಟೆತ್ತಿದ ।
ಮೂಲದ । ಬಳಿಯ ನೋ । ಡುತ ರಾಮ । ನಿಂದು ॥ ೬ ॥

೩ ರಾಗ ಘಂಟಾರವ—ಜಂಪೆತಾಳ ೧

ರಾಮ—

ಭಾನುನಂ । ದನ ಬಲ್ಲ । ಬಲುದಣಿದ । ರಿವರೆಲ್ಲ ।
ಕಾಣಲಸ । ದಳವೆಮಗೆ । ಕಟ್ಟಿರುವ । ಬಗೆಗೆ— ॥ ೭ ॥

ಅಂಗದನ । ಸಾಹಸಕೆ । ಆರೂ ಮೆ । ಚ್ಚುವರಿದಕೆ ।
ಕಂಗೊಳಿಪ । ಜಾಂಬವರು । ಕಷ್ಟಕೊದ । ಗಿದರು— ॥ ೮ ॥

ಹನುಮಂತ । ಗುಣದಿಂದ । ಹಂಗನಿ । ಕ್ಕಿಸಿಕೊಂಡ ।
ಪನಸನತಿ । ಪೌರುಷವ । ನೆಣಿಸಲಳ । ವಲ್ಲ— ॥ ೯ ॥

ಸುಮುಖ ದು । ರ್ಮುಖರುಗಳ । ಸಾಹಸಂ । ಗಳ ಪೊಗಳ ।
ಲಮಮ ಇದು । ಬಲು ಚೋದ್ಯ । ವೆಂಬಡೆಯ । ಸಾಧ್ಯ— ॥ ೧೦ ॥

ಏಸು ನಾ । ಪೊಗಳಿದರು । ಎಲ್ಲವರ । ಬಗೆ[1]ಯೇ ವಿ[1] ।
ಭೀಷಣನ । ಗುಣ[2]ವಿ[2]ನ್ನು । ಪುತ್ಥಳಿಯ । ಹೊನ್ನು— ॥ ೧೧ ॥

ನಳನ ಕ । ಷ್ಟಗಳೆಲ್ಲ । ನಾವ್ ಪೊಗಳಿ । ತುದಿಯಿಲ್ಲ ।
ತಿಳಿಯಬಹು । ದಿವರ್ಗೆಲ್ಲ । ನಾಪ್ ಕೊಡುವ । ಸೊಲ್ಲ— ॥ ೧೨ ॥

ಇಂತೆನುತ । ಲೆಲ್ಲರನು । ಈ ಬಗೆಯ । ಕೊಂಡಾಡಿ ।
ಕಂತುಪಿತ । ಕರೆದಿನಜ । ಗಿಂತೆಂದ । ನಾಗ— ॥ ೧೩ ॥

೪ ರಾಗ ಕಲ್ಯಾಣಿ—ಅಷ್ಟತಾಳ ೨

ರಾಮ—

ಪೋ—ಗ । ಬೇಕ, । ಯ್ಯ—ಸೇ । ತುವ ದಾಟಿ ।
ಸಾ—ಗ । ಬೇಕ, । ಯ್ಯ— ॥ ಪಲ್ಲವಿ ॥

---

1 ಬೇರೆ (ಅ)  2 ಕಿ (ಅ)

ಈಗ ನಾ | ಮುಂದೆ ತಾ | ಮುಂದೆಂದು | ಹೆಣಗಿಟ್ಟು |
ಸಾಗರ | ದಲಿ ಬೀಳ | ಲಾಗದಂ | ದದಲಿ— || ಅನುಪಲ್ಲವಿ ||

ಹಿಂ—ದೆ | ಇದ್ದವ | ರು—ಸೇ | ತುವ ದಾಟಿ |
ಮುಂ—ದೆ | ಹೋದವ | ರು—||
ಒಂದೇ ಕ | ಡೆಯಲಿ ತಾ | ಣ್ಯವನಿಕ್ಕಿ | ರಲಿ ಹೀ, |
ಗೆಂದು ಕ | ಟ್ಟಳೆಯಾದ | ಬಂದುಕ | ಟ್ಟನಲಿ— || ೧೪ ||

ಅ—ಲ್ಲಿ | ಇದ್ದುದ | ನು—ಮು | ಟ್ಟದಿರೊಂದು |
ಹು—ಲ್ಲ | ಕಡ್ಡಿಯ | ನು—||
ಎಳ್ಳಿನ | ಷ್ಟಾದರು | ಎಲ್ಲರೂ | ಕೂಡಿಕೊಂ |
ಡಲ್ಲದೆ | ಒಬ್ಬೊಬ್ಬ | ರಿರುಗಾಡ | ಬೇಡಿ— || ೧೫ ||

೫ ಭಾಮಿನಿಷಟ್ಪದಿ

ಸುಗ್ರೀವ—

ರವಿಕುಲೋದ್ಭವನುಚಿತವಚನವ |
ರವಿಕುಮಾರಕ ಕೇಳ್ದು ಸೇನಾ |
ರ್ಣವಕೆ ಇವರಿವರೆಂಬ ಭಣಿತೆಯ ಬಂದುಗಟ್ಟಿನಲಿ ||
ರವಿಕಿರಣವಡಗಲು ಮಹಾಂಬುಧಿ |
ರವರವಿಸೆ[1]ಮಧ್ಯದಲಿ ರಘುಪತಿ[1] |
[2]ರವಿಸುತನ ಕೈವಿಡಿಯುತೈದಿದನಾಮಹಾರ್ಣವವ[2] || ೧೬ ||

೬ ರಾಗ ಸೌರಾಷ್ಟ—ತ್ರಿವುಡೆತಾಳ ೨

ನಡೆವ ದಳಪದ | ಹತಿಯ ರಭಸಕೆ |
ನಡುಗುತಿದ್ದುದು | ಸೇತು ನೀರಲಿ |
ಹಡಗಿನಂತೊಲೆ | ದಾಡುತಿರ್ದುದು | ಬುಡವು ತುದಿಗೆ || ೧೭ ||
ಕುಂಭಕರ್ಣಾ | ದಿಗಳ ಪ್ರಾಣವ |
ಕೊಂಬಬಗೆಗೆನೆ | ಚರಣವಿಟ್ಟ ಮ |
ಹಾಂಬುಧಿಯ ಸೇ | ತುವಿನ ಮೊದಲಿನೊ | ಳಂಬುಜಾಕ್ಷ || ೧೮ ||

1 ಕಪಿಸೇನೆ ನಡೆದುದು
2 ಭುವನಕತಿಶಯಕೀರ್ತಿಯೆಂತುಟೊ ರಾಮಚಂದ್ರಮನ (ಅ)

೭ ರಾಗ ಪಂತುವರಾಳಿ—ಮಟ್ಟೆತಾಳ ೨

ರಾಮು—

ರಾಮು ಬಂದ | ನು— ರಾಕ್ಷಸ ಕುಲ | ಭೀಮು ಬಂದ | ನು—|
ಕಾಮರೂಪಿಗ | ಳಾದ ಕಪಿ, | ಸ್ತೋಮವನ್ನು | ಕೂಡಿಕೊಂಡು ||ಪಲ್ಲವಿ||

ಎಳೆಯಕಪಿಗ | ಳಿದಿರುಲಾಗಂ | ಗಳ[1]ನಿರಿಂಕಿ | ನೋಡು[1]ತ |
ಗಳಗೆ ಗಳಗೆ | ಹೊಳೆವಾಕಾಶ | ದೊಳಗೆ ಭೇರಿ | ವೊಳಗುತ |
ನಳಿನನಾಭ | ನಡಿಗೆ ಸುಮದ | ಮಳೆಗಳು ಬಂ | ದಿಳಿಯುತ |
[2]ಭಳಿರಿ ರಾಮು | ಜಯ[2]ಜಯ ವೆಂ | ದಾರತಿಗಳ | ಬೆಳಗುತ |
ಒಲಿದು ಸುರರಂ | ಬರದಿ ಪಾಡಿ | ರಾಮನಾಮು | ಪೊಗಳುತ || ೧೯ ||

ಕಡಲ ತೆರೆಗ | ಳುಬ್ಬುತ್ತಡಿ | ಗಡಿಗೆ ದಡಕೆ | ಬಡಿಯುತ |
ಒಡೆಯ ಸೀಸೋ | ಡೆದು ಜಳ[3]ದ | ಬೆಡಗನೊಡ್ಡಿ | ತೋರುತ[3] |
ತಡೆದು ತಡೆದು | ನೀರೊಳಡ್ಡ | ಕೆಡಹುಚೆಡಹು | ತಾಡುತ |
ಅಡಗಿದವರ | ನಟ್ಟಿಕಟ್ಟಿ | ಹಿಡಿದು ತಂಬು | ಕೂಡುತ |
ಪಡೆಯು ನಡೆಯ | ಲಾಗ ಸೇತು | ಹಡಗಿನಂತೋ | ಲಾಡುತ || ೨೦ ||

(ಎಲ್ಲರೂ ನಿಷ್ಕ್ರಮಿಸುತ್ತಾರೆ)

೮ ವಾರ್ಧಿಕಷಟ್ಪದಿ

ಅಣುಗ ಕೇಳಿಂತೀರು ದಿವಸ ನಡೆದುದು ದಂಡು
ಅಣೆದರಾ ದಡಹತ್ತಿ ಸುಗ್ರೀವನಾಜ್ಞೆಯಲಿ
ಗಣನೆಗೆಪ್ಪತ್ತೇಳು ಕೋಟಿ ಕಪಿನಾಯಕರು ರಾಮಲಕ್ಷ್ಮಣರು ಸಹಿತ |
ಬಣಗು ರಕ್ಕಸಗಲ್ಲಿ ಕಾವಲಿದ್ದವರತ್ತ
ಜುಣುಗಿದರು ಪಟ್ಟಣಕೆ ಬಂತು ಕೇಡೆಂದೆನುತ
ದಿನಮೂರರೆಣಿಕೆಯಲಿ ದುರ್ಗದ ಸಮೀಪದೊಳ್ ಬೀಡೆತ್ತಿತಾ ರಾಮನ ||೨೧||

(ಲಂಕೆಯ ಪೌರರ ಪ್ರವೇಶ)

೯ ರಾಗ ಗೌಳಮಲಹರಿ—ಅಷ್ಟತಾಳ ೧

ಗುಲ್ಲು ಹೆ | ಚ್ಚಿತು ಲಂಕಾ | ಪುರದಲ್ಲಿ |—ಕಪಿ |
ಪಾಳ್ಯ ಮಂ | ತಾಗಿ ಪ | ಟ್ಟಣವ ಮು | ತ್ತಿದರೆಂಬ || ಪಲ್ಲವಿ ||

---

1 ನೀರಿನಲಿ ಮುಳುಗು (ಅ) 2 ಲಲನೆಯರೆಲ್ಲರು (ಕಾ)
3 ದೊಳಗಿದ್ದವರ ಹಿಡಿದು (ಅ)

ಪಟ್ಟಣ | ಜನ ಬಾಯ | ಕಳಿಯುತ್ತ |—ಅಯ್ಯೋ |
ಕೆಟ್ಟೆವು | ಪಾಪಿರಾ | ವಣನಿಂದ | ಲೆನ್ನುತ್ತ ||
ಕಟ್ಟೆ ಸ | ರಕ ತೆಗೆ | ದೊಯ್ಯುತ್ತ |—ಊರ |
ಬಿಟ್ಟಾರ | ಣ್ಯವ ಸೇರಿ | ಬದುಕುವೆ | ವೆನ್ನುತ್ತ || ೨೨ ||

ಪೆಟ್ಟಿಗೆ | ಗಳನು ಕ | ಟ್ಟಿಡು ವಾಣಿ |—ಆಯ್ಯೋ |
ಕೆಟ್ಟಿತು | ದೇವತಾ | ರ್ಚನೆಯು ತುಂ | ಬಿಡು ಗೋಣಿ ||
ಪಟ್ಟೆಯ | ತೆಗೆಯದಿ | ಪ್ಪಳೊ ರಾಣಿ |—ಎಂಬ |
ಭಟ್ಟರು | ಗಳು ಊರು | ಬಿಟ್ಟು ಓ | ಡುವರೆಂಬ || ೨೩ ||

ಗಡಿಗೆ ಸಂ | ಡಿಗಳೆಲ್ಲ[1] | ಹೊತ್ತರು |—ಕೆಲ |
ರಡಿಗೆಯೂ | ಟಗಳೆಂಬ | ಗೊಡವೆಗೆ | ನಿತ್ತರು |
ಗಡಿಯ ಬಾ | ಗಿಲನೆಲ್ಲ | ಕಿತ್ತರು |—ಹಿಂದೆ |
ಸುಡುಗೇಡಿ | ನಲಿ ಹೋದ | ಬಗೆ[2]ಯನೆ[2] | ಚ್ಚತ್ತರು || ೨೪ ||

ಗೋಧನ | ಗಳನೆಲ್ಲ | ಬಿಟ್ಟರು |—ಕಡಲೆ |
ಗೋಧಿ ಬೆ | ಲ್ಲಗಳ ಕಂ | ಡವರಿಗೆ | ಕೊ[3]ಟ್ಟರು |
ಆದು ವ | ಸ್ತುಗಳ[3] ಕ | ಟ್ಟಿಟ್ಟರು |—ಖೂಳ |
ರಾದ ದಾ | ನವರ[4] ದು | ರ್ಗಕ್ಕೆ ಸಾ | ಲಿ[4]ಟ್ಟರು || ೨೫ |

೧೦ ವಾರ್ಧಿಕಷಟ್ಪದಿ

ತನೆಯರಿರ ಕೇಳಿ ಲಂಕಾಪುರದ ಗಜಬಜವ
ಸನಕಸರು ಬಂದು ರಾಮನ ಪರಸಲಾ ರಾತ್ರಿ
ಘನ[5]ಪಟ್ಟಣದೊಳೊ[6]ಗೆದ ಕಾರ್ಯ[5] [6]ಗಳ ಸಂಭ್ರಮವ[7]ವ
ಜನವಾರ್ತೆಯಿಂ[7] ಕೇಳುತ

(ಮೊದಲು ರಾವಣನ ಪ್ರವೇಶ, ಆಮೇಲೆ ಪ್ರಹಸ್ತನು ಬರುತ್ತಾನೆ)

1 ಡಗೆಗಳ (ಓ) 2 ಯಿಂದೆ (ಅ) 3 ಟ್ಟರು | ಹಾದಿಗೆ ಗಂಟ (ಕಾ, ಅ)
4 ಬೈಯುತ ಕಾಲುಕೊ (ಅ) 5 ನಾಗಿ ಪಟ್ಟಣದಿ ನಡೆದ ಗುಲ್ಲು (ಅ)
6 ಡೆದ ಗೂಳ್ಳ (ಕಾ, ಅ) 7 ದ ವಾರ್ತೆಯ (ಕಾ)

ಪ್ರಹಸ್ತ—

ಮನಸಿನಲಿ ನೊಂದುಕೊಂಡಾ ಮಂತ್ರಿವೀರ ರಾ ।
ವಣನ ನಿದ್ರಾಲಯು[1]ಕ್ಕಾಕ್ಷಣದಿ ಬಂದು[1] ಮ ।
ತ್ರಿನಕುಲೇಂದ್ರನ ಸೈನ್ಯವ್ಯೈಕಂದ ಚಾರಿತ್ರವಂ ಪೇಳ್ದನತಿ[2]ನಯ[2]ದೊಳು॥ ೨೬ ॥

೧೧ ರಾಗ ಮಧುಮಾಧವಿ—ಅಷ್ಟತಾಳ ೧

ಪ್ರಹಸ್ತ—

ಕೇಳಯ್ಯ । —ಮಾತ । ಕೇಳಯ್ಯ—।
ಪೇಳುವ । ದಿಂದೊಂದು । ಪೊಸಸುದ್ದಿ । ಕಿವಿಗೊಟ್ಟು ॥ ಪಲ್ಲವಿ ॥

ಬಾಲೆಯ । ನೀವು ತಂ । ದಾಕೆಯ । ಪತಿ ಎಪ್ಪ ।
ತ್ತೇಳು ಕೋ । ಟಿ ಕಪಿ । ಗಳ ಕೂಡಿ । —ಅಬ್ಧಿ ।
ಗಾಲಸ್ಯ । ಗೊಳದೆ ಸೇ । ತುವ ಹೂಡಿ । —ನೀರ ।
ಮೇಲೆ ಬ । ಪ್ಪಂತೆ ಹಾ । ದಿಯ ಮಾಡಿ । —ದಾಟಿ ।
ದರು ಗಡ । —ಬಂದ ।
ರಿದೆ ನೋಡ । — ಇನ್ನು ।
ಆಲೋಚಿ । ಸಿದರೆ ಮಾ । ಡುವದೇನು । —ಲಯ ।
ಕಾಲವಿ । ದಿನ್ನೆಂದು । ಫಲವೇನು ॥ ೨೭ ॥

ಹಿಂದುದ್ಯಾ । ನವ ಬಂದು । ಕೆಡಿಸಿದ । ಕಪಿಯಂಥ ।
ದೊಂದೊಂದು । ಲಕ್ಷ ಸಾ । ವಿರವಂತೆ । —ಕೆಲವು ।
ಕಂದಾಗಿ । ರ್ಪಧಿಕ ಭೀ । ಕರವಂತೆ । —ಕಯ್ಯೊ ।
ಳೊಂದೊಂದು । [3]ಪರ್ವತ । ತರು[3]ವಂತೆ । —ಕಾಯ
ಸ್ಥಿರವಂತೆ । —ಮೆರೆ ।
ದಿರುವಂತೆ । —ಅವು ।
ಹಿಂದಕ್ಕೆ । ಪಡೆದಿರ್ಪ । ವರವಂತೆ । —ನಮ್ಮ ।
ಕೊಂದೇ, । [4]ವೆಂಬಂಥ[4] । ಭರವಂತೆ ॥ ೨೮ ॥

---

1 ಕ್ಕೈ ತಂದು ಪೊಕ್ಕು (ಅ) 2 ಮುಂದ (ಕಾ, ಅ) 3 ವೃಕ್ಷಪರ್ವತ (ಕಾ, ಅ)
4 ಶಿರುವೆಂಬ (ಕಾ)

ಬೇವ ನೋ । ಡುವುದಕ್ಕೆ । ಕಳುಹಿದ । ಶುಕನನ್ನು ।
ದೇವರ । ನುಜರೆ ನೋ । ಡಿದರಂತೆ । —ಹಿಡಿದು ।
ಕಾವಲ । ಮನೆಗೆ [1]ಕೂ[1] । ಡಿದರಂತೆ । —ಓಡಿ ।
[2]ಸಾವೆನೆಂ । ಬಂ[2]ತೆ ಮಾ । ಡಿದರಂತೆ । —ಇದು ।
ದಿಟವಂತೆ । —ನಮ್ಮೊಳ್ ।
ಹಟವಂತೆ । —ಬಲು ।
ಕೋವಿದ । ವೀರಮು । ರ್ಕಟರಂತೆ । —ರಾ[3]ಮು[3] ।
ಸೇವೆಯೊ । ಳಗೆ ಬಲು । ಭಟರಂತೆ ॥ ೨೯ ॥

೧೨ ಕಂದ

ರಾವಣ—

ಇಂತಾ ವೈರಿಗಳಂದವ ।
ಮಂತ್ರೀಶ್ವರ ಪೇಳೆ ಕೇಳ್ದು ದಶಕಂಧರನುಂ ॥
ಅಂತರ್ಭಾವದಿ ಧೈರ್ಯವ ॥
ನಾಂತಾಗಳೆ[4]ಪೇಳ್ದ ಸಾರಣಂಗೆ ರಾಕ್ಷಸರರಸಂ[4] ॥ ೩೦ ॥

(ರಾವಣನು ಕರೆಯಲಾಗಿ ಸಾರಣನ ಪ್ರವೇಶ)

೧೩ ಕಲ್ಯಾಣಿ—ಅಷ್ಟತಾಳ ೩

ತಿಳಿದು ಬಾ । ರಾಮನ । ಪಾಳ್ಯದಂ । ಗವನೆಲ್ಲ ।
ಬಲವಂ, । ತರೊ ನಿದಾ । ನರೊ ಯೆಂಬ । ಬಗೆಯ ನೀ ॥ ೩೧ ॥

ಮಂಗಗ । ಳೆಷ್ಟುಂಟು । ಸಿಂಗಳೀ । ಕಗಳೆಷ್ಟು ।
ಸಂಗಡ । ಮುಸು[5]ಗ[5]ಳೆ । ಷ್ಟೆಂಬ [6]ಬ । ಗೆಯನೆಲ್ಲ[6] ॥ ೩೨ ॥

ನಮ್ಮವಗೂ । ರಾಮುಗೂ । ಒಮ್ಮನಸೊ । ಇಕ್ಕಟ್ಟೊ ।
ತಮ್ಮೊಳಿಂ । ತಿಹರೆಂದು । ಗಮ್ಮನೀ । ಗಿರುಳೆದ್ದು ॥ ೩೩ ॥

ಅನ್ನಾಹಾ । ರಗಳೇನು । ಎಣ್ಣೆ ನೀ । ರಿಂಗೆಲ್ಲಿ ।
ಹಣ್ಣುಹಂ । ಪ[7]ಲು ತಿಂಬು । ದೆನ್ನುವ । ನಿಜವ ನೀ[7] ॥ ೩೪ ॥

---

1 ದೂ (ಕಾ, ಅ) 2 ಜೀವಿಸದಂ (ಅ) 3 ಜ (ಅ) 4 ಕರೆಯುತೆಂದನಾಸಾರಣನೊಳ್ (ಅ) 5 ಡುಗ (ಕಾ) 6 ದಳವ ನೀ (ಕಾ) 7 ಲ ತಿಂಬರೆನ್ನುವಬಗೆಯನೀ(ಅ)

ಮಡದಿಗೋ । ಸುಗವಾಗಿ । ಹೊಡೆದಾಡಿ । ನಿಲುವರೊ ।
ಸಡಗರ । ವನು ತೋರಿ । ತಿರಿಗಿ ಹೋ । ಹರೊ ಯೆಂದು ॥ ೩೫ ॥

(ರಾಕ್ಷಸರ ನಿಷ್ಕ್ರಾಮ, ರಾಮಲಕ್ಷ್ಮಣರ ಪ್ರವೇಶ, ಸೆರೆಸಿಕ್ಕಿದ ಶುಕಸಾರಣರನ್ನು ಸುಗ್ರೀವನು ಹಿಡಿದು ರಾಮನೆದುರಿಗೆ ತರುತ್ತಾನೆ)

೧೪ ಕಂದ

ಬಂದಾ ಸಾರಣ ಪಾಳ್ಯದೊ
ಳಂ[1]ದಿರುಳೊಳ್[1] [2]ತಿರುಗ[2]ಲಪನ ಕೈಸೆರೆವಿಡಿದು ।
ಹಿಂದಿದ್ರಾತನ ಸಹಿತಲೆ
ತಂದಿದಿರಲಿ ನಿಲಿಸಿ ಪೇಳ್ದ ಭಾಸ್ಕರತನುಜಂ ॥ ೩೬ ॥

೧೫ ರಾಗ ದೇಶಿ—ಅಷ್ಟತಾಳ ೧

ಸುಗ್ರೀವ—

ಇವನೀಗ । ನೊದಲು ಬಂ । ದಾತ — । —ಕಪ ।
ಟವ ಮಾಡಿ । ಕಯ್ಸೆರೆ । ಸಿಕ್ಕಿ[3]ಕೊಂ । ಡಾ[3]ತ — ॥ ಪಲ್ಲವಿ ॥

ಇಂದು ಬಂ । ದವನಿವ । ನೀಗ — । —ಪಾಳ್ಯ ।
ದಿಂದ ಕ । ಳ್ಳರ ಹಾಗೆ । ತಿರಿಗಿ ಪೋ । ಪಾಗ — ॥
ಕಂದನಂ । ಗದ ಕಂಡು । ಬೇಗ — । — ಹಿಡಿ ।
ತಂದ ರಾ । ಕ್ಷಸದೂತ । ರಿವರಿಬ್ಬ । ರೀಗ — ॥ ೩೭ ॥

ಮುಂದಕ್ಕೆ । ಕರೆಸಿದ । ರವರ — । —ದಯ ।
ದಿಂದ ಮ । ನ್ನಿಸುತ ಕು । ಳ್ಳಿರಿಸಿಕೊಂ । ಡವರ— ॥
ಬಂದುದೇ । ಕೆಂದು ಬ । ಲ್ಲವರ — । — ಕೇಳ ।
ಲಂದು ವಿ । ಸ್ತರವಾಗಿ । ಪೇಳಿದ । ವಿವರ— ॥ ೩೮ ॥

ನೆಲೆಯಾ, । ಗದ ಮಾತಾ । ಡಿದರೆ — । —ಪ್ರಾಣ ।
ಉಳಿ[4]ಯು[4]ದು । ನೀವ್ ನಮ್ಮ । ಮುನಿದು ನೋ । ಡಿದರೆ —॥

---

1 ದಲೆಯುಲು (ಕಾ, ಅ) 2 ಸುಳಿಯು (ಕಾ) 3 ದನೀ (ಅ) 4 ವು (ಕಾ)

ಕಲಹಕಾ | ರಣವ ಮಾ | ಡಿದರೆ — | — ನಿವು |
ಗಳವಲ್ಲ | ರಾಕ್ಷಸ | ರೊಳಗೆ [1]ರೋ | ಡಿದ[1]ರೆ — || ೩೯ ||

೧೬ ರಾಗ ಕಾಂಭೋಜಿ—ಜಂಪೆತಾಳ ೧, ೨

ಶುಕಸಾರಣರು—

ರಘುವೀರ | ಕೇಳು ರಾ | ವಣನ ಸೌ | ಭಾಗ್ಯಗಳ |
ಪೊಗಳಲಳ | ವಲ್ಲ ಫಣಿ | ಪತಿಗೆ — |
ಅಗಣಿತನು | ಕುಂಭಕ | ರ್ಣನು ತಮ್ಮ | ಶಕ್ರಜಿತು |
ಮಗನು ಧನ | ಪತಿ ತದ | ಗ್ರಜನು — || ೪೦ ||

ಈರೇಳು | ಲೋಕದೊಡೆ | ತನ ಕರೆದ | ರೋಯೆಂದು |
ನೋರೆದೋ | ರುವ ಮಹಾ | ಲಕ್ಷ್ಮಿ — |
ವೈರಿಗಳಿ | ಗಳವಡದ | [2]ಇದುವೆ[2] ಲಂ | ಕಾದುರ್ಗ |
ಸೇರಿಹುದು | ಸಕಲಸೌ | ಭಾಗ್ಯ— || ೪೧ ||

ಜಾನಕಿಯು | ಕಳವಿನಲಿ ! ತಂದನುಜ | ನಂ ತೊರೆದ |
ಹೀನ[3]ಗುಣ | ವೆರಡದರ[3] | ಹೊರತು — |
ಏನುಬಗೆ | ಯಲಿ ಕಂಡ | ರೆಮ್ಮ ಪ[4]ನ[4] | ಜೈಸುವ ಸ |
ಮಾನ[5]ರಿ | ಲ್ಲೀ ಭುವನ | ದೊ[5]ಳಗೆ — || ೪೨ ||

ಭೇತಾಳ | ಬ್ರಹ್ಮರಾ | ಕ್ಷಸರೆಸೆದ | ಸರಳ ವೊನೆ |
ಈತಗಳ | ತಗಲಿದರೆ | ನೊಂದು — |
[6]ವ್ಯೆತುರಿಸಿ | ಹಲ್ಗಿರಿದು | ಹಣಿಗಿ ಕಿರಿ[6] | ಗುಟ್ಟೆ ಕಪಿ |
ಪೋತಗಳು | ಓಡದಿ | ರ್ದಪವೇ — || ೪೩ ||

ಕಂಡಮಾ | ತಾಡಿದರೆ[7] | ಖಾತಿಯು[7] | ಪ್ಪುದೆ ಪೇಳು |
ಪುಂಡರೀ | ಕದಳಾಕ್ಷ | ರಾಮು — |

---

1 ಸೇರುವ (ಅ) 2 ಭದ್ರ (ಕಾ) 3 ಅವಗುಣವೆರಡ (ಅ) 4 ರ (ಅ) 5 ದವರಿಲ್ಲ ಇದರೊಳ (ಅ) 6 ಭೀತಿಯಿಂದಲಿ ಹಲ್ಲಕಿರಿದು ಹಣಿ (ಅ) 7 ಕೋಪವ (ಓ)

ದಂಡಿಸಲ | ದೇಕೆ ಸಂ | ಧಾನವಂ | ನೆ[1]ರೆ[1]ಗೊಳಿಸಿ |
ಹೆಂಡತಿಯು | ನೊಯ್ವುದತಿ | ಲೇಸು — || ೪೪ ||

೧೭ ಕಂದ

ಕಪಿಗಳು—

ಒಡೆಯನ ಗುಣಮಂ ಪೊಗಳುತ
ಸಡಗರದಿಂ ಕಪಿಗಳೆಲ್ಲರಂ ಜರೆಯಲ್ಕಾ |
ಹೊಡೆ ಬಡಿ ಯೆಂಬಾ[2]ಮರ್ಕಟ
ರೊ[2]ಡಬಡಿಸುತ ರಾಮು ಪೇಳ್ದ ಸುಗ್ರೀವನೊಳಂ || ೪೫ ||

೧೮ ರಾಗ ಘಂಟಾರವ—ಜಂಪೆತಾಳ ೧

ರಾಮು—

ಕಪಿರಾಜ | ಕೇಳಿದಕೆ | ಕೋಪವೇ | ತಕೆ ನಮಗೆ |
ಕಪಟದವ | ರಿವರಲ್ಲ | ಕಲಹ ತರ | ವಲ್ಲ— || ೪೬ ||

ಬಂಟರಾ | ದವರುಗಳ | ಬ[3]ಲ್ಲತನ[3] | ತವ್ಮೊಡೆಯ |
ನೆಂಟುಮಡಿ | ಗುಣವ [4]ನಿಜ[4] | ವೆಂಬುದೇ | ಸಹಜ — || ೪೭ ||

ಮುಖದಿಚ್ಛೆ | ಯಂತುಸಿರ್ವ | ವೋಸದವ | ರಿವರಲ್ಲ |
ಸಕಲವನು | ತಿಳಿದ ಸ | ರ್ವಜ್ಞರಿವ | [5]ರೈಸೆ[5]— || ೪೮ ||

ನಮ್ಮ ಶೌ |ರ್ಯಗಳರವ | ತಮ್ಮವರೊ | ಳಾಡುವರು |
ನಿರ್ಮಲದಿ | ಕಳುಹುವುದೆ | ಧರ್ಮವ್ಯೆ | ನಮಗೆ — || ೪೯ ||

ಕಡಲಧಿಪ | ತಾ ಕೊಟ್ಟ | ಕಾಣಿಕೆಯು | ರತುನಗಳ |
ಉಡುಗೊರೆಯು ! ಕೊ[6]ಡಿಸಿದನು[6] | ಉಚಿತಗಳ | [7]ನರಿತು[7] — || ೫೦ ||

ತಳ್ವಹೋ | ಗದಿರೆಂಬ | ತಾಕೀತಿ | ಗಳ ಮಾಡಿ |
ಪಾಳ್ಯದಿಂ | ಕಳುಹಿದನು | ಪಟ್ಟಣ | ಕ್ಕವರ— || ೫೧ ||

---

1 ರೆ (ಕಾ, ಅ) 2 ಪ್ಲವಗರನೊ (ಅ) 3 ಅಲ್ಲಾತ ತ (ಕಾ, ಅ) 4 ಧಿಕ (ಕಾ)
5 ರಹುದು (ಅ) 6 ಡವಾಡಿ (ಓ) 7 ಹೇಳಿ (ಕಾ)

ಬಂದು ರಾ । ವಣನೊಡನೆ । ಒಂದೆರಡು । ಮಾತಾಡಿ ।
ಮಂದಿರಕೆ । ತೆರಳಲವ । ರಂದು ಬೆಳ । ಗಾಯ್ತು ॥ ೫೨ ॥

(ಮಂತ್ರಿಯಾದ ಪ್ರಹಸ್ತನೊಡನೆ ರಾವಣನ ಪ್ರವೇಶ)

೧೯ ರಾಗ ಮೋಹನ—ಅಷ್ಟತಾಳ ೨

ರಾವಣ—

ಸಾಂಬ ಸ । ದಾಶಿವ । ಸಾಂಬ ಸ । ದಾಶಿವ ।
ಸಾಂಬ ಸ । ದಾಶಿವ । ಸಾಂಬ ಶಿ । ವ— ॥ ಪಲ್ಲವಿ ॥

ದಿನಕರ । ನುದಿಸುವ । ಮುನ್ನ ರಾ । ವಣನೆದ್ದು ।
ಘನಬೇಗ । ದಿಂದ ಮ । ಜ್ಜನವ ಮಾ । ಡಿದನೆ— ॥ ೫೩ ॥

ಲಿಂಗಪೂ । ಜೆಯ ಮಾಡಿ । [1]ಮಕ್ಕಳು । ಸಹಿತಾಗಿ[1] ।
ಸಂಗಡ । [2]ಸಿಂಹಾ, । ಸನವನೇ । ರಿದನೆ[2]— ॥ ೫೪ ॥

ಕರೆಸಿ ತಾ । ಮಯ ವಿಶ್ವ । ಕರ್ಮರಿ । ಬ್ಬರ ದುರ್ಗ ।
ಭರಿತವಾ । [3]ಗಿಸಿದನೆ । ಆ[3]ರೆನಿಮಿ । ಷದೊಳು— ॥ ೫೫ ॥

ಏಳುಸು । ತ್ತಿನೊ[4]ಳಗ । ಳುಗಳನೆ । ಬ್ಬಿಸಿ ಯೇಳು[4] ।
ತಾ[5]ಳೆಯ । ಮರದುದ್ದ । ಸೀಳುಗ । ಲ್ಲಿನಲಿ[5]— ॥ ೫೬ ॥

ಅಗಳ ಹ । [6]ತ್ತ್ರಲು[6] ವ್ಯೆ, । ರಿಗಳು ಬಂ । ದರೆ ಜಾರಿ ।
ಜಗುಳಿ ಬೀ । ಳುವಹಾಗೆ । ಅಗೆಸಿದ । ಜರಿಯು— ॥ ೫೭ ॥

ಕಂಡಿಕಂ । ಡಿಗೆ ಕಾಣ । ದಂತೆ ಬ । ಪ್ಪವರಿಗೆ ।
ಮಂಡೆಯೊಳ್ । ಬೀಳ್ವಂತೆ । ಗುಂಡುಕ । ಲ್ಲುಗಳ— ॥ ೫೮ ॥

ಏಳುಸು । ತ್ತಿನೊಳಾನೆ । ಕುದುರೆ ಭಂ । ಡಿಗಳ ಬೇ ।
ತಾಳರ । ಕ್ಕಸರನ್ನೆ । ಸಾ[7]ಲಿರಿ । ಸಿದನು[7]— ॥ ೫೯ ॥*

---

1 ತನ್ನ ಮಕ್ಕಳು ಸಹ (ಕಾ) 2 ಬಂದು ಸಿಂಹಾಸನವೇರಿ (ಅ) 3 ಯಿತು ದುರ್ಗವ (ಅ) 4 ಳಾನೆ ಕುದುರೆ ಭಂಡಿಗಳ ಭೇ (ಅ) 5 ಳ ರಕ್ಕಸರನು ಸಾಲು ನಿಲಿಸಿದರು (ಅ) 6 ತ್ತಿರದಿ (ಕಾ) 7 ಲು ಸಾಲಿನಲಿ (ಅ) *ತೂರಿ ತೂರಿನ ಕಂಡಿ । ಕಂಡಿಯ ಬುಡಕೆ ಜಂ । ಬೂರಿ (?) ಯ ಲಕ್ಷ ಲಕ್ಷವನೆ ಹೇರಿದರು (ಕಾ)

ಈಟೆ ಸ | ಬಳ ಕೊಟ್ಟು | ತೊಂಬತ್ತ | ನಾಲುಕು |
ಕೋಟಿದಾ | ನವರ ನೀ | ಟಕೆ ನಿಲಿ | ಸಿದನು— || ೬೦ ||

[ಕೊಡುವ ಕೊ | ಡುವ ಮದ್ದು | ಗುಂಡುಗ | ಳನ್ನಿತ್ತಿ |
ಹೊಡೆವ ದಾ | ನವರನ್ನೆ | ನಿಂಗಡಿ | ಸಿದನು—] || ೬೧ ||

ಸುಣ್ಣ ಸಾ | ಸುವೆ ಸೀಗೆ | ಮೆಣಸಿನ | ಹುಡಿಹಾಕಿ |
ಎಣ್ಣೆ ಕೊ | ಪ್ಪರಿಗೆಯು | ಒಲೆಯಲಿ | ಕ್ಕಿಸಿದ— || ೬೨ ||

ಹಣ್ಣುಮು | ದುಕರನ್ನ | ದಕೆ ನಿಲಿ | ಸಿದ ಬಲು |
ಸಣ್ಣವ | ರಿಗೆ ಕವಣೆ | ಕಲ್ಲ ಕೊ | ಡಿಸಿದ— || ೬೩ ||

೨೦ ವಾರ್ಧಿಕಷಟ್ಪದಿ

ಭರ[1]ತಾದಿ[1] ನವಖಂಡದೇಶಗಳ ಭೂಭುಜರ
ಕರೆಸಿದನು ಗರುಡ ಗಂಧರ್ವ ಉರಗಾಧಿಪರ
ಕರಿ ತುರಗ ರಥ ಪುರುಷನೆರವಿ ಸೇನೆಯೊಳು ಸಂಗರಕೆ ಸನ್ನಾಹವಾಗೆ |
ಹೊರಸುತ್ತಿನಗಳ ನೀಟೆನ ಮೇಲೆ ನಿಂದು ದಾ
ನರಸೈನ್ಯಮಂ ಕಾಣಬೇಕೆಂದು ಶುಕಸಾರ
ಣರ ಕರೆಸಿ [2]ಯಾರುಯಾರೆಂದು[2] ಬೆಸಗೊಳಲು ಶುಕ ಬೆರಳಿಂದ ತೋರಿಸಿದನು || ೬೪ ||

೨೧ ರಾಗ ಕೇತಾರಗೌಳ—ಅಷ್ಟತಾಳ ೧

ನೋಡಿದೆ | ಯಾ ರಾವ | ಣೇಂದ್ರ ನಿ | ನ್ನನುಜನ |
ಕೂಡೆ ಯೋ | ಕಾಂತದಿಂ | ದ—||
ಆಡುವ | ಮಾತಿಗೆ | ಕಿವಿಗೊಟ್ಟು | ನಮ್ಮೆಲ್ಲ |
ನೋಡುವಾ | ತನೆ ರಾಘ | ವ— || ೬೫ ||

ಜೋಡಾಗಿ | ಎರಡುಬಿ | ಲ್ಲೊಂದುಕೈ | ಯಲಿ ಪಿಡಿ |
ದಾಡುವಾ | ತನೆ ಲಕ್ಷ್ಮ | ಣ—||
ಮೂಡಣ | ದೆಸೆಯಲಿ | ನಿಲಬೇಡೆಂ | ದೆನುತ ಕೈ |
ಮಾಡುವಾ | ತನೆ ಸುಗ್ರೀ | ವ— | ೬೬ ||

1 ತ ಮೊದಲಾದ (ಅ) 2 ಸೇನಾವಿವರಮಂ

ಕುಂಭಿನಿ । ಯುದಿಸುವ । ಮುನ್ನ ಪು । ಟ್ಟಿದನಾತ ।
ನೆಂಬರು । ಜಗದೊಳೆ । ಲ್ಲ—॥
ಅಂಬಿಕೆ ! ಶಿವನಿಗೆ । ಮದುವೆಯಾ । ದಾಗ ಹ ।
ತ್ತೊಂಭತ್ತು । ವರುಷವಂ । ತೆ— ॥ ೬೭ ॥

ಜಂಭಾರಿ । ಮೊದಲಾದ । ದಿವಿಜರೀ । ತಗೆ ನವೋ ।
ಎಂ[1]ಬುದು । ಸಹಜವಂ । ತೆ[1]—॥
ಅಂಬುಜಾ । ಸನನ ಜೊ । ಚ್ಚಲಕಂದ । ನದೆ ನೋಡು ।
ಜಾಂಬವ । ನಧಿಕಶೌ । ರ್ಯ— ॥ ೬೮ ॥

ತರಣಿಯೊಳ್ । ಸಂಥದಿಂ । ಸುರಗಿರಿ । ಯನು ದಿನ ।
ಕೆರಡುಬಾ । ರಿಗೆ ಸುತ್ತಿ । ದ—॥
ಭರಿತವಿ । ಕ್ರಮನಂತೆ । ಯವ್ವನ । ದೊಳಗೀ[2]ಗ[2] ।
ನೆರೆವನು । ವಾರ್ಧಕ್ಯ । ದಿ— ॥ ೬೯ ॥

ವನದಲ್ಲಿ । ಜಂಬುಮಾ । ಲಿಯ ಕೊಂದು । ನಮ್ಮ ಪ ।
ಟ್ಟಣವ ಹೋ । ಮಿಸಿದ ವೀ । ರ—॥
ಹನುಮಂತ । ನದಕೊ ಲ । ಕ್ಷ್ಮಣನ ಹ । ತ್ತಿರೆ ನಿಂದು ।
ಕುಣಿದಾಡು । ವವನೆ ನೋ । ಡು— ॥ ೭೦ ॥

ವಿನಯದಿ । ಕಪಿಪೋತಂ । ಗಳ ಹೆಗ । ಲೇರಿ ಕೊಂ ।
ಡೊನರುವಾ । ತನೆಯಂಗ । ದ—॥
ವನದೊಳು । ತಪಸಿಪ್ಪ । ಮುನಿಗಳ । ಹಾಗಿಪ್ಪಾ ।
ತನೆ ಗಜ । ಗವಯ ನೋ । ಡು— ॥ ೭೧ ॥

ವೃಷಭ[3]ನ । ವನ[3] ಹಿಂದೆ । ಕೈಲಾಸ । [4]ದಿಂ ನೀ ನಿಂ ।
ದಿ[4]ಸುತ [5]ಠ । ಕ್ಕರಿ[5]ದೆಯಂ । ತೆ—॥
ಅಸುರ ಕೇ । ಳಾ ಪಂಥ । ದಿಂದ ಮ । ರ್ಕಟನಾಗಿ ।
ಬೆಸೆದಿಪ್ಪ । ನವನೆ ನೋ । ಡು— ॥ ೭೨ ॥

---

1 ಬರು ಜಗವರಿಯೆ (ಕಾ) 2 ತ (ಓ, ಕಾ, ಅ) 3 ನಾಗಿಯೆ (ಅ) 4 ದೊಳು ಠಕ್ಕರಿ (ಕಾ) 5 ನಿಂದಿಸಿ (ಕಾ, ಅ)

ಉಸುರಲಿ । ನ್ನವನಿಂದ । ಬಲಭಾಗ । ದಲಿ ರಂ, ।
ಜಿಸುವಾತ । ನವನೆ ನೀ । ಲ— ॥
ಪೆಸರಿಸ । ಲರಿಯೆ ವೋ । ಲಾದ ವಾ । ನರವೀರ ।
ವಿಸರವ । [1]ನರಸ[1] ನೋ । ಡು— ॥ ೭೩ ॥

೨೨ ಕಂದಪದ್ಯ

ರಾವಣ—

ಈ ಪರಿಯಿಂದಂ ವರ್ಣಿಸೆ
ಭೂಪಾಲನ ಪಾಳ್ಯದೊಳಗೆ ಕಪಿನಾಯಕರಂ ।
ಕೋಪಿಸಿ ದಶಕಂಧರನುಂ
ತಾ ಪೌರುಷದಿಂದ ಪೇಳ್ದ ಶುಕಸಾರಣರ್ಗಂ ॥ ೭೪ ॥

(ರಾಮುಲಕ್ಷ್ಮಣರು ಸುಗ್ರೀವ,ಹನುಮ,ಅಂಗದರೊಡನೆ ಪ್ರವೇಶಿಸಿ ರಂಗಸ್ಥಳದ ಎಡಪಕ್ಕದಲ್ಲಿ ನಿಲ್ಲುತ್ತಾರೆ.)

೨೩ ರಾಗ ಕೇತಾರಗೌಳ—ಅಷ್ಟತಾಳ ೧

ರಾವಣ—

ಮರುಳಾದೆ । ಯೇನೊ ನೀ । ಬದನೆಕಾ । ಯನು ದೊಡ್ಡ ।
ಪರಬ್ರಹ್ಮ । ವೆಂಬಹಾ । ಗೆ—॥
ಮರದಿಂದ । ಮರಕೆ ಲಂ । ಘಿಸುವಂಥ । ಕಪಿಗಳ್ಸಂ ।
ಗರದೊಳೆ । ಚ್ಚಾಡುವ । ವೆ— ॥ ೭೫ ॥

ಸೂರ್ಯಗೆ । ಮೋಡ[2]ಗ । ಳದಿ[2]ರೆ ಕ । ಪ್ಪೆಗಳು ಕಾ ।
ಳೋರಗ । [3]ಕೆಣೆಯುಹ । ವೇ[3]—॥*
[4]ಗಾರುಗೆ । ಡುವುದಲ್ಲ । ದಿವು[4] ನಮ । ಗಿದಿರಾಗಿ ।
[5]ಹೋರುವ[5] । ದೆಲ್ಲ ಸು । ಳ್ಳು— ॥ ೭೬ ॥

ಬೇರುಬ । ಲ್ಲವರಿಗೆ । ಮರದೆಲೆ । ಯನು ತಂದು ।
ತೋರುವ । ರೆಲೆ ಮರು । ಳೆ— ॥

---

1 ನೀನೆ (ಅ); ನದಕೊ (ಕಾ) 2 ಕವಿದ (ಅ) 3 ಗಿದಿರಾದರೆ (ಕಾ)
*ಭೇರಿಯ ಬಡಿದು ಬೆ । ಕ್ಕಿನ ಬೆದರಿಸುವಂತೆ । ಯಾರಕೂಡೊಂಬೀ ಮಾತು । (ಕಾ, ಅ)
4 ಪಾರಾಗಿ ಕೆಡುವುದಲ್ಲದೆ (ಕಾ) 5 ಬಾರರಿ (ಕಾ)

ಮೂರು ಲೋ । ಕದ ಗಂಡ । ನಾ[1]ರಿಂತೆಂ । ದೆಂಬ[1] ಐ ।
ಚಾರವ । ತಿಳಿದು [2]ಪೇ । ಳು[2] — ॥ ೭೭ ॥

ಅಂತಕ । ಮೊದಲಾದ । ಅಮರರು । ಸಹಿತಾರ ।
ಚಿಂತೆಯೊ । ಳಿಹರು ಪೇ । ಳು— ॥
ಭ್ರಾಂತುಬು । ದ್ಧಿಯಲಿದಿ । ರಾಗಿ ರಾ । ಘವ ತನ್ನ ।
ಕಾಂತೆಯ । ನೊಯ್ವುದುಂ । ಟೇ — ॥ ೭೮ ॥

ಸರಳಿನ । ಮೊನೆಯೊಂದು । ತಾಗಿದ । ಡಿವು ಮೆಯ್ಯ ।
ತುರಿಸಿ ಕಿ । ಕ್ಕಿರಿಗುಟ್ಟು । ತ್ತ — ॥
ಭರದೊಳೋ । ಡುವ ಕಪಿ । ಪರಿವಾ[3]ರಂ । ಗಳಿಗೆ[3] ಸಂ ।
ಗರದೊಳಿ । ಚ್ಛಾ[4]ಟವಂ । ತೆ[4]— ॥ ೭೯ ॥

ಏಸು ಮ । ರ್ಕಟರಿದ್ದ । ರೇನಪ್ಪು । ದಹರಿಂದ ।
ಲೇ[5]ಶಾ[5]ಣು । ಮಾತ್ರ ನ । ಮ್ಮ — ॥
ಬೀಷಣ । ನೊಬ್ಬನ । ಲ್ಲದೆ ಮಿಕ್ಕಾ । ದವರೊಂದು !
ಕಾಸಿಂದ । ಕಡೆ ನಮ । ಗೆ — ॥ ೮೦ ॥

ದೂಷಣ । ತ್ರಿಶಿರ ಮಾ । ರೀಚ ಮುಂ । ತಾದರ ।
ನೀಸರ । ಕೊಂದೆನೆಂ । ಬ — ॥
ಮೆಯ್ಸಿರಿ । ಹಮ್ಮೆಲ್ಲ । ನಿಲಿಸದಿ । ರ್ದಡೆ ರಾವ ।
ಣೇಶನೆ । ಯಲ್ಲ ತಾ । ನು — ॥ ೮೧ ॥

ರಾಮ—

ಇನಿತು ಮಾ । ತಾಡುತ್ತ । ಲಿರಲು ತ । ಮ್ಮನಕಯ್ಯ ।
ಧನುವ ತೆ । ಕ್ಕೊಂಡು ರಾ । ಮ — ॥
ಕಣೆಯೊಂದ । ನೆಸೆದು ರಾ । ವಣನ ಶ್ವೇ । ತಚ್ಛತ್ರ ।
ವನೆ ತುಂಡು । ಗೆಯ್ಯಲಾ । ಗ — ॥ ೮೨ ॥

---

1 ರಿಂಬ ಬಗೆಯ (ಕಾ,ಅ) 2 ನೋಡು (ಅ) 3 ರಂಗಳು (ಕಾ) 4 ಡುವವೆ (ಕಾ,ಅ)
5 ಸ (ಅ)

(ರಾವಣನು ಅವಮಾನದಿಂದ ಮುಖತಿರುಗಿಸಿ ತನ್ನವರೊಡನೆ ಸಹಸಾ ಹೊರಟುಹೋಗುತ್ತಾನೆ. ಅಷ್ಟರಲ್ಲಿ ಸುಗ್ರೀವನು ನೆಗೆದುಹೋಗಿ ಆತನ ತಲೆಯ ಕಿರೀಟವನ್ನು ಕಿತ್ತು ತರುತ್ತಾನೆ.)

**ಸುಗ್ರೀವ—**

ಇನಸುತ । ಹಾರಿ ಈ । ರೈದು ಕಿ । ರೀಟವ ।
ಘನವೇಗ । ದಿಂದ ತಂ । ದು— ॥
ವನಜನಾ । ಭನ ಕಣ್ಣ । ಮುಂದಿಡ । ಲದ ಕಂಡು ।
ಮನದಿ ಕೋ । ಪಿಸಿದ ರಾ । ಮ— ॥ ೭೩ ॥

೨೪ ವಾರ್ಧಿಕಷಟ್ಪದಿ

ಲವನೆ ಕೇಳ್ ರಾವಣನ ಸಿತಛತ್ರ ಶಿರದ ಮಕು
ಟವ ತರಿಯಲಾ ಭಂಗದಿಂದ ಮರಳಿದ ಮನೆಗೆ
ಅವಮಾನ [1]ಮೊದಲೆದ್ದು ಮೆಯ್ದೋರೆ[1], 'ಪ್ರಥಮಚುಂಬನ ದಂತಭಗ್ನ'ದಂತೆ ॥
ಹವಣಿಸಿ[2]ರಲಿತ್ತ[2] ರಾಮನಪಾಳ್ಯದವ[3]ರಿದೇ
ಸಮಯ[3] ಲಗ್ಗೆ[4]ಯ ಪಡೆವಡಪ್ಪಣೆಯ ಕೊಡಿಸೆ[4]ನಲು
ದಿವಸಾಧಿಪತಿಕುಲೋದ್ಭವನವರ ಸಂತಯ್ಸಿ ರವಿಜಾತಗಿಂತೆಂದನು ॥ ೭೪ ॥

೨೫ ರಾಗ ದೇಶ್ಯಕಾಪಿ—ಅಷ್ಟತಾಳ ೧

**ರಾಮ—**

ಸಾರಿ ಕೊಂ । ದರೆ ಪಾಪ । ವಿಲ್ಲ — । — ನಮ್ಮ ।
ಧಾರಿಣೀ । ಪತಿಗಳ । ನಡತೆ ಇ । ದಲ್ಲ— ॥ ಪಲ್ಲವಿ ॥

ಇನ್ನಾದ । ರೂ ನಮ್ಮ । ಕಂಡು— । —ಸೀತೆ ।
ಯನ್ನು ತಂ । ದಿತ್ತು ತ । ಮ್ಮನ ಕೂಡಿ । ಕೊಂಡು— ।
ಮನ್ನಿಸಿ । ದರೆ ಬಂದ । ದಂಡು — । — ಪೋಪು ।
ದನ್ಯಾಯ । ವಿಲ್ಲ ಕೀ । ರ್ತಿಯನು ಮುಂ । ಕೊಂಡು — ॥ ೭೫ ॥

ಭ್ರಾಂತು ಬು । ದ್ಧಿಗಳೆಲ್ಲ । ಬಿಡಲಿ — । —ತನ್ನ ।
ಪಂಥ ಪೌ । ರುಷವ ಸಾ । ಚೆಯಲಿ ಕ । ಟ್ಟಡಲಿ — ।

---

1 ಲಕ್ಷ್ಮಿ ಮೈದೋರಿದಳು (ಅ) 2 ದನಿತ್ತ (ಕಾ) 3 ರತ್ತ ತವಕದಿಂ (ಕಾ)
4 ಗಪ್ಪಣೆಯ ನೀಡುವುದೆ (ಕಾ)

ಸಂತಾನ । ಸಹಿತ ರ । ಕ್ಷಿಸಲಿ— । —ಸಾಯು ।
ವಂಥದ್ದು । ಳ್ಕೊಡೆ [1]ಸಮ್ಮೊಳ್ । ಕದನಕ್ಕೆ । ಬರಲಿ[1] — ॥ ೮೬ ॥

ಸಂಧಾನ । ಕೊರ್ವನ । ಕಳುಹಿ — । —ನಾವಿಂ ।
ತೆಂದ ಮಾ । ತುಗಳ ರಾ । ವಣನಿಗೆ । ತಿಳುಹಿ—॥
ಬಂದರೊ । ಳ್ಳಿತು ಮಾತ । [2]ನುಳುಹಿ[2] — । —ಕಾರ್ಯ ।
ಹೊಂದದಿ । ದ್ದರೆ [3]ಮುಂದಾ । ಹುದನು ಬಿ । ತ್ತರಿಸಿ[3]— ॥ ೮೭ ॥

೨೬ ರಾಗ ಸೌರಾಷ್ಟ್ರ—ತ್ರಿವುಡೆ ತಾಳ ೨

ಸುಗ್ರೀವ—

ದಾನವಾಂತಕ । ನೆಂದಮಾತಿಗೆ ।
ಭಾನುಸುತ ಕ । ನ್ನಿಂದ ಜ್ಯೇಷ್ಠನ ।
ಸೂನುವನು [4]ಬೀ । ಳ್ಕೊಟ್ಟ[4]ನರಿಸಂ । ಧಾನಗೊಳಲು ॥ ೮೮ ॥

(ಅಂಗದನನ್ನುಳಿದು ಬೇರೆಲ್ಲರೂ ನಿಷ್ಕ್ರಮಿಸುತ್ತಾರೆ)

ಅಂಗದ—

ಭಾನುಮಾರ್ಗದೊ । ಳಡರಿ ದುರ್ಗವ ।
ಜಾಣನಂಗದ । ಬರಲು ಕೇರಿಯು ।
ಮಾನಿನಿಯುರಂ । ಜಿದರು ವೊದಲದು । ತಾನೆಯೆಂದು ॥ ೮೯ ॥

ಸೀರೆಗಳ ನಡ । ಗಿಸಿದರೆಣ್ಣೆಯ ।
ದೂರದಲಿ ಬ । ಚ್ಚಿಟ್ಟು ಬಂದರು ।
ನೀರ ಚಿಮ್ಮಿದ । ರೊಲೆಗೆ ಹಿಂದಣ । ಮಾರಿಗಂಜಿ ॥ ೯೦ ॥

ಬೆದಬೆದರಿ ವಾ । ನರನ ಬಾಲದ ।
ತುದಿಯನೀಕ್ಷಿಸಿ । ಕಿವಿಯೊಳೇಕಾಂ ।
ತದಲಿ ಮಾತಾ । ಡಿದರು ಕೆಲವರು । ಬದಲಿದೆಂದು ॥ ೯೧ ॥

---

1 ಕದನವನಪೇಕ್ಷಿಸಲಿ (ಅ) 2 ಕಳುಹಿ (ಅ) 3 ಬರುತಿರಲಿತ್ತ ತಿಳುಹಿ (ಕಾ, ಓ); ಬವರವನಲ್ಲೆಗಳಹಿ (ಅ) 4 ಕಳುಹಿಸಿದ (ಅ)

ಸಣ್ಣವರು ನೋ । ಡಿದರೆ ಬಾಳೆಯ ।
ಹಣ್ಣುಗಳ ಕರೆ । ಕರೆದು ಕೊಡುವರು ।
ಪುಣ್ಯವುಳ್ಳ । ದ್ದೆನುತ ಕೆಲರದ । ಮನ್ನಿಸಿದರು ॥ ೯೨ ॥

ಇಕ್ಕೆಲದ[1]ಲಂ[1] । ಗಡಿಯ ಬಾಗಿಲ ।
ನಿ[2]ಕ್ಕಿದ[2]ವರನು । ಜರೆದು ಭರಣಿಯ ।
ಸಕ್ಕರೆಯ ಮೆಲು । ತರಮನೆಯ ಒಳ । ಹೊಕ್ಕನಾಗ ॥ ೯೩ ॥

ತಡೆದ ಬಾಗಿಲ । ಭಟರ ಮಂಡೆಯ ।
ನೊಡೆದನಾ ಕಂ । ಕುಳಿನ ಮರದಲಿ ।
ಸಡಗರದೊಳೊಳ । [3]ನಡೆದನಾ[3] ಚಾ । ಪಡಿಯ ಮುಂದೆ ॥ ೯೪ ॥

(ಇಂದ್ರಜಿತು ಪ್ರಹಸ್ತಾದಿಗಳೊಡನೆ ಒಡ್ಡೋಲಗಸ್ಥನಾದ ರಾವಣನ ಪ್ರವೇಶ)

೨೭ ಭಾಮಿನಿಷಟ್ಪದಿ

ಬಾಲವನು ಸುರುಳಿಕ್ಕಿ ಕುಳಿತನು
ಕಾಲಭೈರವನಂತೆ ಖಳನೊ
ಡ್ಡೋಲಗದೊಳಿದ್ದವರು ಕೆಲರೊಳಸರಿದರಲ್ಲಲ್ಲಿ ॥

ಪ್ರಹಸ್ತ—

ಕಾಳಗದ ತೆರನಲ್ಲ ತಮ್ಮನ
ರೂಳಿಗದ ಕಪಿಯೆನುತ ಬಳಿಕ ವಿ
ಶಾಲಮತಿ ನಡೆತಂದು ಮಾತಾಡಿಸಿದನಂಗದನ ॥ ೯೫ ॥

೨೮ ರಾಗ ಕುರಂಜಿ—ಅಷ್ಟತಾಳ ೨

ಯಾರಯ್ಯ । —ಕಪಿ । ಯಾರಯ್ಯ— ॥ ಪಲ್ಲವಿ ॥
ಯಾರಯ್ಯ । ಬಂದ[4]ವ[4] । ನೀನು —! —ನಿನ್ನ ।
ದಾರಟ್ಟಿ । ದರು ಕಾರ್ಯ । ವೇನು — । —[5]ಅಂಥ[5] ।
ಮಹೂರುಕ । ಣ್ಣವನಾದ । ರೇನು— ।[6] —[6] ॥
ದ್ವಾರಪಾ । ಲಕರನಂ । ಜಿ[7]ಸಿ ಹೊಕ್ಕು[7] । ಬಲು ಮೊನೆ ।
ಗಾರನಂ । ದದಿ [8]ಬ[8] । ಮ್ಮನೆ ಬಂದು । ಕುಳಿತವ ॥ ೯೬ ॥

---

1 ರಂ (ಕಾ) 2 ಕ್ಕುವ (ಕಾ) 3 ಬಂದೆ (ಅ); ಹೊಕ್ಕ ನರ (ಕಾ) 4 ಕಪಿ (ಅ)
5 ದೊಡ್ಡ (ಓ, ಕಾ, ಅ) 6 ನಮ್ಮ (ಕಾ, ಅ) 7 ಸುತತಿ (ಅ) 8 ಸು (ಅ)

ಮೆಯ್ಯೊಳಿ | ಷ್ಟರ ಮದ | ವೇಕೆ — | — ಎರಡೂ |
ಕಯ್ಯ ಪ | ರ್ವತ ವೃಕ್ಷ | ಸಾಕೇ — | — ರಾವ |
ಣಯ್ಯನ | ವರು ರಾಂಬ | ಜೋ೯ಕೆ — | — ||
ಬಾಯ ಹೊ | ಯ್ಯುವರು ಹೋ | ಗಾಕಡೆ | ಯಲಿ ನಿಲ್ಲು |
ಕಯ್ಯಾಯುಃ | ಧನ ಕೆಳ | ಗಿಟ್ಟು ಮಾ | ತಾಡಯ್ಯ || ೯೭ ||

ಅಂಗದ—

ಬೆದರುವ | ದೇಕೆ ನೀ | ವೆಲ್ಲ — | — ನಿಮ್ಮೊಳ್ |
ಕದನಕ್ಕೆ | [1]ಬಂದವ | ನಲ್ಲ[1] — | — ನಮ್ಮ |
ಪದುಮಲೋ | ಚನ[2]ನೆಂದ[2] | ಸೊಲ್ಲ — | [3]—[3] ||
[4]ಪದುಳದಿಂ | ದಲೆ ದಶ | ವದನಗ | ರುಹಿ ಮತ್ತಾ |
ಬದಲುತ್ತ | ರವ ಕೊಂಡೊ | ಯ್ಯುವದಕೆ ಬಂ | ದವರಾವು[4] || ೯೮ ||

ಪ್ರಹಸ್ತ—

ಮರದಿಂದ | ಮರಕೆ ಹಾ | ರ್ವವರು — | — ಸಂಧಿ |
ಮರಿಯಾಡೆ | ಯೇನನ | ರಿವರು — | — [5]ನೋಡೆ[5] |
ಪುರುಬುಗ | ಳೆತ್ತಿ ಹ | ಣ್ಣುವರು — | — ನೊಂ ||
ದರೆ ಕಿರಿ | ಕಿರಿ ಕಿ | ರ್ರನೆ [6]ಕಿರಿ[6] | ಗುಟ್ಟುತ್ತ |
ಭರದಿಂದೋ | ಡುವ [7]ಬಾಲ[7] | ಭಟರು ನೀ | ವಲ್ಲವೈ || ೯೯ ||

ಅಂಗದ—

ದುರುಳಬು | ದ್ಧಿಗಳಿಲ್ಲ | ಕಲಿಸಿ — | — ಲೋಕ |
ತರಳೆಮಾ | ತುಗಳಿಲ್ಲ | ತಿಳಿಸಿ — | — ಸಿಕ್ಕ |
ಪರದ್ರವ್ಯ | [8]ದಿಂಡೊಳ್ಳು | ಬೆಳೆಸಿ — | —[8] ||
ತರುಣಿಯ | ರನು ಬಲಾ | ತ್ಕಾರ[9]ದಿಂ | ದೆಳೆ[9]ತಂದು |
ಸೆರೆಯೊಳಿ | ಕ್ಕಿಸುವಂಥ | ಮಂತ್ರಿ ನೀ | ನಲ್ಲವೈ || ೧೦೦ ||

---

1 ನಾವ್ ಬರಲಿಲ್ಲ (ಓ, ಕಾ) 2 ನೊಂದು (ಅ, ಕಾ) 3 ದಶ (ಅ, ಕಾ)
4 ವದನಗೆ ಕಳುಹಿದ | ನದನು ಪೇಳ್ವಲ್ಲಿಯ |
ಬದಲುತ್ತರವದೇನೆಂ | ಬುದನು ಕೇಳಲು ಬಂದೆ ||(ಅ,ಕಾ)
5 ಮಿಗೆ (ಕಾ, ಅ) 6 ಗುರು (ಕಾ) 7 ಪಟು (ಕಾ, ಅ) 8 ವ ತಿಂಬ ಕಳ್ಳನೀ ಲೋಕದ(ಅ)
9ದಿ ಹಿಡಿ (ಅ)

೨೯ ರಾಗ ಕೇತಾರಗೌಳ—ಅಷ್ಟತಾಳ ೧

ಪ್ರಹಸ್ತ—

ಮಾತಿನೊ । ಳ[1]ತಿ[1]ಜಾಣ । ನಹು[2]ದೊ ಪು । ಟ್ಟಿಸಿದಂಥ[2] ।
[3]ಶಾತನಾ[3] । ರಯ್ಯ ಹೇ । ಳು— ॥
[4]ಮಾತೆಯೆ । ಲ್ಲಿಯಳಾವ । ದೇಶ ಮ । ತ್ತಿಲ್ಲಿಗಿಂ ।
ದೇತಕೆ । ಯ್ತಂದೆ ಹೇ । ಳು —[4] ॥ ೧೦೧ ॥

ಅಂಗದ—

ತಾತ ನಿ । ಮ್ಮವನ ತೊ । ಟ್ಟಿಲಬ, । ಳ್ಳಿಗೆ ಕಟ್ಟಿ ।
ದಾತ ಹೆ । ತ್ತವಳು ತಾ । ರೆ — ॥
ಭೂತಳಾ । ಧಿಪರಾಮ । ದೂತನಂ । ಗದನೆಂಬ ।
ಪ್ರೀತಿಯ । ಪೆಸರಿನ । ಗೆ— ॥ ೧೦೨ ॥

ಪ್ರಹಸ್ತ—

ಲೇಸ ಮಾ । ಡಿದ ಸು, । ಗ್ರೀವ ಹಿಂ । ದಣ ಮನಃ ।
ಕ್ಲೇಶವ । ಬಿಡದೆ ನಿ । ನ್ನ — ॥
ನೋಸದಿ । ರಿಪುಬಾಯೊ । ಳಿಳಿಯಲಿಂ । ದಟ್ಟಿದ ।
ನೀ ಶಿಶು । ವರಿತುದಿ । ಲ್ಲ— ॥ ೧೦೩ ॥

ಅಂಗದ—

ಘಾಸಿಮಾ । ಡುವರಾರು । ಬರಲಿ ಸು । ಮ್ಮನೆ ಪ್ರಾಣ ।
ದಾಸೆಯ । ಬಿಟ್ಟು [5]ನಿ । ಮ್ಮ[5] — ॥
ಕಯ್ಸೆರೆ । ಸಿಕ್ಕಿದೆ । ನಿಮ್ಮ ಮ । ನದೊಳಿದ್ದ ।
ವಾಸಿಯ । ನಡೆಸಿ ಬೇ । ಗ— ॥ ೧೦೪ ॥

ಪ್ರಹಸ್ತ—

ಅನ್ಯಾಯ । ಇನಜ ಮಾ । ಡಿದರೇನು । ನಮಗೆ ನೀ ।
ಸಣ್ಣವ । ನಾದ ಮೇ । ಲೆ— ॥

---

1 ಗೆ (ಅ, ಕಾ) 2 ದು ನಿನ್ನನು ಪೆತ್ತ (ಅ) 3 ಮಾತೆಯಾ(ಅ) 4 ಶಾತನದಾರು ನಿ। ನ್ನಯ ಪೆಸರೇನೆಂದು । 5 ನೀವು; ನಾವು (ಅ, ಕಾ)

ನಿನ್ನ ರಾ | ಜ್ಯಪ ನಿನ | ಗಿತ್ತುಪ | ಚಾರದಿ |
ಮನ್ನಿಸಿ | [1]ಕಳು[1]ಹುವೆ | ವು — || ೧೦೫ ||

ಅಂಗದ—

ಕನ್ನೆಯ | ಕದ್ದು ತಂ | ದಂಥ ರಾ | ವಣನೆಂಬ |
ಕುನ್ನಿಯಾ | ರೆಂದವ | ನ— ||
ಕಣ್ಣಿಗೆ | ಕಾಣಿಸಿ | ಕೊಡುವದ | ರಿಂದ್ಹೆಚ್ಚು |
ಮನ್ನಣೆ | [2]ಬೇಡೆವು | ಗೆ[2] — || ೧೦೬ ||

ಪ್ರಹಸ್ತ—

ಬಾಲವು | ರ್ಕಟ ಕೇ[3]ಳು | ಬಾಯ್ಗೆ ಬಂ | ದಂಥಾದ್ದ[3] |
ಹೇಳಿ ಹಿಂ | ದೊಂದು [4]ವುಂ | ಗ[4] — ||
ಬಾಲ[5]ಸು | ಡಿಸಿಕೊಂಡು | ಲಜ್ಜೆಗೆ | ಟ್ಹೋದಂಥ[5] |
ಕಾಲ ಬ | ಪ್ಪುದು ನಿನ | ಗೆ— || ೧೦೭ ||

ಅಂಗದ—

ಕೇಳಲಿ | ಲ್ಲವೆ ಬಂದಾ | ಕಪಿಯು [6]ವಿ | ಕ್ಕವರೆ[6]ಲ್ಲ |
ಬಾಲಸು | ಡುಕ ಛೀ ಯೆಂ | ದು — ||
ಆಲಿಬೊ | ಬ್ಬಿರಿದಟ್ಟಿ | ಬದಲು ಬಂ | ದವ ಯೆನ್ನ |
ಬಾಲವ | ಈಣಕಿ ನೋ | [7]ಡಿ[7] — || ೧೦೮ ||

ಪ್ರಹಸ್ತ—

ಎ[8]ಷ್ಟರ[8] | ಚಪಲತ್ವ | ಕಲಿತೆಯಾ | ದರು ನಿನ್ನ |
ಹುಟ್ಟುವು | ರ್ಕಟನೆಂಬ | ರು— ||
[9]ಸೃಷ್ಟೀಶ | ನಿನ್ನೊಳೆಂ | ದಂತರಂ | ಗದ ಮಾತ[9] |
ಕೊಟ್ಟು ನೀ | ನಡೆ ಸುಮ್ಮ | ನೆ — || ೧೦೯ ||

---

1 ಸಲ (ಅ) 2 ನಮಗಿಲ್ಲವೈ (ಅ, ಕಾ) 3 ಳ್ ಬಾಯಿಗೆ ಬಂದ ವಚನವ (ಅ) 4 ಕಪಿ (ಕಾ, ಅ) 5 ವಸುಡಿಸಿ ಲಜ್ಜೆಯಲಿ ಪೋದವನಂ (ಅ) 6 ಪೋತಗಳೆ (ಅ, ಓ, ಕಾ) 7 ಡು (ಅ) 8 ಷ್ಟು ನೀ (ಅ, ಕಾ) 9 ಸುಟ್ಟರಾವುನು ನಿನ್ನೊಳೆಂದಂತರಂಗವ (ಕಾ)

ಅಂಗದ—

ಎಷ್ಟು ನೀ । ಪೌರುಷ । ತ್ಯವ ಮಾಡಿ । ದರು ದೊರೆ ।
ಯಿಟ್ಟ ಚಾ । ಕರ[1]ನಲ್ಲ । ವೈ[1] — ॥*
[2]ಸೃಷ್ಟಿ ಜಾ । ತೆಯ ಕಳ । ವಿನಲಿ[2] ವಂ । ಚಿಸಿ ತಂದ ।
ಭ್ರಷ್ಟನಾ । ರಯ್ಯ ತೋ । ರು— ॥ ೧೧೦ ॥

೩೦ ರಾಗ ಕುರಂಜಿ, (ಕಾಂಭೋಜಿ)—ಅಷ್ಟತಾಳ ೨

ಪ್ರಹಸ್ತ—

ಕಂಡೆಯಾ । —ಕಡು । ವೀರರಾ । ವಣನ ನೀ । ಕಂಡೆಯಾ ॥ ಪಲ್ಲವಿ ॥

ಕಂಡೇಯ । ಕಪಿ ಕಡು । ಜಾಣ — । —ಮಾ ।
ರ್ತಂಡಪ್ರ । ಕಾಶಪ್ರ । ವೀಣ — । —ಸುಪ್ರ ।
ಚಂಡ ವಿ । ಜಿತಪಂಚ । ಬಾಣ — । —ಅಖಿ ।
ಲಾಂಡಕೋ । ಟಿ ಬ್ರ । ಹ್ಮಾಂಡನಾ । ಯಕ ಶತ್ರು ।
ಖಂಡನ । ರಿಪುಗಜ । ಗಂಡಭೇ ।ರುಂಡನ — ॥ ೧೧೧ ॥

ಸಂಗರ । ವಿಜಯವಿ । ಹಾರ — । —ಶಿವ ।
ಲಿಂಗಪೂ । ಜೆಯಲಿ ವಿ । ಸ್ತಾರ — । — ಚತು ।
ರಂಗವೇ । ದದ ಸದ್ವಿ । ಚಾರ — । — ಕರು ।
ಣಂಗಳಿಂ । ದಖಿಳಲೋ । ಕಂಗಳ । [3]ನಾಳ್ವ ಉ[3] ।
ತ್ತುಂಗಬ । ಲಾಢ್ಯ ಶ್ರೀ । ಮಂಗಳ । [4]ಕಾಯನ[4] ॥ ೧೧೨ ॥

ಶಿವನಿಂದಾ । ಯುಷ್ಯವ । ಪಡೆದ — ।—ಮತ್ತೆ ।
ದಿವಿಜರೆ । ಲ್ಲರನಟ್ಟಿ । ಹಿಡಿದ — । — ಸೊಕ್ಕಿ ।
ದವರ ತ । ಗ್ಗಿಸಿ ಬಾಯ । ಹೊಡೆದ — । — [5]ಶತ್ರು[5] ।
ನಿವಹವ । [6]ಜಯಿಸಲೆಂ[6] । ದವನಿಜಾ । ತೆಯ [7]ಬಂಧ ।
ನವ ಮಾಡು । ತೊಡ್ಡೋಲ । ಗದಿ ಕುಳ್ಳಿ । ರ್ಪಾತನ[7] ॥ ೧೧೩ ॥

---

1 ನೀನಲ್ಲೈ(ಓ) * ತುಟ್ಟತುದಿಯ ಮಾತಿ । ದೀಗ ಪೇಳುವೆ ಕೇಳು । ದೃಷ್ಟವೆಂದರಿತು
ನೀನು॥(ಅ)ನಿಷ್ಠುರವೇಕೆ ನಿ । ನ್ನೊಡನೆ ನಮ್ಮೊಡೆಯರು । ಕಟ್ಟು ಮಾಡಿಸಿದ ಮಾತ ॥(ಅ,ಕಾ)
2 ಕೊಟ್ಟು ಹೋ । ಗುವೆವು ಜಾ । ನಕಿಯ (ಅ) 3 ಪೊರೆವ (ಕಾ) 4 ಕಾಂತಿಯ (ಅ)
5 ಜನ (ಅ, ಕಾ) 6 ಜಿಕತೆಯೆಂ; ಜಿಕತೆಯಾ (ಕಾ,ಅ) 7 ತಂದು । ಸವಿನಯದಿಂದ ಪಾಲಿಪ
ಧೀರೋದಾರನ (ಅ)

೩೧ ಭಾಮಿನಿಷಟ್ಪದಿ

ಅಂಗದ—

ಈತನೇ ದಶಕಂಠನಾ ಶ್ರೀ
ನಾಥನಿಲ್ಲದ ವೇಳೆಯಲಿ ಭೂ
ಜಾತೆಯನು ಕದ್ದೊಯ್ವ ಸಮಯದಿ ತಡೆದ ಖಗಪತಿಯ ॥
ಘಾತಕವ ತಾನೆಸಗಿ ಕೊಂದಾ
ಪಾತಕಿಯ ನೋಡಿದರೆ ದೋಷವ
ದೇತಕಕಟಾ ಕಂಡೆನೆನುತಲೆ ಮಾತನಾಡಿಸಿದ ॥ ೧೧೪ ॥

೩೨ ರಾಗ ಗೌಳಮಲಹರಿ—ಏಕತಾಳ ೩

,ಏನ್ಯಾ್ಕ | ರಾವಣ | ,ನೀನ್ ಮ್ಯಾ | ಸೀತೆಯ |
,ಕಾಣದ | ಹಾಂಗೆ ಕದ್ದು | [1]ತಂದೆಯೋ[1] | ನ್ಯಾ್ಕ—॥
,ತಾನಾಗಿ | ರಾಮಚಂದ್ರ | ,ಸೇನೆಯ | ಕೂಡಿಕೊಂಡು |
ನೀನಿ,[2]ಪ್ಪ | ತಾವಿ[2]ಗಾಗಿ | ಬಂದ ಕಾ | ಣ್ಯಾ್ಕ— ॥ ೧೧೫ ॥

ನಿನ್ನ,ಬ | ಳಿಗೆ ರಾಮ | ಎನ್ನ,ಕ | ಳುಹಿಕೊಟ್ಟ |
ಇನ್ನಾದ್ರೂ | ಸೀತೆಯ | ಬಿಡುತೆಯೋ | ನ್ಯಾ್ಕ—॥
,ಎನ್ನಿಂದ | ತಪ್ಪಾತೆಂದು | ಹೊನ್ನ ಕಾ | ಣಿಕೆ[3],ಕೊಟ್ಟು[3] |
[4],ಬೆ[5]ನ್ನಾಗೆ[4] | ಮರೆಯೊಕ್ಕು | ಇರು[5]ತೆಯೋ | ನ್ಯಾ್ಕ— ॥ ೧೧೬ ॥

ಏತ,ಕೀ | ಛಲ ರಘು | ನಾಥ, ಮಾ | ನವನಲ್ಲ |
ಆತ,ನಾ | ರಾಯಣ | ಸಾಮಿ ಕಾ | ಣ್ಯಾ್ಕ—॥
ಸೀತೆ,ಲ | ಕ್ಷ್ಮಿ ಮಾ | ಶೇಷ, ಲ | ,ಕ್ಷ್ಮಣ |
ಭೂತ,ಳ | ದೊಳಗವ | ತರಿಸಿ[6]ದೋ[6]ರ್ | ಮ್ಯಾ— ॥ ೧೧೭ ॥

ಮಂಡೋ,ದ | ರಿ,ಭಾಳ | ಮಕ್ಕಳ | ಹೆತ್ತ[7]ವಳೆ[7] |
ಕಂಡೋ,ರ | ಬಾ[8]ಯ್ ಕು[8]ತ್ತ | ಮಾಡೋಬೇ | ಡ್ಯಾ್ಕ ॥
[9]ಬಂಡಾ,ಟ | ಕಿಕ್ಕಿ[9]ಸಿಕ್ಕಿ | ತಂಡ,ತಂ | ಡದೊಳಿಪ್ಪ |
ಹೆಂಡ್ಯಾ, ರ | ವಾಲೆ, | ಕಳಚಬೇ | ಡ್ಯಾ್ಕ — ॥ ೧೧೮ ॥

---

1 ತರಬಹುದೇ (ಅ) 2 ದ್ದ ಬಳಿ (ಅ) 3 ಯಿತ್ತು (ಕಾ) 4 ಚೆನ್ನಾಗಿ (ಅ)
5 ನ್ನ ಮರೆಯ ಬಂದು ಹೊಗು (ಕಾ) 6 ಹ (ಓ) 7 ಳೆಂದು (ಅ) 8 ಯತುತ್ತ (ಅ, ಕಾ)
9 ಚಂಡತನಕೆ

ಕಂಡ,ವ್ರ । ನಾತ್ ಕೇಳಿ । ಕೊಲಿ[1]ಸ್ಬ್ಯಾಡ । ಜಾತೀಯ[1] ।
[2]ಪುಂಡ,ತ । ನ ಬಿಟ್ಟ[2]ಟ್ಟು । ಬಾಳು ಕಾ । ಣ್ಮ್ಯಾ ॥
ರುಂಡ,ಮಾ । ಲೆಯ ಕಟ್ಟಿ । ಕೊಂಡಂ,ಥ । ಶಿವಕೊಟ್ಟ ।
ದ್ದುಂಡುಂಡು । ಸುಕ[3]ದಾಗೇ । ಸಾಯಿ ಕಾ । ಣ್ಮ್ಯಾ[3] ॥ ೧೧೯ ॥

ಈರೇಳು । ಲೋಕದಾ । ಪಾರು,ಪ । ,ತ್ಯನಾಡಿ ।
ಗಾರಾಗಿ । ಕೆಟ್ಹೋಗೋ । ಬೇಡ ಕಾ । ಣ್ಮ್ಯಾ ॥
ಭಾರೀ, ಸಂ । ಪತ್ತು ಲಂಕೆ । ಯಊರ,ನೆ । ಹಾಳ್ಮಾಡ ।
ಜೋರ,ತ । ನ[4]ಕೆ ಮಾನ । ಮಾರಬೇ । ಡ್ಮ್ಯಾ[4] ॥ ೧೨೦ ॥

ಶೂರು,ಪ । ನಖಿ ಹೇಚ್ಚು । ಮಾಳಿ,ಯ । ಮಾತ್ ಕೇಳಿ ।
ಖರ, ದೂ । ಷಣರೇ । ನಾದರ್ ಹೇ । ಳ್ಮ್ಯಾ ।
ಸಾರ, ವ । ನೋಡ್ ಕೊಂಡು । ಸಕಲ,ವ । ತಿಳಿದು, [5]ಬಹ[5] ।
ಮಾರಿ, ಯ । ಹೊಕ್ಕು ಸ್ಸಾಯ್ । ಬೇಡ ಕಾ । ಣ್ಮ್ಯಾ ॥ ೧೨೧ ॥

೩೩ ರಾಗ ಭೈರವಿ—ಏಕತಾಳ ೧, ೨

**ರಾವಣ—**

ಇನಿತೆಂ । ದಾ ನುಡಿ । ಕೇಳಿ—।—[6]ಆ ।
ದನುಜನು । ರೋಷವ[6] । ತಾಳಿ—॥
ವನಚರ । ನನು ಹ್ಯೊ । ಯೆಂದ—।—ಅಂಗ ।
ದನ ಮು । ತ್ತಿತು ಖಳ । ವೃಂದ— ॥ ೧೨೨ ॥

ಗಜರಥ । ತುರಗಗ । ಳಿಂದ—।—ಖಳ ।
ವ್ರಜರುಗ । ಳೈತರ । ಲಂದಾ—॥
ಭುಜ[7]ಬಲ । ಗಳ ತೋ । ರೆಂ[7]ದಾ—।—ಬಿಡಾ ।
[8]ಉ[8]ಜಸುತ । ನಂದನ । ಕೊಂದ— ॥ ೧೨೩ ॥

(ರಾಕ್ಷಸಭಟರಿಗೂ ಅಂಗದನಿಗೂ ಯುದ್ಧವಾಗುವುದು)

---

1 ಸ ಬೇಡ ಜಾತಿಯ (ಅ) 2 ದಿಂಡತನವ ಬಿ (ಕಾ) 3 ದೊಳಿರಬಾರದೇನ್ಮ್ಯಾ (ಅ) 4 ದಿ ಕೆಡಬೇಡ ಕಾಣ್ಮ್ಯಾ (ಕಾ, ಅ) 5 ದೊಡ್ಡ (ಅ, ಕಾ) 6 ದನು । ಜನಾ ರೋಷಾಗ್ನಿಯ (ಕಾ) 7 ಗಳ ಬಲತೋರಲ್ಕಂ (ಕಾ) 8 ದ (ಅ)

ಈಟೆಯು । ವರ ಸಡೆ । ಬಡಿದ—।—ಬಿ ।
ಲ್ಲಾಟದ । ವರ [1]ಬೆ । ನ್ನೊಡೆ[1]ದ—॥
[2]ಲೂ[2]ಟಿಗ । ಜದ ಕಾ । ಲ್ವಿಡಿದ—।—ಹೊರ ।
ಕೋಟೆಯ । ಸಂದಿಗೆ । [3]ಸೆ[3]ಡಿದ ॥ ೧೨೪ ॥

(ಓಡುವ ರಕ್ಕಸರನ್ನು ಬೆರಸಿಕೊಂಡು ಅಂಗದನೂ ರಂಗಸ್ಥಳದಿಂದ ಹೊರಟು ಹೋಗಲು ಎಡಬಾಗಿಲಿಂದ ರಾಮನೂ ಹನುಮಂತನೂ ಪ್ರವೇಶಿಸುತ್ತಾರೆ.)

ರಾಮ—

ಬೀಳುವ । ಗಜತುರ । ಗಗಳ—।—ರಾಮ ।
ಕೇಳಿದ । ಬಲು ಬೊ । ಬ್ಬೆಗಳ—॥
ಕಾಳಗ । ವಾಯ್ತಂ । ಗದಗೆ—।—ಶಿಶು ।
ತಾಳುವು । ದೆಂತೀ । ಬಗೆಗೆ— ॥ ೧೨೫ ॥

ಮರುತಸು । ತನೆ ನೀ । ಬೇಗ—।—ಹೋಗಿ ।
ಕರೆತಾ । ರಂಗದ । ನೀಗ—॥
ಶರಣನಿಂ । ತೆನೆ ಶರ । ಣೆಂದ—।—ಬಲು ।
ತ್ವರಿ[4]ತೋ[4] । ಗ್ರದಿ ನಡೆ । ತಂದ— ॥ ೧೨೬ ॥

(ರಾಕ್ಷಸರನ್ನು ಬೆರಸಿಕೊಂಡು ಅಂಗದನ ಪ್ರವೇಶ ;
ಅಷ್ಟರೊಳಗೆ ರಾಮನು ನಿಷ್ಕ್ರಮಿಸುತ್ತಾನೆ)

೩೪ ಕಂದಪದ್ಯ

ಹನುಮ—

ಕೈ ಮರ ಗಿರಿಯಿಂದವರಂ
ಹೊಯ್ದಾಡು[5]ತ್ತಿರಲು[5] ಹನುಮ ಕಂಡಂಗದನಂ ।
ಕೈಪಿಡಿದೆಲೆ ಮರುಳೆಂ[6]ದೆಳೆ[6]
[7]ದೊಯ್ಯುತ್ತುಂ ಪೇಳ್ದನಂದು[7] ತಾರಾಸುತಗಂ ॥ ೧೨೭ ॥

---

1 ಕೈಕಡಿ (ಕಾ) 2 ವಿಾ (ಅ) 3 ಸಿ (ಅ, ಕಾ) 4 ತಾ (ಕಾ, ಅ) 5 ವರನ್ನು (ಅ) 6 ದುಂ (ಕಾ, ಅ) 7 ಬೈಯುತ ತಾವಂದು ಪೇಳ್ದ (ಕಾ)

೩೫ ರಾಗ ವೃಂದಾವನಸಾರಂಗ—ಏಕತಾಳ ೩

ಏನ,ವ । ತಾರ ವ್ಯಾ । ಲಿನಂದ । ನ—ಇಂಥ ।
ಆನೆ, ಕು । ದುರೆ ಮತ್ತೀ । ದಾನ,ವ । ರನು ಕೊಲ್ವ || ಪಲ್ಲವಿ ||

ನೀತಿ,ಯ । ಪೇಳ್ವಡೆ । ,ಬಂದ । ರೆ—ಮತ್ತೀ ।
ಘಾತುಕ । ರನು ನೆರೆ । ,ಕೊಂದ । ರೆ—ರಘು ।
ನಾಥ, ಸ । ಹಿತ ಭಾನು । ಜಾತ, ಕೋ । ಪಿಸುವರು || ೧೨೮ ||

ಪೋಗು,ವ । ನಾವ್ ರಾಮು । ನ,ಲ್ಲಿ । ಗೆ—ಸಾಳೆ ।
ಹೇಗೂ ಬ । ರುವದುಂಟು । ಇ,ಲ್ಲಿ । ಗೆ—ಮತ್ತೆ ।
ರಾಘ,ವ । ನಿದಿರು ತೋ ।[1] ರಾಗ, ನಿ । ನ್ನ[1]ಯ ಶೌರ್ಯ || ೧೨೯ ||

೩೬ ಕಂದಪದ್ಯ

ಬಂದಾ ಮಾರುತನಂದನ
ಕೊಂದಾಟವ ನಿಲಿಸಿ ದನುಜನಿದಿರೊಳ್ನಿಂದು ।
ಮುಂದಿ[2]ನ್ನಹ ಕಾರ್ಯಂಗಳ[2]
[3]ದಂದುಗಮಂ[3] ತಿಳಿಯೆಪೇಳ್ದ[4]ನಾ ರಾವಣಗಂ[4] || ೧೩೦ ||

೩೭ ರಾಗ ಆನಂದ[5]ನೀಲಾಂಬರಿ[5]—ಏಕತಾಳ ೫

ಏನಯ್ಯಾ ನಿ । ನ್ನಂತರಂಗ । ದಾ ನಿದಾನ । ದ ಪ್ರಸಂಗ ।
ವೇನಯ್ಯಾ—।—ಮುಂದಿ । ನ್ನೇನಯ್ಯಾ— || ಪಲ್ಲವಿ ||

ಸೃಷ್ಟಿಜಾತೆ । ಯನ್ನು ತಂದು । ಕೊಟ್ಟು ರಾಮು । ಚಂದ್ರನ ಕೂ ।
ಡಿಪ್ಪವೊ—।—ಲೇಸು । ಕಷ್ಟವೋ— || ೧೩೧ ||

ತಮ್ಮನ ನೀ । ಕೂಡಿಕೊಂಡು । ಒಮ್ಮನದಿಂ । ದೊಪ್ಪಿ ಸುಖದೊ ।
ಳಿರುವೆಯಾ—।—[6]ರಣಕೆ[6] । ಬರುವೆಯಾ— || ೧೩೨ ||

ಜಗದ ದೈವ । ದ ಕೂಡೆಂತು । ಹಗೆತನ ಬ । ಳಸಿಕೊಂಡೆಂತು ।
ಇರುವದು—।—ಕೀರ್ತಿ । ಬರುವದು— || ೧೩೩ ||

---

1 ರುವ ಆಗ ನಮ್ಮ (ಕಾ) 2 ನ್ನಾಗುವ ಕಾರ್ಯದ (ಅ) 3 ಹೊಂದಿಕೆಯನು (ಅ) 4 ರಾವಣನೊಡನೆ (ಅ) 5 ಭೈರವಿ (ಕಾ) 6 ಕಾದಲು (ಕಾ)

ಕಡೆಗೆ ನೀನೆಂ । ಬ ಮಾತೇನು । ಒಡೆಯನ ಪಾ । ದಕ್ಕದನ್ನು ।
ಪೇಳ್ವೆವು — । — ಏನ । ಹೇಳ್ವೆವು — ॥ ೧೩೪ ॥

೩೮ ರಾಗ ಪಂತುವರಾಳಿ—ಏಕತಾಳ ೧

ರಾವಣ—

ಆಯಿತೇ, । ನಿನ್ನ ಮಾತು । ಸಾಕು—ಸಾ । ಕೆಲವೊ ಮಂಗ ।
ಬಾಯ ಬಡಿ । ವಾರತನ । ಸಲ್ಲದು ಈ । ಸಭೆಯೊಳೆಂದ ॥ ೧೩೫ ॥

ಭೂತಳ, ಕೆ । ಳ[1]ಕ್ಕಿ[1]ಳಿದರೂ । ಪಾತಾಳ, ಮೇ । ಲೆ ನೆಗೆದರೂ ।
ಸೀತೆಯ [2]ನಾ[2] । ಬಿಡುವುದೆಂಬ । ಮಾತುಂಟೇ ಛೀ । ಹೋ[3]ಗೊ[3]
ಮರುಳೆ ॥ ೧೩೬ ॥

ಇರುಳಾದಿತ್ಯ । ಮೂಡಿದರೂ । ಒರಳೆದ್ದು ಮಾ । ತಾಡಿದರೂ ।
ಮರುಳು ಹಿಡಿದು । ಹೋದ ತಮ್ಮ[4] । ಬರಲೆಂದು ಪೇ । ಳ್ವ ಮಾತುಂ[4]ಟೆ॥೧೩೭॥

ಬಾಣ ಬತ್ತಿ । ಹೋದರೇನು । ಭಾನು ತಣ್ಣ । ಗಾದರೇನು ।
ಪ್ರಾಣವಳಿದು । ಹೋಗುವನಕ । ಕಾಣೆಸಿ, । ಕೊಡುವದುಂಟೆ ॥ ೧೩೮ ॥

(ರಾವಣಾದಿಗಳ ನಿಷ್ಕ್ರಮಣ, ರಾಮ ಲಕ್ಷ್ಮಣ ಸುಗ್ರೀವಾದಿಗಳ ಪ್ರವೇಶ)

೩೯ ವಾರ್ಧಿಕಷಟ್ಪದಿ

ಹನುಮಾಂಗದರು—

ರಘುವರನ ಸೇವಕರ ಹಿತಕರದ ವಚನಮಂ
ಬಗೆಗೊಳದೆ ಜರೆದು ಕಳುಹಿಸಿದಡವರಿಬ್ಬರುಂ
ಖಗಲೊಡೆಯವಂಶಾಬ್ಧಿಚಂದ್ರನೆಡೆಗಯ್ದಿ ಕೈಮುಗಿದು ಪೇಳ್ದ ಹದನಮಂ ॥
ಮಗುಳೆ ರಾವಣ ಕಳುಹಿದುತ್ತರವ ತಿಳುಹಲಾ
ಸಗರವಂಶಜನೆಂದನಿ[5]ನ್ನೇನು ನಿಮ್ಮ ಹವ
ಣಿ[5]ಗೆ ತಕ್ಕ ಕಾರ್ಯವಮಂ ವರ್ತಿಸುವುದೆನಲು ಲಗ್ಗೆಗೆ ಪಡೆದರ
ಪ್ಪಣೆಯನು ॥ ೧೩೯ ॥

---

1 ಗಿಂಗಿ (ಕಾ) 2 ನ್ನು (ಅ) 3 ಗೆಲೆ (ಕಾ, ಅ), 4 ನ । ಮರಳಿ ಕರೆತರುವದುಂ(ಅ)
5 ನ್ನು ತಡವೇಕೆ ಮನಸಿ (ಅ)

21

೪೦ ರಾಗ ಪಂತುವರಾಳಿ—ಏಕತಾಳ ೧, ೨

ಕಪಿವೀರರು—

ಹತ್ತಿ,ದ । ರಾ ದುರ್ಗ । ವ—ವಾ । ನರರೆಲ್ಲ ।
ಮುತ್ತಿ,ದ । ರಾ ದುರ್ಗ । ವ — ॥ ಪಲ್ಲವಿ ॥

ಕೊತ್ತಳ । ಗಳ ಮುರಿ । ಯುತ್ತೊಡ । ನೊಡನೆ ಭ ।
ಟೋತ್ತಮ । ರು ಸುತ್ತ । ಮುತ್ತಲು । ಕವಿದು— ॥ ೧೪೦ ॥

ಕತ್ತಿ ಕು । ಂತ ತೋ । ಮರಗಾ । ಯದ ಬಿಸಿ ।
ನೆತ್ತರ । ಸುರುಕಿನ । ನೆತ್ತಿಯ । ಸೇನೆ— ॥ ೧೪೧ ॥

ತೂರಿನೊ । ಳಿದೆ ಜಂ । ಭಾರಿಯ । ಪೆಟ್ಟಿನ ।
ಕೂರಿಕೆ (?) । ಗಣಿಸದೆ । ಓರಣ । ದಿಂದ— ॥ ೧೪೨ ॥

ಅಂಬರ । ಮುಸುಕುವ । ಅಂಬಿನ । ಗಾಯದ ।
ಬಂಬಲ । ನೆಣಿಸದೆ । ಮುಂಬಂ । ದೊಳಗೆ— ॥ ೧೪೩ ॥

ಕೋಟೆಯ । ಬಣಗಳ । ಈಟಿಯ । ಗಾಯವ ।
ಪಾಟೆಯ । ಮಾಡದೆ । ಸೂಟೆಯ । ಭಟರು— ॥ ೧೪೪ ॥

ಬಾಣದ । ತಗಲಿಗೆ । ಶೋಣಿತ । ಸುರಿಯಲು ।
ಕಾಣಿಸಿ । ಕೊಳ್ಳದೆ । ಚೂಣಿಯ । ಭಟರು— ॥ ೧೪೫ ॥

ಹತ್ತಿರೆ । ದುರ್ಗವ । ಸುತ್ತಲು । ಹೆಣಗಿ ನು ।
ಗ್ಗೊತ್ತುವ । [1]ಡೊಗ್ಗರ[1] । ಪತ್ತುಗೆ । ಯಿಂದ— ॥ ೧೪೬ ॥

೪೧ ಭಾಮಿನಿಷಟ್ಪದಿ

ಮುರಿದ ಕೈಕಾಲುಗಳ ಕಪಿಗಳ
ಹರಿದ ಹೊಟ್ಟೆಯ ಕರುಳುಗಳ ಜೋ
ಲ್ವರಿವ ಮೂಗಿನ ಹರಿದಕಿವಿಗಳ ಸುರಿವಶೋಣಿತದ ।

1 ಬೊಬ್ಬೆಯ (ಅ)

ಮೊರೆವ ಭೇರಿ ಡಮಾಮಿ ವಾದ್ಯದ
ಭರಕೆ ನೆಲಬಾಯ್ಬಿಡಲು ಕೋಟಿಸು
ಮುರಿದು ಲಗ್ಗೆಯ ಕಪಿಕದಂಬಕ ಬಂದುದೊಳಸರಿದು || ೧೪೭ ||

೪೨ ರಾಗ ಕುರಂಜಿ—ಅಷ್ಟತಾಳ ೧

ದಾನವರು—

ಹೋಯಿತು । —ಲಂಕಾ । ಪಟ್ಟಣ । ಕೈವಶ ।
ವಾಯಿತು । — || ಪಲ್ಲವಿ ||

ಹೋಯಿತು । ಲಂಕೆ ರಾ । ವಣಗೆ — । — ವಶ ।
ವಾಯಿತು । ರಾಮಚಂ । ದ್ರನಿಗೆ — ||
ಹೋಯಿತು । ಸೆರೆಯುಮ । ರರಿಗೆ — । — ಎಂಬು ।
ದಾಯಿತೊಂ । ದೇ ಕ್ಷಣ । ದೊಳಗೆ — । — ಪೆಟ್ಟ ।
ಹಾಯಲಾ । ರ[1]ದೆ [1]ದಂಡು । ಬೀಯುವಾ । ದುದ ಕಂಡು ।
[2]ಘೋಯೆಂದು । ದನುಜರ್[2] ಪ । ಲಾಯನ । ಗೆಯ್ದರು || ೧೪೮ ||

ಸೊಂಡಿಲ । ಕಡಿದರಾ । ನೆಗಳ— । —ಕಲ್ಲು ।
ಗುಂಡಲಿ । ಟ್ಟರು ಕುದು । ರೆಗಳ — ||
ತಂಡತಂ । ಡದ ಭಟ । ರುಗಳ — । — ಬಡಿದು ।
ಮುಂಡೆಯ । ನೊಡೆವ ಹ । ಬ್ಬಗಳ — । —ನೆಲ್ಲ ।
ಕಂಡು ರಾ । ವಣ ನಾಚಿ । ಕೊಂಡು ಹೋ । ಯಿತು ನಮ್ಮ ।
ದಂಡುಯೆಂ । ದೆನುತಲೆ । ಮುಂಡೋದ । ರಿಗೆ ಪೇಳ್ದ || ೧೪೯ ||

ತೊಂಬತ್ತು । ಕೋಟಿ ದಾ । ನವರು — । — ಇವರ ।
ಡೊಂಬಿಗೆ । ನಿಲಲಾರ । ದವರು — ||
ಇಂಬಿಲ್ಲ । ದೆಡೆಗೆ ಸ । ತ್ತವರು — । — ಎಲ್ಲಿ ।
[3]ಕಂಬಿಟ್ಟ । ರ[3]ಲ್ಲಿ ನಿ । ತ್ತವರು — । [4]ನೆಳೆ ।[4]
[5]ಕೊಂಬರೀ । ಸಮಯವಿ[5] । ದೆಂಬಷ್ಟ । ರೊಳಗೆಲ್ಲ ।
ಜಾಂಬವಾ । ದಿಗಳ ಕ । ದಂಬ [6]ಮು । ತ್ತಿದರಾಗ[6] || ೧೫೦ ||

---

1 ದ(ಅ) 2 ಭೋಯೆಂಬ ರವದಿ(ಕಾ) 3 ಬೆಂಬಿಡದೆ ಅ(ಅ) 4 ಎಲ್ಲ(ಅ) 5 ಕಾಂಬರು ತಮ್ಮನೆಂ (ಕಾ) 6 ಮುಂಬರಿಯಿತು (ಅ)

ಅರಮನೆ । ಯೊಳಪೊಕ್ಕ । ತಂಡ — । — ಕಪಿ ।
[1]ಪರಿವಾರ[1] । ದಶಕಂಠ । ಕಂಡ — ॥
ಭರದಿ ಖಂ । ಡೆಯುವ ಕ । ಯ್ಕೊಂಡ — । — ಕಡಿ ।
ದುರುಳ[2]ಸೆ । ಕಪಿಗಳ[2] । ರುಂಡ — । — ಹಗ ।
ಲಿರುಳಾ, । ಯಿತೊ ಮಂಡೋ । ದರಿಯು ಪು । ಣ್ಯದೊಳೆಂಬ ।
ತೆರನ ಕಾ । ಣಿಸಿತು ಒಂ । ದರೆಗಳಿ । ಗೆಯೊಳೆಲ್ಲ ॥ ೧೫೧ ॥

ಕೊಬ್ಬಿದ । ರಾಮಸೈ । ನ್ಯವನು — । — ಕಾದು ।
ತೊಬ್ಬ ರಾ । ವಣ ಓಡಿ । ಸಿದನು — ॥
ಪರ್ಬಿದ । ಖಳಸೇನೆ । ಗಳನು — । — ಬಲು ।
ಬೊಬ್ಬಿಡು । ವಾನೆ ಕುದು । ರೆಯನು — । — ಬಡಿ ।
ದೆಬ್ಬಿತು । ರಾಮನ । ಪಾಳ್ಯವೆಂ । ಬಷ್ಟರೊ ।
ಳಬ್ಜಬಾಂ । ಧವ ಪಶ್ಚಿ । ಮಾಬ್ಧಿಗಾ । ದುದು ಬಿಂಬ ॥ ೧೫೨ ॥

ಹೋಯಿತು । ಲಂಕೆ ರಾ । ಮನಿಗೆ — । —ತಿರಿ ।
ಗ್ಯಾಯಿತು । ರಾವಣೇ । ಶನಿಗೆ — ॥ ಪಲ್ಲವಿ ॥

(ಎಲ್ಲರೂ ನಿಷ್ಕ್ರಮಿಸುತ್ತಾರೆ)

೪೩ ವಾರ್ಧಿಕಷಟ್ಪದಿ

ರಾವಣ—

ಓಡಿಸಿದನಾ ದಿವಸ ಬಳಿಕ ದುರ್ಗವ ಸಜ್ಜು
ಮಾಡಿಸಿದ ಮಾಲ್ಯವಂತನ ಮಾತ ಕೇಳದೆ ವಿ
ಭಾಡಿಸಿದ ಜಾನಕಿಯ ಮುಂದೆ ಮಾಯಾರಾಮಶಿರವತೋರಿಸುವ ಬಗೆಗೆ ॥

(ರಾಮಧ್ಯಾನದಲ್ಲಿ ಕುಳಿತಿರುವ ಸೀತೆಯ, ಪ್ರವೇಶ—ತೆರೆಯಲ್ಲಿ ವಿದ್ಯುಜ್ಜಿಹ್ವನು ಮಾಯಕದ ರಾಮಶಿರಸ್ಸನ್ನು ತಂದು ತೋರಿಸುತ್ತಾನೆ)

ವಿದ್ಯುಜ್ಜಿಹ್ವ—

ರೂಢಿಸಿದ ಮಾಯಕದ ಶಿರವ ವಿದ್ಯುಜ್ಜಿಹ್ವ
ನೋಡಿಸಿದನವನಿಜೆಯ ಮುಂದಿಳುಹಿ ಬಳಿಕ ಮಾ
ತಾಡಿಸಿದ ತಾ ಕಲಿತ ಕುಶಲ ದುರ್ಬುದ್ಧಿಗಳ ಜೋಡಿಸಿದ ಹವಣಗತಿಯ ॥ ೧೫೩ ॥

---

1 ವರರನ್ನು (ಅ) 2 ದುರುಳಿದ ವಾನರ (ಕಾ)

೪೪ ರಾಗ ನವರೋಜು—ಚೌತಾಳ, ತಿತ್ತಿತ್ತೈ

ನೋ,ಡು ನೋ | ,ಡು | ಸೀ,ತೆ— | ರಾ, ಮನ | ಶಿರ | ವ— || ಪಲ್ಲವಿ ||

ಓ,ಡಿ ಹೋ | ದವ | ರೊಂ,ದು—| ಗೂ,ಡಿ ಸಂ | ಗರ | ಡೊ,ಳೆ—|
ಚ್ಚಾ,ಡಿದ | ಡಿದೆ | ತುಂ,ಡು— | ಮಾ,ಡಿದ | ಶಿರ | ವ — || ೧೫೪ ||

ಥಳ,ಥಳಿ | ಸುವ | ವೊ,ಗ—| ಸುಳಿ, ಗುರು | ಳಿನ | ಸೊ,ಗ —|
ವಲ,ರಂ | ಬನ | ಧ,ನು — | ಪೊಳೆ,ವ ಪು | ರ್ಬುಗ | ಳ— || ೧೫೫ ||

ಸಂ,ಪಗೆ | ಬಿರಿ | ಮು, ಗು — | ಳಂ, ಪೋಲ್ವ | ಮೂ | ಗಿ,ನ — |
[1]ತುಂ, ಬು[1]ಗ | ಲ್ಲದ | ತು,ಟಿ— | [2]ಕೆಂ,[2] ಪಿನ | ಸೊ[3]ಬ | ಗ[3]—|| ೧೫೬ ||

ಕ,ನ್ನಡಿ | ಕದ | ಪಿ, ನ — | ಚಿ,ನ್ನದ | ರೇ | ಖೆ,ಯು— |
ಸ,ನ್ನಿಗೊ | ಳಿಪ | ಸೋ,ಗೆ — | ಗ,ಣ್ಣಿನ | [4]ಸೊಬ | ಗ[4] — || ೧೫೭ ||

೪೫ ರಾಗ ಶಂಕರಾಭರಣ—ಅಷ್ಟತಾಳ ೧

ದೃಢವಾಯಿ | ತೇನೆ ಸೀ | ತೆ — ರಾ | ವಣ ಜಗ |
ದೊಡೆಯನೆಂ | ದೆಂಬ ಮಾ | ತು— ||
ತೊಡರಿಲ್ಲ | ವಲ್ಲ ರಾ | ವಣನ ಚಿ | ತ್ತದೊಳಿದ್ದ |
ಕಡುಹ [5]ತೀ[5] | ರಿಸಿ ಕೊಟ್ಟು | ನಡೆಸಿಕೊಂ | ಬುದಕಿನ್ನು || ೧೫೮ ||

ಸಿಂಹದ | ಗವಿಯ ಪೊ | ಕ್ಕು— ಸಿಂ | ಗಳಿಕನು |
ಸಂಹರಿ | [6]ಸಲು ಬಲ್ಲು | ದೆ[6]— ||
ಬ್ರಹ್ಮಾದಿ | ಸುರರಿಂದ | ಪೂಜಿತ | ದಶಕಂಠ |
ನಿರ್ಮ್ಮಾತ | ನಿದಿರಪ್ಪ | ನೇ—ಏ | ತಕೆ ಭ್ರಮೆ || ೧೫೯ ||

ಗರುಡನಿ | ದ್ದೂರೊಳ | ಗೆ— ಗಂ | ಭೀರವಾ |
ದುರಗನು | [7]ತ್ರಾಸಹವುಂ[7] | ಟೆ—||
ತಿರಿಗಿ ರಾ | ಘವ ನಿನ್ನ | ನೊಯ್ವನೆಂ | ಬಾಸೆಗೆ |
ಬರಿದೆ ನೀ | ದಣಿದೆ ಕಾಂ | ತೇ—ಸ | ದ್ಗುಣವಂತೆ || ೧೬೦ ||

---

1 ಕೆಂಪು (ಅ) 2 ಸೊಂ (ಕಾ) 3 ಗಸ (ಅ) 4 ಚೆಲುವ (ಕಾ) 5 ತೋ (ಅ) 6 ಸುವುದೆ ಮಿಕ್ಕು (ಅ) 7 ಬ್ಬರಣೆಯುಂ (ಅ, ಕಾ)

ಪ್ರಾಯದ । ಸುಖವುಣ್ಣ । ದೆ — ಸು । ಮ್ಮನೆ ನಿನ್ನ ।
ಕಾಯವ । ದಂಡಿಸಿ । ದೆ — ॥
ಬಾ ಇನ್ನಾ ।ದರೂ ಬಲ್ಲಿ । ದನ ಚಿತ್ತ । ದೊಳಗಿದ್ದ ।
ಪ್ರೇಯವ । ಸಲಿಸಿ ಪ । ಟ್ಟದರಾಣಿ । ಯಾಗವ್ವ ॥ ೧೬೧ ॥

೪೬ ವಾರ್ಧಿಕಷಟ್ಪದಿ

ಸೀತೆ—

ಈತೆರದ ಮಾಯದಭಿರಂಜನೆಯ ಶಿರವ ಭೂ
ಜಾತೆ ಕಂಡಂಜಿ [1]ಮರುಮರುಗಿ[1] ಮೂರ್ಛಿತೆಯಾಗಿ
ಧಾತುಗೆಟ್ಟಂಗನೆಯ ಮುಖತುಹಿನಕರ [2]ರಾಹು ಸೋಂಕಿದಂತಾಯ್ತು ಕ್ಷಣಕೆ[2] ॥
ಘಾತಕದ ತಲೆಯದೇನೆಂದರಿಯದಬಲೆ ರಘು
ನಾಥನೇ ಸರಿಯೆಂದು ಚಿಬುಕಾಗ್ರ ನಾಸಿಕವ
ನೋಡು ತಡವರಿಸಿ ಮಡಿಲೊಳಗಿರಿಸಿ ಮುದ್ದಿಡುತ ಪ್ರೀತಿ[3]ವಿಗ[3]
ಲಿಂತೆಂದಳು ॥ ೧೬೨ ॥*

೪೭ ರಾಗ ಪುನ್ನಾಗವರಾಳಿ (ತೋಡಿ)—ಅಷ್ಟತಾಳ ೧

ಸೀತೆ—

ನೋಡಿದೆ । ಯಾ ನೀನು । ತ್ರಿಜಟೆ ಪೂ । ರ್ವದಲಿ ನಾ ।
ಮಾಡಿದ । ಸುಕೃತಂಗ । ಳ— ॥
ನಾಡದೈ । ವಗಳ ನಂ । ಬಿದಡಿಂತು । ಶಿವದಯೆ ।
ಮಾಡಿದ । ವಿಕೃತಂಗ । ಳ — ॥ ೧೬೩ ॥

---

1 ಕಡುನೊಂದು (ಅ) 2 ನಂದು ರಾಹುಪಿಡಿದಂತಾಗಿರೆ (ಅ) 3 ಬಿಡ (ಕಾ, ಅ)

* ರಾಗ ಪುನ್ನಾಗವರಾಳಿ—ಏಕತಾಳ ೪

ಪ್ರಿಯ ಮಮ । ಜೀವಿತೇಶ । ಪ್ರಾಣನಾಯ । ಕ— ।
ಸುಪ್ರತಾಪ । ಸಾಂಜಯರ್ವಾತ್ಮ । ಅಪ್ರಮೇಯಾ । ನಂದಕಾಯ ॥
ದುರ್ಜನಜ । ನವಿಘಾತ । ಸಜ್ಜನಜ । ನಸುಪ್ರೀತ ।
ನಿರ್ಜರಗ । ಣವಂದಿತ । ಗರ್ಜನ ಸಿಂ । ಘು ಸಮೇತ ॥
ಅಂಗಜಕೋ । ಟಿಲಾವಣ್ಯ । ಆಶ್ರಿತಜ । ನವರೇಣ್ಯ ।
ತುಂಗವಿಕ್ರ । ಮಕಾರುಣ್ಯ । ಸಂಗೀತಲೋ । ಲಾಗ್ರಗಣ್ಯ ॥

ಅಣ್ಣ ತ | ಮ್ಮ ಬಂಧು | ಬಳಗದಾ | ಸೆಯ ಬಿಟ್ಟು |
ಎನ್ನವ | ರಡಿಯ ಕಾ | ಯ್ದೆ— ||
ಪುಣ್ಯದ | ಫಲವಿಂತು | ಮಾಡಿತೀ | ಭಾಗ್ಯವ |
ಕಣ್ಣಾರೆ | ಕಂಡೆಯ | ಲ್ಲ— || ೧೬೪ ||

ಜಗದೊಳ | ಗೆಲ್ಲಾ ್ಯದ | ರೂ ಯಿಂಥ | ಚೆಲುವಿನ |
ನೊಗವುಳ್ಳ | ಪುರುಷರುಂ | ಟೇ— ||
ಬಗೆಯಲಿ | ನ್ನೇನ ಹೇ | ಳದರೇನು | ಸರಮೆ ಸಾ |
ವಿಗೆ ದಾರಿ | ತೋರೆನ | ಗೆ — || ೧೬೫ ||

ಇಂತೆಂದು | ಸೀತೆ ರೋ | ದಿಸುವಂಥ | ಪರಿಯನು |
ಅಂತರಂ | ಗದಲಿ ಪೋ | ಗಿ — ||
ಸಂತಸ | ದಲಿ ವಿದ್ಯು | ಜ್ಜಿಹ್ವ ಪೇ | ಳದ ಕಾಮು |
ಭ್ರಾಂತನಾ | ದಸುರೇಂದ್ರ | ಗೆ — || ೧೬೬ ||

(ವಿದ್ಯುಜ್ಜಿಹ್ವನ ನಿಷ್ಕ್ರಮ)

ವಚನ ||

ಇತ್ತಲಾ ಸರಮೆ ತ್ರಿಜಟೆಯರು ಜಾನಕಿಯ ಕೈಯಲ್ಲಿದ್ದಾ ಶಿರವಂ ಕಂಡು ಕಾಳ[1] ಕದ ರೇಖೆಯಂ ನೋಡಿ ಏನೆಂದರು ಎಂದರೆ—

೪೮ ರಾಗ ಕಲ್ಯಾಣಿ—ಏಕತಾಳ ೪

ತ್ರಿಜಟೆ—

,ನಿತ್ಯವಂ | ಗಲೆ ನೀನು | ,ನಿರುತ ಶಾ | ಶ್ವತ ರಾಮು |
,ಸತ್ತು ಹು | ಟ್ಟುವದೆಂಬ | ,ಸಂಸಾರ | ವೇ,ನು—||
,ಅತ್ತ ಬಿ | ಸಾಡಸುರ | ,ಕೃತ್ರಿಮ | ಶಿರವದ |
,ನೆತ್ತಿ ದುಃ | ಖಿಪುದುಂಟೆ | ,ಮತ್ತೇಭ | ಗಮನೆ— || ೧೬೭ ||

ಸೀತೆ—

,ಗಳದ ರೇ | ಖೆಯ ಕಂಡು | ,ತಿಳಿದಳಂ | ಚಿಕೆಗೊಂಡು |
,ಧರೆಗೆ ಬಿ | ಸುಟಳಂದು | ,ಆಶ್ಚರ್ಯ | ವೆಂ,ದು—||

---

1 ತು (ಅ)

,ಅಳುತ ಶಾ । ಪವನಿತ್ತ । ,ಕೆನ್ನ ರಾ । ಮನ ಬಾಣ ।
,ವಿಳುಹಲೀ । ಧರೆ[1]ಗೆ ಆ । ,ತಲೆಹತ್ತ । ನೆಂ,ದು[1]— ॥ ೧೬೮ ॥

(ಸರಮೆತ್ರಿಜಟೆಯರೊಡನೆ ಸೀತೆಯ ನಿಷ್ಕ್ರಮಣ; ಆಮೇಲೆ 'ಧೀಂಗಿಣ' ಹೊಡೆದು 'ಅಬ್ಬರತಾಳ'ದಲ್ಲಿ ಇಂದ್ರಜಿತುವಿನ ಪ್ರವೇಶ; ಅಷ್ಟರಲ್ಲಿ ರಾಮಲಕ್ಷ್ಮಣರು ವಿಭೀಷಣನೊಂದಿಗೆ ನಿಷ್ಕ್ರಮಣದ್ವಾರದಿಂದ ಪ್ರವೇಶಿಸಿ ರಂಗಸ್ಥಳದ ಬಲತುದಿಯಲ್ಲಿ ನಿಂತಿರುತ್ತಾರೆ.)

೪೯ ವಾರ್ಧಕಷಟ್ಪದಿ

ಅರಸ ಕೇಳಾಮೇಲೆ ಮರುದಿವಸದುದಯದಲಿ
ಕರಿ ತುರಗ ರಥ ಪದಾತಿಗಳ ಸನ್ನಾಹವಂ
ನೆರಹಿ ಭೈರವಗೆ ನೂರ್ಮಡಿಯಾದ ರಕ್ಕಸರ ಪರಿವಾರವಂ ಕೂಡಿಸಿ ॥
ಸುರಪಜಿತು ಸಕಲಪಡೆ ಸಹಿತ ನಡೆತಂದು ಸಂ
ಗರಕೆ ನಿಲಲಾರ್ಭಟಿಸೆ ಕಂಡು ವಾನರರು ತರ
ಹರಿಸುತಿರಲಿತ್ತ ರಾಮನ ಪಾಳ್ಯದೊ[2]ಳಗೆ ಖಳಶರಣ ನೋಡಿಂ[2]ತೆಂದನು
॥ ೧೬೯ ॥

೫೦ ರಾಗ ಘಂಟಾರವ—ಜಂಪೆತಾಳ ೩

ವಿಭೀಷಣ—

ಅವಧರಿಸು । ರಾಜೇಂದ್ರ । ಈತನೇ । ಶಕ್ರಜಿತು ।
ಭುವನದೊಳ । ಗತಿಭಟನು । ಭುಜಬಲಾ । ನ್ವಿತನು ॥ ೧೭೦ ॥

ಈತನಂ । ಜಿಕೆಗಾಗಿ । ಈಶನಜ । ಮೊದಲಾಗಿ ।
ಶ್ವೇತಕುಂ । ಜರರೂಢ । ಸೋತನುರೆ । ಗಾಢ ॥ ೧೭೧ ॥

ಸಕಲದಿವಿ । ಜಾದಿಗಳು । ಸೇವೆಯನು । ಮಾಡುವರು ।
ನಿಖಿಲದಾ । ನವರುಗ[3]ಳ[3] । ಆಳಾ[4]ದ । ರ[4]ವರು ॥ ೧೭೨ ॥

ಈತನೊ । ಬ್ಬನು ನಮಗೆ । ಸೋತನಾ । ದರೆ ಕಡೆಗೆ ।
ಏತಕೂ । ಜೀಡ [5]ಬರು । ವಾ[5]ತಗಳ । ಬ[6]ಲುಹು[6] ॥ ೧೭೩ ॥

---

1 ಗವನ। ತಲೆಯನೆಂ । ದೆನುತ (ಅ) 2 ಳು ವಿಭೀಷಣ ನೋಡುತಿಂತೆಂದನು (ಅ) 3 ಳು (ಅ) 4 ಗಿರು (ಅ) 5 ಹೇಕ್ಕಾ (ಅ) 6 ಲವು (ಅ)

ಕುಂಭಕ । ರ್ಣನಿಗಂತೂ । ತಲೆಗೆ ನಿ । ದ್ರಾಭ್ರಾಂತು ।
ಕಾಂಬ ವಿ । ಕ್ಕಾದವರ । ಡೊಂಬಿಗಳ । ಪರಿಯ ॥ ೧೭೪ ॥

(ಸುಗ್ರೀವ ಅಂಗದಾದಿ ಕಪಿಗಳು ಯುದ್ಧೋತ್ಸಾಹದಿಂದ ಬಂದು ನಿಲ್ಲುತ್ತಾರೆ)

೫೧ ರಾಗ ಮಾರವಿ—ಮಟ್ಟೆತಾಳ ೪

ಸುಗ್ರೀವ—

ಎಂದು ರಾಮ । ನೊಡನೆ ಶರಣ । ನಂದು ಬಿನ್ನ । ವಿಸಲು ಗಡಣೆ ।
ಯಿಂದ ರವಿಜ । ನೀಲ ಸಹಿತ । ಬಂದರಲ್ಲಿ । ಗೆ—॥
ಒಂದು ಕಯ್ಯ । ಶೈಲ ಮ । ತ್ತೊಂದು ಕಯ್ಯ । ವೃಕ್ಷಗಳಲಿ ।
ಬಂದು ರಾಮ । ಚಂದ್ರಗೆರಗಿ । ನಿಂದರಿದಿರ । ಲಿ— ॥ ೧೭೫ ॥

ನೀಲ—

ಇಳೆಯನೆಲ್ಲ । ಮಡಿದು ಕೌಂ, । ಕುಳಲಿ ಧರಿಸ । ಹೇಳು ಶರಧಿ ।
ಜಲವ ಬತ್ತಿ ।ಸೆನ್ನು ಜವನ । ಸೆಳೆದು ತಪ್ಪೆ । ವು—॥
ಲಲನೆಗಳ್ಳ । ನಣುಗನೊಬ್ಬ । ಸುಲಭದೈತ್ಯ । ನೊಡನೆ ಕಾದಿ ।
ಗೆಲುವ ಬಗೆಗೆ । ಚಿಂತೆ ವೆ, । ಗ್ಗಳಸಲಾದು । ದೆ— ॥ ೧೭೬ ॥

ಅಂಗದ—

ಕಳುಹಿ ನೋಡು । ರಾಮಪಾದ । ದೊಲುಮೆಯಿಂದ । ಇಂದ್ರಜಿತುವ ।
ತಲೆಯ ತಂದು । ಕೊಡುವೆನೆಂದು । ಬೆಳೆದನಂಗ । ದ—॥
ಇಳಿದ ಭರವ । ಕಂಡು ನೀಲ । ಸುಳಿದನಸುರ । ರಿದಿರು ನೋಡಿ ।
ದಳವ ಬಿಟ್ಟ । ನಂದು ಪಾಳ್ಯ । ಗಳ ವಿಭಾಗಿ । ಸಿ— ॥ ೧೭೭ ॥

(ಇಕ್ಕೆಲದವರ ಹಾರಾಟ, ಕಾದಾಟ ತುಮುಲವಾಗುವುದು)

ರಾಕ್ಷಸರು—

ಬೊಬ್ಬಿಡುತ್ತ । ಬರುವ ಕಪಿಗ । ಳುಬ್ಬಟೆಯನು । ಕಂಡು ಖಳರೊ ।
ಳೊಬ್ಬರೊಬ್ಬ । ರಿದಿರು ನಿಂದ । ರಾರ್ಭಟಿಸುತ । ಲಿ—॥
ಕೊಬ್ಬಿದಸುರ । ಮರ್ಕಟಾದಿ । ಸರ್ವ ಜಂ, । ಗುಲಿಯೊಳಾಯ್ತು ।
ಹಬ್ಬಿ[1]ತೆರಡು[1] । ಸೈನ್ಯ ರಣದ । ಹಬ್ಬವೆಸಗಿ । ತು— ॥ ೧೭೮ ॥

---

1 ತಿವರ (ಅ)

೫೨ ದ್ವಿಪದಿ

ತರಣಿನಂದನಗಿಂತು ತಾನೆ ಶಕ್ರಜಿತು
ವರಪ್ರಹಸ್ತನೊಳಾಯ್ತು ನೀಲನಾ ಕಲಹ ‖ ೧೭೯ ‖

ಕುಂಭನಿಗೆ ನಳನಾ ನಿಕುಂಭಗಂಗದನು
ಜಾಂಬವರಿಗಿದಿರಾಯ್ತು ಧೂಮ್ರಾಕ್ಷನೊಡನೆ ‖ ೧೮೦ ‖

ಶತಬಲಿಯು ದುರ್ಮುಖನು ಸೆಣಸಿದರು ಮತ್ತಾ
ಪ್ರತಿಯಾದ ದೇವಾಂತಕನರಾಂತರೊಡನೆ ‖ ೧೮೧ ‖

ಅತಿಕಾಯು ನೋಡಿದನು ಅಲ್ಲಿ ಲಕ್ಷ್ಮಣನ
ಖತಿಯಿಂ ಮಹೋದರ ಸುಪಾರ್ಶ್ವಗಿದಿರಾದ ‖ ೧೮೨ ‖*

ನಿಂತನಿದಿರಿಗೆ ಬಂದು ಕಂಪ ತಾನು ಹನೂ
ಮಂತನೊಳು ಕಾದಿದನು [1]ಪಂಥವಿಡಿದಂದು[1] ‖ ೧೮೩ ‖

ವಜ್ರಸುತನಂದನಗೆ ಒದಗಿತನಿತರಲಿ
ವಜ್ರದಂಷ್ಟ್ರನಕೂಡೆ ಸಮರವೆಸಗಿತ್ತು ‖ ೧೮೪ ‖

ಮಿತ್ರಘ್ನನೊಡನೆ ನಿಂದಾ ವಿಭೀಷಣನು
ಶತ್ರುತ್ವಮಂ ಬಳಸುತೊಡನೆ ಕಾದಿದನು ‖ ೧೮೫ ‖

೫೩ ರಾಗ ಭೈರವಿ—ತ್ರಿವುಡೆತಾಳ ೨

ಆಯಿತಾಗ ।—ಕಲಹಗ । ಳಾಯಿತಾಗ ।— ‖ ಪಲ್ಲವಿ ‖

ರಾಯದಳ ರಾ । ಕ್ಷಸರ ಪಾಳ್ಯದ । ಬಾಯು ಜೊಬ್ಬೆಯ । ಕದನ ಕರ್ಕಶ
‖ ಅನುಪಲ್ಲವಿ ‖

ಶರಧಿಮಥನದೊ । ಳಂದು ಹುಟ್ಟಿದ । [2]ಘರಕೆ[2] ನೂರ್ಮಡಿ । ಹೆಚ್ಚಿತು—।
ಧರಿಸಲಾರದೆ । ಭೂಮಿಭಾರವ । ಕರಿಕಮಠರೆದೆ । ಬಿಚ್ಚಿತು—।

---

1 ಮತ್ಸರವ ಪಿಡಿದು (ಕಾ) *ಅತಿಮಹೋದರ ಸುಪಾರ್ಶ್ವರಿಗಾಯ್ತು ಕದನ (ಕಾ)
2 ತರಿಗೆ (ಅ)

ನೆರೆದು ನೋಡುವ | ಸುರರ ಕಂಗಳ | ಪರಿಯು ತಾನೇ | ಮುಚ್ಚಿತು—|
ಸರಳವೊನೆ ತರು | ಗಿರಿಗಳಾಟದ | [1]ಸರಣಿ ತಲೆಗಳ | ಕೊ[1]ಚ್ಚಿತೀಪರಿ || ೧೮೬ ||

ಬಾಣಗಳು ತಗ | ಲಿದರೆ ಕಪಿಗಳು | ಮಾನದಿಂ ಪ | ಲ್ಗಿರಿಯುತ |
ಆನಲಾರದೆ | ಗಿರಿಯ ಹೊಡೆತಕೆ | ದಾನವರು ಭೋ | ರ್ಗರೆಯುತ |
ಕಾಣುತುಭಯಬ | ಲಂಗಳೊಳು [2]ವ್ಯೈ[2] | ಶೋಣಿತದ ಮಳೆ | ಸುರಿಯುತ |
ಕ್ಷೋಣಿಗತ್ಯಾ | ಶ್ಚರ್ಯವೆನೆ ಬಹು | ಪ್ರಾ[3]ಣವರಿಗಳ | ನ[3]ರಿಯುತಾಗಲೆ || ೧೮೭ ||

೫೪ ರಾಗ ಮಧ್ಯಮಾವತಿ—ಅಷ್ಟತಾಳ ೨

ಬಹುಮಂದಿ | ಲಯವಾಯಿ | ತು—ಪಾ | ಳೆಯದೊಳು |
ಕಪಿದಾನ | ವರುಗಳೊ | ಳೀಳರ್ಬ | ದೆಣಿಕೆಯ || ಪಲ್ಲವಿ ||

ಕಾಲುಕೈ | ಮುರಿದು ಬಿ | ದ್ದವರ ಲೆ | ಕ್ಕವನೆಲ್ಲ |
ಪಾಳುಮಾ | ಡುವರಾರು | ಪರಮಾತ್ಮ | ಬಲ್ಲ— || ಅನುಪಲ್ಲವಿ ||

ಕಲಿವಿಭೀ | ಷಣನು ವಿ | ತ್ರಘ್ನರಾ | ಕ್ಷಸನು ತ |
ನ್ನೊಳಗೆ ಪೌ | ರುಷವಾದ | ಹೆಣಕೆಯಿಂ | ದ—|
[4]ತ[4]ಳಮುಗು | ಚಲು ಜಾವ | ಪರಿಯಂತ | ಹೆಣಗಾಡಿ |
ಇಳೆಗೊರ | ಗಿಸಿದ ವಿ | ತ್ರಘ್ನರಾ | ಕ್ಷಸನ— || ೧೮೮ ||

೫೫ ವಾರ್ಧಿಕಷಟ್ಪದಿ

ದನುಜ ವಿತ್ರಘ್ನಪಾತಕಿ ಯುದ್ಧದಲಿ ಬಿದ್ದ
ಹೆಣನ ನೋಡಲು ಪಾಪವೆಂದು ತಾವರೆಯ [5]ವಿ
ತ್ರನು ಪಶ್ಚಿಮಾಂಬುಧಿಗೆ ಸಾಗಿದಡೆಯಾದಿನದಿ ಶಕ್ರಜಿತು ಪಂಥದಿಂದ ||
ಮನನೊಂದು ಪಾಳ್ಯಮಂ ಜೈಸಿಕೊಳದನಕ ಪ
ಟ್ಟಣವ ಹೊಗೆನೆನುತ ಮಿಕ್ಕೆಲ್ಲರಂ ಕಳುಹಿ ತಾ
ಘನ[6]ಸತ್ವಯುಕ್ತಿಯಿಂ[6] ಮಾಯಕದ ಕಲ್ಪಿತವ ನೆನೆದು ಮಾಡಿದ [7]ಘಾತ[7]ವ
|| ೧೮೯ ||

1 ಭರಕೆ ಭುವನವೆ ಬೆ (ಅ) 2 ನೆರೆ (ಕಾ) 3 ಜಗಳ ಶಿರವ (ಅ) 4 ಖ (ಕಾ)
5 ಗಖ ಇನ (ಅ) 6 ಪರಾಕ್ರಮದಿಂದ (ಅ); ಘಾತುಕತ್ವದಿಂ (ಓ, ಕಾ) 7 ಸೂತ್ರ (ಕಾ)

೫೬ [1]ರಾಗ ಮಾರವಿ[1]—ಏಕತಾಳ ೧

ಇಂದ್ರಜಿತು—

ಕಾಳಕ |, ತ್ರಲಾ | ಕಾಶದಿ | ಕವಿದ |
ತ್ರೀಳು ಕೋ |, ಟಿ ವಿಷ | ಗೂಳಿಗ | ಳನು ಶರ |
ಜಾಲಕೆ | ವಾಹಿಸಿ | ಮಂತ್ರಶ | ರವ ಕಪಿ |
ಪಾಳಿಯ | ಕಿಟ್ಟನು | ತೋಳಬ | ಲ್ಪಿನಲಿ || ೧೯೦ ||

ಬಸಿದು ಬೀ | ಳಿಕಾ | ಳೋರಗ | ಗಳು ನಾ |
ಲ್ದೆಸೆಯಲಿ | ಬುಸುಗು | ಟ್ಟುತ ಪಸ | ರಿಸಲಾ |
ವಿಷದುರಿ | ಯಿಂ ಪರ | ವಶರಾ | ಗುತ ಪವ |
ಡಿಸಿತಾ | ವಾನರ | ವಿಸರವ | ದೆಲ್ಲ || ೧೯೧ ||

ಹನುಮಂಗೆ | ರಡು ದಿನ | ಪನಸುತ | ಗೈದೆ |
ಚ್ಚನು ನಳ | ಗೊಂದಂ | ಗದಗೀ | ರೈದು ಪ |
ವನಗವ | ಯರು ವೊದ | ಲಾದ ಕ ! ಪೀಶ್ವರ |
ರನು ಶಗ | ಲಿತ್ತುರ | ಗನಶರ | ಬಂದು || ೧೯೨ ||

ಒರಗೆ ನ | ಳ ನೀಲ | ಸೊರಗಿದ | ಶತಬಲಿ |
ಮರುಗೆ ಗ | ವಯ ನೀ | ಟೆರಗಿದ | ಸುಷೇಣ |
ಭರದ ವೋ |, ಹ ನಿ | ದ್ರೆಯ ಸ್ಯೆ | ರಿಸದುರೆ |
ತಿರಿಗಿ[2]ತು | ತಲೆ ಕೆಲ | ಕೆ[2]ರಗಿದ | ರೆಲ್ಲ || ೧೯೩ ||

ದುರುಳರಿ | ಯದಡೇ | ನಾಯಿತು | ಶರವೇ |
ನರಿಯಡೆ | ಶ್ರೀ ರಘು | ವರವಾ | ಹಾತ್ಮ್ಯವ |
ಶರಧಿಯೊ | ಳಗೆ ಉರ | ಗನ ವೇ | ಲೊರಗುವ |
ತೆರನಂ | ದಾ ರಘು | ವರ ಪವ | ಡಿಸಿದ || ೧೯೪ ||

೫೭ ರಾಗ ಸೌರಾಷ್ಟ—ತ್ರಿವುಡೆ ತಾಳ ೨

ಉರಗತಾಪದ | ಕಡುಹಿನಲಿ ಮೆಯ್ |
ಮರೆದರೆಂಬುದ | ನರಿತಸಿರುಳಲಿ |
ಗರುಡ ಬಂ | ದೆಬ್ಬಿಸಿದ ಖಳರಾ | ರರಿಯದಂತೆ || ೧೯೫ ||

---

1 ಉತ್ಸಾಹರಗಳೆ (ಕಾ) 2 ದ ತಲೆಯಲಿಬ (ಕಾ)

ಮರುದಿವಸದುದ । ಯದಲಿ ಕೋಟೆಯು ।
ಹರಿದರಂದಿನ । ಗಸಣಿಗೋಸುಗ ।
ಪುರದ ಜನ । ತಲ್ಲಣಿಸೆ ರಾವಣ । ನರಿತು ಮನದಿ ॥ ೧೯೬ ॥

ಕರೆದನಾ ಧೂ । ಮ್ರಾಕ್ಷರಾಕ್ಷಸ ।
ದುರುಮುಖಾದಿಯ । ವಜ್ರದಂಷ್ಟ್ರನ ।
[1]ಧುರಗಡಿವ ಬಗೆ[1] । ಗೆಂದು ಕಳುಹಿದ । ದುರುಳ ಬೇಗ ॥ ೧೯೭ ॥

(ಇಕ್ಕೆಲದವರಿಗೆ ಪುನಃ ತುಮುಲಯುದ್ಧವಾಗುವುದು)

೫೮ ರಾಗ ಶಂಕರಾಭರಣ—ಮಟ್ಟೆತಾಳ ೨

ವಾಲಿಸುತನು । ರಣದೊಳವರ । ಕಾಲನೂರಿ । ಗಟ್ಟಲಾಗ ।
ಮೇಲೆ ಬಂದ । ಕಂಪನೆಂಬ । ಖೂಳದೈತ್ಯ । ನ— ॥ ೧೯೮ ॥

ಸೀಳುಮಾಡಿ । ಬಿಸುಟನೆಂದು । ಭಾಳ ಸುಪ್ರ । ತಾಪದಿಂದ ।
ನೀಲ ಬಂದು । ಸಚಿವಪತಿಯ । ಬೀಳುಗೆಡಹಿ । ದ— ॥ ೧೯೯ ॥

ದಾನವೇಂದ್ರ । ತಾನೆ ಬಂದು । ವಾನರೇಂದ್ರ । ನೊಡನೆ ಕಾದಿ ।
ತ್ರಾಣದಿಂದ । ಸೋಲಿಸಿದನು । ಭಾನುತನುಜ । ನ— ॥ ೨೦೦ ॥

ಬರುವ ಬರುವ । ಕಪಿಗಳೆಲ್ಲ । ಗೆಲುವೆನೆಂದು । ಕೋಪದಿಂದ ।
ಧರಣಿಪಾಲ । ನನುಜ [2]ಪೊರಟ । ನುರುತರಾಗ್ರ । ದಿ[2]— ॥ ೨೦೧ ॥

೫೯ ರಾಗ ನಾದನಾಮಕ್ರಿಯೆ—ಮಟ್ಟೆತಾಳ ೧

ಲಕ್ಷ್ಮಣ—

ರಾವಣೇಂದ್ರ । ನೆಂಬ ದನುಜ । ನೀನೆ ಘಾತ । ಕ—
ಸಾವಬಗೆಗೆ । ಮನವನಿಟ್ಟು । ದಾವ ಪಾತ । ಕ— ॥ ೨೦೨ ॥

ರಾವಣ—

ಬಲ್ಲೆ ನಾನು । ನಿನ್ನ ದೊಡ್ಡ । ಕಳ್ಳನೆಂಬು । ದ— ।
ಅಲ್ಲಿ ಮೂಗ । ಕೊಯ್ದು ಜಾಣ । ನ[3]ಲ್ಲವೇನೆ । ಲ[3]— ॥ ೨೦೩ ॥

---

1 ಗರುವದಲಿ ಗೆಲ (ಕಾ, ಅ) 2 ನೆದ್ದು ಪೊರಟನಾಗಲೆ (ಅ) 3 ಹುದೊದು ರ್ಮದ (ಅ, ಕಾ)

ಲಕ್ಷ್ಮಣ—

ಕಳ್ಳನಲ್ಲ । ದವನಿಸುತೆಯ । ಕದ್ದು ತಂದ । ವ— ।
ಬಲ್ಲತನದಿ । ಕೊಳ್ಳೊ ನಮ್ಮ । ಬಾಣಜಾತ । ವ— ॥ ೨೦೪ ॥

ರಾವಣ—

ಬಾಣವೆಸೆವ । ಬಗೆಯನೆಲ್ಲ । ಬಲ್ಲೆ ನಿನ್ನ । ಯು— ।
ತ್ರಾಣದಂಗ।[1]ವಣಿಯ ಪರಿಕಿ । ಸೆಲವೊ[1] ನಮ್ಮ । ಯು— ॥ ೨೦೫ ॥

ಲಕ್ಷ್ಮಣ—

ಬಿಡಲು ರಾ, । ವಣನ ಶರವ । ಕಡಿದ ಲಕ್ಷ್ಮುಮ । ಣ— ।
ಜಡಿದು ಹೊಂ, । ಕರಿಸಿ ಪ್ರತಿಗೆ । ತೊಡುವನಾಕ್ಷ । ಣ— ॥ ೨೦೬ ॥

ಹಲವು ಶಸ್ತ್ರ । ದಿಂದ ಕಾದಿ । ಗೆಲವು ಕಾಣ । ದೆ— ।
ಇಳೆಗೆ ಮೂರ್ಛೆ । ಯಾಗಿ ಬಿದ್ದ । ಖಳನ ಬಾಣ । ದೆ— ॥ ೨೦೭ ॥

೬೦ ಕಂದಪದ್ಯ

ಯುದ್ಧಾಂಗಣದೊಳ್ ತಮ್ಮಂ
ಬಿದ್ದಿಹುದಂ ಕಂಡು ರಾಮ ತಾನೇ [2]ಬರಲಾ[2] ।
[3]ಗೆದ್ದನುಜನೊಡಗೊಂಡ[3]ತಿ
ರೌದ್ರಾನ್ವಿತರಾಗಿ ಕಾದಿದರ್ ಸಂಗರದೊಳ್ ॥ ೨೦೮ ॥

೬೧ ರಾಗ ಪಂತುವರಾಳಿ—ಮಟ್ಟೆತಾಳ ೧

ರಾಮ—

ರಾವಣನೆಂ । ದೆಂಬ ಖೂಳ । ನೀನೇ ನಮ್ಮಂ । ಗನೆ, ಸೀತಾ ।
ದೇವಿಯ ತಂ । ದಿಟ್ಟು ಕೊಂಡ । ಕಾರಣವೇ । ನೊ— ॥ ೨೦೯ ॥

ರಾವಣ—

ಭೂವರೇಣ್ಯ । ಕೇಳಾದರೆ । ಕೇವಲ ನ । ಮ್ಮನುಜೆಯು ಮ ।
ತ್ತಾವ ಕಾರ್ಯ । ಕ್ಕಾಗಿ ನಾಸಿ ।ಕವನು ಕೊಯ್ದೆ । ಲ— ॥ ೨೧೦ ॥

---

1 ಗಳ ಪರೀಕ್ಷೆಕಾಣೊ (ಅ) 2 ಬಂದು (ಕಾ) 3 ಎದ್ದಿರಲನುಜಂ ತಾನ (ಕಾ, ಅ); ಅದ್ದಿಸಿದಂ ರಾವಣನಾ (ಅ)

ರಾಮ—

ಹೆಂಗುಸರಾ । ದವರು ಪರರ । ಇಂಗಿತವ, । ನರಿತುಕೊಳದೆ ।
ಅಂಗ[1]ಕೆ ಬೀ । ಳ್ವಡಿದರಂತ । ರಂಗವೇನ । ಯ್ಯಾ[1]— ॥ ೨೧೧ ॥

ರಾವಣ—

ಆದರಾಗಲ । ದೊಂದು ನೋಸ । ಮೇದಿನೀಪಾ । ಲಕ ನೀಯೆನ್ನ ।
ಸೋದರರ, । ನೆಲ್ಲ ಕೊಂದ । ಭೇದವೇನ । ಯ್ಯ— ॥ ೨೧೨ ॥

ರಾಮ—

ಸಾಧುಮಾರ್ಗ । ದಲ್ಲಿರುವರ । ಯೋಗಿಗಳ, । ನಿತ್ಯ ನಿತ್ಯ ।
ಬಾಧಿಸುವಡಿ । ದಂಗವೇ ನಿಮ । ಗಾದುದೇನ । ಯ್ಯ— ॥ ೨೧೩ ॥

ರಾವಣ—

ಊರೊಳಾಗು । ವಾ ವಿಚಾರ । ಪಾರುಪತ್ಯ । ವೆನಗಿದ್ದಂಥಾ ।
ದ್ದಾರು ಕೊಟ್ಟ । ರಯ್ಯ ನಿನಗೆ । ಧಾರಿಣೀಪಾ । ಲ— ॥ ೨೧೪ ॥

ರಾಮ—

ಸೂರ್ಯವಂಶ । ಜಾತರಿಹೆವು । ಧಾರಿಣಿ, । ನಮ್ಮದಿರಲು ।
ಬೇರೆ ಕೇಳ್ವ । ರಾರಿದೆಲ್ಲ । ಚೋರರಾಕ್ಷ । ಸ— ॥ ೨೧೫ ॥

ರಾವಣ—

ದೇವತೆಯ, । ರೆಲ್ಲ ನಮ್ಮ । ಸೇವೆಯುವ, । ರಾದ ಮೇಲೆ ।
ಯಾವ[2]ನಂತೆ । ನೀನು[2] ನಮ್ಮ । ದೂರ ಕೇಳ್ವ । ರೆ— ॥ ೨೧೬ ॥*

ರಾಮ—

ದಾನವ ಸಾ । ಕಯ್ಯ ಕೇಳವ । ಸಾನದ ಮಾ । ತೊಂದನೀಗ ।
ಜಾನಕಿಯ, । ಬಿಟ್ಟುಕೊಡುವ । ಮಾನಸವುಂ । ಟೇ— ॥ ೨೧೭ ॥

---

1 ಕೆ ಮೇಲ್ಬಾಯ್ದು ಬೀಳ್ವ ಸಂಗತಿಯುಂಟೆ (ಅ, ಕಾ) 2 ನಿರುವನಿನ್ನು ನಮ್ಮ (ಕಾ); ಸಂತೆಯಯ್ಯ(ಅ)

*ಕೋವಿದ ಜಾಣನಾದರೆ । ಈ ವಿಧಕರ್ಮಂಗಳ ।
ಯಾವ ಕಾರಣ ನೀ ಗೈದೆ । ಎಲವೊ ರಾಕ್ಷಸ । (ಅ)

ರಾವಣ—

ನೀನು ನಿನ್ನ । ತಾತ ಸಹಿತ । ಏನು ಕಾಣಿ । ಕೆಯಿತ್ತರೂ ಆ ।
ಮಾನಿನಿಯು, । ಬಿಡುವುದುಂಟೆ । ಹೀನಮಾನ । ವ— ॥ ೨೧೮ ॥

ರಾಮ—

ಕಾಣಿಕೆಯೊಂ । ದುಂಟು ನಿನ್ನ । ಗೋಣಿಗೊಡ್ಡಿ । ದಂಥದೆನ್ನ ।
[1]ಬಾಣ [2]ವಿದೆಕೊ[2] । ತಾಳಿ ಕೊಳ್ಳು[1] । ದಾನವಾಧ । ಮ— ॥ ೨೧೯ ॥

ಭಾನುವಂಶ । ಜಾತ ಬಿಟ್ಟ । ಬಾಣ ರಾವ । ಣ ತಾನುಟ್ಟ ।
[3]ಚೀ[3]ನ ವ[4]ಸ್ತ್ರ ।[4] [5]ಚಿಂದಿಗೆಯ್ದು[5] । ದೇನಸೆಂಬೆ । ನು— ॥ ೨೨೦ ॥

ಹತ್ತು ತಲೆ, । ಯಾತ ತಾ ನಾ । ಚುತ್ತಲಿಪ್ಪಾ । ಗ ವಾನರರ ।
ವೊತ್ತ ಫೇ, । ಯೆನಲು ದನುಜ । ಬತ್ತಲೆ ನಿಂ । ತ— ॥ ೨೨೧ ॥

೬೨ ವಾರ್ಧಿಕಷಟ್ಪದಿ

ರಾಮ—

ಗೋಚರಿಸದಂದದಲಿ ನಾಲ್ಕು ಶರದಿಂ ಕಮಲ
ಲೋಚನನು ರಾವಣನ ಕಟಿತಟದ ಪಟವಂ ನಿ
[6]ರೋಚೆಯಲಿ ಕತ್ತರಿಸಿ ಬಿಸುಡೆ ರಣರಂಗದಲಿ ನಾಚಿಕೆಯ ಕಂಡು ಬಳಿಕ ।[6]
ನಾಚರಿಪುದಿಲ್ಲೆಂದು ರವಿ ಕಡಲೊಳಡಗಲು ನಿ
ಶಾಚರೇಂದ್ರನು ಮನೆಗೆ ತೆರಳಿದನು ಕಪಿಪಾಳ್ಯ
ಕೀಚೆಯಲಿ ಗೆಲವಾಯಿತೆಂ[7]ದಮರರೆಲ್ಲರುಂ ಪುಷ್ಪಾರ್ಚನಂ ಗೆಯ್ದ[7]ರು ॥ ೨೨೨ ॥

೬೩ (ಡವಳಾರ) ರಾಗ [8]ಆಂದೋಳಿ[8]—ತ್ರಿವುಡೆತಾಳ ೧ (ದ್ರುತ)

ಅಂಬರದಲಿ । ಚರಿಸುವ । ದಿವಿಜಕ ।
ದಂಬವದೀ । ಕ್ಷಿಸುತಲೆ । ಬಂದತಿ ।
ಸಂಭ್ರಮ, । ದಿಂ—। ದ—॥ ನೆ, ರೆ—। ದ—। ರು—॥

---

1 ತ್ರಾಣದಿಂದ ತಾಳಿಕೊಳ್ಳೊ (ಅ, ಕಾ) 2 ವನೀ (ಕಾ) 3 ಪೀ (ಅ) 4 ಸನ (ಕಾ; ಅ) 5 ತುಂಡು (ಕಾ); ವನ್ನು ಕಳೆದು (ಅ) 6 ವೋಚಿಸಲು ರಣರಂಗ ಮಧ್ಯದಲಿ ಖಳನ ನಾಚಿಕೆ ರೂಪ ಕಂಡು ಹೇಸಿ (ಕಾ) 7 ದು ಕುಣಿಯುತ ಸುರರು ಸುಮದ ಮಳೆಯಂ ಕರೆದ (ಕಾ, ಅ) 8 ಪಂತುವರಾಳಿ (ಕಾ)

ನೆರೆದರು ಶ್ರೀ । ರಾಮನ । ಚರಣಕೆ ।
ಅಂಬುಜಪೂ । ಮ, ಳೆ, । ಯ— ॥ ಕ, ರೆ— । ದ— । ರು— ॥ ೨೨೩ ॥

ಇಂದ್ರಾದಿಗ । ಳಿಹ ಪುರ । ದೊಳು ಸುರ ।
ದುಂದುಭಿ ಮೊಳ । ಗುವುದೆಂ । ದೆನುತಲೆ ।
ಗಂಧರ್ವ, । ಸ,ತಿ, । ಯರ್— ॥ ಸ,ಹಿ— । ತಾ— । ಗಿ— ॥
ಸಹಿತಲೆ ನಡೆ । ತಂದಾ । ದಶರಥ ।
ನಂದನಗಾ । ರ,ತಿ, । ಯ— ॥ ಬೆ,ಳ— । ಗಿ— । ರೆ— ॥
ಸೋ — । ಬಾ — । ನೆ — ॥ ೨೨೪ ॥

ರಾಕ್ಷಸನು ದಿ । ಗಂಬರ । ನಾಗಿಹ ।
ಸಾಕ್ಷಿಗೆ ಬಂ । ದವರೆಂ । ದೆನುತಲೆ ।
ಯಕ್ಷರ್ಮಾ । ನಿ,ನಿ, । ಯ,[1]ರ್ । ನ,ಡೆ— । ತಂ— । ದು — ॥
ನಡೆತಂದೇ[1] । ಶೋಭನ । ಪಾಡುತ ।
ಅಕ್ಷತಾ । ರ, ತಿ, । ಯ— ॥ ಬೆ,ಳ— । ಗಿ — । ರೆ —
ಸೋ— । ಬಾ— । ನೆ— ॥ ॥ ೨೨೫ ॥

೬೨ ವಾರ್ಧಿಕಷಟ್ಪದಿ

ಶ್ರವಣ ಪರ್ವತದಿಂದ ಮುಂದೆ ಬಂದಾ ಮಹಾ
ರ್ಣವವ [2]ಸಂಧಿಸಿಕೊಂಡು[2] ಸೇತುವಂ ದಾಂಟಿ ಕಪಿ
ನಿವಹ ಸಹಿತಲೆ ಲಂಕೆಯೊಳು ಪಾಳ್ಯಮಂ ಬಿದರಿ ದುರ್ಗಮಂ ಪುಡಿಗೆಯ್ಯುತ ॥
ಬವರದಲಿ ಬಹುರಾಕ್ಷಸರ ಕೊಂದು ರಾವಣನ
ನಿವಸನದಿ ನಿಲಿಸಿದಲ್ಲಿಗೆ ಸಂಧಿಯೆಂ[3]ದೆನುತ
ಲವಕುಶರಿಗಾ ಮುನಿಪನೊರೆದ ವರಕಣ್ವಪುರಕೃಷ್ಣನ ಕಟಾಕ್ಷದಿಂದ[3] ॥ ೨೨೬ ॥

೬೩ ವಾರ್ಧಿಕಷಟ್ಪದಿ

ರಾಮಚರಿತವನು ಕನ್ನಡಯಕ್ಷಗಾನದಲಿ
ನಾ ಮನಸುಬಂದಂತೆ ವರ್ಣಿಸಿದೆನಿದರ ನಿ
ಸ್ಸೀಮಕವಿಗಳು ಕೇಳಿ ತಪ್ಪುಗಳ ಕಳೆದು ಶುದ್ಧಪ್ರತಿಯ ಮಾಡಿ ಬಳಿಕ ।
ಭೂಮಿಯೊಳು ರಾಗತಾಳವನರಿತು ಪಾಡಿದರೆ
ಆ ಮಹಾಕಣ್ವಪುರದೊಡೆಯ ಶ್ರೀಕೃಷ್ಣ ಸು
ಪ್ರೇಮದಿಂ ಸಕಲಭಾಗ್ಯವನಿತ್ತು ಸಕಲರಂ ರಕ್ಷಿಸುವನನುದಿನದೊಳು ॥೨೨೭॥

1 ರೈ—ತಂದು । ಐತಂದೂ (ಕಾ, ಅ) 2 ಬಂಧಿಸಿ ಮುಂದೆ (ಅ) 3 ದು ಕುಶ । ಲವರಿಗಾಮುನಿಪನೊರೆದನು ಕಾಂತಪರದ ಮಹಾಕಾಂತೇಶ್ವರನ ನೆನವುತ (ಕಾ)

# ಕುಂಭಕರ್ಣಾದಿಕಾಳಗ

## ಪ್ರಸಂಗದ ಕಥಾಸಾರ

ಎರಡನೆಯ ದಿನದ ಕಾಳಗದಲ್ಲಿ ಬಹಳಮಂದಿ ರಾಕ್ಷಸಭಟರು ಹತರಾಗಲು ರಾವಣನು ತನ್ನ ತಮ್ಮನಾದ ಕುಂಭಕರ್ಣನನ್ನು ನಿದ್ರೆಯಿಂದೆಬ್ಬಿಸುವಂತೆ ಆಜ್ಞಾಪಿಸುತ್ತಾನೆ. ಏನೇನು ಉಪಾಯಗಳಿಂದಲೂ ಆತನಿಗೆ ಎಚ್ಚರವಾಗದಿರಲು ಕೊನೆಗೆ ಬ್ರಹ್ಮನನ್ನೇ ಕರೆಸಿ ಎಚ್ಚರಗೊಳಿಸುವಂತೆ ಹೇಳುತ್ತಾನೆ. ಬ್ರಹ್ಮನು ಬಂದು ಮಂತ್ರೋದಕವನ್ನು ಪ್ರೋಕ್ಷಣೆಮಾಡಿದೊಡನೆ ಕುಂಭಕರ್ಣನಿಗೆ ನಿದ್ರಾಭಂಗವಾಗಲು, ಎಚ್ಚರಗೊಂಡ ತಮ್ಮನನ್ನು ರಾವಣನು ಭೂರಿಭೋಜನದಿಂದ ಸಂತೃಪ್ತಿಗೊಳಿಸಿ, ಶೂರ್ಪನಖಿಯ ಮಾನಭಂಗದಿಂದಿತ್ತ ನಡೆದಿರುವ ವಿದ್ಯಮಾನಗಳನ್ನೆಲ್ಲಾ ಆತನಿಗೆ ವಿಸ್ತರಿಸಿ, ಕಪಿಸೇನೆಯನ್ನು ಪರಾಭವಗೊಳಿಸುವುದಕ್ಕಾಗಿ ಯುದ್ಧಕ್ಕೆ ತೆರಳುವಂತೆ ಹೇಳುತ್ತಾನೆ.

ಕುಂಭಕರ್ಣನು, ಅಣ್ಣನ ಈ ದುಸ್ಸಾಹಸಕ್ಕೆ ಮನನೊಂದವನಾದರೂ ಕೈಮೀರಿದ ಕಾರ್ಯಕ್ಕೆ ಇನ್ನು ಚಿಂತಿಸಿ ಫಲವಿಲ್ಲವೆಂದೆಣಿಸಿ ಯುದ್ಧಕ್ಕೆ ತೆರಳಿ ಮಹಾ ಸಾಹಸದಿಂದ ಕಾದಿ ಕೊನೆಗೆ ಶ್ರೀ ರಾಮನ ಬಾಣದಿಂದ ಅಸುನೀಗುತ್ತಾನೆ. ಅನಂತರ ರಾವಣನ ಮಕ್ಕಳಾದ ನರಾಂತಕ, ದೇವಾಂತಕ, ತ್ರಿಶಿರ, ಮಹೋದರ, ಯುದ್ಧೋನ್ಮತ್ತರೆಂಬುವರು ಒಬ್ಬರ ಹಿಂದೊಬ್ಬರಂತೆ ಯುದ್ಧಕ್ಕೆ ಬಂದು ನರಾಂತಕನು ಅಂಗದನೊಡನೆಯೂ, ತ್ರಿಶಿರ ದೇವಾಂತಕರು ಹನುಮಂತನೊಡನೆಯೂ, ಮಹೋದರನು ನೀಲನೊಡನೆಯೂ, ಯುದ್ಧೋನ್ಮತ್ತನೆಂಬುವನು ವೃಷಭನೊಡನೆಯೂ ಕಾದಾಡಿ ಮಡಿಯುತ್ತಾರೆ.

ಇವರ ಮರಣದಿಂದ ಉದ್ವಿಗ್ನನಾದ ರಾವಣನು ಇನ್ನಿರುವ ತನ್ನ ಮಕ್ಕಳಾದ ಅತಿಕಾಯ ಮತ್ತು ಇಂದ್ರಜಿತುವೆಂಬ ಮಹಾ ಪರಾಕ್ರಮಶಾಲಿಗಳಿಬ್ಬರಲ್ಲಿ ಪರಮಸಾತ್ವಿಕನಾದ ಅತಿಕಾಯನನ್ನು ಯುದ್ಧಕ್ಕೆ ತೆರಳುವಂತೆ ಹೇಳುತ್ತಾನೆ. ವಿಷ್ಣುಭಕ್ತನಾದ ಅತಿಕಾಯನು, ಮಹಾವಿಷ್ಣುವಿನ ಅಪರಾವತಾರನಾದ ಶ್ರೀರಾಮನೊಡನೆ ಹಗೆತನ ಸಲ್ಲದೆಂದೂ, ಸೀತಾದೇವಿಯನ್ನು ಕೊಂಡೊಪ್ಪಿಸಿ ಆತನಲ್ಲಿ ಕ್ಷಮಾಯಾಚನೆಯನ್ನು ಮಾಡುವುದೇ ಶ್ರೇಯಸ್ಕರವೆಂದೂ ರಾವಣನಿಗೆ ನೀತಿಹೇಳುತ್ತಾನೆ. ಆದರೆ ರಾವಣನು ಆ ಮಾತನ್ನು ಧಿಕ್ಕರಿಸಿ ಯುದ್ಧವೇ ಪರಾಯಣವೆಂದು ಬಲವಂತಪಡಿಸಲು, ಅತಿಕಾಯನು ಅದೇ ತನಗೆ ಮೋಕ್ಷಸಾಧನವೆಂದೆಣಿಸಿ ಯುದ್ಧಕ್ಕೆ ತೆರಳಿ ಲಕ್ಷ್ಮಣನ ಬಾಣದಿಂದ ಹತನಾಗುತ್ತಾನೆ.

ಅತಿಕಾಯನ ಮರಣದಿಂದ ಹತಾಶನಾದ ರಾವಣನು ಇಂದ್ರಜಿತುವನ್ನು ಕೊನೆಯ

ಯುದ್ಧಕ್ಕಾಗಿ ಹುರಿದುಂಬಿಸುತ್ತಾನೆ. ಮರುದಿನ ಇಂದ್ರಜಿತುವು ಕಪಿಸೇನೆಯನ್ನು ಎಂತಾದರೂ ಗೆಲ್ಲುವೆನೆಂಬ ಪ್ರತಿಜ್ಞೆಯಿಂದ ಸಮಸ್ತರಾಕ್ಷಸಬಲದೊಡನೆ ಯುದ್ಧಕ್ಕೆ ತೆರಳಿ, ಮಾಯಾತಂತ್ರದಿಂದ ಉರಗಾಸ್ತ್ರವನ್ನು ಪ್ರಯೋಗಿಸಿ ರಾಮಲಕ್ಷ್ಮಣರ ಸಮೇತ ಕಪಿಸೇನೆಯನ್ನು ಮೂರ್ಛೆಗೊಳಿಸುತ್ತಾನೆ. ಆದರೆ ಆ ವಿಷವೇಗದಿಂದ ಮೊದಲಾಗಿ ಚೇತರಿಸಿಕೊಂಡ ಹನುಮಂತನು ಚಂದ್ರದ್ರೋಣಪರ್ವತದಲ್ಲಿದ್ದ ಸಂಜೀವನಔಷಧವನ್ನು ತಂದು ಪ್ರಯೋಗಿಸಿ ಎಲ್ಲರನ್ನೂ ಚೈತನ್ಯಗೊಳಿಸುತ್ತಾನೆ.

ಹೀಗೆ ತನ್ನ ಉರಗಾಸ್ತ್ರವು ವಿಫಲಗೊಂಡುದನ್ನರಿತ ಇಂದ್ರಜಿತುವು ಮರಳಿ ಯುದ್ಧದಲ್ಲಿ ಜಯಪ್ರಾಪ್ತಿಗಾಗಿ ನೆಲದಡಿಯ ಗುಪ್ತಸ್ಥಳದಲ್ಲಿ ಮಾರಣಯಜ್ಞವನ್ನು ಕೈಕೊಳ್ಳುತ್ತಾನೆ. ಇದರ ಸೋವನ್ನರಿತ ವಿಭೀಷಣನು ಹನುಮಂತನನ್ನು ಕರೆದುಕೊಂಡು ಹೋಗಿ ಮಾರಣಯಜ್ಞವನ್ನು ಕೆಡಿಸುತ್ತಾನೆ. ಇದರಿಂದ ಕೆರಳಿದ ಇಂದ್ರಜಿತುವು ಅಸಮಸಾಹಸದಿಂದ ಘೋರಯುದ್ಧವನ್ನೆಸಗಿ ಕೊನೆಗೆ ಲಕ್ಷ್ಮಣನ ಬಾಣದಿಂದ ಮೃತ್ಯುವಶನಾದನೆಂಬಲ್ಲಿಗೆ ಯುದ್ಧಕಾಂಡದಲ್ಲಿ ಕೊನೆಯದಾದ ಈ ಪ್ರಸಂಗಕ್ಕೆ ಮಂಗಲವಾಗುವುದು.

## ಮುಖ್ಯ ಪ್ರಕರಣಗಳು

ಕುಂಭಕರ್ಣನ ಕಾಳಗ
ನರಾಂತಕಾದಿಗಳ ಸಂಹಾರ
ಅತಿಕಾಯನ ಕಾಳಗ
ಇಂದ್ರಜಿತು ಕಾಳಗ

## ಭೂಮಿಕೆಗಳು

ರಾಮ
ಲಕ್ಷ್ಮಣ
ಹನುಮಂತ
ಸುಗ್ರೀವ
ಜಾಂಬವ
ಅಂಗದ
ನೀಲ
ವೃಷಭ
ಕಪಿಗಳು
ಬ್ರಹ್ಮ
ರಾವಣ
ಕುಂಭಕರ್ಣ
ವಿಭೀಷಣ
ಅತಿಕಾಯ
ಇಂದ್ರಜಿತು
ನರಾಂತಕ
ದೇವಾಂತಕ
ಮಹೋದರ
ಶೋಣಿತಾಕ್ಷ
ತ್ರಿಶಿರ
ಮಕರಾಕ್ಷ
ನಿಕುಂಭ
ಯುದ್ಧೋನ್ಮತ್ತ

# ಕುಂಭಕರ್ಣಾದಿಕಾಳಗ

## ಕುಂಭಕರ್ಣನ ಕಾಳಗ

### ೧ ಮತ್ತೇಭವಿಕ್ರೀಡಿತವೃತ್ತ

ಕುಶ ವಾಲ್ಮೀಕಿಮುನೀಂದ್ರನಿಂಗೆರಗುತಾ ತಾ ಕೇಳ್ದ, ಶ್ರೀರಾಘವಂ ।
ದಶಕಂಠಾಖ್ಯನ ಗೆದ್ದು ನಿರ್ವಸನದಿಂ ಹಿಂದಟ್ಟಲಾ ರಾವಣಂ ॥
ಅಸು[1]ಗಂ[1](ಖಂ) ಲಜ್ಜೆಯೊಳಿದ್ದು ರಾತ್ರಿ ಕಳೆಯುತ್ತೇನ್ಗೆಯ್ದನೇನೆಂಬುದಂ ।
ಉಸುರಲ್ ಬೇಹುದೆನಲ್ ಮಹಾಮುನಿವರಂ ಪೇಳ್ದಂ ಸುಮಾಂಗಲ್ಯದಿ ॥ ೧ ॥

(ಒಡ್ಡೋಲಗದಲ್ಲಿ ಆಸನಸ್ಥನಾದ ರಾವಣನ ಪ್ರವೇಶ)

### ೨ ರಾಗ ಸೌರಾಷ್ಟ್ರ—ತ್ರಿವುಡೆತಾಳ ೩

ರಾವಣ—

ಕೇಳು ಕುಶ ದಶ । ಕಂಠ ಮರುದಿನ ।
ಓಲಗದಿ ಕುಳಿ । ತಿರ್ದು ಮುಂದಣ ।
ಕಾಳಗಕೆ ಕಲಿ । ಕುಂಭಕರ್ಣನು । ಏಳದನಕ ॥ ೨ ॥

ಸಾಲದಾಹುದು । ಶಕ್ತಿ ನಮ್ಮದು ।
ಕೋಳುಹೋದರು । ತನುಜ ದನುಜರು ।
ಸೋಲವೇ ಸಂ । ಪ್ರಾಪ್ತವಾಯಿತು । ಕಾಳಗದಲಿ ॥ ೩ ॥

ಸಂಗಡಿಸಿಕೊಂ । ಡಿರುವ ನಿದ್ರೆಯು ।
ಭಂಗವಾದರೆ । ಬಳಿಕ ಕಪಿಗಳ ।
ಭಂಗಿಸದೆ ಬಿಡ । ರಾಮಸೈನ್ಯವ । ಕುಂಭಕರ್ಣ ॥ ೪ ॥

### ೩ ಭಾಮಿನಿಷಟ್ಪದಿ

ಏನುಪಾಯದೊಳನುಜಸುಪ್ತಿಯಂ ।
ಜ್ಞಾನಗೊಳಿಸುವುದೆನಲು ದನುಜಪ್ರ ।
ಧಾನಿಗಳು ನಡೆತಂದರಾಗ ಸಮುದ್ರಘೋಷದಲಿ ॥ ೫ ॥

---

1 ರಂ (ಕಾ, ಅ)

ರಕ್ಕಸರು—

ಜೇನುನೊಣಗಳು ಮುತ್ತುವಂದದಿ ।
ದಾನವರು ಕೂಗಿದರು ಕಿವಿಯಲಿ ।
ಬಾನವೊಡೆವಂದದಲಿ ಹೊಯ್ದರು ಭೇರಿವಾದ್ಯಗಳ ॥ ೬ ॥

(ರಾಕ್ಷಸಭಟರ ಸಂಭ್ರಮದ ಪ್ರವೇಶ)

೪ ರಾಗ ಮಾರವಿ—ಏಕತಾಳ ೧

ಏಳಾ । ದಿರಲು । —ನಿ । ದ್ರೆಯ ತಿಳಿ ।
ದೇಳಾ । ದಿರಲು— ॥ ಪಲ್ಲವಿ ॥

ಏಳದಿ । ರಲುಸಿರ । ಗಾಳಿಯು । ಕಡೆದೆ । ।
ರಾಳ ಮೆ । ಣಸಿನ, । ಧೂಳನಿ । ಕ್ಕರಿದ ।
ಥಾಳ ಸಾ । ಸಿವೆ ಮೂ[1]ಜ್[1] । ನಾಳದೊ । ಳಕ್ಕಿ ಕ ।
ರಾಳರ । ,ಕ್ಕಸರು । ಆಲಿಜೊ । ,ಬ್ಬರಿಯೆ ॥ ೭ ॥

ಆನೆ ಒಂ । ,ಟೆಗಳ । ಪೊಗಿಸ ಲಾ । ,ಡು ಕಾ ।
ಳ್ಗೋಣ ಟ । ಗರು ಹಂದಿ । ಶ್ವಾನಗ । [2]ಳ ಮೂಗಿ ।
ಗೇನ ಪೊ । ಗಿಸಿದರು । ಕಾಣೆನೆ । ಚ್ಚರುವುದ ।
ಡಾಣೆಗ । ಳಲಿ ಹೊಯ್ । ದಾ ನೆ । ತ್ತಿ ಒಡೆಯೆ[2] ॥ ೮ ॥

ಮೂಗಿಗೆ । ಪೊಗಿಸಿದ । ಸಕಲ ಜಂ ।, ತುಗಳು ।
ಸಾಗಿ ಬಾ । ಯೊಳಗಿಂ । ದಿಳಿದ್ವೆ । ಕಂದವು ।
ಯೋಗವೆ । ,ಚ್ಚರಿಪ । ಬಗೆಯುಂ । ಕಾಣದೆ ।
ಬೇಗ ರಾ । ,ವಣನಿ । ಗಾಗ ಪೇ । ,ಳಿದರು ॥ ೯ ॥

೫ ಕಂದಪದ್ಯ

ರಾವಣ—

ತಮ್ಮಗೆ ನಿದ್ರೆಯ ಕೊಟ್ಟಾ ।
ಬೊಮ್ಮನ ಕರೆ [3]ಎನಲು ಬೆದರಿ[3] ಬಂದಜನಾಗಂ ॥

ಬ್ರಹ್ಮ—

ಉಮ್ಮಳಿಸುತ ಮಂತ್ರೋದಕ ।
ಮಂ ವ್ಯೆಗೆರೆಯಲ್ಕೆ ಯೆದ್ದನಾ ಖಳನನುಜಂ ॥ ೧೦ ॥

---

1 ಗು (ಅ) 2 ಳೆನ್ನುವ । ನಾನಾ ಮೃಗಗಳ । ಘ್ರಾಣದಿ ಪೊಗಿಸುತ । ಗೋಜೆತ್ತುತಲಾ। ದಾನವತತಿಯಂ । ದೇನೆಸಗಿದರೊ॥ (ಓ) 3 ಎಂದೆನಲ್ಕೆ (ಕಾ)

(ಎಲ್ಲರೂ ನಿಷ್ಕ್ರಮಿಸುವರು)

(ಕುಂಭಕರ್ಣನ ಅಬ್ಬರತಾಳದ ಪ್ರವೇಶ)

೩ ರಾಗ ಸೌರಾಷ್ಟ—ಏಕತಾಳ ೪

ಕುಂಭಕರ್ಣ—

ಆರೆಲೊ ದಾ । ನವರೆನ್ನ । ಆರುತಿಂಗಳ । ನಿದ್ರೆಯನ್ನ ।
ಗಾರುಗೆಡಿಸಿ । ಎಚ್ಚರಿಸಿದ । ಧೀರನಾರ । ಯ್ಯ—॥
ತೋರಿ ಭೋಜ । ನಕ್ಕೆ ಸೋಪ । ಸ್ಕಾರಂಗಳ । ತಂಡೊಂದೊಂದ ।
ಬೇರೆ ಬೇರಾ । ದೆಣಿಕೆಯಿಂದ । ಭೂರಿವಹಿಲ । ದಿ— ॥ ೧೧ ॥

ಉಂಬೆನೀ, । ರೇಳು ಲೋಕ । ಕುಂಭಿನಿಯೊಳಿ । ದ್ದಂಥಾದ್ದ ।
ಕುಂಭಕರ್ಣ । ದೈತ್ಯ ತಾನಾ । ರೆಂಬುದರಿಯಿ । ರೆ—॥
ಕೊಂಬ ಮೊದಲೆ । ಮಾತಿದಲ್ಲ । ಸಾಂಬಶಿವನೆ । ಬಲ್ಲನೆಲ್ಲ ।
ಕುಂಭಿನಿಯ । ರಕ್ಷಿಸುವ । ಜಂಭಾರಿ ದೇ । ವ— ॥ ೧೨ ॥

ಅಣ್ಣ ರಾವ । ಣೇಂದ್ರ ಬಲ್ಲ । ಅನ್ನ ಪದಾ । ರ್ಥಂಗಳೆಲ್ಲ ।
ಸನ್ನಾಹವ । ಮಾಡಿರೀಗ । ತನ್ನಿರೋ ಬೇ । ಗ—॥
ಇನ್ನು ತಾಳ್ವ । ದಲ್ಲ ಗಳಿಗೆ । ಉಣ್ಣದಿದ್ದ । ರೀಗಳೆನಗೆ ।
ಕಣ್ಣು ಕಾಣ । ದು ಯಾರೆಂಬು । ದಿನ್ನು ಕೇಳ । ದು— ॥ ೧೩ ॥

ಸೇವಕ—

ಸೇವಕನೊ । ರ್ವನು ಬಂದು । ಈ ವರ್ತ ಮಾ । ನವ ತಂದು ।
ರಾವಣೇಂದ್ರ । ನಿದಿರು ನಿಂದು । ಪೇಳಿದನಂ । ದು—॥

ರಾವಣ—

ಸಾವಿರ ಶಾ । ಕಂಗಳನ್ನು । ತೋವೆ ಶಾಲ್ಯ । ದನ್ನವನ್ನು ।
ಕೇವಲ [1]ಭ । ಕ್ಷ್ಯಂ[1]ಗಳನ್ನು । ತಾನೆ ಕಳುಹಿ । ದ— ॥ ೧೪ ॥

---

1 ಭೋಜ್ಯ (ಕಾ)

೬ ರಾಗ ಶಂಕರಾಭರಣ—ತ್ರಿವುಡೆತಾಳ ೨

ರಾವಣ—

ಕುಂಭಕರ್ಣನ । ರಣಕಿಳುಹೆ ಬೇ ।
ಕೆಂಬ ಬಗೆಗೆ ।—ರಾವಣ ।
ಸಂಭ್ರಮದಿ ಸ । ನ್ನಹವ ಕಳುಹಿದ । ನುಂಬ ಥಗೆಗೆ ॥ ೧೫ ॥

ಹೆಂಡ ಮಾಂಸದ । ಗಡಿಗೆ ಹೆಡಗೆ, ।
ಮಂಡೆಗಳಲಿ ।—[1]ತುಂಬಿಸಿ[1] ।
ತಂಡತಂಡದಿ । ಕಳುಹಿದನು ನೂ । ರ್ಭಂಡಿಗಳಲಿ ॥ ೧೬ ॥

ಕುಂಭಕರ್ಣ—

ಮಿಂದು ಮಡಿಯು । ಟ್ಟೀಶ್ವರಾರ್ಚನೆ ।
ಯಿಂದ ಕುಳಿತು । —ಎಲ್ಲನ ।
ತಿಂದನರೆನಿಮಿ । ಷದಲಿ ಸವಿಸವಿ । ಯಿಂದ ಜಗಿದು ॥ ೧೭ ॥

೮ ದ್ವಿಪದಿ

ಕುಂಭಕರ್ಣ—

ಸಣ್ಣಕ್ಕಿಯನ್ನ ಸೇಮಗೆ ಕಡುಬು ಘೃತವ ।
ಎಣ್ಣೆ[2]ಹೂ[2]ರಿಗೆಯು ಹೋಳಿಗೆಯು ಅತಿರಸವ ॥ ೧೮ ॥

ಸುಕಿನುಂಡೆ [3]ಲಡ್ಡುಗೆ[3]ಯು ಪೆರಡಿಪಾಯಸವ ।
ಸಕಲಶಾಲ್ಯನ್ನ [4]ಹೊಸ[4] ಮಾಂಸರಾಶಿಗಳ ॥ ೧೯ ॥

ತುಪ್ಪದಲಿ ಹುರಿದ ತಾಳಿಲವ ತಂಬುಳಿಯ ।
ಅಪ್ಪಕಜ್ಜಾಯ ಬಾಳುಕವ ಸಂಡಿಗೆಯ ॥ ೨೦ ॥

ಅದರಿಂದ ತೃಪ್ತಿಯಾಗದ ಕುಂಭಕರ್ಣ ।
ಮುದಿಯಾನೆ ಕುರಿ ಕೋಣ ಹೊರತಾಗಿ ತಿನ್ನ ॥ ೨೧ ॥

ಕದನಕೊದಗದ ವಿ[5]ಥ[5]ದ ಕುದುರೆಗಳ ತಿಂದ ।
ಬದಲು ಬತ್ತೆಮ್ಮೆ ಸಾವಿರದ ನೂರೊಂದ ॥ ೨೨ ॥

---

1 ಹೊರಿಸುತ (ಕಾ) 2 ಗಾ (ಕಾ) 3 ಸಕ್ಕರೆ (ಅ) 4 ಮಧು (ಅ)
5 ವಿ (ಕಾ)

ಶ್ವಾನವೊಂದುಳಿದು ಬನಕರು ಹಂದಿಗಳನು ।
ದಾನವರು ತಂದಿತ್ತರೆಲ್ಲ ನುಂಗಿದನು ॥ ೨೩ ॥

ಕತ್ತೆಗಳ ಕೊಂದು ತಂದಿತ್ತರೈನೂರ ।
ಮತ್ತೆಹಸಿವಡಗದಿರೆ ಹೇಳಿದರು ದೂರ ॥ ೨೪ ॥

೯ ರಾಗ ಘಂಟಾರವ—ಜಂಪೆತಾಳ ೪

ರಾವಣ—

ದುರುಳನಿಗೆ । ಹಸಿವಡಗ । ದಿರಲು ರಾ । ವಣದೈತ್ಯ ।
ಗುರುವಿಗಾ । ಜ್ಞಾಪಿಸುತ । ತೆರಳಿಸಿದ । ನಾಗ— ॥ ೨೫ ॥

ಗುರು (ಶುಕ್ರಾಚಾರ್ಯ)—

ಮಂತ್ರಿ[1]ಸಿದ[1] । ವೊಸರನ್ನ । ವಂ ತಿನಿಸಿ । ದಾಕ್ಷಣಕೆ ।
ನಿಂತಿತಾ । ಹಸು ತೃಷೆ ಮ । ಹಾಂತದೈ । ತ್ಯನಿಗೆ— ॥ ೨೬ ॥

ಕುಂಭಕರ್ಣ—

ಉಂಡು ಕರ । ಗಳ ತೊಳೆದು । ವೀಳ್ಯಗಳ । ಮೆಲುತ ಮುಂ ।
ಕೊಂಡು ಬರು । ತಣ್ಣನಂ । ಕೊಂಡಾಡು । ತಿರ್ದ— ॥ ೨೭ ॥

ರಾವಣ—

ಬರುವ ತ । ಮ್ಮನ ನೋಡಿ । ಬಹಳ [2]ಹ । ರ್ಷ[2]ವ ಮಾಡಿ ।
ಸರಿಗದ್ದು । ಗೆಯಲಿ ಕು । ಳ್ಳಿರಿಸೆ ಪ್ರೇ । ಮದಲಿ ॥ ೨೮ ॥

ಕುಂಭಕರ್ಣ—

ಅಣ್ಣ ಮುಖ । ಕಮಲಗಳು । ಬಣ್ಣಗುಂ । ದಿಹುದೇನು ।
ಎನ್ನನೆ । ಬ್ಬಿಸಿದ ಬಗೆ । ಇನ್ನೇ[3]ನು । ನಿನಗೆ[3]— ॥ ೨೯ ॥

ರಾವಣ—

ಎಂದು ಕೇ । ಳಿದ ತಮ್ಮ । ನಂದವನು । ಮನಸಿನಲಿ ।
ತಂದುಕೊಂ । ಡತಿದೈನ್ಯ । ದಿಂದ ಪೇ । ಳಿದನು— ॥ ೩೦ ॥

---

1 ಸುತ (ಅ) 2 ಪ್ರೇಮ (ಅ) 3 ನದೇನು (ಕಾ)

೧೦ ರಾಗ ಕಾಂಭೋಜಿ—ಅಷ್ಟತಾಳ ೨

ರಾವಣ—

ತಮ್ಮ ಕೇ । ಳೆನಗೊಂದು । ತೊಡರು ಬಂ । ದಿದೆ ಇಂದು ।
ನಮ್ಮ ಶೂ । ರ್ಪಣಖಿಯಿಂ । ದ—॥
ಸುಮ್ಮನೆ । ಕಲಹಕಾ । ರಣವ ಮಾ । ಡಿದಳೇಕೆ ।
ಶರ್ವಾಣಿವಾ । ಗಿರುವದ । ಕೆ—ಸಾ । ವಿರವೇಕೆ ॥ ೩೧ ॥

ದಶರಥ । ಸುತ ರಾಮು । ಧರಣಿಪಾ । ಲಕ ತಮ್ಮ ।
ಅಸಮಸಾ । ಹಸಿ ಲಕ್ಷ್ಮ । ಣ—॥
ವಸುಧೆಯಾ । ಳ್ವದ ಬಿಟ್ಟು । ವನವಾಸ । ಕಾಲಿಟ್ಟು ।
ಕಸರಿಕೆ । ಮೊಳೆದೋರಿ । ತು—ನ । ಮ್ಮೊಳಗಿನಿತು ॥ ೩೨ ॥

ತಂಗಿ ಶೂ । ರ್ಪಣಖಿಯು । ಕುಚವ ನಾ । ಸಿಕವ ಕ ।
ರ್ಣಂಗಳ । ಕೊಯ್ದರೆಂ । ದು—॥
ಕಂಗೊಳಿ । ಸಿದ ಖರ । ದೂಷಣ । ತ್ರಿಶಿರರ ।
ಭಂಗಿಸಿ । ಮೆರೆದರೆಂ । ದು—ಪೇ । ಳಿದಳ್ಬಂದು ॥ ೩೩ ॥

ಆ ಕೋಪ । ಕದಕಾಗಿ । ಅರಿಯದಂ । ದದಿ ಪೋಗಿ ।
ನಾ ಕದ್ದು । ತವಕದ । ಲಿ—॥
ಆ ಕಾಂತೆ । ಸೀತೆಯು । ತಂದ ಕಾ । ರಣದಿಂದ
ಈ ಕಡೆ । ಮುಖವಾಯಿ । ತು—ನ । ಮ್ಮೊಡೆಗಿಂತು ॥ ೩೪ ॥

ಆ ಸೀತೆ । ಯನು ಬಿಟ್ಟು । ಕೊಡಬೇಕೆಂ । ದೆನುತ ವಿ ।
ಭೀಷಣ । ಛಲದಿ ಪೋ । ಗಿ—॥
ತಾ ಸೇರಿ । ಕೊಂಡ ರಾ । ಮನ ನಮ । ಗಿದಿರಾಗಿ ।
ಈಸು ಕಾ । ರ್ಯವ ಮಾಡಿ । ದ—ಪೇ । ಳಲೇನದ ॥ ೩೫ ॥

ಆಯಿತೊಂ । ದೆರಡಂತ್ರ । ಅಣುಗರ । ಕದನದಿ ।
[1]ಮಾ[1]ಯಕ । ದೊಳಗೆ ಕೊಂ । ದ—॥
ನ್ಯಾಯವ । ನ್ಯಾಯವಾ । ದರು ಹೀಗಾ । ಯಿತು ಮುಂದೆ ।
ನೀ ಯೆಂಬು । ದೇನು ಪೇ । ಳು—ಸ । ತ್ಯವೆನ್ನೊಳು ॥ ೩೬ ॥

---

1 ಸಾ (ಓ, ಕಾ)

೧೧ ಶಾರ್ದೂಲವಿಕ್ರೀಡಿತವೃತ್ತ

ಕುಂಭಕರ್ಣ—

ಇಂತೆಂದಾದವಿಚಾರಸಂಗತಿಗಳಂ ಕುಂಭಶ್ರವಂ ಕೇಳುತ ।
ಕಾಂತಾಭ್ರಾಮಕದಿಂದ ಬಂದ ಕದನಂ ಲೇಸಾಗದೀಸಾರಿಯೊಳ್ ॥
ಅಂತರ್ಭಾವದಿ ನಿರ್ಣಯಂಗೊಳಿಸಿ [1]ಇನ್ನೇನಾಗಲೆಂ[1]ತಾಗಲಿ ।
ಸಂತಾನಂ ಕೆಡದಂತೆ ಪೋಗಿಯನುಜಂ ಶ್ರೀರಾಮನಂ ಸೇರಿದಂ ॥ ೩೭ ॥

ವಚನ—

ಇಂತೆಂದು ಮನದೊಳಗೆ ಹಲವು ಯೋಚನೆಯಂ ಮಾಡಿ ರಾವಣನೊಡನೆ ಏನೆಂದನು ಎಂದರೆ—

೧೨ ರಾಗ ಕಲ್ಯಾಣಿ—[2]ಏಕತಾಳ ೪[2]

ಕುಂಭಕರ್ಣ—

ನಿನ್ನಂಥ ಜಾ । ಣರಿಂಗಿದು । ನೀತಿಯೆ ಪೇ । ಳಣ್ಣ—।
ಕಣ್ಣ ಮುಂದ । ಲ್ಲದೆ ಪರರ । ಹೆಣ್ಣ ತಂದಿ । ಟ್ಟುಕೊಂಬುದು ॥ ೩೮ ॥

ಸೀತೆ ಯೆಂಬ । ಳೀಗ ಭೂಮಿ । ಜಾತೆ ಮಹಾ । ಲಕ್ಷ್ಮಿ—।
ಆತ ರಾಮು । ಚಂದ್ರನೇ ಸಾ । ಕ್ಷಾತದೇವ । ನು— ॥ ೩೯ ॥

ಕೋತಿಗಳೆಂ । ಬುದು ಪುಸಿ । ಮಾತು ಸುಪ । ರ್ವಾಣರೈಸೆ ।
ಮಾತನಾಡಿ । ನ್ನೇನು ಕಾರ್ಯ । ಆತುದೇ ಶೌ । ರ್ಯ— ॥ ೪೦ ॥

ಮುಂದುವರಿದ । ಮೇಲೆ [3]ಇನ್ನು[3] । ನೊಂದು ಮಾಡು । [4]ವಂಥದೇ[4]ನು ।
ಎಂದಿಗಾದ । ರೀ ಶರೀರ । ಎರವಿನ ಹಾ । ರ— ॥ ೪೧ ॥

ಹಿಂದುಗಳೆಯೆ । ಕೀರ್ತಿ ನಿಲದು । ನಿಂದಿಸುವರು । ಬೈದು ಜನರು ।
ಸಂದೇಹವಿ । ಲ್ಲ ಸಂಗರವೇ । ಸರ್ವಸಮ್ಮ । ತ— ॥ ೪೨ ॥

ಮಾಧವನ । ಸೇರ್ವೆ ನಾ ವಿ । ರೋಧದಿಂದಾ । ದರೂ ಸ್ವಾಮಿ ।
ಪಾದಪ ಹೊಂ । [5]ದುವೆ[5] ಹೇ, । ಗಾದರಾಗ । ಲಿ— ॥ ೪೩ ॥

---

1 ಮತ್ತೆಂತಾದಡೆಂ (ಅ) 2 ಅಷ್ಟತಾಳ ೧ (ಕಾ) 3 ನಾನು (ಅ) 4 ವದಿನ್ನೇ (ಅ)
5 ದಿಕೊಂಬ (ಅ)

ಕಾದುವೆನೀ । ಹೊತ್ತು ನಾನು । ಕೊಡಿಸು ವೀ, । ಳೆಯುವ ನೀನು ।
ಸಾಧನಸ । ನ್ನಾಹವನ್ನು । ಸಾಗಿಸೈ ಇ । ನ್ನು— ॥ ೪೪ ॥

೧೩ ಕಂದಪದ್ಯ

ಗೆಲುವೆನು ರಾಮನ ಸೈನ್ಯವ
ಕಳುಹೆನ್ನನು ವೀಳ್ಯವಿತ್ತು ಕಪಿಪಾಳೆಯುವಂ ।
ಕಲಕುವೆನೊಡ್ಡಿಸಿ ಕೀಶರ
ಗೆಲವೆಮಗಾಯ್ತೆನಿಸದಿರೆನು ತವ ಕರುಣದೊಳಂ ॥ ೪೫ ॥

೧೪ ರಾಗ ಶಂಕರಾಭರಣ—ಅಷ್ಟತಾಳ ೨

ತಮ್ಮ [1]ನೀ । ತೆರಳು ಬೇ । ಗ[1]—ರಾ । ಮನ ಪಾಳ್ಯ ।
ಗಮ್ಮನೆ । ಜಯಿಸಲೀ । [2]ಗ[2]—॥
ತಮ್ಮವ । ರಿಗೆ ಬಂತು । ಗೆಲವೆಂದು । ಮನದಲಿ ।
ಹಮ್ಮಿನೊ । ಳಿರುವ ರಾ । ಮ—ನಿ । ಸ್ಸೀಮ ॥ ೪೬ ॥

ವೇಳೆಯು । ನರಿತುಕೊಂ । ಡು—ತ । ಮ್ಮನಿಗಾಗ ।
ವೀಳೆಯು । ಕೊಡಿಸಲಂ । ದು—॥
ಪಾಳೆಯು । ನೆರಹಿ ಪ । ಟ್ಟಣದಿಂದ । ಬರೆ ಯುಮ ।
ಗೂಳೆಯು । ತೆಗೆದನಂ । ತೆ—ಎಂ । ಬಂತೆ ॥ ೪೭ ॥

ಶೃಂಗಾರ । ರಚನೆಯಿಂ । ದ—ಕೂ । ಡಿದ ಚತು ।
ರಂಗ [3]ಮಾ । ರ್ಬಲಗಳಿಂ[3] । ದ—॥
ಸಂಗಡಿ । ಸಿದ ನಾನಾ । ಬಿರುದು [4]ಬ । ಣ್ಣಗಳಿಂದ[4] ।
ತುಂಗವಿ । ಕ್ರಮನು ಬಂ । ದ—ಮ । ಲೆತು ನಿಂದ ॥ ೪೮ ॥

೧೫ ಭಾಮಿನಿಷಟ್ಪದಿ

ಕುಂಭಕರ್ಣನ ರಣದ ಸೊಬಗಿನ ।
ಸಂಭ್ರಮವ ನೋಡುತ್ತ ದಿವಿಜ ಕ ।
ದಂಬ [5]ಬೆರಗಿನಲಿದ್ದರ[5]ಗಣಿತ ಭಯದ ಭಾರದಲಿ ॥ ೪೯ ॥

---

1 ಪೋ । ,ಗು ನೀ, । ನು (ಕಾ) 2 ನ್ನು (ಕಾ) 3 ವಿಸ್ತಾರದಿಂ (ಅ)
4 ಬಾವಲಿಗಳಿಂ (ಅ, ಕಾ) 5 ವಿದ್ದುದು ನಭದೊಳ (ಅ)

ರಾಮ—

ಅಂಬುಜಾಕ್ಷನು ಆ ವಿಭೀಷಣ ।
ನೆಂಬುವನ ಕೇಳಿದರೆ ಬರುವವ ।
ಕುಂಭಕರ್ಣಮಹಾನಿಶಾಚರನೆಂಬ ಸಮಯದಲಿ ॥ ೫೦ ॥

೧೬ ರಾಗ ಕಾಂಭೋಜಿ—ಜಂಪೆತಾಳ ೨

ದೇವಕ್ರಿಯ

ವಿಭೀಷಣ—

ಎಂತು [1]ಜೈ । ಸುವನೊ[1] ಶ್ರೀ । ರಾಮ ಇವ । ನ—।
ಅಂತಕೋ । ಪಮನಾದ । ಕಲಿಕುಂಭ । ಕರ್ಣ ॥ ಪಲ್ಲವಿ ॥

ಮೇರುಪ । ರ್ವತದಂತೆ । ಮೆರೆ[2]ದಿಹುದು । ಒಡಲಂ[2]ತೆ ।
ಭಾರಿ ಕೆಂ । ಗಣ್ಣು ಕೆ । ಪ್ಪಿನ್ಯಾಸೆಗಳ । ಲಿ—॥
ಮೂರು ತಾ । ಳೆಯ ಮರವ । ವಿಸ್ತರಿಹುದು । ಕಾಲವನ ।
[3]ತೋರ ಕೈ । ಬೆರಳು ಹೆ । ಮ್ಮರನಂಥ । ಕೊರಳು[3] ॥ ೫೧ ॥

ಹನುಮಂತ—

ಇಂತೆಂದು । ಸಕಲಸುರ । ರಾಗ ಯೋ । ಚಿಸಲು ಹನು ।
ಮಂತ ನೋ । ಡಿದನು ರಾ । ಕ್ಷಸನ ಸೈ । ನ್ಯವನು ॥
ಅಂತರಂ । ಗದೊಳಿವರ । ನರೆನೆನೆಂ । ದಿರುವಾಗ ।
ಭ್ರಾಂತು ಬು । ದ್ಧಿಯ ದನುಜ । ಬಂದು ಬೊ । ಬ್ಬಿರಿದ ॥ ೫೨ ॥

೧೭ ಕೇ । ವೃತ್ತ ॥

ರಾಮ—

ಅಸುರಪಡೆಯು ಬಂದು—ಅರ್ಭಟಿಸುತ್ತಲಂದು ।
ಮುಸುಕಿ ಮರ್ಕಟರನು—ಮುಂದೆ ನಿಂದಿರ್ದರನ್ನು ॥
ಬಿಸಜನಾಭನಾಗ—ಬಿಲ್ಲ ತೆಕ್ಕೊಂಡು ಬೇಗ ।
ಎಸೆವ ಶರಗಳಿಂದ—ರಾಮ ಮಾರಾಂತು ನಿಂದ ॥ ೫೩ ॥

---

1 ಬಣ್ಣಿಸುವೆ (ಅ, ಕಾ) 2 ದುದೊಡಲೆಂಬಂ (ಕಾ) 3 ವೋರೆ ಕೈಬೆರಳ ಹೊಗ। ಳುವಡರಿದು ಕೊರಳ (ಕಾ)

೧೮ ನಾದನಾಮಕ್ರಿಯೆ—ಮಟ್ಟೆತಾಳ ೩

ರಾಮ—

ನಾನು । ರಾಮ । ಕೇಳೊ । ಕುಂಭ । ಕರ್ಣ । ರಾಕ್ಷ । ಸ—।
ವಾನ । ರಾದಿ । ಗಳನು । ಗೆಲುವ । ದೇನು । ಸಾಹ । ಸ— ॥ ೫೪ ॥

ಕೊಲಿಸ । ಬೇಡ । ದನುಜ । ರನ್ನು । ನಿಲಿಸು । ಸುಮ್ಮ । ನೆ—।
ಅಲಸ । ದೆನ್ನ । ಕೊಡೆ । ಸೆಣಸಿ । ನೋಡು । ಘಮ್ಮ । ನೆ ॥ ೫೫ ॥

ಬಿಡುವ । ಖಳನ । ಶರವ । ರಾಮ । ನಡುವೆ । ತರಿದ । ನು—।
ತೊಡುವ । ತೊಡುವ । ಶರವ । ನೆಲ್ಲ । ಪುಡಿಯ । ಗೈದ । ನು ॥ ೫೬ ॥

ಉ[1]ರಗ । ಬಾಣ । ವೆಸೆಯೆ[1] । ದನುಜ । ಗರುಡ । ವಿಶಿಖ । ದಿ—।
ತರಿದು । ಬಿಸುಡೆ । ಗೋತ್ರ । ಶರವ । ಮುರಿದ । ಕುಲಿಶ । ದಿ ॥ ೫೭ ॥

ಉರಿ ಭ । ಢಾಳಿ । ಸಲ್ಕೆ । ಜಲದಿ । ಪರಿಹ । ರಿಸಿದ । ನು—।
ಕರದ । ಧನುವ । ಕಡಿದು । [2]ಧರಣಿ । ಗುರವ । ಣಿಸಿ[2]ದ । ನು ॥ ೫೮ ॥

ಕುಂಭಕರ್ಣ—

ಬಿಲ್ಲು । ಮುರಿದ । ಮೇಲೆ । ದನುಜ । ಹಲ್ಲ । ಕಿರಿಯು । ತ—।
ನಿಲ್ಲ । ಲಾಗ । ರಾಮ । ಕೋಪ । ದಲ್ಲಿ । ನೋಡು । ತ— ॥ ೫೯ ॥

ರಾಮ । ಮೂಲ । ಶರದಿ । ಶಿರವ । ಭೂಮಿ । ಗಿಳುಹಿ । ದ—।
ಆ ಮ । ಹಾ, । ಕುಂಭ । ಕರ್ಣೋ । ದ್ದಾಮ । ನೊರಗಿ । ದ—॥ ೬೦ ॥

ಬೀಳ । ಲಸುರ । ಕುಂಭ । ಕರ್ಣ । ಕೇಳಿ । ದಿವಿಜ । ರು—।
ಶ್ರೀಲ । ಲಾಮ। ಶರಣೆ । ನುತ ಹೂ । ಮಳೆಯ । ಕರೆದ । ರು—॥ ೬೧ ॥

೧೯ ವಾರ್ಧಿಕಷಟ್ಪದಿ

ಕುಂಭಕರ್ಣನ ಮಡಿದ ಒಡಲ ನೋಡಲು ಪಾಪ ।
ವೆಂಬ ಬಗೆಯಂತೆ ಭಾಸ್ಕರನಾದಿನಂ ಪಶ್ಚಿ ।
ಮಾಂಬುಧಿಯೊಳದ್ದ,ತಮ್ಮನ ಮರಣಮಂ ಕೇಳ್ದು ಹಂಬಲಿಸಿ ದಶಕಂಠನು ॥

---

1 ೦ ಭಡಾಳಿಸಲ್ಕೆ (ಅ) 2 ರಾಮುಧುರದಿ ಮೆರೆ (ಅ)

ರಾವಣ—

ಕುಂಭಿನಿಯಯನಾಳ್ವನನುಜರು ಬಂದು ದನುಜರಂ ।
ಜೆಂಬಿಡದೆ ಕೊಲುವದೇನಾಶ್ಚರ್ಯ ಶಿವ ಶಿವ ತ್ರಿ ।
ಯಂಬಕನೆ ತ್ರಿಪುರಾರಿ ಪಾರ್ವತೀರಮಣ ಹರ ಯೆಂಬಾಗ ಬೆಳಗಾಯಿತು ॥೬೨॥

## ನರಾಂತಕಾದಿಗಳ ಸಂಹಾರ

(ಮಂಡೋದರಿಯು ಸಹಿತ ರಾವಣನ ಪ್ರವೇಶ)

೨೦ ರಾಗ ಸಾವೇರಿ—ಅಷ್ಟತಾಳ ೧

ರಾವಣ—

ಇನ್ನು ರಾ । ಘವನಿಗೆ । ಜಯವಾ, । ಯಿತು ಕುಂಭ ।
ಕರ್ಣ ಹಾ । ಗಾದ ನೋ । ಲೆ — ॥
ಬಣ್ಣಗುಂ । ದಿದ ಚಿನ್ನ । ಬಡಿದಂತಾ । ಯಿತು ತನ್ನ ।
ಪುಣ್ಯದ । ಸಿರಿ ಎಂದ । ನು— ದನು । ಜೇಂದ್ರನು ॥ ೬೩ ॥

ಪುರವ ಸು । ಟ್ಟಂದೆ ಗೋ । ಚರಿಸದಾ । ದೆನು ಹಿಂದೆ ।
ಪೊರಡಿಸಿ । ದೆನು ತಮ್ಮ । ನ— ಸಂ । ಧಾನದಿ ॥
ಜರಿದೆನಂ । ಗದನ ಮಾ । ತನು ಕೇಳ । [1]ದಾನಿಂ[1]ತು ।
ಪರಿಪೂರ್ಣ । ಮರುಳಾಯಿ । ತು — ಹೀ । ಗಾಯಿತು ॥ ೬೪ ॥

ಪರಸತಿ । ಯನು ತಂದು । ಸೆರೆಯೊಳಿ । ಕ್ಕಿದೆನೆಂದು ।
ಪರಿದಪ । ಕೀರ್ತಿ ಬಂ । ತು—ಮು । ಕ್ಕಳಿಗಿಂತು ॥
ಮರಣ ಸಂ । ಭವಿಸಿತು । ನಿರತ ಸೇ । ವಿಸುವಂಥ ।
ಸುರರು ದೂ । ಷಕರಾದ । ರು—[2]ಏ । ನಾ[2]ದರೂ ॥ ೬೫ ॥

೨೧ ವಾರ್ಧಿಕಷಟ್ಪದಿ

ರಾವಣ—

ಪರಸತಿಗೆ ಪರುಠವಿಸಿ ಪಾರಾಯ್ತು ಪಂಥದಲಿ ।
ಪರುಷ ಕಬ್ಬಿಣವಾಗಿ ಫಲಿಸಿತನುದಿನ ಕರೆವ ।
ಸುರಭಿ ಗೊಡ್ಡಾಯ್ತಮೃತ ವಿಷವಾಯ್ತು [3]ಸೌಭಾಗ್ಯಹೀನಗಪಜಯ ವಾಯಿತು[3] ॥

---

1 ದೆನಗಿಂ (ಕಾ) 2 ಇನ್ನಾ (ಅ) 3 ಮಂಡೋದರಿಯು ಮಾತು ಸತ್ಯವಾಯ್ತು (ಅ)

ಪುರುಷಾರ್ಥವಿಲ್ಲ ಬದುಕಿದರಿನ್ನೆನುತ್ತ ಮನ ।

ನರಾಂತಕ—

ಕರಗುತಿಹ ವೇಳ್ಯದಿ ನರಾಂತಕಂ ನಡೆತಂದು ।
[1]ಪರವು[1]ಪೌರುಷದಿಂದ ಮಂಡೋದರಿಗೆ ನಮಿಸಿ ದಶವದನಗಿಂತೆಂದನು ॥೬೭॥

(ನರಾಂತಕನ ಪ್ರವೇಶ—ಅಬ್ಬರ ತಾಳದಲ್ಲಿ)

೨೨ ರಾಗ ಪಂತುವರಾಳಿ—ಏಕತಾಳ ೨

ತಂದೆ ಕೇಳ್ಳ । ರ್ಕಟರನ್ನು । ಕೊಂದಲ್ಲದೀ । ಹೊತ್ತು ನಾನು ।
ಬಂದೆನಾದ । ರೆ, ನಿಮ್ಮ । ಕಂದನಲ್ಲೆಂ । ದ— ॥ ೬೭ ॥

ನೀಲನ ಪಾ । ಳಿಯುವ ಕಾಲ । ನಾಲಯಕೆ । ಕ್ಯದಿದ್ದರೆ ।
ಪೇಳುವೆ ನಿ । ಮ್ಮಿಬ್ಬರಿಗೂ । ಬಾಲಕನ । ಲ್ಲ— ॥ ೬೮ ॥

ಎಂದು, ಪ್ರ । ತಿಜ್ಞೆ ಮಾಡಿ । ನಿಂದ ರಾಕ್ಷ । ಸನ್ನ ನೋಡಿ ।
ಬಂದನಂಗ । ದ, ಕಾದ । ಲೆಂದನುವಾ । ದ— ॥ ೬೯ ॥

(ಅಂಗದ ನರಾಂತಕರ ಯುದ್ಧ)

೨೩ ರಾಗ ಘಂಟಾರವ—ಏಕತಾಳ ೩

ಅಂಗದ—

ಬಂದ—ವ । ನಾರೊ ನೀ । ನು—ಏ । ನೇ,ನು— ॥ ಪಲ್ಲವಿ ॥

ಬಂದವನ । ದಾರೋ ನೀನು । ಮುಂದೆ ಕಾರ್ಯ । ಗಳಿನ್ನೇನು ।
ತಂದೆ ಯಾರು । ತಾಯಾರು ನಿ । ನ್ನ—ಏ । ಸಂಪನ್ನ— ॥ಅನುಪಲ್ಲವಿ॥

ಆನೆ—ಕು । ದುರೆ ಒಂಟೆ । ಸೇನೆ—ಗ । ಳಿನ್ನೆಷ್ಟುಂಟೆ ।
ಜಾಣ—ನ । ಹುದಯ್ಯ ನೀ । ನು—ಮುಂ । ದೇ,ನು ॥ ೭೦ ॥

ಕುಂಭ—ಕ । ರ್ಣನು ಹೋದ । ಸಂಬ—ಳ । ಕಿವನಾದ ।
ನೆಂಬು—ದ । ಬಲ್ಲೆ,ನಾ । ನು—ಇ । ನ್ನೇ,ನು ॥ ೭೧ ॥

ಕಾದ—ಲೆ । ನುತ ಬಂದೆ । ಹೋದ—ವೇ । ಲೇನು ಮುಂದೆ ।
ನೀಬಾ—ರಿ । ಮಾಡಿಕೊಳ್ಳ । ಯ್ಯ—ಈ । ನುಡಿಕೇಳಯ್ಯ ॥ ೭೨ ॥

---

1 ಭರದಿ (ಅ)

ಬತ್ತ—ಲೆ | ನಿಂತವನ | ಪುತ್ರ—ನ | ಲ್ಲವೆ ನೀನು |
ಉತ್ತ—ಮ | ನಾಮವೇ | ನು—ಏ | ನೇ,ನು || ೭೩ ||

೨೪ ರಾಗ ಭೈರವಿ—ಏಕತಾಳ ೧, ೨

ಅಂಗದ—

ಹೀಗೆಂ | ದೆನುವದ | ರೊಳಗೆ | —ಬಾಣ |
ತಾಗಿತು | ಬಂದಂ | ಗದಗೆ ||
ಆಗದ | ನೆಲ್ಲವ | ತಡೆದ | —ಶರ |
ದಾಗಿರಿ | ಮರದಲಿ | ಹೊಡೆದ || ೭೪ ||

ಬಾಣವ | ಬಿಡುವುದ | ರೊಳಗೆ | —ಬಿದ್ದ |
ದಾನವ | ಧಾರಿಣಿ | ಯೊಳಗೆ ||
ಪ್ರಾಣವ | ಳಿಯಲಾ | ತ್ರಿಶಿರ | —ಬಲು |
ಜಾಣದೇ | ವಾಂತಕ | ರಿದರ || ೭೫ ||

ಕಂಡ್ನೆ | ತರಿ ಹನು | ಮಂತ | —ಖತಿ |
ಗೊಂಡೇ | ಳಲು ಬಲ | ವಂತ ||
ಚಂಡಮ | ಹೋದರ | ನತ್ತ | —ಕೈ |
ಗೊಂಡನು | ಸಮರಕೆ | ಮತ್ತ || ೭೬ ||

ಹಲು ನೊರೆ | ಯುತ ಮುಂ | ದರಿಯೆ | —ನಿ |
ಶ್ಚಲಚಿ | ತ್ತದಿ ಮೇ | ಲ್ವರಿಯೆ ||
ಗಳಿಗೆಯೊ | ಳಾತನ | ನೀಲ | —ರಣ |
ದೊಳು ಸಂ | ಹರಿಸಿದ | ಶೀಲ || ೭೭ ||

ಯುದ್ಧೋ | ನ್ಮತ್ತನೆಂ | ಬಾತ | —ಬಲು |
ಯುದ್ಧವ | ಮಾಡಲು | ವೃಷಭ ||
ಗೆದ್ದನ | ರೆಕ್ಷಣ | ದೊಳಗೆ | —ಖಳ |
ಬಿದ್ದನು | ಧಾರಿಣಿ | ಯೊಳಗೆ || ೭೮ ||

ಬರುವ ಬ | ರುವ ದಾ | ನವರು | —ಯಮ |
ಪುರದಲಿ | ಮನೆ ಮಾ | ಡಿದರು ||

ಅತಿಕಾಯ—

ಕರವ ಮು । ಗಿದನತಿ । ಕಾಯ । —ದಶ ।
ಶಿರನಿಗೆ । ಪೇಳ್ದನು । ನ್ಯಾಯ ॥ ೭೯ ॥

## ಅತಿಕಾಯನ ಕಾಳಗ

(ಯುದ್ಧ ಮುಗಿಯಲಾಗಿ ಅತಿಕಾಯ ರಾವಣರ ಪ್ರವೇಶ)

೨೫ ರಾಗ ಶಂಕರಾಭರಣ—ತ್ರಿವುಡೆತಾಳ ೨

ಜನಕ ಲಾಲಿಸು । ರಾಮಚಂದ್ರನು । ಮನುಜನಲ್ಲ । —ಲೋಕದ ।
ಘನವನಿಳುಹಲು । ಬಂದ ನಾರಾ । ಯಣನೆ ಕೇಳು ॥ ೮೦ ॥

ಸಕಲದೊಳು ಪರಿ । ಪೂರ್ಣ ವ್ಯಾಪಾ । ರಕನ ಕೂಡೆ । —ಸೇವಾ ।
ಸಕತಿಯಲಿ ಸುಖ । ಬಾಳ್ವುದೊಳ್ಳಿತು । ಯುಕುತಿಯೊಳಗೆ ॥ ೮೧ ॥

ಅಪ್ರಮೇಯಾ । ದ್ವೈತನಂಘ್ರಿಯ । ಕ್ಷಿಪ್ರದಿಂದ । —ಸೇವಿಸಿ ।
ತಪ್ಪು ಬಂತೆಂ । ದೆನುತ ಸೀತೆಯ । ನೊಪ್ಪಿಸಯ್ಯ ॥ ೮೨ ॥

ಲೇಸು ಬಾರದು । ಕದನವಾಲ । ಕ್ಷ್ಮೀಶನೊಡನೆ । —ಅನುಜವಿ ।
ಭೀಷಣನ ಕರ । ಕೊಂಡು ಬಂದು ವಿ । ಲಾಸದಿಂದ ॥ ೮೩ ॥

ಇರುವದೊಳ್ಳಿತು । ಎಂಬನುಡಿ ದಶ । ಶಿರನು ಕೇಳಿ । —ಕೋಪದಿ ।
ಜರಿಯುಲಿದುವೇ । ಸಮಯವೆನುತವ । ನರಿತನಾಗ ॥ ೮೪ ॥

೨೬ ರಾಗ ಘಂಟಾರವ—ಜಂಪೆತಾಳ ೩

ತಂದೆ ಕೇ । ಳೀ ಹೊತ್ತು । ಎನಗೆ ವೀ । ಳ್ಯವನಿತ್ತು ।
ಚಂದದಲಿ । ರಣಕೆ ಕಳು । ಹೆಂದು ಕೈ । ಮುಗಿದ ॥ ೮೫ ॥

ಬೇಗ ರಣ । ವನು ಜೈಸು । ಹೋಗೆಂದು । ವೀಳ್ಯವಿ ।
ತ್ತಾಗ ಕಳು । ಹಿದ ಕರುಣ । ಸಾಗರನ । ಬಳಿಗೆ ॥ ೮೬ ॥

ಕರಿತುರಗ । ರಥ ದಾನ । ವರು ಸಹಿತ । ಹೊರವಂಟ ।
ಧುರಕೆ ಸ । ನ್ನಹದಿಂದ । ಹರಿಸೇವೆ । ಗೆಂದ— ॥ ೮೭ ॥

(ರಾವಣನ ನಿಷ್ಕ್ರಾಮ)

೨೭ ರಾಗ ಕಲ್ಯಾಣಿ—ಅಷ್ಟತಾಳ ೨

ಬನ್ನಿ ರಾ । ಮನ ಸೇವೆ । ಗೆ— ಸಾ । ಧುಗಳೆಲ್ಲ ॥ ಪಲ್ಲವಿ ॥

ಇನ್ನು ಇಂ । ಥಾವೇಳ್ಯ । ವಿಲ್ಲ ಸಿ । ಕ್ಕುವುದಿಲ್ಲ ।
ಪನ್ನಂಗ । ಶಯನ ರಾ । ಮೆನ್ನುತ್ತ । ಶರಣರೆಲ್ಲ ॥ ೮೮ ॥

ಮನು ಮುನಿ । ಗಳು ನಿತ್ಯ । ನೆನೆಯುತಿ । ರಲು ಸತ್ಯ ।
ಘನತರ । [1]ನಿಜಮುಕ್ತಿ । ಯನು ಸಾಧಿ । ಸುವರಲ್ಲ[1] ॥ ೮೯ ॥

ಸರಸದಿಂ । ದಲೆ ಸರ । ಸಿರುಹನಾ । ಭನ ಪದ ।
ಸರಸಿಜ । ವನು ಕಾಂಬ । ತವಕದಿ । ಸುಜನರೆಲ್ಲ ॥ ೯೦ ॥

೨೮ ವಾರ್ಧಿಕಷಟ್ಪದಿ

ಇಂತೆಂದು ಡಂಗುರವ ಹೊಯ್ಸಿ ಪಟ್ಟಣದಿಂದ
ಕಾಂ ತೆರಳಿ ಬರುವ ಪಾಳೆಯವ ನೋಡುತ್ತ ಹನು
ಮಂತಮುಖ್ಯಾದಿಗಳು ಮಾತಾಡುತಿರೆ ಶರಣನಿಂತೆಂದನಾ ರಾಮಗೆ ॥
ಕಂತುಪಿತ ಕೇಳೀತನತಿಕಾಯನಧಿಕಬಲ
ವಂತ ನಿಯಮಿತಸುವ್ರತಂ ವೈಷ್ಣವಾದಿಗಳೊ
ಳಂತರಿಲ್ಲದ ಭಕ್ತನೆನಲು ಸೌಮಿತ್ರಿ ಮಾರಾಂತನತಿಕಾಯಗಿದಿರು ॥೯೧॥

(ಲಕ್ಷ್ಮಣ ಅತಿಕಾಯುರ ಯುದ್ಧ)

೨೯ ರಾಗ ಕಾಂಭೋಜಿ—ಅಷ್ಟತಾಳ ೧

ಹೊಡೆದಾಡಿ । ದರು ರಣ । ದೊಳಗೆ, । —ಬಲು ।
ಕಡುಪರಾ । ಕ್ರಮ ಪಂಥ । ಪೌರುಷ । ದೊಳಗೆ ॥ ಪಲ್ಲವಿ ॥

ಮದಕರಿ । ಗಳನೆತ್ತಿ । ಗಿಡುತ, । —ರಥ ।
ಕುದುರೆ ರಾ । ವುತರ ಮುಂ । ಡೆಗೆ ಬಾಣ । ಬಿಡುತ,
ಬದಲಿಗೆ । ಬದಲಂಬ । ನಿಡುತ, । —ಸಮ ।
ರದ ಸಂಭ್ರ । ಮದಲಿ ಡೊಂ । ಬಿಗೆ ಮೆಯ್ಯ । ಕೊಡುತ ॥ ೯೨ ॥

1 ಮುಕ್ತಿ ಪಥವನು ಕಾಂಬವರೆಲ್ಲ (ಅ, ಕಾ)

[1]ಕೆಂಗರಿ | ಕೋಲ ಕಾ | ಹುರಕೆ, | —ಮನುಸು[1] |
ಸಿಂಗಳೀ | ಕಗ[2]ಳೆಲ್ಲ | ಬಿದ್ದವು[2] | ನೆಲಕೆ |
ಸಂಗಡಿ | ಸಲು ಯಮ | ಪುರಕೆ, | —ಸಮ |
ರಾಂಗಣ | ದೊಳು ಲೆಕ್ಕ | ವಿಲ್ಲ ಸ | ತ್ತುದಕೆ || ೯೩ ||

ಕ್ಷಯವಾಯ್ತು | ನೇಕ ದಾ | ನವರು, | —[3]ಜಯ[3] |
ಜಯವೆಂ[4]ದಂ | ಬರದಿ ಬೊ | ಬ್ಬಿಡುತಲೆ | ಸುರರು[4] |
ಜಯಭೇರಿ | ಹೊಯ್ದರ | ತ್ಯಧಿಕ, | —ಬಲು |
ಪ್ರಿಯದಿಂದ | ಲಕ್ಷ್ಮಣ | ನನ್ನು ಪೊ | ಗಳುತ || ೯೪ ||

ಶಕ್ತಿಯಿಂ | ದೆಚ್ಚು ಸೌ | ಮಿತ್ರಿ, | —ಖಳ |
ಮಸ್ತಕ | ವನು ಕೆಡ | ಹಲ್ಕೆ ಧ | ರಿತ್ರಿ |
ಎತ್ತಿಕೊಂ | ಡುದು ಭಯ | ಭಕ್ತಿ, | —ಸುರ |
ರರ್ತಿಯಿಂ | ದೊಯ್ದರಾ | ತಂಗಾಯ್ತು | ಮುಕ್ತಿ || ೯೫ ||

೩೦ ಶಾರ್ದೂಲವಿಕ್ರೀಡಿತವೃತ್ತ

ಶ್ರೀ ರಾಮಾನುಜ ಕೋಪದಿಂದ ಶರಮಂ ಬಿಟ್ಟಾಗ ಲಕ್ಷ್ಮ್ಯಂತದೊಳ್ |
ಘೋರಾಕಾರ[5]ಶಿರಾಯ[5] ಮಸ್ತಕ[6]ವು ತಾ ಬೀಳ[6]ಲ್ಕೆ ಸಂತೋಷದಿ |
ಭೋರೆಂದೆದ್ದು ಸಮಸ್ತ ನಿರ್ಜರರುಗಳ್ ಪುಷ್ಪಾರ್ಚನಂ ಗೈಯಲು |
ಧೀರೋದಾರ ಕುಮಾರನಿಂದ್ರಜಿತುವಂ [7]ಶಕ್ಕ್ಯೈಸುತಿಂತೆಂದನು[7] || ೯೬ ||

## ಇಂದ್ರಜಿತುಕಾಳಗ

೩೧ ರಾಗ ಶಂಕರಾಭರಣ—ಮಟ್ಟೆತಾಳ ೨

ರಾವಣ—

ತನಯ ಇಂದ್ರ | ವೈರಿ ನಿನ್ನ | ವಿನಯದನುಜ | ನತಿಕಾಯನ್ನ |
ರಣದಿ ಕೊಂದ | ನಂತೆ ರಾಮ | ನನುಜ ಲಕ್ಷ್ಮ | ಣ— || ೯೭ ||

ದನುಜರೆಲ್ಲ | ಕೊಂದವರವರು | ಮನುಜರಲ್ಲ | ನಿಂದರಿವರು |
ರಣಪ್ರತಾಪ | ರಾಗಿ ಮೆರೆವ | ಘನವಿವೇಕ | ವ— || ೯೮ ||

1 ವ.ಂಗಗಳೇರಲು ಮರಕೆ ಮುದಿ(ಅ) 2 ಳು ಪಲ್ಗಿರಿಯುತ(ಅ) 3 ಕಾದಿ (ಅ) 4 ದು ದೇವದುಂದುಭಿಯ ಹೊಯ್ಸಿದರು (ಕಾ) 5 ದ ಬಾಣ (ಅ) 6 ವನುಂ ಕೆಡಹ(ಅ) 7 ಕಳು ಹಲ್ಕೆ ಮನ್ನಿಸಿದನು (ಅ)

ಇಲ್ಲ ಸಾಹ । ಸಿಗಳು ನೀ, । ನಲ್ಲದೆನ್ನ । ಕಂದರೊಳಗೆ ।
ಬಲ್ಲತನವ । ನೋಡಬೇ, । ಕಲ್ಲ ಬಾಲ । ಕ— ॥ ೯೯ ॥

೩೨ ಕಂದಪದ್ಯ

ಇಂದ್ರಜಿತು—

ತಂದೆಯ ಮಾತನು ಕೇಳುತ
ಇಂದ್ರಾರಿಯು ಪೋಪೆ ತಾನು ಧುರಕೆಂದೆನುತಂ ।
ವಂದಿಸೆ ಕೊಟ್ಟನು ವೀಳ್ಯವ
ಸಂದಣಿ[1]ಸಹಿತಾಗಿ ಸಮರಸನ್ನಹವಾಗಿ[1] ॥ ೧೦೦ ॥

(ಇಂದ್ರಜಿತುವಿನ ಯುದ್ಧ)

೩೩ ರಾಗ ಭೈರವಿ—ತ್ರಿವುಡೆ ತಾಳ ೨

ಬಂದನಾಗ । —ಸಮರಕೆ । ನಿಂದನಾಗ ।
ಇಂದ್ರಜಿತು ಮ । ರ್ಕಟರ ಸೈನ್ಯವ । ಕೊಂದು ಬಿಸುಡುವೆ । ನೆನುತ
ಕೋಪದಿ ॥ಪಲ್ಲವಿ ॥

ಓಡಿದಸುರರ । ಕರೆಸಿ ಸಂಗಡ । ಕೂಡಿಕೊಂಡನು । ತ್ವರಿತದಿ— ।
ಜೋಡಿಸುತ ಗಜ । ತುರಗಗಳ ಬರ। ಮಾಡಿಕೊಂಡನು । ಹರುಷದಿ—।
ಝಾಡಿಸುತ ಖ । ಡ್ಗವನು ಝಳಪಿಸಿ । ನೋಡಿಕೊಂಡನು । ಸಹಸದಿ—।
ಗಾಢದಿಂದಲಿ । ರಥಕೆ [2]ಕುದುರೆ[2]ಯ । ಹೂಡಿ [3]ಮುಗುಳ್ನಗೆ । ಮಾಡು[3]
ತೊಯ್ಯನೆ ॥ ೧೦೧ ॥

ಹಾರ ಕುಂಡಲ । ಮಕುಟ ಮಣಿಕೇ । ಯೂರ ಕಂಕಣ । ವಿಟ್ಟನು—।
ಭಾರಿ ರಚನೆಯೊ । ಳೆಸೆವ ವಸನವ । ವೀರ ತೆಗೆತೆಗೆ । ದುಟ್ಟನು —।
ಚಾರುಸೀಸಕ । ಕವಚಗಳ ಮುದ । ವೇರಿ ಘಮ್ಮನೆ । ತೊಟ್ಟನು—।
ಮೂರುಲೋಕದೊ । ಳೊಸಗೆಯೆಂಗೆ ಗಂ । ಭೀರ ನೆರೆ ಪೊರ । ಮಟ್ಟು
ಸಮರಕೆ ॥ ೧೦೨ ॥

ರಣಜಯವ ಕೊಡಿ। ನಮಗೆನುತ ಸುರ । ಗಣವನರ್ತಿಲಿ । ಕೇಳಿದ—।
ಮಣಿಯು ತೊಳಗೈ । ಯಿಂದ ತನ್ನಯ। ಜನನಿಯಳವೊಗ । ನೋಡಿದ—।
ಅಣಿಯರಿತು [4]ಕಾ। ದೆನುತಸುರ ನಂ । ದನಗೆ ನೇಮವ । ನೀಡಿದ[4]— ।
ಕುಣಿಯುತಿಹ ಪಟು । ಭಟರುಗಳ [5]ಸಂ । ದಣಿಯ ಮುಂದಕೆ ।
ಮಾಡಿ ನೋಡುತ[5] ॥ ೧೦೩ ॥

---

1 ಯಂ ಕೂಡಿ ಕಳುಹಲವನೈತಂದಂ (ಕಾ) 2 ವಾಜಿ (ಅ) 3 ಕಿಡಿಕಿಡಿ ಸೂಸು (ಕಾ)
4 ಪೋಗೆನುತುಸುರೆ ಬಲು ಜನರ ಸಂದಣಿ ಕೂಡಿದ (ಕಾ) 5 ಮನದಣಿಯೆ ಸಂತಸ ಮಾಡಿದ (ಕಾ)

೩೪ ರಾಗ ಮಾರವಿ (ಉತ್ಸಾಹ)—ಏಕತಾಳ ೧, ೨

ಏನೆಂ । ಬೆನು ಸ್ವ । ರ್ಭಾನುವಿ । ನಂದದೊ ।
ಳಾ ನ । ಕ್ತಂಚರ । ಸೇನೆಯ । ನೆರಹುತ ।
ದಾನವ । ರೊಡೆಯನ । ಸೂನು ವ । ರೂಥವ ।
ತಾನೇ । ರುತಲ । ತ್ಯಾನಂ । ದದಲಿ, ।—ಬಂದನಾಗ || ೧೦೪ ||

ಅಸುರ[1]ಪ । ಡೆಯು ಭರ । ವ ಸಹಿಸ । ಲಾರ[1]ದೆ ।
ವಸುಧೆ ತ । ,ಗ್ಗಿಫಣಿ । ಕುಸಿದ ಕೂ । ,ರ್ಮನೆದೆ ।
ಬೆಸುಗೆ ಬಿ । ,ಟ್ಟತೆಣ್ । ದೆಸೆಯು ಮ । ದೇಭಗ ।
ಳ್ಗುಸಿರು । ಬ್ಬಸವೆನ । ಲಸಮ ಸಾ । ,ಹಸದಿ ।—ಬಂದನಾಗ || ೧೦೫ ||

೩೫ ವಾರ್ಧಿಕಷಟ್ಪದಿ

ಬರಬರುತ ಬಿಲ್ಬಾಣ ಮುಸಲ ಮುದ್ಗರಕಣೆಯ
ಪರಶು ಪಟ್ಟಿಸ ಪಿಂಡಿವಾಳ ಗಡೆ ಶೂಲ ವಿ
ಸ್ತರ ಕುಂತ ತೋಮರಾದಿಗಳಿಂದ ಮುತ್ತಿದರು ಖಳರೈದೆ ಕಪಿಪಾಳ್ಯವ ।
ಇರಿದರೆಸೆದರು ಹೊಡೆದರಿಟ್ಟರಲ್ಲಲ್ಲಿ ಪಲ್
ಗಿರಿದು ಕಿರಿಕಿರಿಗುಟ್ಟುತೋಡಿಬರುವಂಥ ವಾ
ನರರ ಸಂತೈಸುತ್ತ ತರಣಿನಂದನನವರ ತಿರುಗಿಸುವ ಹೋಗಗೊಡದೆ ||೧೦೬||*

೩೬ ರಾಗ ವೃಂದಾವನಸಾರಂಗ—ಅಷ್ಟತಾಳ ೧

ಆಯಿತು ।—ಯುದ್ಧ । ವಾಯಿತು ।—ಅತಿ ।
ಕಾಯನ । ಗ್ರಜನ ಪೆ । ಟ್ಟಿಗೆ ವಾನ । ರರ ಲಯ । ವಾಯಿತು—||ಪಲ್ಲವಿ||

ಇನಕುಲಾ । ಧಿಪ[2]ನ ತ । ಮ್ಮನು ರಣ । ಕೆನುತ ಮ ।
ತ್ತಿನಜಾತ । ಸಹಿತಲೆ[2] । ಬರುವಾಗ ।—ಅಂಗ ।
ದನು ಸುಷೇ । ಣನು ಸಂಗ । ಡಿರುವಾಗ ।—ಮರ ।
ಗಿರಿ ಕಲ್ಲು । ಗಳನೆತ್ತಿ । ತರುವಾಗ ।—ನೋಡಿ ।

---

1 ಬಲದ ಪದದೆಸುಗೆಯ ತಾಳ (ಕಾ)
*ರಾಮ ಶರಣಜನ । ಪ್ರೇಮ ಸತತ ಗುಣ ।
ರಾಮ ಸಮರ ನಿ । ಸ್ಸೀಮಾಧಿಕ ಪುಣ್ಯ ।
ಸಾಮ ಮಹಾಂಬುಧಿ । ಸೋಮ ಪರಾಕು ರಣ ।
ಕಾಮಾತುರ ಸು । ತ್ರಾಮಜಿತುವ ಮಮ । (ಕಾ)
2 ನು ತಮ್ಮನ ರಣಕೌತುಕ । ಕಿನಜಾತ ಸಹಿತಾಗಿ (ಕಾ)

ದರು ಬೇಗ |—ಕೂಡಿ |
ಕರೆದಾಗ |—ರಾ |
ವಣಿಗೆ ರ | ಕ್ಕಸರು ಹೇ | ಳಿದರಾಗ |—ಸೇರಿ |
ರಣಕೆ ಶೌ | ರ್ಯದಿ ಬಂದು | ನಿಲುವಾಗ |—ಯುದ್ಧ || ೧೦೭ ||

ಕೊಳುಗುಳ | ದೊಳಗತಿ | ಪೌರುಷ | ದಿಂ ಕಪಿ |
ಗಳ ಸಂಹ | ರಿಸುವ ವೇ | ಳೆಯೊಳಂದು |—ಬಿಲು |
ಗೊಳುತಿದಿ | ರಾಗೆ ಲ | ಕ್ಷ್ಮಣ ಬಂದು |—ಕಣ |
ನೊಳಗೆ ರ | ಕ್ಕಸರನು | ಕೊಲುವಂದು |—ಇಂದ್ರ |
ಜಿತು ಹಾರಿ |—ಮೇಘ |
ದೆಡೆ ಸೇರಿ |—ಬಾಣ |
ಗಳ ಬಿಡು | ತಿರಲು ಮ | ರ್ಕಟರಲ್ಲಿ |—ಪ್ರಾಣ |
ವಳಿದು ಭೂ | ಮಿಗೆ ಬಿದ್ದ | ರಲ್ಲ್ಯಲ್ಲಿ |—ಯುದ್ಧ || ೧೦೮ ||

ಹನುಮ ಜಾಂ | ಬವ ನೀಲ | ಗನಯು ಗ | ವಾಕ್ಷನು |
ಪನಸನಾ | ವಾಲಿತ | ನೂದ್ಭವ |—ಸುಷೇ |
ಣನು ಗಜ | ಸುಮುಖಾಗ್ನಿ | ಸಂಭವ |—ಬಲ |
ವನು ಕೂಡಿ | ಬಂದ ಲ | ಕ್ಷ್ಮಣದೇವ |—ಸಹಿ |
ತಲೆ ಕೊಂ | ದ—ಶಕ್ರ |
ಜಿತುವಂದಾ |—ರಾಮ |
ನನು ಕಾಣು | ತೆಚ್ಚ ಬಾ | ಣಗಳಿಂದ |—ಮೂರ್ಛೆ |
ಯನು ತಾಳ್ದ | ರಘುನಾಥ | ಭರದಿಂದ |—ಯುದ್ಧ || ೧೦೯ ||

(ಇಂದ್ರಜಿತುವಿನ ನಿಷ್ಕ್ರಮಣ)

ರಣದಿ ಮ | ತ್ತಾರೂ ತ | ನ್ನೊಳು ಸೆಣ | ಸುವರಿಲ್ಲ |
ವೆನುತ ಪ | ಟ್ಟಣಕಾಗಿ | ತಿರುಗುತ್ತ |—ಮನೆ |
ಮನೆಗಳೊ | ಳಾರತಿ | ಬೆಳಗುತ್ತ |—ಪುರ |
ಜನರು ಬಂ | ದವನಿದಿ | ರ್ಗೊಳ್ಳುತ್ತ |—ಬಾಗಿ |
ಮಣಿಯು | ತ್ತ—ಹಿಗ್ಗಿ |
ಕುಣಿಯುತ್ತ | —ಮಿಗೆ |
ತನೆಯನಿಂ | ಗುಡುಗೊರೆ | ಮಾಡುತ್ತ |—ದಶಾ |
ಸ್ಯನು ಸಂತ | ಸದೊಳಿರು | ತಿರಲಿತ್ತ |—ಗೆಲ || ೧೧೦ ||

ವಚನ ॥ ಇತ್ತಲಾ ವಿಭೀಷಣನು ಬಿದ್ದಂಥ ಸೈನ್ಯವಂ ನೋಡಿ ತನ್ನೊಳುತಾನೇ ಏನೆಂದನು ಎಂದರೆ—

೩೭ ರಾಗ ಕೇದಾರಗೌಳ—ಅಷ್ಟತಾಳ ೧

ವಿಭೀಷಣ—

ಸಿರಿದೇವಿ । ಸೀತೆ ರಾ । ಘವ ನಾರಾ । ಯಣನೆಂದು ।
ನೆರೆನಂಬಿ । ಬಂದೆ ನಾ । ನು—॥
ಸುರಪನ । ಜೈಸಿದ । ವನ ದಿವ್ಯ । ಶರಕೆ ವೈ ।
ಮರೆವುದೇ । ನಾಶ್ಚರ್ಯ । ವು— ॥ ೧೧೧ ॥

'ಕುರುಡ ಹೋ । ದಲ್ಲಿ ಕ । ತ್ತಲೆ' ಎಂಬ । ಗಾದೆಯು ।
ಸ್ಥಿರವಾಯಿ । ತೆನಗೆ ಬಂ । ದು—॥
ಮರುತನಂ । ದನನಿದ್ದ । ತೆರನ ನೋ । ಡುವೆನೆಂದು ।
ಅರಸುತ್ತ । ನಡೆತಂದ । ನು— ॥ ೧೧೨ ॥

ಕಂಡ ವಿ । ಭೀಷಣ । ನಖಿಳಾಂಡ । ಕೋಟಿ ಬ್ರ ।
ಹ್ಮಾಂಡನಾ । ಯಕ ರಾಮ । ನ—॥
ಪುಂಡರೀ । ಕಾಕ್ಷಿ ಜಾ । ನಕಿಯನು । ವನದಲ್ಲಿ ।
ಕಂಡು ಕೈ । ಮುಗಿದಾತ । ನ— ॥ ೧೧೩ ॥

ಕೊಂಡುಬಂ । ದಾ ಚೂಡಾ । ಮಣಿಯು । ಪಟ್ಟಣವನ್ನು ।
ಕೆಂಡದಂ । ತುರುಹಿದ । ನ—॥
ಚಂಡವಿ । ಕ್ರಮನಂಜ । ನೆಯ ಸುಕು । ಮಾರ ದೋ ।
ರ್ದಂಡ ಶ್ರೀ । ಹನುಮಂತ । ನ— ॥ ೧೧೪ ॥

ಇರ್ಪರೊಂ । ದಾಗಿ ಮಾ । ತಾಡಿಕೊಂ । ಡವರು ಮ ।
ತ್ತೊರ್ವನ । ಹುಡುಕಲೆಂ । ದು—॥
ಪರ್ವತ । ದಂತಿಪ್ಪ । ಶವಗಳ । ಕೆದರುತ್ತ ।
ಗರ್ವದಿಂ । ದರಸಲಾ । ಗಿ[1]— ॥ ೧೧೫ ॥

---

1 ವರಿಬ್ಬರೊಂದಾಗಿ ಯೋಚಿಸಿ ಮತ್ತೆ ಜಾಂ ।
ಬವರನ್ನು ಹುಡುಕಲೆಂದು ।
ಶವದ ರಾಶಿಗಳನ್ನು ಕೆದರಿ ನೋಡಿವರೆ ಕಂ ।
ಡವರ ಕೇಳಿದ ಮುತ್ತಜ್ಜ ॥ (ಕಾ)

ಸುರ್ವಿಟ್ಟು । ಸುಯ್ದುನಿ । ಧಾನ ಕೀ । ರವದಿಂದ(?) ।
ಸರ್ವಜ್ಞ । ಬ್ರಹ್ಮಜಾ । ತ — ॥
ಪೂರ್ವದಿ । ಕ್ಕಿನಲಿ ಬಿ । ದ್ದಲ್ಲಿಂದ । ಕೇಳ್ದುಗಂ ।
ಭೀರರ । ನುಡಿಸಿದ । ನು — ॥ ೧೧೬ ॥

೩೮ ಕಂದಪದ್ಯ

ಆರೈ ಬಂದವರೆಂದನು
ತಾರಯ್ಯುತ ಮಾತನಾಡಿ ಜಾಂಬವದೇವಂ ।
[1]ಶ್ರೀರಾಮನ ಮಹಿಮೆಯ ಸುವಿ
ಚಾರದೊಳು ವಿಭೀಷಣಂಗೆ ತೋರಿಸು[1]ತೆಂದಂ ॥ ೧೧೭ ॥

೩೯ ರಾಗ ಕುರಂಜಿ—ಅಷ್ಟತಾಳ ೧

ಜಾಂಬವ—
ಕಂಡೆಯಾ । —ವಿಭೀ । ಷಣ ರಾಮ । ನಾಟವ । ಕಂಡೆಯಾ—॥ಪಲ್ಲವಿ॥

ಕಂಡೆಯಾ । ಕಮಲಲೋ । ಚನನ । —ಈ ಭೂ ।
ಮಂಡಲ । ದೊಡೆಯ ರಾ । ಘವನ । —ಚೆಲ್ವ ।
ಪುಂಡರೀ । ಕಾಕ್ಷ ಮಾ । ಧವನ । —ಸೇನಾ ।
ತಂಡವೆ । ಲ್ಲವ ಕೆಡ । ಹಿದೆನೆಂಬ । ಹಂಕೃತಿ ।
ಗೊಂಡು ಪೌ । ರುಷವ ಮುಂ । ಕೊಂಡು ಮೈ । ಮರೆವುದ ॥ ೧೧೮ ॥

ಮರುತನಂ । ದನನುಳಿ । ದಿರಲು । —ಸಮ ।
ಸ್ತರು ಎ । ಚ್ಚರಿತು ಕೊಂ । ಡವರು । —ಎಂದು
ಅರಿತುಕೊ । ನಂಬಿ ಮ । ನದೊಳು । —ಇದ ।
[2]ನೆರೆ ತಿಳಿ । ದನರ್ಕಿನು । ಮಯನಾತ್ಮ । ನೆಂದುಸು ।
ರ್ವರು ಮುಖ್ಯ । ಪ್ರಾಣನಿ । ದ್ದರೆ ಕಾರ್ಯ । ಜಯವೆಂದು[2] ॥ ೧೧೯ ॥

೪೦ ಕಂದಪದ್ಯ

ವಾರಿಜಸಂಭವಸುತನಂ
ಮಾರುತಿ ಕಂಡೆರಗಿ ಬಂದೆ ನಾ ಹನುಮಂತಂ

---

1 ಚಾರು ನಿಧಾನದ ಮಾತಿಗೆ
ಮಾರುತ್ತರ ಕೊಟ್ಟು ವಿಭೀಷಣಗಿಂ (ಅ)

2 ಇರುವರ ನೋಡಿಸಂ । ತಸವ ಮನದೊಳಾಂತು ।
ವರಮುಖ್ಯ ಪ್ರಾಣನ । ಕರೆದು ಪೇಳಿದನಿಂತು । (ಕಾ)

ಕಾರಿಯವೇನುಂಟೆನಗದ
ಕಾರುಣ್ಯದಿ ಬೆಸಸಬೇಕೆನಲ್ಕಿಂತೆಂದಂ || ೧೨೦ ||

೪೧ ರಾಗ ನೀಲಾಂಬರಿ—ಅಷ್ಟತಾಳ ೨

ಉಳಿದೆಯಾ ಹನು । ಮಂತ ನೀನು ।
ಕಳಿದೆಯಾ ಬಾ । ಣದುರುಬೆಯನು ।
ತಿಳಿದೆಯಾ । —ಶೌರ್ಯ । ತಳೆದೆಯಾ || ೧೨೧ ||

ಜಗದ ಜೀವ । ಪ್ರಾಣನೆಂದು ।
ಹೊಗಳಿಸಿ, ಕೊಳ । ಬೇಕು ನಿಂದು ।
ಬಲವಂತ । —ದೇವ । ಹನುಮಂತ || ೧೨೨ ||

ರಾಘವ, ಮುಂ । ತಾದವ,ರ ।
ಯೋಗವನ್ನೆ । ಚ್ಚರಿಸುವುದರ ।
ಕಾಣೆನು । —ಯುಕ್ತಿ । ಬೇರೇನೂ || ೧೨೩ ||

ಮೃತ್ಯುಂಜಯನ । ಪರ್ವತದಿಂ ।
ದಿತ್ತಲೀಶಾ । ನ್ಯ [1]ಭಾಗದಿಂ[1] ।
ದ್ಹೊಳೆವದು । —ಶೀತ । ಗಿರಿಯದು । || ೧೨೪ ||

ಚಂದ್ರದ್ರೋಣ । ವೆಂದು ಬಹಳ ।
ಚಂದದ ಗಿರಿ । ಯುಂಟದರಲಿ ।
ಮದ್ದುಂಟು ।—ನಾಲ್ಕು । ಪಥಿಯುಂಟು || ೧೨೫ ||

ಸಂಜೆಯಾದ । [2]ಬಳಿಕ ನಾಳೆ[2] ।
ಸಂಜೀವನ[3]ವ । ತಾರಾಮೇಲೆ[3] ।
ಉಳಿವರು । —ಮೂರ್ಛೆ । ತಿಳಿವರು || ೧೨೬ ||

ಕಾಣಬಾರ । ದಲ್ಲಿಹ ಗೀ ।
ರ್ವಾಣವುಂತಾ । ಗಿರುವ ದೇವ ।
ದನುಜರು । —ಅವ । ರ್ತನುಜರು || ೧೨೭ ||

1 ದಿಕ್ಕಿಂದ (ಕಾ, ಅ) 2 ಮೇಲೆ ಬೇಗ (ಕಾ) 3 ತಂದಂಗ (ಕಾ)

### ೪೨ ಮತ್ತೇಭವಿಕ್ರೀಡಿತವೃತ್ತ

ಹನುಮಂತ—

ಕುರುಹಂ ಪೇಳ್ದಜಸೂನು ಬೀಳ್ಕೊಳಲವಂ ದಾರಾತ್ರಿಯೊಳ್ವೇಗದಿಂ ।
ಗಿರಿಗೈತಂದರಸಲ್ಕೆ ಕಾಣದಿರಲಂದಾ ಗೋತ್ರಮಂ ಕೀಳುತ ।
ಬರೆ ಪೊತ್ತಾಕ್ಷಣ ತಂದು ಜಾಂಬವಗದಂ ತೋರಲ್ಕೆ ಸಂಶೋಧಿಸಿ ।
ವರ[1]ನಾಸಾಗ್ರದಿ ಹಿಂಡಲಾ ರಘುವರಂ ಎಚ್ಚತ್ತನೇವೇಳ್ವೆನು[1] ॥ ೧೨೮ ॥

### ೪೩ ರಾಗ ಸಾವೇರಿ—ಅಷ್ಟತಾಳ ೨

ತಿಳಿದು ಲ । ಕ್ಷ್ಮಣನೆದ್ದಾ । ಗಳೆ ಸುಷೇ । ಣನು ಮದ್ದ ।
ಉಳಿದವ । ರಿಗೆ ಹಿಂಡ । ಲಿಳೆಗೆ ಮೂ । ರ್ಛೆಯಗೊಂಡು ।
ಮಲಗಿದ । ವರು ಬಂದು । ಎರಗೆ ರಾ । ಘವ ಕಂಡು ।
ಬೆಳಗಾಗು । ವಷ್ಟರ । ಮೊದಲೀ ಪ । ರ್ವತವನ್ನು
ಕಳುಹಿಸು । ಮುನ್ನಿದ್ದ । ಬಳಿಗೆಂದು । ಪೇಳ್ದ— ॥ ೧೨೯ ॥

ಆ ಸುರ । ಗಿರಿಯ ಸಂ । ತೈಸುತ । ಮತ್ತಾಳಿ ।
ದೀಸರ । ನೆಬ್ಬಿಸಿ । ದಾ ಸಾಹ । ಸಕೆ ಬಿಸ ।
ರ್ವಾಸನ । ಸೂನು ಸಂ । ತೋಷದಿಂ । ದಿರ್ದನು ।
ವಾಸವ । ಮೊದಲಾ, । ದಮರರೆ । ಲ್ಲರು ಜಗ ।
ದೀಶನ । ಮಹಿಮೆ ಎಂ । ಬಾ ಸಮ । ಯದಲಿ ॥ ೧೩೦ ॥

ದಣಿಸಿದ । ನಾ ಇಂದ್ರ । ಜಿತು ಬಾಣ । ನಿದ್ರೆಯಿಂ ।
ದೆನುತ ಮ । ನಃ ಕ್ಲೇಶ । ದಿಂ ಕಪಿ । ಗಳು ರಾ, ।
ವಣನ ದು । ರ್ಗವ ರಾತ್ರಿ । ಪುನರ್ದಹ । ನವ ಮಾಡಿ ।
ಘನ ಬೇಗ । ದಿಂದ ಹಿಂ । ತಿರುಗಿ ವ । ನಜನಾ, ।
ಭನ ಪದ । ಕೆರಗಲಾ । ದಿನಪನು । ದಯಮಾಯ್ತು ॥ ೧೩೧ ॥

ವಚನ ॥ ಇಂತಾ ಲಂಕಾಪಟ್ಟಣವನ್ನು ಪುನರ್ದಹನವಂ ಮಾಡಿ ತಮ್ಮ ಠಾಣೆಯದಲ್ಲಿ ಸ್ವಸ್ಥದಿಂದಿರಲತ್ತಲಾ ದುರ್ಗದ ಕೇರಿಯವರು ಏನೆನ್ನುತ್ತಿರ್ದರದೆಂತೆನೆ—

---

1 ಸಂಜೀವನದೇಕ ಮೂಲಿಕೆಯೊಳಂದಾಸರ್ವರೆಚ್ಚತ್ತರು (ಕಾ)

(ಪುರಜನರ ಪ್ರವೇಶ)

೪೪ ರಾಗ ರೇಗುಪ್ತಿ—ಅಷ್ಟತಾಳ ೧

ಲಂಕಾಪುರಜನರು—

ತರವಲ್ಲ | —ನಾವಿ | ನ್ನಿರಸಲ್ಲ | —ದಶ |
ಶಿರನೆಂಬ | ರಕ್ಕಸ | ತಾನೊಳ್ಳೆ | ಯವನಲ್ಲ || ಪಲ್ಲವಿ ||

ಹೋಯಿತು | ರಾಮನ | ದಂಡೆಂಬ | ಮಾತು ಸು |
ಳ್ಳಾಯಿತು | ಕನಸಿನ | ರೊಕ್ಕದಂ | ತೆ— ||
ಬಾಯ ಬಿ | ಸ್ನಾಣ ವಿಂ | ದ್ರಾರಿ ಗೆ | ಲಿದ ಮಾತು |
ಶೋಯದೊ | ಳ್ಳುಳಿಗಿ ಕ | ಣ್ಣೊಡೆದಂತಾ | ದ್ದಲ್ಲದೆ || ೧೩೨ ||

ಇನ್ನು ರಾ | ವಣನಿಗ | ಹೆಳು ಸೀತೆ | ಎಂಬುದು |
ಕನ್ನಡಿ | ಯೊಳಗಿನ | ಗಂಟೆನಂ | ತಾಯ್ತು ||
ಹೊನ್ನಕ | ರಂಡದಂ | ತಿರುವ ಪ | ಟ್ಟಣ ಹೋಗಿ |
ಹೆಣ್ಣು ಗಂ | ಡುಗಳಿಂಗೊಂ | ದರುವೆ ಯಾ | ಯ್ತಲ್ಲದೆ || ೧೩೩ ||

ಧರಣಿನಂ | ದನೆಯ ದಾ | ನವ ತಂದಿ | ದ್ದಾರಭ್ಯ |
ಸಿರಿಗೆಟ್ಟ | ತೀ ಊರ | ಸೌಭಾಗ್ಯ | ವು— ||
ಕರಕರೆ | ಯಲಿ ದಿನ | ಕಳೆವುದ | ಲ್ಲದೆ ಮನ |
ಹರುಷವಿ | ಲ್ಲದೆ ದುಃಖ | ಸ್ಥಿರವಾಯಿ | ತಲ್ಲದೆ || ೧೩೪ ||

ಪಾಶವ | ತೊರೆದು ಪ | ಟ್ಟಣದಿಂದ | ಹೊರವಂಟು |
ದೇಶಾಂತ | ರಕ್ಕೆ ಹೋ | ಗುವ ಎಂದ | ರೆ— ||
ಸಾಸುವೆ | ಗೆಡೆಯಿಲ್ಲ | ವೆಂಬಂತೆ | ಕಪಿಗಳು |
ತಾವ್ ಸುತ್ತ | ಮುತ್ತಲು | ಕವಿದುಕೊಂ | ಡಿಹನಲ್ಲ || ೧೩೫ ||

(ಪುರಜನರ ನಿಷ್ಕ್ರಮಣ)

೪೫ ವಾರ್ಧಿಕಷಟ್ಪದಿ

ಎಂದು ಪಟ್ಟಣದಿ ಗುಜುಗುಜಿಸುತಿರೆ ನಿಕುರುಂಬ
ಬಂದು ರಣಕಿದಿರಾಂತು ನಿಲಲವನ ಹನುಮಂತ
ಕೊಂದನಾ [1]ಬಳಿಕ ನೀಲನು ಶೋಣಿತಾಕ್ಷನಂ[1] ಕಾದಿ ಕಡೆ
ಗಾಣಿಸಿದನು || ೧೩೬ ||

---

1 ಶೋಣಿತಾಕ್ಷನ ನೀಲನಜಸುತಂ (ಕಾ)

ಸಂದರವರೆಣಿಕೆ ತಗ್ಗಿತು ಬಳಿಕ ಮಕರಾಕ್ಷ
ನೊಂದೆರಡುಗಳಿಗೆ ಕಪಿಗಳ ಕೊಲ್ವ ಸಮಯದೊಳು
ಇಂದಿರಾರಮಣ ರಘುಕುಲಜಾತ ತಾನೆ ನಡೆತಂದು ಮಾರಾಂತು ನಿಂದ॥೧೩೭ ॥

(ಮಕರಾಕ್ಷನ ಯುದ್ಧ)

೪೬ ರಾಗ ಸಾರವಿ—ಅಷ್ಟತಾಳ ೪ (ವಿಲಂಬಿತ)

ಮಕರಾಕ್ಷ—

ಜಾನಕಿಯ । ಗಂಡನೆಂಬಾ । ತ ನೀನೊ । ರಾಮ— ।
ಹೇನನೊರಸಿ । ದಂತೆ ಕೊಲುವೆ । ನಿನ್ನ ನಿಸ್ಸೀ । ಮ— ॥ ೧೩೮ ॥

ರಾಮ—

ಅತಿಕಾಯ ಕುಂ । ಭಕರ್ಣರಿಂ । ದತಿಶಯನೊ । ನೀನು— ।
ಮತಿಗೆಟ್ಟು ಮಾ । ತಾಡುತಿರ್ಪೆ । ಮರುಳರಂತಿ । ದೇನು— ॥ ೧೩೯ ॥

ಮಕರಾಕ್ಷ—

ಹಿಂದೆ ಖರ । ದೂಷಣರ । ಕೊಂದಾತ ನೀ । ನಹುದೆ— ।
ಹಿಂದು ಮುಂದು । ನೋಡದಿಲ್ಲಿ । ಬಂದು ಸಿಕ್ಕ ।ಬಹುದೆ — ॥ ೧೪೦ ॥

ರಾಮ—

ತಂದೆ ಇದ್ದ । ಬಳಿಗೆ ನಿನ್ನ । ಹೊಂದಿಸದೆ । ಬಿಡೆನು— ।
ಹಿಂದೆ ಜಾರಿ । ಜುಣುಗಿ ಪೋಪೆ । ನೆಂದರೆ ನಾ । ಬಿಡೆನು — ॥ ೧೪೧ ॥

ಮಕರಾಕ್ಷ—

ಹೆಂಡತಿಯ । ವನದಿ ಕಳೆದು । ಕೊಂಡಾತ ನಾ । ಬಲ್ಲೆ— ।
ಹಿಂಡು [1]ಹಿಂಡು । ವೃಕ್ಷಚರರ । ದಂಡಿಸಿರುವೆ[1] । ನಿಲ್ಲೆ — ॥ ೧೪೨ ॥

ರಾಮ—

ಜಾಣ ನೀನೋ । ಡೆನ್ನ ಕಯ್ಯ । ಬಾಣವೆನುತ । ಹೊಡೆದ— ।
ಜಾನಕಿಯ । ರಮಣನದರ । ಕಾಣುತ್ತಲೆ ।ಕಡಿದ — ॥ ೧೪೩ ॥

---

1 ಕಪಿಗಳೊಡನೆ ಬಿದ್ದು । ಕಾಳಯುವೆ ನೀ । (ಕಾ)

ಮಕರಾಕ್ಷ—

ಹತ್ತೆಂಟು ಬಾ । ಣವ ರಘುಜ । ಮಸ್ತಕಕ್ಕೆ । ಬಿಡಲು— ।
ಕತ್ತರಿಸಿ । ಪ್ರತಿಗೆ ಬಾಣ । ವಿತ್ತ ನೋಡಿ । ದನುಜ — ॥ ೧೪೪ ॥

ಎಸೆಯುತಿರಲು । ರಾಮಶರವ । ನಸುರ ನೋಡು । ತಿರ್ದ— ।
ವಶವಿಲ್ಲದಂ । ತಾಗಿ ದನುಜ । ವಸುಧೆಗೊರಗಿ । ಬಿದ್ದ— ॥ ೧೪೫ ॥

ಇಳೆಯೊಳಸುರ । ಬಿದ್ದನೆಂದು । ತಿಳಿಯಲಾಗಿ । ಸುರರು— ।
ಭಳಿರೆ ರಾಮ । ಜಯವೆಂದು ಪೂ । ಮಳೆಯ ಕರೆಯು । ತಿರಲು—॥೧೪೬॥

೪೭ ಭಾಮಿನಿಷಟ್ಪದಿ

ಖರತನುಜ ಮಕರಾಕ್ಷಸಹ ಯಮ
ಪುರಿಗೆ ಬಿಜಯಂಗೆಯ್ಯಲಾಕ್ಷಣ
ಸುರಪಜಿತು ಹನುಮಂತನಿಂದುರೆ ಸೋತು ಜಾನಕಿಯ ।
ಪರಿಯ ಕಪಟದ ರೂಪ ನಿರ್ಮಿಸಿ
ಮರುತಸುತನಿಗೆ ತೋರೆ ಮಾಯದ
ತರುಣಿ ಎಂಬುದ ತಿಳಿಯದೇ ಚಿಂತಿಸಲು ರಘುನಾಥ ॥ ೧೪೭ ॥

೪೮ ಕಂದಪದ್ಯ

ಕಪಟದ ಕಾಯಕವೆನುತಾ
ಗುಪಿತದಿ ತಾಪೇಳೆ ಶರಣನತಿಭರವಸೆಯೊಳ್ ।
ತಪನಕುಲೇಶನ ಚಿಂತೆಯ
ನಪಹರಿಸಲ್ಕಿತ್ತ ನೆನೆದನಾ ಶಕ್ರಜಿತು ॥ ೧೪೮ ॥

(ಇಂದ್ರಾರಿಯ ಮಾರಣಯಜ್ಞ)

೪೯ ಸಾಂಗತ್ಯ (ಚರಿತೆ) ರಾಗ ಪಂತುವರಾಳಿ—ರೂಪಕತಾಳ ೩

ಇಂದ್ರಜಿತು—

ರಣವ ಜೈ । ಸುವ ಶಕ್ತಿ । ಬೇರಿಹು । ದಿನ್ನು ಮಾ ।
ರಣಯಜ್ಞ । ವನು ರಚಿ । ಸುವೆನು— ।
ಹನುಮ ಜಾಂ । ಬವ ವಿಭೀ । ಷಣಮುಖ್ಯ । ಲಕ್ಷ್ಮಣ ।
ಗೆಣೆಯಹ । ತೆರನ ನೋ । ಡುವೆನು— ॥ ೧೪೯ ॥

ಎನುತ ಯೋ । ಚನೆ ಗೈದು । ಏಕಾಂತ । ದಿಂದ ರಾ ।
ವಣಿಗೋಪ್ಯ । ಸ್ಥಳವನು । ಗ್ರಹಿಸಿ— ।

ಘನತರ | ಕಪಟದಿ | ಯಜ್ಞವೆ | ಸಗೆ ವಿಭೀ |
ಷಣನುಸು | ರ್ದನು ರಘು | ಪತಿಗೆ || ೧೫೦ ||

ವಿಭೀಷಣ—

ಜಗದಾಧಾ | ರನೆ ಕೇಳು | ಬಂತೊಂದಾ | ಕಸ್ಮಿತ |
ಬಗೆಯಲಿ | ನ್ನೇನೆಂಬೆ | ನಾನು |
ಪಗೆಗೆ ಮಾ | ರಣಯಜ್ಞ | ಕುಂಭಿನಿ | ಯೊಳು ಮಾಳ್ಪ |
ಮಗನಿಂದ್ರ | ಜಿತು ಲಾಲಿ | ಸೆಂದ || ೧೫೧ ||

ತ್ರಿಜಗದೊ | ಳಿದಿರಿಲ್ಲ | ವವಗೆ ರಾ | ಜೇಂದ್ರ ಕೇ |
ಳಜನಿತ್ತ | ವರಬಲ | ದಿಂದ
ಭುಜಬಲ | ವುಳ್ಳರು | ಸಂಗಡ | ಬರಲೆನ್ನ |
ಸುಜನವ್ಯೆ | ರಿಯ ತೋರಿ | ಕೊಡುವೆ || ೧೫೨ ||

ಹನ್ನೆರ | ಡಬುದ ಹ | ಸಿವು(ದು ?) ನಿದ್ರೆ | ಸ್ತ್ರೀಸಂಗ |
ವನ್ನು ತೊ | ರೆದವನ | ಹೊರತು |
ತನ್ನ ಕೊ | ಲ್ಲಲು ಬಾರ | ದೆಂಬ ವರ | ವುಂಟವ |
ಗಿನ್ನೇನು | ಹವಣು ಯೆಂ | ಬಾಗ || ೧೫೩ ||

ಲಕ್ಷ್ಮಣ—

ಅಣ್ಣ ಕೊ | ಡಪ್ಪಣೆ | ಯೆಸುತ ಬಿ | ಲ್ವಿಡಿದಿಹ |
ತನ್ನ ತ | ಮ್ಮನ ಮೊಗ | ನೋಡಿ |
ಸಣ್ಣವ | ನೆಂತು ನೀ | ಜೈಸುವೆಂ | ದೆನಲೆಂದ |
ಬಿನ್ನೈ | ಸುವೆನಯ್ಯ | ಕಡೆಗೆ || ೧೫೪ ||

ಕೊಂದುಕೊ | ಡುವೆ ರಕ್ಕ | ಸನನೆಂದು | ಕೈಮುಗಿ |
ದಂದು ಸೌ | ಮಿತ್ರಿ ಮುಂ | ದೊತ್ತೆ |

ರಾಮ—

ಒಂದುಳಿ | ಯದೆ ಈ ಸಾ | ಧನೆಗಳಿ | ದ್ದರೆ ಯೆನ್ನ |
ತಂದೆ ನೀ | ಮುಂದೆ ಪೋ | ಗೆಂದ || ೧೫೫ ||

ತಡೆಯದೆ | ಹನುಮ ನೀ | ಲಾಂಗದ | ಜಾಂಬವ |
ರೊಡನೆ ಪೋ | ಗಲಿ ವಿಭೀ | ಷಣನು |

ಬಡಿದು ಖ । ಳನ ಯಜ್ಞ । ಕೆಡಿಸಿ ಬ । ರುವುದಕ್ಕೆ ।
ಪಡಿಬಲ । ವಾಗಿ ಲ ।ಕ್ಷ್ಮಣಗೆ ॥ ೧೫೬ ॥

ರಾಮನ । ಪ್ಪಣೆಯಿಂದ । ರಭಸದಿಂ । ದಾರ್ವರು ।
ಆ ಮಹಾ । ಕುಂಭಿನಿ । ಗಿಳಿದು ।
ತಾಮಸ । ಚರರ ಸಂ । ಹರಿಸಿ ಏ । ಳಂಗದ ।
ಹೋಮವ । ಕೆಡಿಸಿದ । ರೊಲಿದು ॥ ೧೫೭ ॥

ಹನುಮ—

ಭುಗಿಲೆಂಬ । ಭೂತಗ । ಣವನೆಚ್ಚು । ಗಾಳಿಯ ।
ಪೊಗಿಸಿ ಹಾ । ರಿಸಿದನು । ಹನುಮ ।
ನಗುತಲಾ । ಹುತಿಗೊಂಬ । ಭೂತಸಂ । ಕುಲವೆಲ್ಲ ।
ಮೃಗಧರ । ಹರನ ಸಾ । ರಿದವು ॥ ೧೫೮ ॥

(ಇಂದ್ರಜಿತು ಲಕ್ಷ್ಮಣರ ಯುದ್ಧ)

೫೦ ರಾಗ ಮಾರವಿ—ಅಷ್ಟತಾಳ ೧

ಲಕ್ಷ್ಮಣ—

ರಾವಣಾ । ತ್ಮಜ ಸಾಕು । ರಥವೇರು । ಕೊಳು ಚಾಪ ।
ಸಾವಕಾ । ಲಕೆ ಯಜ್ಞ । ವೇಕೆ ।
ಜೀವಗ । ಳ್ಳರ ಗಂಡ । ಇದಿರಾಗೆಂ । ದೆನುತಲಿ ।
ದೇವಲ । ಕ್ಷ್ಮಣ ಗರ್ಜಿ । ಸಿದನು ॥ ೧೫೯ ॥

ಇಂದ್ರಜಿತು—

ದೀಕ್ಷೆಯ । ಮುರಿದೆದ್ದು । ಕಡೆಗಣ್ಣಿ । ನಿಂದ ನಿ ।
ರೀಕ್ಷಿಸಿ । ಕಿರಿಯಯ್ಯ । ಗೆಂದ ।
ರಾಕ್ಷಸ । ಕುಲಗೇಡಿ । ತೊಲಗೆಂದು । ನಿಂದಿಸಿ ।
ಲಕ್ಷ್ಮಣ । ಗಿದಿರಾದ । ಖಳನು ॥ ೧೬೦ ॥

ಲಕ್ಷ್ಮಣ—

ಎಲವೊ ರಾ । ವಣಿ ಕೇಳು । ಪರಸತಿ । ಯರ ದ್ರೋಹ ।
ನೆಲನ ಹೊ । ಕ್ಕರು ಬೆನ್ನ । ಬಿಡದು ।

ಛಲ ಬಿಟ್ಟು । ರಾಮನ । ಪದಪಂಕ । ಜವ ಸೇರಿ ।
ಸಲಹಿಕೊ । ನಿನ್ನ ಪ್ರಾ । ಣವನು ॥ ೧೬೧ ॥

ಇಂದ್ರಜಿತು—

ಹರಣದಾ । ಸೆಗಳುಳ್ಳ । ಡಣ್ಣನ । ಕರೆಸಿಕೊ ।
ಚರಣ ನಂ । ಬಿದ ವಿಭೀ । ಷಣನ ।
ತಿರಿದುಂಬು । ದಕ್ಕೆ ಜೋ । ಳಿಗೆಯ ಪಾ । ಲಿಸಿ ದೇಶಾಂ ।
ತರಕಟ್ಟು । ಕೋಲೊಂದ । ಕೊಟ್ಟು ॥ ೧೬೨ ॥

ಲಕ್ಷ್ಮಣ—

ಅಣ್ಣನ । ಕರೆಸಿ ನಿ । ನ್ನಪ್ಪ ರಾ । ವಣನನ್ನು ।
ಮಣ್ಣ ಕೂ । ಡಿಸಿ ಲಂಕಾ । ಪುರವ ।
ಬಣ್ಣದಿಂ । ದಲೆ ನಿನ್ನ । ಚಿಕ್ಕಯ್ಯ । ಶರಣಂಗೆ ।
ಉಣ್ಣಗೊ । ಡುವೆ ನಿರಂ । ತರದಿ ॥ ೧೬೩ ॥

ಆಶ್ಚರ್ಯ । ವೆಂಬಡೆ । ಅಸುರನ । ರಥ ವಾಜಿ ।
ಎಚ್ಚು ಕೆ । ಡಹಿದ ಮಾ । ರ್ಬಲವ ।
ಕೊಚ್ಚಿ ಸೀ । ಸಕವ ವ್ಯೆ । ರುಧಿರಾಂಬು । ಮಯವಾಗೆ ।
ಮುಚ್ಚಿ ಲೋ । ಚನವ ವ್ಯೆ । ಮರೆದ ॥ ೧೬೪ ॥

ಇಂದ್ರಜಿತು—

ಎಚ್ಚರು । ವುತಲೆದ್ದು । ಶುಕ್ರನೌ । ಷಧಿಯಿಂದ ।
ಎಚ್ಚನು । ಬ್ರಹ್ಮಶ । ಕ್ತಿಯನು ।
ಅಚ್ಯುತಾ । ನುಜ ವಿಭೀ । ಷಣಗಿಟ್ಟ । ಶಕ್ತಿಯ ।
ನುಚ್ಚುಗೆ । ಯ್ದೆಸೆದಾಗ । ಖಳನು ॥ ೧೬೫ ॥*

ಮನುಜೇಂದ್ರ । ಕೇಳಣ್ಣಾ । ಹಾರವು । ನಿದ್ರೆಯು ।
ವನಿತೆ ವ । ರ್ಜಿತವಾದ । ವ್ರತವು ।

---

* ಕೊಂಡೆಯ ಮಗನೀತ । ಮುನಿದ ನಮ್ಮೊಡನಿದ್ದ । ಖಂಡಪರಶುವಿನಸ್ತ್ರದಲಿ ।
ಖಂಡಿಸೆನುತ ವಿಭೀಷಣಗಿಟ್ಟ ಶಕ್ತಿಯ । ತುಂಡಿಸಿ ಬಿಸುಟನು ಹನುಮ ॥ (ಅ)

ನಿನಗುಳ್ಳೊ । ಡಿದಿರಾಗು । ಬರಿದೆ ಸಾ । ಯದಿರೆಂದು ।
ಧನುವಿಗೊ । ಡ್ಡಿದನು ಮಾ । ರ್ಗಣವ ॥ ೧೬೬ ॥

೫೧ ವಾರ್ಧಿಕಷಟ್ಪದಿ

ಕಪಿಬಲವು ಬೆರಗಾಗಿ ಕಂಗೆಟ್ಟು ನಿಂದಿರಲು
ಅಪರಿಮಿತ ದಾನವರು ಗುಪಿತದಿಂದಿರುತಿರಲು
ಚಪಲಾಕ್ಷಿ ಸೀತೆ ಕಳಕಳಿಸಿ ಮರುಗುತ್ತಿರಲು ವಿಪುಳ ಭಯ ವ್ಯೆ[1]ನೆರೆಯಲು ।[1]
ನೃಪನ ಶರದಿಂದ್ರಸುತನಪಕೀರ್ತಿಯಾಯ್ತೆಂದು
ತ್ರಿಪುರಸಂಹಾರಿಭಕ್ತನ ಸುತನ ಕಾಳಗದಿ
ಕಪಿರಾಜಸುಗ್ರೀವ ಮೊದಲಾದ ವೀರರುಂ ಗುಪಿತದಿಂ
ಗುಜುಗುಜಿಸಲು ॥ ೧೬೭ ॥

೫೨ ರಾಗ ಮಾರವಿ—ಅಷ್ಟತಾಳ ೧

ಲಕ್ಷ್ಮಣ—

ಮರುಳೆ ರಾ । ವಣಿ ಪರಿ । ಹರಿಸು ಮ । ಹಾಸ್ತ್ರವ ।
ಸ್ಮರಿಸಿಕೊ । ಕುಂಭಿನಿ । ಯು— ।
ಬರಿಸು ಶು । ಕ್ರನನೆಂಬ । ಷ್ಟರೊಳಿಂದ್ರ । ಸೂನುವ ।
ಶಿರವು ಹಾ । ರಿತು ನಭ । ಕೆ— ॥ ೧೬೮ ॥

ಸುರರು ಘೋ । ಯೆಂದುಬ್ಬಿ । ಸೌಮಿತ್ರಿ । ಯಂಗಕೆ ।
ಸುರಿದರು । ಪುಷ್ಪವೃ । ಷ್ಟಿಗಳ ।
ಮರಳಿ ರಾ । ಮನ ಪದಾ । ಬ್ಜಕೆ ಬಂದು । ಪೊಡಮಟ್ಟು ।
ಧುರದ ಸಂ । ಗತಿಯ ಪೇ । ಳಿದರು ॥ ೧೬೯ ॥*

೫೩ ಭಾಮಿನಿಷಟ್ಪದಿ

ಮೂರುಲೋಕದ ಮೃತ್ಯು ಯಮನಲಿ
ಸೇರಿದನು ಖಳನೆಂದು ರಘುಪತಿ
ಭೂರಿಹರ್ಷದಿ ಲಕ್ಷ್ಮಣನ ತಕ್ಕೈಸಿ ಮುದ್ದಾಡೆ ।

---

1 ದೆ ನೆರೆಯೆ (ಕಾ)

* (ಸಾಂಗತ್ಯ) ಈ ಪದ್ಯವನ್ನು ಪಂತುವರಾಳಿರಾಗ ರೂಪಕತಾಳದಲ್ಲಿ ಹಾಡುವ ಸಂಪ್ರದಾಯವಿದೆ.

ಸಾರಸಂತಸದಿಂದ ಪಶ್ಚಿಮ
ವಾರಿಧಿಯ ಮರೆಯಾಗೆ ರವಿ, ಸುರ
ನಾರಿಯರು ಬಂದಾರತಿಯ ಬೆಳಗಿದರು ರಘುವರಗೆ ॥ ೧೭೦ ॥*

೫೪ ವಾರ್ಧಿಕಷಟ್ಪದಿ

ರಘುವಂಶವಾರಿಧಿಗಳಿರ ಕೇಳಿರಿಂದ್ರಾರಿ
ಹಗರಣದಿ ಮಡಿದಲ್ಲಿಗಾಯಿತೀ ಸಂಧಿಯೆಂ
ದೊಗುಮಿಗೆಯ ಹರ್ಷದಲಿ ಮುನಿಪೇಳ್ದ ರಾಮಚಾರಿತ್ರವಂ ಮನಮೆಚ್ಚುತ ।
ಸೊಗಸಿಂದ ಕೇಳ್ವಪೇಳ್ವರ ಮನಕೆ ಸಂತಸವ
ನಗಣಿತದ ಸೌಭಾಗ್ಯ [1]ಸಂಪತ್ತುಗಳ ಕಣ್ವ
ನಗರೇಶ ಗೋಪಾಲಕೃಷ್ಣನೊಲಿದೀವನೆಂಬುದು ವೇದಸಿದ್ಧವಚನ[1] ॥ ೧೭೧ ॥

— ಯುದ್ಧಕಾಂಡ ಸಂಪೂರ್ಣಂ ಮಂಗಲ ಮಹಾ —

---

* ಅಧಿಕಪಾಠ—ಮಂಗಲಪದ :
[ತುಂಗ ವಿಕ್ರಮ ದಶಮುಖಸಂಹರಗೆ ।
ಮಂಗಳ ಮಧುಸೂದನ ಮುರಹರಗೆ । ಮಂಗಳಂ ॥
ದಶರಥಸುತ ಶತಭಾಸನಿಗೆ ।
ಕುಸುಮನಯನ ದುರ್ಜನಕುಲಹರಗೆ ।
ಅಸುರದಲ್ಲಣ ಮನುಮುನಿವಂದಿತಗೆ ।
ಬಿಸಜನಾಭ ಪಶುಪತಿ ಮಾಧವಗೆ ॥ ಮಂಗಳಂ ॥] (ಅ)

1 ಸಿದ್ಧಿಗಳ ನೆರೆ ಕಣ್ವ ।
ನಗರೇಶ ಶ್ರೀಕೃಷ್ಣನೊಲಿದೀವನೆಡೆಬಿಡದೆ ವೇದಸಿದ್ಧವಿದೆಂದನು ॥ (ಅ)

# ಕುಶಲವರ ಕಾಳಗ
## ಪ್ರಸಂಗದ ಕಥಾಸಾರ

ರಾವಣಾದಿದಾನವರನ್ನು ಸಂಹರಿಸಿ ಶ್ರೀರಾಮನು, ಸೀತೆಯನ್ನೊಡಗೊಂಡು ಅಯೋಧ್ಯೆಯಲ್ಲಿ ಸುಖದಿಂದ ರಾಜ್ಯವಾಳುತ್ತಿರಲಾಗಿ ತಮಗೆ ಮಕ್ಕಳಾಗಲಿಲ್ಲವೆಂಬ ಚಿಂತೆಯಿಂದ ಸೀತೆಯೊಡನೆ ಮಾತಾಡುತ್ತಿರುವಲ್ಲಿ, ಇವರ ಅಂತರಂಗದ ಕಳವಳವನ್ನರಿತು ವಸಿಷ್ಠಮುನಿಯು ಬಂದು ಪುತ್ರೋತ್ಪತ್ತಿಯಾಗುವಂತೆ ಮಂತ್ರೋಪದೇಶವನ್ನು ಕೊಡುತ್ತಾನೆ. ಆಗಲೇ ವಸಂತಋತು ಬಂದಿರುತ್ತಾ ಫಲಪುಷ್ಪಗಳಿಂದ ಸಮೃದ್ಧವಾದ ವನಗಳಲ್ಲಿ ಕಾಡುಮೃಗಗಳ ಹಾವಳಿ ಹೆಚ್ಚಾಗಿರುವುದೆಂದು ವನಪಾಲಕನು ಬಂದು ಬಿನ್ನೈಸಲು ರಾಮನು ಸೀತಾಸಮೇತನಾಗಿ ಮೃಗಬೇಟೆಗೆ ತೆರಳುತ್ತಾನೆ. ಅಲ್ಲಿ ಪುಷ್ಪವತಿಯಾದ ಸೀತೆಯು ಮುನಿಯ ಮಂತ್ರೋಪದೇಶದ ಫಲವಾಗಿ ಗರ್ಭವತಿಯಾಗುತ್ತಾಳೆ.

ಮುಂದೆ ನಾಲ್ಕು ತಿಂಗಳು ಕಳೆಯುತ್ತಾ ಸೀತೆ, ಹಿಂದೆ ವನವಾಸದಲ್ಲಿ ತನ್ನ ಒಡನಾಟದಲ್ಲಿದ್ದ ಋಷಿಪತ್ನಿಯರನ್ನು ನೋಡಿಬರಬೇಕೆಂಬ ಬಯಕೆಯುಂಟಾಗಿರುವುದೆಂದು ರಾಮನಲ್ಲಿ ಅರಿಕೆ ಮಾಡಿಕೊಳ್ಳುತ್ತಾಳೆ. ಆಮೇಲೆ ಒಂದು ದಿನ ಶ್ರೀರಾಮನು, ತಾನು ರಾವಣನ ವಶದಲ್ಲಿದ್ದ ಸೀತೆಯನ್ನು ಮರಳಿ ತಂದು ಅಂಗೀಕರಿಸಿದ ವಿಚಾರವಾಗಿ ತನ್ನ ಮೇಲೆ ಜನಾಪವಾದವುಂಟಾಗಿರುವುದೆಂಬುದನ್ನು ನಗರಸಂಚಾರಿಗಳಾದ ದೂತರ ಮುಖದಿಂದ ತಿಳಿಯುತ್ತಾನೆ. ಮತ್ತು ಆ ದೋಷಪರಿಹಾರಕ್ಕಾಗಿ ಆಗಿಂದಾಗಲೇ ಸೀತೆಯನ್ನು ಪರಿತ್ಯಜಿಸಬೇಕೆಂದು ನಿರ್ಧರಿಸಿ ಆ ಕ್ಷಣವೇ ಆಕೆಯನ್ನು ಕಾಡಿಗೆ ಕೊಂಡೊಯ್ದು ಬಿಟ್ಟುಬರುವಂತೆ ತಮ್ಮನಾದ ಲಕ್ಷ್ಮಣನಿಗೆ ಆಜ್ಞಾಪಿಸುತ್ತಾನೆ.

ಆ ಪ್ರಕಾರ ಲಕ್ಷ್ಮಣನು, ಋಷ್ಯಾಶ್ರಮಕ್ಕೆಂಬ ನೆಪದಿಂದ ಸೀತೆಯನ್ನು ಕಾಡಿಗೆ ಕೊಂಡೊಯ್ದು ನಿಜಸಂಗತಿಯನ್ನು ತಿಳಿಸಿ ಬಿಟ್ಟುಬರಲಾಗಿ ಅಲ್ಲಿ ಅಳುತ್ತಿದ್ದ ಸೀತಾದೇವಿಯನ್ನು ವಾಲ್ಮೀಕಿಮುನಿಯು ಕಂಡು ಸಂತೈಸಿ ತನ್ನ ಆಶ್ರಮಕ್ಕೆ ಕರಕೊಂಡು ಹೋಗಿ ಸಂರಕ್ಷಿಸುತ್ತಾನೆ. ನವಮಾಸ ತುಂಬಲು ಸೀತೆಯು ಕುಶಲವರೆಂಬ ಅವಳಿಮಕ್ಕಳನ್ನು ಹಡೆಯುತ್ತಾಳೆ. ಹಾಗೆ ಮುಂದೆ ವಾಲ್ಮೀಕಿಯ ಸಂರಕ್ಷಣೆಯಲ್ಲಿ ಕುಶಲವರು ರಾಜೋಚಿತವಾದ ಶಾಸ್ತ್ರವಿದ್ಯೆಗಳನ್ನೂ ಶಸ್ತ್ರವಿದ್ಯೆಗಳನ್ನೂ ಕಲಿತು ಬೆಳೆಯುತ್ತಿರಲು, ಇತ್ತ ಅಯೋಧ್ಯೆಯಲ್ಲಿ ಶ್ರೀರಾಮನು ಅಶ್ವಮೇಧಯಾಗಕ್ಕಾಗಿ ದೀಕ್ಷೆಯನ್ನು ಕೈಕೊಂಡು ಯಜ್ಞಾಶ್ವವನ್ನು ಬಿಡುತ್ತಾನೆ. ಕುದುರೆಯು ಶತ್ರುಘ್ನನ ಬೆಂಗಾವಲಿನಲ್ಲಿ ದೇಶದೇಶಗಳಲ್ಲಿ ಸಂಚರಿಸುತ್ತಾ ವಾಲ್ಮೀಕಿಯ ಆಶ್ರಮವಿರುವ ವನವನ್ನು ಪ್ರವೇಶಿಸುತ್ತದೆ. ಆಗ ಅಲ್ಲಿ

ಮುನಿಬಾಲಕರೊಡನೆ ತಿರುಗಾಡುತ್ತಿದ್ದ ಲವನು ಯಜ್ಞಾಶ್ವದ ಹಣೆಯಲ್ಲಿ ಕಟ್ಟಿದ್ದ ಲಿಖಿತವನ್ನೋದಿ ಕುದುರೆಯನ್ನು ಬಂಧಿಸುತ್ತಾನೆ, ಮತ್ತು ಬೆಂಗಾವಲಿನ ಭಟರೊಡನೆ ಯುದ್ಧಕ್ಕೆ ನಿಲ್ಲಲು ಶತ್ರುಘ್ನನ ಬಾಣದಿಂದ ಮೂರ್ಛೆ ಹೊಂದುತ್ತಾನೆ.

ಈ ವರ್ತಮಾನವನ್ನು ಮುನಿಪುತ್ರರು ಆಶ್ರಮದಲ್ಲಿರುವ ಸೀತೆಗೆ ಅರುಹಲಾಗಿ ಆಕೆಯು, ಲವನನ್ನು ಕರೆತರುವುದಕ್ಕಾಗಿ ಕುಶನನ್ನು ಕಳುಹಿಸುತ್ತಾಳೆ. ತಮ್ಮನು ಅಸಹಾಯಕನಾಗಿ ಸೋತುಬಿದ್ದಿರುವುದನ್ನರಿತ ಕುಶನು, ಒಡನೆಯೇ ಬಂದು ವೀರಾವೇಶದಿಂದ ಕಾದಾಡಿ ಶತ್ರುಘ್ನನನ್ನು ಕೊಲ್ಲುತ್ತಾನೆ. ಈ ವಾರ್ತೆಯನ್ನು ದೂತರು ಅಯೋಧ್ಯೆಗೆ ಬಂದು ರಾಮನಿಗೆ ಬಿನ್ನೈಸಲು ಶ್ರೀರಾಮನು, ಯಜ್ಞಾಶ್ವವನ್ನು ಬಿಡಿಸಿ ತರುವುದಕ್ಕಾಗಿ ಅಪಾರವಾದ ಸೈನ್ಯಸಮೇತ ಲಕ್ಷ್ಮಣನನ್ನು ಕಳುಹಿಸುತ್ತಾನೆ.

ಹಾಗೆ ನಡೆದ ಮರುಕಾಳಗದಲ್ಲಿ ಕುಶಲವರ ಬಾಣಹತಿಯಿಂದ ಲಕ್ಷ್ಮಣನೂ ಮಡಿಯುವುದಲ್ಲದೆ ಆತನ ಬೆಂಬಲಕ್ಕೆ ಬಂದ ಭರತನೂ ಅಸುನೀಗುತ್ತಾನೆ. ಇದನ್ನರಿತ ಶ್ರೀರಾಮನು ದೀಕ್ಷೆಯಿಂದೆದ್ದು ಹನುಮಜಾಂಬವಾದಿ ಕಪಿವೀರರೊಡನೆ ತಾನೇ ಯುದ್ಧಕ್ಕೆ ಬಂದು ಮಕ್ಕಳೊಡನೆ ಕಾದಾಡಲು, ವೀರಪುತ್ರರಾದ ಕುಶಲವರು ರಾಮನನ್ನೂ ಮೂರ್ಛೆಗೊಳಿಸಿ, ಹನುಮಜಾಂಬವರನ್ನು ಬಂಧಿಸಿ ಆಶ್ರಮಕ್ಕೆ ಕೊಂಡೊಯ್ದು ತಾಯ ಮುಂದೆ ತಮ್ಮ ರಣಪರಾಕ್ರಮವನ್ನು ಹೇಳಿಕೊಳ್ಳುತ್ತಾರೆ. ರಾಮಲಕ್ಷ್ಮಣಾದಿಗಳು ನಿಧನರಾಗಿರುವುದನ್ನು ಕೇಳಿದ ಸೀತೆಯು ಮಕ್ಕಳನ್ನು ಹಳಿದು ದುಃಖಿಸುತ್ತಿರಲು, ವರುಣನ ಯಜ್ಞಾರ್ಥವಾಗಿ ಪಾತಾಳಲೋಕಕ್ಕೆ ಹೋಗಿದ್ದ ವಾಲ್ಮೀಕಿಮುನಿಯು ಹಿಂತಿರುಗಿ ಬಂದು, ಯುದ್ಧದಲ್ಲಿ ಮೈಮರೆತು ಬಿದ್ದಿರುವ ರಾಮಲಕ್ಷ್ಮಣಾದಿಗಳನ್ನೆಲ್ಲ ಮಂತ್ರೋದಕ ಪ್ರೋಕ್ಷಣದಿಂದೆಬ್ಬಿಸುತ್ತಾನೆ.

ಅನಂತರ ಶ್ರೀರಾಮನು, ವಾಲ್ಮೀಕಿಯು ಪ್ರುತಪಡಿಸಿದಂತೆ ಕುಶಲವರು ತನ್ನ ಮಕ್ಕಳೆಂಬುದನ್ನು ತಿಳಿದು ಸಂತೋಷದಿಂದ ಸೀತೆಯೊಡನೆ ಮಕ್ಕಳನ್ನು ಅಯೋಧ್ಯೆಗೆ ಕರಕೊಂಡು ಬಂದು ಅಶ್ವಮೇಧಯಾಗವನ್ನು ಸಾಂಗವಾಗಿ ಪೂರೈಸಿ ಬಹುಕಾಲ ಸುಖದಿಂದ ರಾಜ್ಯವಾಳಿಕೊಂಡಿದ್ದನು ಎಂಬಲ್ಲಿಗೆ ಉತ್ತರಕಾಂಡರಾಮಾಯಣದ ಕುಶಲವರ ಕಾಳಗವೆಂಬ ಈ ಮಹಾಪ್ರಸಂಗಕ್ಕೆ ಮಂಗಲವಾಗುವುದು.

**ಮುಖ್ಯ ಪ್ರಕರಣಗಳು**

೧. ಸೀತಾಪರಿತ್ಯಾಗ
೨. ಕುಶಲವರ ಜನನ
೩. ಯಜ್ಞಾಶ್ವಬಂಧನ
೪. ಕುಶಲವರ ರಣಪರಾಕ್ರಮ
೫. ವಾಲ್ಮೀಕಿಯ ಅನುಗ್ರಹ

**ಭೂಮಿಕೆಗಳು**

ರಾಮ
ಲಕ್ಷ್ಮಣ
ಭರತ
ಶತ್ರುಘ್ನ
ವಸಿಷ್ಠ
ವಾಲ್ಮೀಕಿ
ಕುಶ
ಲವ
ವನಪಾಲಕ
ಬೆಂಗಾವಲಿನ ಭಟರು
ದೂತರು
ಋಷಿಬಾಲಕರು
ಹನುಮಂತ
ಜಾಂಬವ
ಸೀತೆ
ಋಷಿಪತ್ನಿಯರು

## ಕುಶಲವರ ಕಾಳಗ

### ಸೀತಾಪರಿತ್ಯಾಗ

೧ ರಾಗ ನಾಟ—ರೂಪಕತಾಳ ೧

ಭಜಿಸುವೆ. ಮನ । ದಲಿ ನಿತ್ಯವು । ಭಜಕರ ಕುಲ । ದೈವವ ಸುರ ।
ವ್ರಜಸೇವಿತ । ನೆಂದೆನಿಸುವ । ಗಜವದನನ । ಪದವ— ॥ ೧ ॥

ಗೌರಿಯ ಮೋ । ಹದ ಪುತ್ರನ । ಗಣನಾಯಕ । ಸುಚರಿತ್ರನ ।
ಪೌರುಷಜನ । ಮದಭಂಗನ । ಪರತರ ಪಾ । ವನನ— ॥ ೨ ॥

ಬಹುವಿಧ ನಾ । ಮದ ಮೂರ್ತಿಯ । ಬಹುಲೋಕದೊ । ಳಗೆ ಕೀರ್ತಿಯ ।
ಚಾೌವೇದ । ಶ್ರುತಿಸಾರನ । ಚರಸರಿಸೃಪ । ಧರನ— ॥ ೩ ॥

ಭಾಸುರ ಮಣಿ । ಗಣ ರತ್ನವಿ । ಭೂಷಣ ಲಂ । ಬೋದರ ವಿ ।
ಘ್ನೇಶನೆ ಶರ । ಣಾಗತಪರಿ । ಪೋಷಣ[1]ನೆಂ । ದೆನಿಪ—[1] ॥ ೪ ॥

ಏಸು ಮಹಿಮೆ । ಯುಂಟೆಂಬುದ । ನಾ ಸರಸಿಜ । ಭವನರಿಯ, ।
ಬೇಸರದೆ । ಲ್ಲರ ರಕ್ಷಿಪ । ಮೂಷಿಕವಾ । ಹನನೆ— ॥ ೫ ॥

ಮದುವೆಯು ಮುಂ । ಜಿಯ ಶುಭಲ । ಗ್ನದ ಕಾರ್ಯದೊ । ಳಾವಾಗಲು ।
ಮೊದಲಿನ ಪೂ । ಜೆಯ ಕೊಂಬುವ । ದದೆ ನಿನ್ನಯ । ಬಿರುದು— ॥ ೬ ॥

ಅದರಿಂದಲೆ । [2]ನಿನ್ನನು ಕಾ । ವ್ಯದ ಮೊದಲಿಗೆ । ಪ್ರಾರ್ಥಿಸಿದೆ[2]ನು ।
ಮಧುಪುರಗಣ । ನಾಥನೆ ತವ । ಪದಕೆ ನಮೋ । ಯೆಂಬೆ— ॥ ೭ ॥

೨ ದ್ವಿಪದಿ

ಗಜಮುಖಗೆ ತಲೆವಾಗಿ ಸಿರಿಗೆ ವಂದಿಸುತ ।
ಅಜನರಸಿ ಶಾರದೆಯನರಿತು ಮನ್ನಿಸುತ ॥ ೮ ॥

---

1 ಭವನಾಶ (ಕಾ) 2 ರಚಿಸುವ ಕಾವ್ಯಕೆ ಮೊದಲಾಗಿಯೆ ನುತಿಪೆನು (ಓ)

ಪರಶಿವಗೆ ಕೈಮುಗಿದು ಪಾರ್ವತಿಗೆ ನಮಿಸಿ ।
ಸಿರಿದೇವಿಯರಸನಂ ಶೀಘ್ರದಿಂ ಭಜಿಸಿ ॥ ೯ ॥

ಶಂಕರಾಚಾರ್ಯರಿಗೆ ಶರಣೆಂಬೆ ಬಳಿಕ ।
ನಾ ಕಂಡ (?) ಗುರುವೆನಗೆ ದಯಮಾಡುವನಕ ॥ ೧೦ ॥

ವಾಲ್ಮೀಕಿ ಮುನಿಪತಿಗೆ ವಂದನೆಯ ಮಾಡಿ ।
[1]ಒ[1]ಲ್ಮೆಯಿಂ ಸಕಲ ಸುರರೊಳು ಮತಿಯ ಬೇಡಿ ॥ ೧೧ ॥

ರಾಮಾಯಣದೊಳು ಕುಶಲವರ ಕಾಳಗವ ।
ಭೂಮಿಯೊಳು ಪೇಳ್ವೆ ಬಹುವಿಧ ಪರಾಕ್ರಮವ ॥ ೧೨ ॥

ಬಾಲಕ[2]ರ[2] ನುಡಿಯೆಂದು [3]ನಿಂದಿ[3]ಸದೆ [4]ಬರಿದೆ ।[4]
[5]ಕೇಳಿ ಸಂತೋಷಿಸುವ [6]ಮನುಜ ರಿಂಗಿರದೆ[5], [6] ॥ ೧೩ ॥

೩ ರಾಗ ಸೌರಾಷ್ಟ—ತ್ರಿವುಡೆ ತಾಳ ೨

ಧಾರಿಣಿಪ ಜನ । ಮೇಜಯಂಗಾ ।
ಚಾರು [7]ಮಂಗಳ । ಮಹಿಮ ಜೈಮಿನಿ[7] ।
ಭಾರತವ ಪೇ । ಳ್ದಿರಲು ಬಹುವಿ । ಸ್ತಾರದಿಂದ ॥ ೧೪ ॥

ತಂದೆ ಮಕ್ಕಳು । ತಾವು ತಮ್ಮೊಳ ।
ಗೊಂದೆ ಮತವಾ । ಗಿರದೆ ರಣದೊಳು ।
ನಿಂದು ಕಾದುವ । ರುಂಟೆ ಪೇಳೆನ । ಗೆಂದ ಭೂಪ ॥ ೧೫ ॥

ಆಗ ಮುನಿ ಕರು । ಣಿಸಿದ ಕುಶಲವ ।
ರಾಘವರ ಸಂ । ಗರದ ಕಥೆಯನು ।
ಈಗ ಭೂಮಿಯೊ । ಳೊರೆವೆ ಯಕ್ಷ, । ರಾಗದಿಂದ ॥ ೧೬ ॥

---

1 ನ (ಕಾ), 2 ನ (ಅ) 3 ಹಿಂಗಿ (ಕಾ) 4 ಧರೆಯ (ಕಾ) 5 ಮೇಲುಳ ಸಜ್ಜನರು ಕೇಳ್ವುದೀ ಕಥೆಯ (ಕಾ) 6 ಸುಜನರೆಲ್ಲರಿಗೆ (ಅ) 7 ವೈಶಂಪಾಯ ಮುನಿಪತಿ (ಕಾ)

ಧರೆಯೊಳುತ್ತಮ । ವೆನಿಪಯೋಧ್ಯಾ ।
ಪುರವನಾಳುವ । ರಾಮಚಂದ್ರನು ।
ಅರಸಿಕೈ[1]ಕೆಯ । ಮಾತಿ[1]ಗೋಸುಗ । ವನಕೆ ಬಂದು ॥ ೧೭ ॥

ದುರುಳ ಖರದೂ । ಷಣರ ಕೊಂದ ।
ಲ್ಲಿರಲು ಸೀತೆಯ । ನೊಯ್ಯೆ ರಾವಣ ।
ಕರಡಿಕಪಿಗಳ । ನೆರಹಿ ಶರಧಿಗೆ । ಸೇತುಕಟ್ಟಿ ॥ ೧೮ ॥

ಹತ್ತುಶಿರದನ । ಪಡೆಯು ಸಹಿತಲೆ ।
ಕತ್ತರಿಸಿದಾ । ಕುಂಭಕರ್ಣನ ।
ಮತ್ತೆ [2]ಸೀತೆಯ । ತಂದು [3]ರಾಜ್ಯವ । ನಾಳುತಿರಲು[2,3] ॥ ೧೯ ॥

೪ ವಾರ್ಧಿಕಷಟ್ಪದಿ

ರಾವಣಾದಿಗಳ ಸಂಹರಿಸಿ ಸೆರೆಯೊಳಗಿರ್ದ
ದೇವರ್ಕಳಂ ಬಿಡಿಸಿ ಲಂಕಾಧಿಪತ್ಯಮಂ
ತೀವಿದತಿಸಂಭ್ರಮದೊಳಾ ವಿಭೀಷಣಗಿತ್ತು ಸುಗ್ರೀವನಂ ಮನ್ನಿಸಿ ।
ಭಾವಶುದ್ಧಿಯೊಳಯೋಧ್ಯಾಪುರಕೆ ನಡೆತಂದು
ಭೂವರಂ ತಾನಾಗಿ ಪಾಲಿಸಿದ ರಾಜ್ಯಮಂ
ಕೋವಿದರಸನದೊಂದು ದಿನ ಚಿಂತೆಯಿಂದಿರಲ್ ಕಂಡು ಜಾನಕಿ ಪೇಳ್ದಳು ॥೨೦॥

(ಸೀತಾರಾಮರ ಪ್ರವೇಶ)

೫ ರಾಗ ಘಂಟಾರವ—ಜಂಪೆತಾಳ ೩

ಸೀತೆ—

ಕಾಂತ, ಶಿ । ರೋಮಣಿಯೆ । ರಾಮ ಜಗ । ದೀಶ— ।
ಚಿಂತಿಸುವ । ಬಗೆಯೇನು । ಚಿನ್ಮಯನೆ । ನೀನು — ॥ ೨೧ ॥

ರಾಮ—

ನಾರಿಕುಲ । ಮಣಿ ಕೇಳು । ಎನ್ನಿಂದ । ಮೇಲಿನ್ನು ।
ಉರ್ವಿಗಿ । ಲ್ಲೊಡೆಯರಂ । ತಕನಾದೆ । ಕುಲಕೆ— ॥ ೨೨ ॥

---

1 ಕಾದೇವಿ (ಕಾ) 2 ಜಾನಕಿ ಸಹಿತ ಪುರವಾಳುತ್ತಲಿರಲು (ಕಾ, ಓ) 3 ಪುರ ವಾಳುತ್ತಲಿರ್ದ (ಓ, ಕಾ)

ಪೂರ್ವಜ । ನ್ಮದಲಿ ಶಿವ । ಪೂಜೆಯಂ । ಮಾಡಿದರೆ ।
ಸರ್ವಥಾ । ಮಕ್ಕಳಿಂ । ದೆಸಗಾಗ । ದಿಹರೆ— ॥ ೨೩ ॥

೬ ವಾರ್ಧಿಕಷಟ್ಪದಿ

ಕಾಂತೆ ಕೇಳೆನ್ನೀತಕಾ ಮಾತನಾಡಿದರೆ
ಭ್ರಾಂತನೆಂಬರು ಕೇಳ್ದ ಜನರೆಲ್ಲ, ಪೂರ್ವಜ
ನ್ಮಾಂತರದ [1]ಪುಣ್ಯವಿಲ್ಲದೆ[1] ಬಯಸಿದರೆ ಮಕ್ಕಳಾಗುವರೆ ಮನುಜರಿಂಗೆ ।
ಇಂತು ಸುತರಿಲ್ಲದಾರ್ತಿಯೊಳಿರ್ವರಿರ್ದು ಬಲು
ಚಿಂತಿಸುವ ಸಮಯಕೆ ವಸಿಷ್ಠಮುನಿಪತಿ ಬಂದು
ನಿಂತಿರಲು ರಾಮನುಪಚಾರಂಗಳಂ ಮಾಡಿ ಸಾಷ್ಟಾಂಗ ವಂದಿಸಿದನು ॥ ೨೪ ॥

(ವಸಿಷ್ಠನ ಪ್ರವೇಶ)

೭ ರಾಗ ಭೈರವಿ—ಜಂಪೆತಾಳ ೧

ಜಯ ಜಯ ಮ । ಹಾ ಮೌನಿ । ಕುಲ ಶಿಖಾ । ಮಣಿಯೆ ।
ಭಯ ನಿವಾ । ರಣವಾಯ್ತು । ಪಾದದರು । ಶಣದಿ— ॥ ೨೫ ॥

ಸಕಲಸುರ । ಸೇವಿತನೆ । ತ್ರಿಕರಣವಿ । ರಾಜಿತನೆ ।
ಮುಕುತಿದಾ ।ಯಕ ದೇವ । ಋಷಿ ಚಾರು । ಶೀಲ— ॥ ೨೬ ॥

ವಸಿಷ್ಠ—

ರಾಮ ಇ । ಕ್ಷ್ವಾಕುಕುಲ । ಭೂಮಿಪಾ । ಲಕ ಪಾಹಿ ।
ಭೀಮವಿ ।ಕ್ರಮ ಪುಣ್ಯ । ನಾಮ ನೀ । ಕೇಳು— ॥ ೨೭ ॥

ಅರಿತೆ ನಿ । ನ್ನಂತರಂ । ಗವ ಮಕ್ಕ । ಳಿಲ್ಲೆಂಬ ।
ಕೊರತೆಯನು । ಕಳೆಯಲ್ಕೆ । ಬಂದೆ ನಾ । ನಿಂದು— ॥ ೨೮ ॥

ರಾಮ—

ಮುಂದೇನು । ಪಾಯ ಮುನಿ । ಮಕ್ಕಳಾ । ಗುವುದಕ್ಕೆ ।
ತಂದೆ ಕಾ । ರುಣ್ಯದೊಳ । ಗರುಹಬೇ । ಕಯ್ಯ— ॥ ೨೯ ॥

---

1 ಸುಕೃತವಿಲ್ಲದೆ (ಅ)

ವಸಿಷ್ಠ—

ಜಾನಕಿಯು । ಕರೆದು ಮುನಿ । ಮಂತ್ರೋಪ । ದೇಶವನು ।
ತಾನಿತ್ತ । ನಾಗ ಸಂ । ತಸದಿ ಕೇ । ಳಿದಿರೆ— ॥ ೩೦ ॥

ನಿರ್ಭಯದೊ । ಳಿರು ನೀನು । ನಿನ್ನರಸಿ । ಗರ್ಭದೊಳ ।
ಗಿಬ್ಬರಾ । ಹರು ನಿನಗೆ । ಮಗಮಕ್ಕ । ಳೆಂದ— ॥ ೩೧ ॥

(ವಸಿಷ್ಠನ ನಿಷ್ಕ್ರಮಣ)

೮ ಭಾಮಿನಿಷಟ್ಪದಿ

ಮುನಿಪನಾಡಿದ ಮಾತ ಕೇಳಿದು
ಮನಸಿನಲಿ ಸಂತೋಷವಾಗಲು
ಜನಪನನು ಬೀಳ್ಕೊಟ್ಟು ಋಷಿ ತನ್ನಾಶ್ರಮಕೆ ತೆರಳೆ ।
ದಿನವ ಕಳೆದರು ಹಲವು ರಾಜ್ಯವ
ನನುಕರಿಸಿ ಪಾಲಿಸುತಯೋಧ್ಯದ
ಜನರು ಸುಖಹಿತರಾಗೆ ರಾಘವನಾಳ್ವ ಕಾಲದಲಿ ॥ ೩೨ ॥

೯ ರಾಗ ಘಂಟಾರವ—ಜಂಪೆತಾಳ ೩

ಸಕಲಭಾ । ಗ್ಯಗಳಿರವು । ಸರ್ವಜನ । ಸುಖಕರವು ।
ಸುಕೃತ ಮಂ । ಗಳ [1]ದಿ[1]ರವು । ಸಾಕೇತ । ಪುರವು— ॥ ೩೩ ॥

ನಾಕಾಧಿ । ಪನ ಭೋಗ । ಎನಗೆ ತನ । ಗೆಂಬಾಗ ।
ಬೇಕೆಂಬ । ಜನರಿಲ್ಲ । [2]ಬೇಡದವ । ರಿಲ್ಲ[2]— ॥ ೩೪ ॥

ಕೇಡ ಕಂ । ಡವರಿಲ್ಲ । ಚಾಡಿ ಹೊಲೆ । ಹೇಸಿಲ್ಲ ।
ಬೀಡುಬಿ । ಟ್ಟಳು ಲಕ್ಷ್ಮಿ । ಓಡಿತು ದ । ರಿದ್ರ— ॥ ೩೫ ॥

ವಚನ ॥ ಇಂತು ಸೌಭಾಗ್ಯದಿಂದ ರಂಜಿಸುವಂಥ ಅಯೋಧ್ಯಾ ಪಟ್ಟಣಕ್ಕೆ ವಸಂತನೈತಂದನದೆಂತೆನೆ—

---

1 ಕ (ಓ) 2 ಯಾಚಕರೊಳಂದು (ಕಾ) ; ಬೇಡುವರ ನಾ ಕಾಣೆ (ಕಾ)

೧೧ ರಾಗ ಸೌರಾಷ್ಟ—ತ್ರಿವುಡೆತಾಳ ೪

ಚಿಗುರಿದವು ವನ । ದೊಳಗೆ ತರುಗಳು ।
ಮುಗುಳನಾಂತವು । ಪುಷ್ಪಲತೆಗಳು ।
ಬಗೆಬಗೆಯು ಫಲ । [1]ನಿಕರ ಪುಷ್ಪ[1]ಗ । ಳಾಯಿತಾಗ ॥ ೩೬ ॥

ತುಂಬಿಗಳ ಝೇಂ । ಕಾರ ಹೆಚ್ಚಿತು ।
ಅಂಬುಜಗಳೆದೆ । ಬಿರಿಯೆ ಬಿಚ್ಚಿತು ।
ಅಂಬರದೊಳಾ । ಡಿದವು ಗಿಣಿಗಳು । ಸಂಭ್ರಮದೊಳು ॥ ೩೭ ॥

ಅಗರು ಚಂದನ । ಜಾಜಿ ಮಲ್ಲಿಗೆ ।
ಯುಗುಳುವಾತವು । ಬೀಸಿ ರಾಜ್ಯದಿ ।
ಮಘಮಘಿಪ ಪರಿ । ಮಳಗಳಾದುವು । ನಾಲ್ಕುದೆಸೆಗೆ ॥ ೩೮ ॥

ವಚನ ॥ ಆ ಸಮಯದಲ್ಲಿ ವನಪಾಲಕನೊರ್ವನೈತಂದು ರಾಘವೇಶ್ವರನೊಡನೆ ಏನೆಂದು ಬಿನ್ನೈಸುತ್ತಿದ್ದನು ಎಂದರೆ—

(ವನಪಾಲಕನ ಪ್ರವೇಶ)

೧೧ ರಾಗ ಸೌರಾಷ್ಟ—ಮಟ್ಟೆತಾಳ ೪

ವನಪಾಲಕ—

ರಾಮ ರಾಘ । ವ—ರಾ । ಜೀವಲೋಚ । ನ— ।
ಭೂಮಿಪಾಲ । ಕ — । ಭಕ್ತವತ್ಸ । ಲ— ॥ ಪಲ್ಲವಿ ॥

ಸುಗುಣ ತರುಗ । ಳು—ಎಲ್ಲ । ಚಿಗುರಿ ವನದೊ । ಳು— ।
ಬಗೆಯ ಫಲಗ । ಳು—ಬಹಳ । ಕಾನನ, ದೊ । ಳು— ॥ ೩೯ ॥

ಕಾಡ ಮೃಗಗ । ಳು—ಎಲ್ಲ । ಕೂಡಿ ವನದೊ । ಳು— ।
ಆಡುತ್ತೈದ । ವೆ— । ಅಂಜಿಕಿಲ್ಲ । ದೆ— ॥ ೪೦ ॥

1 ಪುಷ್ಪನಿಕರ (ಓ, ಕಾ)

೧೨ ಯಾಲಪದ—ಏಕತಾಳ ೨

[1]ಕದಳಿ, ಖ | ರ್ಜೂರ ದ್ರಾಕ್ಷೆ |
ತುದಿಮೊದಲಿಲ್ಲದೆ | ಜಂಬು ನಿಂಬೆ |
ಉದುರುತ್ತೈದವೆ | ನಾನಾಫಲಗ, | ಳು — | ಚಿತ್ತೈಸೆಂದು |
ಪದುಮ,ನಾಭನ | ಪದಕೆ,ರಗಿದ | ನು[1]— || ೪೧ ||

ವಚನ॥ ಅಗಲಾ ಗಜತುರಗರಥಪದಾತಿಗಳೆಂಬ ಚತುರಂಗಸೇನೆಯಿಂ ಕೂಡಿಕೊಂಡು ರಾಘವೇಶ್ವರನು ಬೇಟೆಗೈದಿದನದೆಂತೆನೆ

೧೩ ರಾಗ ಘರಜು—ಏಕತಾಳ ೩ (ದ್ರುತ)

ಬೇಟೆ—ಯಾ | ಡುತ್ತ ಬಂದ | ರಾಮ—ಸಂ | ತೋಷದಿಂದ || ಪಲ್ಲವಿ ||

ಈಟ ಕಠಾರಿಯ | ಕೋಟೆಮುಂದಿ ನೆಗೆ | ದಾಟವನಾಡುತ | ನಾಟಕವಾಗಿ || ೪೨ ||

ಸೊಕ್ಕಿದ ಮೃಗಗಳ | ಧಿಕ್ಕರಿಸುತ ಬಲು | ಗಕ್ಕಸದಿಂದಲಿ | ರಕ್ಕಸವೈರಿ || ೪೩ ||

ನಾನಾ ಫಲದ ಏ | ತಾನವ ಕೊಯ್ಯುತ | ಕಾನನದೊಳಗಾ | ಜಾನಕಿಸಹಿತ || ೪೪ ||

ಪುಷ್ಪದಿ ರಚಿಸಿದ | ಚಪ್ಪರಮಂಚದೊ | ಳೊಪ್ಪಿ ಸೀತೆ ಕಂ | ದರ್ಪನ ಜನಕ || ೪೫ ||

ವಚನ ॥ ಇಂತು ಮೂರುನಾಲ್ಕು ದಿನಪರ್ಯಂತ ಬೇಟೆಯಾಡುತ್ತಿರಲು ಮತ್ತಲ್ಲಿ ಏನಾಯಿತು ಎಂದರೆ—

೧೪ ರಾಗ ಘಂಟಾರವ—ಅಟತಾಳ ೧ (ವಿಲಂಬಿತ, ದ್ರುತ)

ಮತಿವಂತೆ |—ಪುಷ್ಪ | ವತಿಯಾ—| ದಳು ಸೀತೆ |
ಪತಿಯ ಕೂಟದಿ | ಜೊತೆಯೊಳಿರದುಪ | ರತಿಯ ವೇಳ್ಯದಿ | ಮಾನಿನಿ— || ೪೬ ||

ಮಲ್ಲಿಕಾ |—ಸ್ಮಿತೆ | ಮಧುರಕೋ | ಕಿಲವಾಣಿ |
ಫುಲ್ಲಲೋಚನೆ | ಸಲ್ಲಲಿತವನ | ದಲ್ಲಿ ಮಾನಿನಿ | ಜಾನಕಿ— || ೪೭ ||

---

1 (ಅರ್ಧಭಾಮಿನಿ)—ಕಂಡನಾಲಿಸುತವನ ರಾಘವ
ಮಂಡೆಯನು ತೂಗುತ್ತ ವನಗಳ
ಭಂಡುಮಾಡಿತೆ ಕಾಡುಮೃಗ ಹೋಗೆಂದನಾ ರಾಮ (ಅ)

ಅಂಬುಜಾ |—ನನೆ | ಅರಸಂಜಿ | ಗಮನೆ ಶ್ರೀ |
ರಂಭೆ ಪುತ್ಥಳಿ | ಬೊಂಬೆ ಇನ್ನೇ | ನೆಂಬೆ ಶೃಂಗಾ | ರಾಂಗನೆ— || ೪೮ ||

೧೫ ರಾಗ ಕಲ್ಯಾಣಿ—ಏಕತಾಳ ೪

ರಾಮು—

,ಸೀತೆ ದೂ | ರದಿ ನಿಂತ | ,ರೀತಿಯ | ರಿತು ರಾಮು |
,ತಾ ತಿಳಿ | ಯಲು ಮನ | ,ಕಾತತು | ಕ್ಷಣದಿ— || ೪೯ ||

,ಚಾತುರಂ | ಗದ ಸೇನೆ | ,ತಾ ತಿರಿ | ಗಿಸಿಕೊಂಡು |
,ಭೂತಳಾ | ಧಿಪನು ಸಾ | ,ಕೇತ ಪ | ಟ್ಟಣಕೆ— || ೫೦ ||

,ಬಂದು ರಾ | ಘವ ತನ್ನ | ,ಮಂದಿಯ | ಬೀಳ್ಕೊಟ್ಟು |
,ಚಂದದಿ | ಕಳುಹಿದ | ,ನಂದು ಮಾ | ತಾಡಿ— || ೫೧ ||

೧೬ ರಾಗ ಆಂದೋಳಿ(ಕ)—ಅಷ್ಟತಾಳ ೩

ಮದಗಜ | ಗಮನೆಯ್ಯೆ | ದನೆ ದಿವ | ಸದಿ ಮಿಂದು |
ಸದಮಳ | ವಿಧದಲಂ | ಕರಿಸು—| ತ್ತ—||
ಸದನಕ್ಕೆ | ಬರೆ ಕಂಡು | ರಾಮು ಸಂ | ತಸದಿ ಮು |
ಟ್ಟದರೆ ಗ | ರ್ಭವನಾಂ, | ತಳು ಸೀ—| ತೆ— || ೫೨ ||

ಚಾರುಚ | ರಿತ್ರೆ ಚಂ | ದ್ರಮುಖಿ ಚಂ | ದನಗಂಧಿ |
ವಾರಿಜ | ವದನೆ ವಾ | ಸವಸ್ತೋ—| ತ್ರೆ—||
ಮಾರಿದ | ಗುರುನಿತಂ | ಬಿನಿ ಸೊಬ | ಗಿನ ಸೋನೆ |
ಮಾರನ | ಮುಂಗೈ, | ಯರಗಿಣಿ—| ಯೆ— || ೫೩ ||

ಕನ್ನಡಿ | ಕದಪು ಕಂ | ಗಳ ನೋಟ | ವರಳ್ಗಣ್ಣ |
ಬಿನ್ನಾಣ | ದಬಲೆ ಬಿಂ | ಕದ ನಾ—| ರಿ—||
ಮನ್ಮಥ | ನೆರಕದ | ಚ್ಚಿನ ಬೊಂಬೆ | [1]ನ್ನೈತುಂಬೆ[1] |
ಚಿನ್ನದಂ | ತೆಸೆದು ರಂ | ಜಿಸಿ[2]ದ—| ಳು[2]— || ೫೪ ||

1 ಗರ್ಭವು (ಕಾ, ಅ) 2 ತಾ—ಗ—(ಕಾ, ಅ)

ಮೂರು ತಿಂ । ಗಳು ತುಂಬೆ । ಮುದ್ದು ವೋ । ರೆಯಲಿ ಬಿ ।
ಳ್ಪೇರಿತು । ತ್ರೈಜಗ । ದೊಡತಿ—। ಗೆ—॥
ಶ್ರೀರಾಮ । ನರಸಿಯ । ಗುರುಕುಚ । ವೆರಡು ಕ ।
ಪ್ಪೇರಿತು । ಛಾಯಾಮಾ । ತ್ರದೊಳಾ—। ಗ— ॥ ೫೫ ॥

೧೭ ರಾಗ ಕಾಂಭೋಜಿ—ಏಕತಾಳ ೪

ರಾಮ—

ಮಂಗಳಾಂಗಿ । ಗೆ ನಾಲುಕು । ತಿಂಗಳಾಗ । ಲಾಗ ರಘು ।
ಪುಂಗವ ಸಂ । ತೋಷದಿ ಪು । ರಂಗಳನೆ । ಲ್ಲ—॥
ಸಿಂಗರಿಸಿ । ಪಟ್ಟಣದೊ । ಳಂಗನೆಯ । ರೆಲ್ಲ ಶೋಭ ।
ನಂಗಳ ಪಾ । ಡುತ್ತ ಸೀಮಂ । ತಂಗಳಾಗ । ಲು— ॥ ೫೬ ॥

ಕೇರಿ ಕೇರಿ । ಯ ಬಾಲೆಯ । ರಾರತಿಗ । ಳನ್ನೆ ತಂದು ।
ಶ್ರೀರಾಮಸೀ । ತೆಯರಿಗೆತ್ತಿ । ಸಾರುತಿರ್ದ । ರು—॥
ಆರೇಳು ತಿಂ । ಗಳು ತುಂಬೆ । ನಾರಿ ಸೀತಾ । ದೇವಿಗಿಚ್ಛೆ ।
ಬೇರೆ ಬೇರೆ । ತಂದು ಕೊಟ್ಟ । ರೂರಹೆಂಗ । ಳು— ॥ ೫೭ ॥

೧೮ ಕಂದಪದ್ಯ

ನಯನುಡಿ ಮಾತಾಡುತ ನಿ ।
ನ್ನಯ ಮನಸಿನ ಬಯಕೆಯೇನು ಪೇಳೆಲೆ ರಾಮಂ ।
ಭಯದಿಂದುಸುರಿದಳಾ ತ ।
ನ್ನಯ ಕಾಂತಗೆ ಸೀತೆ ಬಳಿಕ ಕರವಂ ಮುಗಿದು ॥ ೫೮ ॥

೧೯ ಸೌರಾಷ್ಟ—ಮಟ್ಟೆತಾಳ ೪

ಸೀತೆ—

ವಾರಿಜಾಂಬ । ಕ—। ಧಾರಿಣೀಪ । ತೇ— ।
ಮಾರಸನ್ನಿ । ಭ—। ಮಂಜುಳಾಕ । ರ— ॥ ಪಲ್ಲವಿ ॥

ಕೇಳು ರಾಘ । ವ—। ವನದ ಹೆಂಗ । ಳ—।
ಮೇಳದಿಂದ । ಲೆ—ಇ । ರುವೆನಲ್ಲಿ । ಯೆ— ॥ ೫೯ ॥

ರಾಮ—

ಎಂದು ಬರುವೆ । ನೀ—। ಮಂದಗಾಮಿ । ನಿ—।
ಇಂದು ಎನ್ನೊ । ಳು—ಪೇ । ಳೆಂದ ರಾಘ । ವ— ॥ ೬೦ ॥

ಸೀತೆ—

ಮೂರು ದಿವಸ । ದ—। ಮೇಲೆ ಬರುವೆ । ನು—।
ಕಾರಣೀಕ । ನೆ—। ಕಳುಹು ಎನ್ನ । ನು— ॥ ೬೧ ॥

೨೦ ಭಾಮಿನಿಷಟ್ಪದಿ

ಧರಣಿಜೆಯು ತನಗಿಜ್ಜೆಯಾದುದ
ನರುಹೆ ಕಳುಹುವೆನೆಂದು ಸಂತೈ
ಸಿರಲು, ನಗರದಿ ತಿರು[1]ಗುತಿಹ ಚಾರಕರ[1] ನಡುವಿರುಳು ।
ಕರೆಸಿ ತನ್ನ ವಿಚಾರ ಸುದ್ದಿಯ
ಪುರದ ಜನರೇನೆಂಬರೆನೆ ವಿ
ಸ್ತರಿಸಿದರು ಕೈಮುಗಿದು ನಗರದೊಳೊ[2]ರೆ[2]ದ ವಾರ್ತೆಗಳ ॥ ೬೨ ॥

(ಚಾರಕರ ಪ್ರವೇಶ)

೨೧ ರಾಗ ಘಂಟಾರವ—ಜಂಪೆತಾಳ ೧

ಚಾರಕರು—

ರಣಪರಾ । ಕ್ರಮ ಧೀರ । ಗುಣನಿದಾ ।ನ ಕಠೋರ ।
ಮಣಿಮಕುಟ । ಧೃತಹಾರ । ಮಂಜುಳಾ । ಕಾರ ॥ ೬೩ ॥

ಸತ್ಯಧ । ರ್ಮವಿಚಾರ । ಸಾಧುಜನ । ಪರಿವಾರ ।
ನಿತ್ಯಮಂ । ಗಳರೂಪ । ನಿಜಸುಪ್ರ । ತಾಪ ॥ ೬೪ ॥

ಧರ್ಮದಾ । ನಗಳಲ್ಲಿ । ಧೈರ್ಯಮಾ । ನಿಗಳಲ್ಲಿ ।
ನಿರ್ಮಲಾ । ತ್ಮಕನೆಂದು । ನಿನ್ನ ಪೊಗ । ಳುವರು ॥ ೬೫ ॥

೨೨ ರಾಗ ಕೇತಾರಗೌಳ—ಅಷ್ಟತಾಳ ೧

ಬಲ್ಲಿದ । ವರ ಕುಲ । ದೈವ ನೀ । ನೆಂದು ಊ ।
ರೆಲ್ಲ ಕೊಂ । ಡಾಡುವ । ರು—॥

1 ಗಬೇಕೆಂದಾಗ (ಕಾ) 2 ಗೆ (ಕಾ)

ಖುಲ್ಲ ನಿ । ರ್ಭಾಗ್ಯನಿಂ । ದಿರುಳೊರ್ವ । [1]ರಜಕನು[1] ।
ಸಲ್ಲದ । ನುಡಿಯ ಪೇ । ಳ್ದ— || ೬೭ ||

ವಲ್ಲಭೆ । ತವರ್ಮನೆ । ಗುಸುರದ್ವೈ ।ದಿದಳೆಂದು ।
ಕೊಲ್ಲುತ್ತ । ವಳ[2]ನೆಳೆ । ವ[2]—||
ಬಲ್ಲವ । ರೊಡಬಡಿ । ಸಿರೆ ರಾಮ । ನಂತೆ ಹು ।
ಜ್ಜಲ್ಲ ಕೂ । ಡುವೊಡೆಂದ । ನು— || ೬೭ ||

೨೩ ಭಾಮಿನಿ ಷಟ್ಪದಿ

ರಾಮ—

ನುಡಿಯ ಕೇಳುತ ಕೈಯ ಧನುಶರ
ಪೊಡವಿಗುದುರಿತು [3]ರೋಷ[3] ಭರದು
ಗ್ಗಡದ [4]ರೌದ್ರಾ[4]ವೇಶದಲಿ ಮರಳಿದನು ಮಂದಿರಕೆ ।
ಮಿಡುಕುತಿರ್ದನು ಮನಸಿನಲಿ ಕಂ
ಗೆಡುತ ಕಣ್ಣಿಗೆ ನಿದ್ರೆ ಬಾರದೆ
ಪೊಡವಿಪತಿರಘುನಾಥ ಮಾತಾಡಿದನು ತನ್ನೊಳಗೆ || ೬೮ ||

೨೪ ರಾಗ ಗೌಳಮಲಹರಿ—ರೂಪಕತಾಳ ೩

ಮೋಸವಾಯಿ । ತು—। ಮಾನಿನಿಯು, । ಮನೆಗೆ ತಂದು ।
ಆಸುರದೊಳು । ಸಿಕ್ಕಿದ್ದಾ । ಸೀತೆಯು—। ಪುರಕೆ ತಂದು || ಪಲ್ಲವಿ ||

ರಕ್ಕಸರ, । ಕೈಯೊಳಗೆ, । ಸಿಕ್ಕಿ ಭಂಗ । ಬಟ್ಟು, ಅವ ।
ರಿಕ್ಕಿದ್ದುಂ । ಡದಲೆಯೆಂದು । ಲೆಕ್ಕಿಸದೇ । ಪುರಕೆ ತಂದು || ೬೯ ||

ಮಾನವರ, । ಕೊಂದು ಮತ್ತೆ । ಮಧುಮಾಂಸಗ ।ಳನ್ನೆ ಮೆಲ್ವ ।
ದಾನವರ, । ಕೈಮುಟ್ಟಿದ । ಮಾನಿನಿಯು, । ಮನೆಗೆ ತಂದು || ೭೦ ||

ಕದ್ದುಕೊಂಡು । ಹೋಗಿ ತನ್ನ । ಬಿದ್ದಣೆಗ, । ರೊಡನೆ ಕೂಡಿ ।
ಶುದ್ಧವೇ ರ । ಕ್ಕಸನ ವಶದೊ । ಳಿದ್ದ ಹೆಣ್ಣ । ಮನೆಗೆ ತಂದು || ೭೧ ||

---

1 ನಿಮಗಲ್ಲ (ಓ) 2 ಬಿಡದೆ (ಕಾ) 3 ಶೋಕ (ಕಾ) 4 ರೋಷಾ (ಕಾ)

ವಚನ ॥ ಇಂತು ರಾಮಚಂದ್ರದೇವರು ಕಣ್ಣಿಗೆ ನಿದ್ರೆಯುಂ ಬಾರದೆ ಹಲವ ಹಂಬಲಿಸಿ ರಾತ್ರಿಯಂ ಕಳೆದು ಮರುದಿನದುದಯದೊಳೊಡ್ಡೋಲಗಂಗೊಟ್ಟು ಅನುಜನಾದ ಲಕ್ಷ್ಮಣನಂ ಕರೆದು ಏನೆಂದನು ಎಂದರೆ—

೨೫ ರಾಗ ವೃಂದಾವನಸಾರಂಗ—ಏಕತಾಳ ೩

ರಾಮ—

ಬಾರಯ್ಯ । ತಮ್ಮ ಕೇ । ,ಳೆಂದ । ನು—ಬಲು ।
ಘೋರ—ಕಾ । ನನದೊಳು । ನಾರಿ, ಸೀ । ತೆಯ ಬಿಟ್ಟು । ಬಾರಯ್ಯ—
॥ ಪಲ್ಲವಿ ॥

ಅಡವಿ—ಗೆ । ಕರಕೊಂಡು । ,ಪೋದ । ವ—ಇಲ್ಲಿ ।
ಬಿಡಲಿ—ಲ್ಲ । ಜನರಪ । ,ವಾದ । ವ—ಅಲ್ಲಿ ।
ಮಡದಿ—ಯೊ । ರ್ವಳ ಬಿಟ್ಟು । ಕಡೆಗೆ, ಪೇ । ಳ್ವುದು ಗುಟ್ಟು ॥ ೭೨ ॥

ತಡವ—ಮಾ । ಡುವದೇಕೆ । ,ಸುಮ್ಮ । ನೆ—ಬೇಗ ।
ನಡೆ ನ—ಡೆ । ಕರಕೊಂಡು । ,ಗಮ್ಮ । ನೆ—ಬೇರೆ ।
ನುಡಿಯ—ಬೇ । ಡಜ್ಞಮಾ । [1]ತಿಡಬೇಡ । ನೀ ಕೇಳ್ಮಾತ್ರೆ[1] ॥ ೭೩ ॥

೨೬ (ಸಾಂಗತ್ಯ) ರಾಗ ತೋಡಿ—ರೂಪಕತಾಳ ೩

ಲಕ್ಷ್ಮಣ—

ಈರೇಳು । ಭುವನದೊ । ಡೆಯ ವಿಶ್ವ । ಪತಿ ರಾಮ ।
ಸಾರಸಾಂ । ಬಕ ದೇವ । ನೀನು—॥
ನಾರಿಜಾ । ನಕಿಯಲ್ಲಿ । ತಪ್ಪುಕಾ । ಣದೆ ಸುಮ್ಮ ।
ನಾರಣ್ಯ । ದೊಳು ಬಿಡ । ಲೇಕೆ— ॥ ೭೪ ॥

ಅರಿಯದ । ಮೂಢಾತ್ಮ । ರಾರೇನ । ಪೇಳ್ದರು ।
ಅರಿಯದೆ । ದೇವರ । ಮನಸು—॥
ಕರುಣಿಸ । ಬೇಕು ಕಂ । ಜಾಕ್ಷಿನ । ಮ್ಮಮ್ಮನೆಂ ।
ದೆರಗಿದ । ಪಾದಪ । ದ್ಮದಲಿ— ॥ ೭೫ ॥

---

1 ತ ತಡೆವುದಿ । ದ್ಯಾವನೀತ (ಕಾ)

ರಾಮ—

ಏಳಯ್ಯ । ತಮ್ಮ ನೀ । ನೆಷ್ಟು ಹೇ । ಳಿದರೇನು ।
ಕೇಳುವ । ನಲ್ಲ ಈ । ಮಾತ—॥
ಭಾಳಲೋ । ಚನನಾಣೆ । ಬಲುಕಷ್ಟ । ಬಂದರೂ ।
ಆಳುವ । ನಲ್ಲ ಜಾ । ನಕಿಯ— ॥ ೭೬ ॥

ಲಕ್ಷ್ಮಣ—

ಈಪರಿ । ಯಲಿ ರಾಮ । ಕೋಪಿಸೆ । ಲಕ್ಷ್ಮಣ ।
ತಾಪವ । ತಾಳಿದು । ಮನದಿ—॥
ಆ ಪುಣ್ಯ । ವಂತೆಯ । ಕರೆದು ಏ । ಕಾಂತದಿ ।
ತಾ ಪೇಳಿ । ದನು [1]ಧರ । ಣಿಜೆಗೆ[1]— ॥ ೭೭ ॥

(ರಾಮನ ನಿಷ್ಕ್ರಮಣ, ಆಮೇಲೆ ಸೀತೆಯ ಪ್ರವೇಶ)

ಪುಣ್ಯಲೋ । ಚನೆ ಪುಣ್ಯ । ವಂತೆ ಜಾ । ನಕಿ ನೀವ ।
ರಣ್ಯಕೆ । ತೆರಳಬೇ । ಕಂತೆ— ॥ ೭೮ ॥

ಅಗ್ರಜ । ನಪ್ಪಣೆ । ಈಗ ನಾವ್ । ಕಾಡಿಗೆ ।
ಶೀಘ್ರದಿ । ಪಯಣವಾ । ಗುವಡೆ— ॥ ೭೯ ॥

ರಥವೇರು । ತಡವೇತ । ಕಿನ್ನು ತೆ । ಕ್ಕೊಳ್ಳವ್ವ ।
ಜೊತೆಗೆ ಬೇ । ಕಾದ ವ । ಸ್ತುಗಳ— ॥ ೮೦ ॥

ಪೃಥಿವಿಯಾ । ತ್ಮಜೆ ಕೇ[2]ಳು । ಮಾತ ನಿ[2] । ನ್ನಯ ಮನೋ ।
ರಥ ಸ । ಲಿಸುವ [3]ರಘು । ನಾಥ[3]— ॥ ೮೧ ॥

೨೭ ರಾಗ ಘಂಟಾರವ—ಜಂಪೆತಾಳ ೨

ಸೀತೆ—

ತನುಜ ಲ । ಕ್ಷ್ಮಣ ಕೇಳು । ಮುನಿಗಳಾ । ಶ್ರಮದಿ ಭೋ ।
ಜನವ ಮಾ । ಡಿಸಲಿಷ್ಟ । ವೆನಗಾಯಿ । ತಯ್ಯ— ॥ ೮೨ ॥

---

1 ವೃತ್ತಾಂತಗಳ (ಓ) 2 ಳ್ದು ಮಾತನೆ (ಓ) 3 ನೆನ್ನಕಾಂತ (ಓ)

ತರಿಸು ಸ । ನ್ನಹವೆಲ್ಲ । ತೊಡರಿಲ್ಲ । ವೆಂದಾಗ ।
ಪರಮಪಾ । ವನೆ [1]ಮಾತೆ[1] । ಪೊರಟಳಾ । [2]ಸೀತೆ[2]— ॥ ೬೩ ॥

೨೮ ವಾರ್ಧಿಕಷಟ್ಪದಿ

ಜಗದುಪತಿ ಕೇಳಿಂತು ಲಕ್ಷ್ಮಣನೊಳುಸುರುತಲೆ
ನಗೆಮೊಗದಿ ತನ್ನಿಷ್ಟದೊರಕಿತೀ ದಿನವೆಂದು
ಮಿಗೆ ಸರ್ವಭೂಷಣಂಗಳ ಧರಿಸುತಾ ಸೀತೆ ಪಯಣಸನ್ನಾಹವಾಗಿ ।
ಅಗಿಲು ಚಂದನ ಗಂಧ ಕಸ್ತೂರಿ ಕುಂಕುಮವ
ಬಗೆಬಗೆಯ ದಿವ್ಯಾಂಬರಂಗಳಂ ತರಿಸಿಕೊಂ
ಡೊಗುಮಿಗೆಯ ಹರ್ಷದಿಂದಂತಃಪುರಕೆ ಬಂದು ಕೌಸಲ್ಯೆಗಿಂತೆಂದಳು ॥ ೬೪ ॥

೨೯ ರಾಗ ಕಾಂಭೋಜಿ—ಏಕತಾಳ ೪

ತಾಯೆ ಕೇಳಿಂ । ದೊಂದು ಮಾತ । ರಾಮನಪ್ಪ । ಣೆಯನಿತ್ತ ।
ಪ್ರೀಯದಿಂದ । ವನದಿ ಮುನಿ । ಸ್ತ್ರೀಯರ ಕೂ । ಡಿ—॥
ಆಯತದಿಂ । ದವರಿಗೆಲ್ಲ । ಬಾಯನದಾ । ನವನಿತ್ತು ।
ನೋಯಿಯನ್ನು । ಮಾಡಿ ನಾಳೆ । ಬಾಹೆನೆಂದ । ಳು— ॥ ೬೫ ॥

೩೦ ರಾಗ ಸೌರಾಷ್ಟ—ತ್ರಿವುಡೆತಾಳ ೨

ಲಕ್ಷ್ಮಣ—

ಏನೆ ಜಾನಕಿ । ಇಂದಿಗಿಲ್ಲಿಗೆ ।
ದಾನವಾಂತಕ । ಬರಲು ಹೇಳಿದ ।
ಮಾನಿನೀಮಣಿ । ಜೋಕೆ ಪೋಗುವ । ಕಾನನದೊಳು ॥ ೬೬ ॥

ಸೀತೆ—

ಪೋಗಿಬಹೆನೆಂ । ದೆನ್ನುತಲೆ ತಲೆ ।
ವಾಗಿ ಕೈಕೆಸು । ಮಿತ್ರೆಯರಿಗೆ ಸ ।
ರಾಗದಿಂದಲೆ । ಪಯಣವಾದಳು । ನಾಗವೇಣಿ ॥ ೬೭ ॥

೩೧ ರಾಗ ನಾದನಾಮಕ್ರಿಯೆ—ಅಷ್ಟತಾಳ ೧

ರಾಮನ । ಚರಣವ । ನೆನೆಯುತ್ತ । —ತಾಯಿ ।
ಭೂಮಿದೇ । ವಿಗೆ ನಮೋ । ಎನ್ನುತ್ತ ॥

---

1 ಸೀತೆ (ಕ್ರಾ) 2 ಕಾಂತೆ (ಕಾ)

ಗ್ರಾಮದೇ । ವತೆಯ ಕಂ । ಡೆರಗುತ್ತ । —ಕುಲ ।
ಸ್ವಾಮಿಗೆ । ಜಯವೆಂದು । [1]ಪೊಗಳು[1]ತ್ತ ॥ ೮೮ ॥

ಕೇರಿ ಕೇ । ರಿಯ ಮನೆ । ಮನೆಗಳ । —ಲ್ಲಿದ್ದ ।
ನಾರಿಯ । ರಿಗೆ ಮುಗಿದು । ಕರಗಳ ॥
ನೀರೆ ಜಾ । ನಕಿ ನಡೆ । ತಂದಳು ।—ರಥ ।
ವೇರಿ ಕಾ । ಡಿಗೆ ಹೊಡೆ । ಎಂದಳು ॥ ೮೯ ॥

೩೨ ವಾರ್ಧಿಕಷಟ್ಪದಿ

ಲಕ್ಷ್ಮಣ—

ಹಾರಿಸಿದ ರಥವನರೆನಿಮಿಷದಲಿ ಗಡಗಡನೆ
ಜಾರಿಸಿದ ಕಲುಮುಳ್ಳು ಗಿರಿ ಪರ್ವತಂಗಳಂ
ತೋರಿಸಿದ ಬಲು ಭಯಂಕರವಾದ ಶಾರ್ದೂಲ ಸಿಂಹ ಹುಲಿ ಕರಡಿಗಳನು ।
ಹೋರಿಸಿದ ರಕ್ಕಸರ ಹೊಳಲುಗಳ ಮುರಿದ ಕಡೆ
ಘೋರಿಸಿದ ರಥದ ಕೀಲ್ಗಳು ಕಳಚುವಂತೆ ಮದ
ವೇರಿಸಿದ ಹಯಗಳಂ ಬೋಳೈಸುತಿರೆ ಕಂಡು ನಾರಿ ಜಾನಕಿ ಪೇಳ್ದಳು ॥ ೯೦ ॥

೩೩ ರಾಗ ಭೈರವಿ—ಏಕತಾಳ ೭

ಸೀತೆ—

ಎಲ್ಲಿಗೆ । ಪಯಣವಿ । ದೇನು— । —ನಿಲು ।
ನಿಲ್ಲಲೊ । ಲಕ್ಷ್ಮಣ । ನೀನು—॥
ಕಲ್ಲೆದೆ । ಯಾದೆ ಇ । ದೇಕೆ— । —ಥರ ।
ವಲ್ಲ ಪೋ । ಗುವದಿನ್ನು । ಜೋಕೆ— ॥ ೯೧ ॥

ಹುಲಿ ಸಿಂ, । ಹಗಳು ಶಾ । ರ್ದೂಲ—।—ಹಾ ।
ವ್ಗಳು ಹರೆ । ಯುತಲಿವೆ । ಬಹಳ— ॥
ಕಳವಳಿ । ಸುತ್ತಿದೆ । ಮನಕೆ—।—ಎನ್ನ ।
ನೆಳೆಯುವ । ದೇಕೊ ಗ । ಹನಕೆ— ॥ ೯೨ ॥

ಮುನಿವಧು । ಗಳನಾರ । ಕಾಣೆ—।—ಇದು ।
ವನವ, । ಲ್ಲವೆ ಪೇಳೆ । ನ್ನಾಣೆ— ॥

---

1 ಬೇಡು (ಬ)

ದನುಜರ । ಹೊಳಲಿದೆ । ಮುಂದೆ— ।—ರಥ ।
ವನು ತಿರು । ಗಿಸು ನೀ । ಹಿಂದೆ— ॥ ೯೩ ॥

ವಚನ ॥ ಇಂತೀ ಜಾನಕಿ ನುಡಿಯಲಾಗಿ ಸೌಮಿತ್ರಿ ಏನೆಂದನು ಎಂದರೆ—

೩೪ ರಾಗ ಸೌರಾಷ್ಟ—ತ್ರಿವುಡೆತಾಳ ೩

ಲಕ್ಷ್ಮಣ—

ಮೇದಿನೀಸುತೆ । ಕೇಳು ಜನರಪ ।
ವಾದ ಬಂದುದ । ಕಳೆಯಲೋಸುಗ ।
ಆ ದಯಾನಿಧಿ । ಕಳುಹಿದನು ತಾ । ಭೇದದಿಂದ ॥ ೯೪ ॥

ಸೃಷ್ಟಿಗೀಶ್ವರ । ರಾಮಚಂದ್ರನು ।
ಸಿಟ್ಟನಿಂದಲೆ । ನಿಮ್ಮನೀಗಳೆ ।
ಬಿಟ್ಟುಬಾರೆಂ । ದೆನುತ ನೇಮವ । ಕೊಟ್ಟನೆನಗೆ ॥ ೯೫ ॥

೩೫ ವಾರ್ಧಿಕಷಟ್ಪದಿ

ಪ್ರಳಯ ಕಾಲದ ಸಿಡಿಲು ಬಂದೆರಗಿ ವಟವೃಕ್ಷ
ಇಳೆಗೊರಗುವಂತೆ ಲಕ್ಷ್ಮಣನ ನುಡಿಕೇಳ್ದು ಭೂ
ತಳಕೆ ಮೂರ್ಛಿತಳಾಗಿ ಬಿದ್ದಳಂಗನೆ ಕಂಡು ಸೌಮಿತ್ರಿ ಬೆರಗಾಗುತ ।
ತಳಿರ ಕಣ್ಗೊತ್ತಿ ಕಂಬನಿಯೊರಸಿ ಎಲೆನೀರ
ತಳಿದು ಪತ್ರಗಳ ಕೊಡೆವಿಡಿಯಲ್ಕೆ ಮೂರ್ಛೆಯಂ
ತಿಳಿದೆದ್ದು ಲಕ್ಷ್ಮಣನ ಮೊಗನೋಡಿ ಜನಕಸುತೆ ಅಳುತ
ಮತ್ತಿಂತೆಂದಳು ॥ ೯೬ ॥

೩೬ (ಸಾಂಗತ್ಯ) ರಾಗ ನೀಲಾಂಬರಿ—ರೂಪಕತಾಳ ೩

ಸೀತೆ—

ಕಯ್ಯಾರೆ । ಖಡ್ಗವ । ಕೊಟ್ಟು ತ । ನ್ನರಸಿಯ ।
ಹೊಯ್ಯೆಂದು । ಪೇಳದೆ । ಬರಿದೆ — ॥
ಒಯ್ಯನೆ । ಕಾಡೊಳು । ಬಿಟ್ಟು ಬಾ । ರೆಂದನೆ ।
ಅಯ್ಯಯ್ಯೊ । ರಾಮ ಕರು । ಣಾಳು— ॥ ೯೭ ॥

ರಾಮನ । ಭುವನಾಭಿ । ರಾಮನ । ಶರಣಸು ।
ಪ್ರೇಮನ । ಚರಣವ । ನಗಲಿ— ॥
ಈ ಮಹಾ । ಕಾಡೊಳು । ಇರುವದೆಂ । ತಯ್ಯಯ್ಯೋ ।
ರಾಮಾ ರಾ । ಮಾ ಯೆಂದ । ಳಬಲೆ— ॥ ೯೮ ॥

'ಕಾಡಿನೊ । ಳಗೆ ಹುಲಿ । ಯಿರುವ ಸು । ದ್ದಿಯ ಕೇಳಿ ।
ನಾಡಿಂದೊ । ಕ್ಕಲು ತೆಗೆ । ದಂತೆ' — ॥
ನಾಡಮಾ । ತನು ಕೇಳಿ । ಎನ್ನನೀ । ರೀತಿಯ ।
ಮಾಡಿದ । ನಲ್ಲ ಎ । ನ್ನರಸ— ॥ ೯೯ ॥

ಕಾಣಲಾ । ರದ ಪಗೆ । ಯವ[1]ರಿಗೆ[1] । ತಲೆಯಲ್ಲಿ ।
ಮಾಣಿಕ್ಯ । ವುಂಟೆಂದ । ರವನ—॥
ಪ್ರಾಣವ । ಕಳೆವಂತೆ । ಜಾಲಮಾ । ಡಿಗೆ ಯೆನ್ನ ।
ಪ್ರಾಣೇಶ । ತೊರೆದನೆ । ವಿಧಿಯೆ— ॥ ೧೦೦ ॥

ಪಟ್ಟ ಪ್ರ । ಮಾಣ ತಾ । ರ್ಕಣೆ ಸಾಕ್ಷಿ । ಚತುರ್ವಿಧ ।
ದೃಷ್ಟಧ । ರ್ಮಗಳು ರಾ । ಜ್ಯದಲಿ— ॥
ಭ್ರಷ್ಟರ । ನುಡಿಗೆನ್ನ । ತೊರೆದ ಇ । ನ್ನಿರುವುದು ।
ಕಷ್ಟಸಂ । ಸಾರ ಬಡ । ವರಿಗೆ— ॥ ೧೦೧ ॥

ವಚನ ॥ ಇಂತೆಂದು ಜಾನಕಿ ನುಡಿಯಲಾಗಿ ಲಕ್ಷ್ಮಣನು ಮನಸ್ಸಿನಲ್ಲಿ ನೊಂದುಕೊಂಡು ಮರುಗುತ್ತ ನಿಲಲು ವನಜಾಂಬಕಿ ಮತ್ತೇನೆಂದಳು ಎಂದರೆ—

೩೭ ರಾಗ ಆನಂದಭೈರವಿ—ಆದಿತಾಳ (ವಿಲಂಬಿತ)

,ಏಕೆ [2]ನಿಂ । ತಿರು[2]ವೆ ಲಕ್ಷ್ಮ । ಣ—ಕೋ । ಪಿಸುವನು ।
,ಕಾಕುತ್ಸ್ಥ । ನಿನ್ನ ಮೇ । ಲೆ—॥
,[3]ಸಾ[3]ಕು ತಾ । ನಾದರೂ ರಾ । ಮ—ಬ । ಳ್ಳಿತಾಗಿರಲಿ ।
,ರಾಕೇಂದು । ನಿಭವದ । ನ— ॥ ೧೦೨ ॥

,ವಲ್ಲಭ । ಗಿಂಥ ಮನ । ಸು—ಬಂ । ತಲ್ಲ ಹೀಗೆ ।
,ಕಲ್ಲೆದೆ । ಯಾ,ಯಿತ । ಲ್ಲ—॥

1 ರು ಈ (ಕಾ) 2 ಮರುಗು (ಕಾ) 3 ಕಾ (ಕಾ)

,ಕೊಲ್ಲದೆ । ಬಿಟ್ಟು ಪೋಪೆ । ಯಾ—ಈ । ಕಾಡಿನೊಳ।
,ಗೆಲ್ಲಿಗೆ । ಪೋಗಲಿನ್ನಾ । ನು— ॥ ೧೦೩ ॥

,ಕೌಸಲ್ಯೆ । ಸುಮ್ಮನಿದ್ದ । ಳೆ—ಸು । ಮಿತ್ರಾದೇವಿ ।
,ಈ [1]ಕೃತ್ಯ[1] । ಕೊಪ್ಪುಕೊಟ್ಟ । ಳೆ— ॥
,ಬಹು ಕಾಲ । ಇದ್ದ ಜಾಂಬ । ವ—ಹನು । ಮಂತ ಭಕ್ತ ।
,ತಾವ್ಕೇಳಿ । ಸುಮ್ಮನಿದ್ದ । ರೆ— ॥ ೧೦೪ ॥

,ಯಾರಿದ್ದು । ಏನ ಮಾಳ್ಪ । ರು—ಎ । ನ್ಧಣೆಯಲ್ಲಿ ।
,ಈ ರೀತಿ । ಬರೆದ ಮೇ । ಲೆ— ॥
,ಮೂರುಬಾ । ರಿಗು ಪೇಳಿ । ದ—ಮೇ । ಲೆ ಇನ್ನುಂಟೆ ।
,ಶ್ರೀರಾಮ । ಚಂ,ದ್ರ ನಾ । ಶೆ— ॥ ೧೦೫ ॥

ವಚನ ॥ ಇಂತೆಂದು ಜಾನಕಿಯು ಪೇಳಲಾಗಿ ಲಕ್ಷ್ಮಣನು ಏನೆಂದನು ಎಂದರೆ—

೩೮ ರಾಗ ತೋಡಿ—ಏಕತಾಳ ೪ (ಯಾಲಪದ)

ಲಕ್ಷ್ಮಣ—
ಅಂಬರ ಗೀ । ರ್ವಾಣಿ ವಾಣಿ ।
ಕುಂಭಿನೀದೇ । ವಿ ಕಲ್ಯಾಣಿ ।
ಶಂಭು ಕಮಲ । ಜೇಂದ್ರ ಗಣಪ । ರಾ—[2]ಮೂ । ಲೋಕಪಾಲ [2]।
ರೆಂಬ ಮುಖ್ಯ । ದೇವತೆಗಳಿ । ರ— ॥ ೧೦೬ ॥

ವನದೊಳಿಪ್ಪ । ಮುನಿಗಳಿರ ।
ವನಿತೆ ಸೀತೆ । ಇಹಳು ಜೋಕೆ ।
ಎನುತ ಕೈಯ । ಮುಗಿದು ತಿರುಗಿ । ದ—ದಿ । ಕ್ಪಾಲಕರಿಗೆ ।
ಮಣಿದು ಕಾವ । ಕರುಣೆ ಕೇಳಿ । ದ— ॥ ೧೦೭ ॥

(ಲಕ್ಷ್ಮಣನ ನಿಷ್ಕ್ರಮಣ)

೩೯ ವಾರ್ಧಿಕಷಟ್ಪದಿ

..........................................

1 ಕೆಲಸ (ಅ) 2 ದೇವಾದಿದೇವ (ಅ,ಕಾ)

ಇಂತೆಂದು ಸಕಲಸುರರಿಂಗೆರಗಿ ಲಕ್ಷ್ಮಣಂ
ತಾಂ ತಿರುಗಿದಂ ಪುರಕೆ, ಕಂಡು ಜಾನಕಿ ಬಳಿಕ
ಸಂತಾಪದಿಂ ಕೂಗಿದಳು ಹಲುಬುತೊರಲಿದಳು ಕಲ್ಮರಂ ಕರಗುವಂತೆ ॥ ೧೦೮ ॥

೪೦ ರಾಗ ನೀಲಾಂಬರಿ—ಅಷ್ಟತಾಳ ೧

ಸೀತೆ—

ವನದೊಳ । ಗಿರಲು ನಾ । ಹಿಂದೆ— । —ಎನ್ನ ।
ದನುಜನೊ । ಯ್ಯಲು ಕೂಡೆ । ಬಂದೆ—॥
ಕ್ಷಣದೊಳ । ಗಸುರರ । ಕೊಂದೆ— । —ಬಿಡೆ ।
ನೆನುತ ಸ । ತ್ಯವ ಮಾಡಿ । ತಂದೆ— ॥ ೧೦೯ ॥

ಅರಿತು ನೀ । ಸುಖದೊಳ । ಗಿರದೆ— । —ಎನ್ನ ।
ನೆರೆದ ಕಾ । ಡೊಳು ಬಿಟ್ಟು । ಬರಿದೆ—॥
ಕರಗದೆ । ಮನಸಯ್ಯ । ನಿನಗೆ— ।—ಎನ್ನ ।
ಮರೆತೆಯಾ । ಗತಿ ಯಾರಿ । ನ್ನೆನಗೆ— ॥ ೧೧೦ ॥

ಬಲುಬಲು । ಗುಣಗಳು । ಳ್ಳವನೆ ।—ಜಗ ।
ವುಳುಹಿದ । ಲಕ್ಷ್ಮೀ, । ಧವನೆ— ॥
ಸುಲಲಿತ । ರೂಪ ಕೇ । ಶವನೆ — । —ನಾ ।
ಬಳಲುವೆ । [1]ನ್ನೈ ಪರ[1] । ಶಿವನೆ— ॥ ೧೧೧ ॥

೪೧ ರಾಗ ನಾದನಾಮಕ್ರಿಯೆ—ಅಷ್ಟತಾಳ ೧

ಸೀತೆ ಹೀ । ಗೆಂದು ಕೂ । ಗಾಡುತ್ತ । —ಭೂತ ।
ನಾಥನ । ದೆಸೆಗೆಂದು । ನೋಡುತ್ತ ॥
ಭೂತಳ । ದೊಳು ಬಿದ್ದ । ಳ್ಕಾಣದೆ । —[2]ನ್ಮೈಯೊಳ್ ।
ಧಾತುಗುಂ । ದುತ ಕಡೆ । ಗಾಣ[2]ದೆ ॥ ೧೧೨ ॥

---

1 ಕಾಯೊ ಏ (ಕಾ) 2 ತನ್ನ । ಧಾತುಗೆಟ್ಟಳು ಕಣ್ಣು ಕಾಣ (ಓ)

## ಕುಶಲವರ ಜನನ

ಕಂಡು ಚ | ಮರಿಮೃಗ | ಬೀಸುತ್ತ | —ಗಿಳಿ |
ವಿಂಡು ತ | ಳಿರ ತಂದು | ಹಾಸುತ್ತ ||
ಹಿಂಡುಪ | ಕ್ಷಿಗಳು ಸಂ | ವರಿಸುತ್ತ | —ದೇವಿ |
ಪುಂಡರೀ | ಕಾಕ್ಷನ | ನೆನೆಯುತ್ತ || ೧೧೩ ||

ಬಿಸಿಲಿನ | ಥಗೆ ಮೈಗೆ | ಬೀಳುತ್ತ | —ಬಿದ್ದು |
ಕೊಸರುಗೊಂ | ಡೆದ್ದು ಮು | ತ್ತೇಳುತ್ತ ||
ಉಸುರದಂ | ದದಿ ಭಯ | ತಾಳುತ್ತ | —ರಾ |
ಕ್ಷಸರ ಬೊ | ಬ್ಬೆಗಳನ್ನೆ | ಕೇಳುತ್ತ || ೧೧೪ ||

ಕೂಗುತಿ | ರಲು ಸೊಲ್ಲು | ಸೊಲ್ಲಿಗೆ | —ಬಂದ |
ನಾಗ ವ | ಲ್ಮೀಕಮುನಿ | ಯಲ್ಲಿಗೆ ||
ಯಾಗಸ | ನ್ನಹಗಳ | ನರಸುತ್ತ | —ಕಂಡು |
ನಾಗವೇ | ಣಿಯ [1]ಮೆಲ್ಲ[1] | ನುಡಿಸುತ್ತ || ೧೧೫ ||

(ವಾಲ್ಮೀಕಿಮುನಿಯ ಪ್ರವೇಶ)

೪೨ ರಾಗ ಘಂಟಾರವ—ಜಂಪೆತಾಳ ೨

ವಾಲ್ಮೀಕಿ—

ಅಮ್ಮ ಕೇ | ಳಂಜದಿರು | ಅಳುವುದೇ | ತಕೆ ನೀನು |
ನಿಮ್ಮ ರಾ | ಜ್ಯಗಳೆಲ್ಲಿ | ನೀನಾರ | ಮಗಳು || ೧೧೬ ||

ಮಾತೆ ಕೇ | ಳ್ನೀನಾವ | ಭೂತಳಾ | ಧಿಪನರಸಿ |
ಏತಕೋ | ಸ್ಕರ ಬಂದೆ | ಈ ತಪೋ | ವನಕೆ || ೧೧೭ ||

ಕಾಂತೆ ನಿ | ನ್ನನು ಹಿಂದೆ | ಕಂಡ ಹೊಲ | ಬಿದೆ ಮುಂದೆ |
ಚಿಂತೆಬಿಡು | ವಾಲ್ಮೀಕಿ | ಎಂದೆನ್ನ | ಪೆಸರು || ೧೧೮ ||

ಆಪತ್ತು | ಬಂದಾಗ | ಅತಿಧೈರ್ಯ | ವಿರಬೇಕು |
ಈಪಾಟ | ಕೂಗುವರೆ | ಈ ಕಾಡಿ | ನೊಳಗೆ || ೧೧೯ ||

ನಯದಿಂದ | ವಾಲ್ಮೀಕಿ | ನಂಬಿಕೆಯ | ಮಾತಾಡೆ |
ಭಯದಿಂದ | ಪೇಳಿದಳು | ಬಲ್ಲಮುನಿ | ಯೊಡನೆ || ೧೨೦ ||

---

1 ಬೇಗ (ಕಾ)

೪೩ (ಸಾಂಗತ್ಯ) ರಾಗ ತೋಡಿ—ರೂಪಕತಾಳ ೧

ಸೀತೆ—

ದಶರಥ | ನೃಪತಿಗೆ | ಸೊಸೆಯಾಗ | ಬೇಕೆನ್ನ |
ಪೆಸರು ಜಾ | ನಕಿಯೆಂಬ | ರೆಲ್ಲ— ||
ಯಶವಂತ | ರಾಮನ | ರಾಣಿಯ | ಯೋಧ್ಯಾ, |
ದೆಸೆಯನಾ | ಳುವನೆನ್ನ | ರಮಣ — || ೧೨೧ ||

ಇರಲೊಂದು | ದಿನ ನಡು | ವಿರುಳು ಪ | ಟ್ಟಣದೊಳು |
ತಿರುಗಲು | ರಜಕನ | ಮನೆಯು— ||
ತರುಣಿಪು | ರುಷರು ತ | ವ್ಮೊಳಗೆ ಕೊಂ | ದಾಟದಿಂ |
ದರುಹಿದ | ರೇನೋ ನಾ | ನರಿಯೆ || ೧೨೨ ||

ಮರುದಿನ | ದುದಯದಿ | ಅನುಜನ | ಕರೆದು ನಾ |
ನರಿಯದಂ | ದದಿ ನೇಮ | ವಿತ್ತ— ||
ತರಳೆಯ | ಕಾಡೊಳು | ಬಿಟ್ಟು ಬಾ | ರೆಂದೆನೆ |
ಕರೆತಂದ | ಸೌಮಿತ್ರಿ | ನಿನ್ನೆ— || ೧೨೩ ||

ಈ ದಡ | ದಲಿ ಬಿಟ್ಟು | ಹೋದ ಲ | ಕ್ಷ್ಮಣನಿನ್ನು |
ಹಾದಿಯ | ಕಾಣದೆ | ಮುಂದೆ—||
ಹೇ ದಯಾ | ನಿಧಿ ನಿನ್ನ | ಪಾದವ | ಕಂಡೆ ಇ |
ನ್ನಾದರೂ | ಕಾಯಬೇ | ಕೆನ್ನ— || ೧೨೪ ||

ವಿಷವ ಕು | ಡಿದು ಸಾವೆ | ನೆಂದರೆ | ಈಗೆನ್ನ |
ಬಸುರಿಗಾ | ಯಿತು ತಿಂಗ | ಳಾರು— ||
ವಶವಿಲ್ಲ | ದಿಂತು ಜೀ | ವಿಸುವಂಗ | ಕಾಣೆಂದು |
ಶಶಿಮುಖಿ | ಬಿದ್ದಳಂ | ಭ್ರಿಯಲಿ— || ೧೨೫ ||

೪೪ ರಾಗ ಸೌರಾಷ್ಟ—ತ್ರಿವುಡೆತಾಳ ೨

ವಾಲ್ಮೀಕಿ—

ಏಳು ಚಿಂತಿಸ | ಬೇಡ ಜಾನಕಿ |
ಕೇಳಿದೆನ್ನೀ[1] | ಮಾತ ಲಾಲಿಸು |
ಲೋಲಲೋಚನೆ | ಅಂಜಿಕೆಯ ಬಿಡು | ಪಾಲಿಸುವೆನು || ೧೨೬ ||

---

1 ಳು ತನ್ನಯ (ಕಾ)

ಮುಗುದೆ ಕೇಳಾ । ಬೇರೆ ಮನದಲಿ ।
ಬಗೆಯದಿರು ವಾ । ಲ್ಮೀಕಿ [1]ಮುನಿ[1]ನ ।
ಮ್ಮಗಣಿತಾಶ್ರಮ । ದೊಳಗೆ ಬಂದಿರು । ಮಗಳು ನಮಗೆ ॥ ೧೨೭ ॥

೪೫ ರಾಗ ಗೌಳಮುಲಹರಿ—ಏಕತಾಳ ೩

ನಂಬಿಕೊಳ್ಳೆ । ನಂಬಿಕೊಳ್ಳೆ । ನಾರಿ ಕೇಳ । ವ್ವ— ।
ಹಂಬಲಿಸ । ದಿರಲೆ ಮರಿ । ದುಂಬಿಗುರು । ಳವ್ವ ॥ ೧೨೮ ॥

ಠಕ್ಕಿನ ಮಾ । ತಲ್ಲ ಕೇಳೆ । ಚಿಕ್ಕ ಪ್ರಾಯ । ದವ್ವ— ।
ಅಕ್ಕರಿಂದಿ । ಬ್ಬರು ಸಣ್ಣ । ಮಕ್ಕಳಾಹ । ರವ್ವ— ॥ ೧೨೯ ॥

ಪುತ್ರರಾದ । ಮೇಲೆ ನೀವಿ । ನ್ನಿತ್ತ ಕೇಳಿ । ರವ್ವ—।
ಮತ್ತೆ ರಾಮ । ಚಂದ್ರದೇವ । ನೊತ್ತಿಲಿರ್ಪೆ । ಯವ್ವ— ॥ ೧೩೦ ॥

ಇಕ್ಕೊ ದೂರ । ವಿಲ್ಲ ನಮ್ಮಾ । ಶ್ರಮಕೆ ನೀ ಬಾ । ರವ್ವ—।
ಮುಕ್ಕಣ್ಣನಾ । ಣೆಗೂ ಬೇರೆ । ಲೆಕ್ಕಿಸದಿ । ರವ್ವ— ॥ ೧೩೧ ॥

೪೬ ವಾರ್ಧಿಕಷಟ್ಪದಿ

ವಾಲ್ಮೀಕಿ—

ಹೊಡೆದ ಮಳೆನೀರ ಹೊಳೆಯಲಿ ಮುಳುಗಿ ಸಾವವನ
ಹಿಡಿದೆತ್ತಿ ಜೀವವನು ಕಾಯ್ದಂತೆ ವಾಲ್ಮೀಕಿ
ನಡುಗುತಿಹ ಜಾನಕಿಯ ಕರೆತಂದನೊಡನಿರ್ದ ತಾಪಸೋತ್ತಮರು ಸಹಿತ ।
ಕಡುಪತಿವ್ರತೆ ಜಗಜ್ಜನನಿ ತನ್ನಾಶ್ರಮಕೆ
ನಡೆತಂದಳಿನ್ನು ಪಾವನನಾದೆ ತಾನೆಂದು
ಬಿಡದಿತ್ತ ಪರ್ಣಶಾಲೆಯ ಕಟ್ಟ ಸಜ್ಜನರಿಗಡವಿಯೇ
ಮನೆಯಾಹುದು ॥ ೧೩೨ ॥

೪೭ ರಾಗ ನಾದನಾಮಕ್ರಿಯೆ (ಯಾಲಪದ) —ಏಕತಾಳ ೩

ಸೀತೆ—

ಬೆಳಗಾಗುತ್ತ । ಲೇ ಏಳುವಳು ।
[2]ನಳಿನಮಿತ್ರ । ಗೊಂದಿಸು[2]ವಳು ।

---

1 ನಾ (ಕಾ) 2 ಹೊಳೆಯಲ್ಲಿ ಮಿಂದು ಬರು (ಕಾ)

ಜಲಜಪುಷ್ಪ । ಗಳನೆ ಕ್ರೊಯ್ವ । ಳು—ಆ । ಹೂವ ಮುನಿ ।
ಗಳ ಪಾ,ದ । ಕರ್ಪಿಸುವ । ಳು— ॥ ೧೩೩ ॥

ಮೂರು ಪ್ರದ । ಕ್ಷಿಣೆ ಗೈವಳು ।
ಮೀರಿ ಭಕ್ತಿ । ಭಾವದೊಳು ।
ಸೇರಿ ಮತ್ತೆ । ಪರ್ಣಾಶ್ರಮದೊ । ಳು— । ಕುಳಿತುಕೊಂಡು ।
ಶ್ರೀರಾಮನ । ಧ್ಯಾನ ಮಾಳ್ಪಳು— ॥ ೧೩೪ ॥

ರಾಮ ಶ್ರೀ ರಾ । ಮಾಯೆನ್ನುತ್ತ ।
ರಾಮನಾಮ । ಕೊಂಡಾಡುತ್ತ ।
ನೇಮದಿಂದ । ದಿನವ ಕಳೆಯ । ಲು—ಜಾ । ನಕಿಗಿಂತು ।
ನೌಮಾ,ಸ । ತುಂಬಿದ್ದಾಯಿ । ತು— ॥ ೧೩೫ ॥

೪೮ ರಾಗ ವರಾಳಿ—ಏಕತಾಳ ೪

ಅಂಗನೆ ಸೀ । ತೆಗೊಂಭತ್ತು । ತಿಂಗಳಾಯಿ । ತು—ಕೋಮ ।
ಲಾಂಗಿಗೆ ಸಂ । ತಾಪ ಹೆಚ್ಚಿ । ಮುಂಗಾಣಿಸಿ । ತು— ॥ ಪಲ್ಲವಿ ॥

ಸುತ್ತಮುತ್ತ । ಲಿರುವ ಮುನಿ । ಪತ್ನಿಯರೆ । ಲ್ಲ—ಕೂಡಿ ।
ಮತ್ತಗಜ । ಗಮನೆಯ ಆ । ಪತ್ತ ನೋಡು । ತ್ತ— ॥
ಮತ್ತದಕ್ಕೆ । ಬೇಕಾದಂಥ । ವಸ್ತುಗಳೆ । ಲ್ಲ—ತರಿಸಿ ।
ಸುತ್ತಲು ಭೂ । ಜಾತೆಯ ಕಾ । ಯುತ್ತಲಿರ್ದ । ರು— ॥ ೧೩೬ ॥

ನಾರಿಯು[1]ರ । ತ್ತಿತ್ತ ಸುಳಿವ । ಕಾರಣ ಕಂ । ಡು[1]— ಮುನಿ ।
ಬೇರೇನಿನ್ನಾ । ಹುದೊ ಯೆಂದು । ಬೆದರುತಿರ್ದ । ನು— ॥
ನಾರಾಯಣನೆ । ಗತಿ ಎನ್ನುತ್ತ । ವಾಲ್ಮೀಕಿ ತಾ । ನು—ಮತ್ತೆ ।
ಮೂರು ದಿನದಿ । ಹಗಲೂ ಇರುಳೂ । ಕಾಯುತಿದ್ದ । ನು— ॥ ೧೩೭ ॥

೪೯ ವಾರ್ಧಿಕಷಟ್ಪದಿ

ಮಂದಗಾಮಿನಿ ಸೀತೆ ಶುಭಲಗ್ನ ಶುಭತಿಥಿಯೊ
ಳೊಂದಿರುಳು ಪಡೆದಳಿಬ್ಬರು ಕುಮಾರಕರ ಸುರ
ದುಂದುಭಿಯು ಮೊಳಗಿತಾಕಾಶದಲಿ ಸುರರು ಜಯವೆಂದು
ಪೂಮಳೆಗರೆಯಲು ।

1 ರು ಮತ್ತತ್ತಿತ್ತ ತಿರುಗುವ ಕಾರಣ—ಕಂಡು (ಕಾ)

ಮುಂದೆ ರವಿಕುಲದ ಜೆಳೆ ಹಸನಾಯ್ತು ರಘುವಂಶ
ಸಿಂಧುಚಂದ್ರಮು[1]ರೊ[1] ಜಾನಕಿಯ ಪುಣ್ಯಾಂಕುರದ
ಬಂಧುರವೊ ಎಂದು ತೋರಿತು ನೋಳ್ಪವರ ಕಣ್ಮನಕ್ಕೆ
ಬೆಳಗಿದರಿರ್ವರು || ೧೩೮ ||

೫೦ ರಾಗ ಕಾಂಭೋಜಿ —ಏಕತಾಳ ೪

ವಾಲ್ಮೀಕಿ—
ಹೆತ್ತ ಮಕ್ಕಳ | ಬಾಳಂತಿಗೆ | ಹತ್ತು ರಾತ್ರಿ | ಯಾದಮೇಲೆ |
ಚಿತ್ತೈಸಿ ವಾ | ಲ್ಮೀಕಿ ಮುನಿ | ಪೋತ್ತಮನಂ | ದು— ||
ಶಾಸ್ತ್ರವಿಧ | ದುತ್ತಮ ಪು | ಣ್ಯಾರ್ಜನೆಯ | ಮಾಡಿ ಮಂತ್ರ |
ಯುಕ್ತದಿಂದ | ಕಾರ್ಯಂಗಳ | ವಿಸ್ತರಿಸಿ | ದ— || ೧೩೯ ||

ಸೋಮ ಸೂರ್ಯ | ರಂತಿಪ್ಪ ಸ | ತ್ಕೋಮಲಾಂಗ | ರಿರ್ವರಿಗೆ |
ಪ್ರೇಮದಿ ಕು | ಶಲವರೆಂದು | ನಾಮವಿಟ್ಟ | ನು— || ೧೪೦ ||

ಆ ಕುಮಾರ | ರಿಬ್ಬರ ಶು | ಭ,ಕರಣ | ಗಳನೆ ನೋಡಿ |
ತಾ ಕರುಣಿಸಿ | ಸೀತೆಗೆ ವಾ | ಲ್ಮೀಕಿ ಪೇಳಿ | ದ— ||
ಕೋಕಿಲಸು | ವಾಣಿ ಕೇಳ್ನಿ | ನ್ನೀ ಕುಮಾರ | ರಿಬ್ಬರು ಭೂ |
ಲೋಕದೊಳು | ಜಾಣರೆನ್ನಿ | ಸಿಕೊಂಡಿರ್ಪ | ರು— || ೧೪೧ ||

ಸೃಷ್ಟಿಜಾತೆ | ನಿನ್ನ ಮಕ್ಕಳ್ | ಪುಟ್ಟಿದ ಲ | ಗ್ನದ ಗುಣದಿ |
ಅಷ್ಟದಿಕ್ಪಾ | ಲಕರಿಂದಲೂ | ಶ್ರೇಷ್ಠರೆನ್ನಿ | ಸಿ— ||
ಕಷ್ಟದಿಂದ | ತಂದೆಮಕ್ಕ | ಳ್ಗಿಷ್ಟವಾಗಿ | ಮುಂದಯೋಧ್ಯಾ |
ಪಟ್ಟಣವಾ | ಳ್ವರು ಕೇಳವ್ವ | ದೃಷ್ಟಾಂತವಿ | ದು— || ೧೪೨ ||

ವಚನ || ಈ ರೀತಿ ವಾಲ್ಮೀಕಿ ಮುನಿಪತಿಯು ಬಾಲರಿಂಗೆ ನಾಮಕರಣವಂ ಮಾಡೆ ಸುರನಾರಿಯರು ತೊಟ್ಟಿಲೊಳಿಕ್ಕಿ ತೂಗಿ ಪಾಡಿದರದೆಂತೆನೆ —

೫೧ ಜೋಗುಳಪದ—ಅಟತಾಳ ೩

ಜೋ ಜೋ, | ಜೋ ಜೋ, | ಜೋ ಜೋ, | ಎನುತ— |
ಜೋಗುಳ | ವನು ಪಾಡಿ | ದರು ಸತಿ | ಸಹಿತ || ೧೪೩ ||

---

1 ನ (ಕಾ)

ಜೋ ಜೋ, । ಬಾಲಕ । ರೊಳು ಹೊಸ । ರನ್ನ— ।
ಜೋ ಜೋ, । ರಘುಕುಲ । ತಿಲಕ ಮೋ । ಹನ್ನ— ॥ ೧೪೪ ॥

ಜೋ ಜೋ, । ಶ್ರೀರಾಮ । ಚಂದ್ರಕು । ಮಾರ— ।
ಜೋ ಜೋ, । ದಶರಥ । ರಘುಕುಲೋ । ದ್ಧಾರ— ॥ ೧೪೫ ॥

ಜೋ ಜೋ, । ಲವಬಾಲ । ಗುಣಗಣ । ಶೀಲ— ।
ಜೋ ಜೋ, । ಕುಶತನು । ಜನೆ ಗುಣ । ಲೀಲ— ॥ ೧೪೬ ॥

ಜೋ ಜೋ, । ಕುಶಲವ । [1]ರ್ಹಿಂದೋಲಾ । ಡು[1]ತ್ತ— ।
ಜೋಡೆಯ । ರೆಲ್ಲ ತೂ । ಗಿದರು ಪಾ । ಡುತ್ತ— ॥ ೧೪೭ ॥

೫೨ ದ್ವಿಪದಿ

ಮೊಲೆಹಾಲನುಣುತಿರುವ ಮಕ್ಕಳಿರ್ವರಿಗೆ ।
ಹಲವು ಮಿಗಲಾ ದಿವಸ ವರುಷ ನೆಲೆಯಾಗೆ ॥ ೧೪೮ ॥

ಸೀತೆ—

ತಪಸಿನಾಶ್ರಮದೊಳಗೆ ತನೆಯರಿರೆ ಕಂಡು ।
ಚಪಲಾಕ್ಷಿ ಮನದೊಳಗೆ ಚಿಂತಿಸುವಳೆಂದು ॥ ೧೪೯ ॥

ಪರದೇಶಿ ಸುತರಿವರ ಪಾಪವೇ ಎಂದು ।
ತರಳೆ ದುಃಖಿಸೆ ಮುನಿಪ ತಾ ತಿಳಿದನೆಂದು ॥ ೧೫೦ ॥

ವಾಲ್ಮೀಕಿ—

ಸುರಪುರಕೆ ಕಳುಹಿದನು ಶಿಷ್ಯರನು ಬೇಗ ।
ಸುರತರಳರಾಭರಣಗಳ ತಂದರಾಗ ॥ ೧೫೧ ॥

ಮಕುಟದರಳೆಲೆ ಮುತ್ತು ಮತ್ತದರ ಸುತ್ತೂ ।
ಅಖಿಲ ರತ್ನಾದಿಗಳು ಹದರೊಳಿರುತಿತ್ತು ॥ ೧೫೨ ॥

---

1 ರೆಂದು ಕರೆಯು (ಕಾ)

ಕಾಲಲಂದುಗೆ ಗೆಜ್ಜೆ ಕಡಗ ಕೈಬೆರಳ ।
ಸಾಲಾದ ಉಂಗುರವು ಸರಪಣಿಯು ಕೊರಳ ॥ ೧೫೩ ॥

ಹುಲಿಯುಗುರು ಒಡ್ಯಾಣ ಹೂವಿನಂಗಿಗಳ ।
ಬಲು ಪ್ರಕಾಶದೊಳಿರುವ ಬಹುಭೂಷಣಗಳ ॥ ೧೫೪ ॥

ತೊಡಿಸಿದನು ಮಕ್ಕಳಿಗೆ ತಕ್ಕ ವಸ್ತುಗಳ ।
ಉಡಿಸಿದನು ಮುನಿರಾಯ ಉಡುವ ಪಟ್ಟಿಗಳ ॥ ೧೫೫ ॥

೫೩ ರಾಗ ಶಂಕರಾಭರಣ—ಮಟ್ಟೆತಾಳ ೩

ಸೀತೆ—

ಕಂಡು ಸೀತೆ । ಹರ್ಷವಾಂತ । ಳು— ।
ಪುಂಡರೀಕ । ವದನೆ ತನ್ನ । ಮಕ್ಕಳಾ, । ಚೆಲುವಿಕೆಯನು ॥ ಪಲ್ಲವಿ ॥

ಶಶಿಯ ಪೋಲ್ವ ! ಮುದ್ದುಮುಖದೊ । ಳೆಸೆವ ಕದಪಿ । ನಲ್ಲಿ ಹೊಳೆವ ।
ಮಿಸುಪ ಕರ್ಣ । ಕುಂಡಲಂಗ । ಳೆಸೆದು ಜೋಲು । ತ— ॥
ಕುಸುಮಶರನ । ಬಾಣವೆರಡು । ಶಿಶುಗಳಾಯ್ತೊ । ಚೆಲುವ ಬ, ।
ಣ್ಣಿಸುವೊಡರಿದು । ಕುಶಲವರ ಸಂ । ತಸದಿ ಬರುವ । ಮಕ್ಕಳನ್ನು ॥೧೫೬॥

ಗೆಜ್ಜೆ ಕಾಲಂ । ದುಗೆಗಳುಲಿಯೆ । ಪ್ರಜ್ವಲಿಪ ಮಾ । ಗ್ಯಾಗಳೊಲೆಯೆ ।
ವಜ್ರದ ಕೆ । ತ್ತಿಗೆಯ ಮುಕುಟ । ಶಿರದೊಳೆಸೆಯ । ಲು— ॥
ಸಜ್ಜನರೆದೆಯ । ಮಣಿಗಳೊ ಬಲು । ದುರ್ಜನರೆದೆಗೆ । ಕಣೆಗಳೊ ಎನೆ ।
ಲಜ್ಜೆಯಿಂದ । ಒಲೆದು ನಲಿದು । ಹೆಜ್ಜೆಯಿಡುವ । ಮಕ್ಕಳನ್ನು ॥ ೧೫೭ ॥

೫೪ ರಾಗ ಭೈರವಿ—ಜಂಪೆತಾಳ ೧

ವಾಲ್ಮೀಕಿ—

ಮೂರು ವರು । ಷದ ಮೇಲೆ । ಮುದದಿಂದ । ಮಕ್ಕಳಿಗೆ ।
ಹೇರಂಬ । ನಕ್ಕರವ । ನಾರಂಭಿ । ಸಿದನು— ॥ ೧೫೮ ॥

ಬರಹವೆ । ಲ್ಲವ ಕಲಿತು । ಬಂದ ಮ । ಕ್ಕಳ ನೋಡಿ ।
ಗುರು ವೇದ । ಶಾಸ್ತ್ರಗಳ । ಗುಣದಿ ಕಲಿ । ಸಿದನು— ॥ ೧೫೯ ॥

ಸಂಗೀತ । ವಿದ್ಯೆಯನು । ಸಾಧಿಸುತ । ಪಾಡಿದರು ।
ವಿಂಗಡಿಸಿ । ನುಡಿಸಿದರು । ವೀಣೆಗಳ । ಸ್ವರವ— ॥ ೧೬೦ ॥

ಆ ಮುದ್ದು । ಮಕ್ಕಳಿಗೆ । ಅರ್ತಿಯಲಿ । ವಾಲ್ಮೀಕಿ ।
ರಾಮಾಯ । ಣದ ಕವಿತೆ । ಸಾಮದಲಿ । ಕಲಿಸಿ— ॥ ೧೬೧ ॥

ವಚನ ॥ ಇಂತು ಸಕಲ ವಿದ್ಯೆಯಂ ಕಲಿತಂಥವರಾಗಿ ಕುಶಲವರು ಒಂದಾನೊಂದು ದಿನ ಮುನಿಯೆಡೆಗೆ ಬಂದು ಏನೆಂದರು ಎಂದರೆ—

(ಕುಶಲವರೊಡನೆ ವಾಲ್ಮೀಕಿಯ ಪ್ರವೇಶ)

೫೫ ರಾಗ ವರಾಳಿ—ಏಕತಾಳ ೨

ಕುಶಲವರು—

ಜಯ ಜಯಾ ಮ । ಹಾ— । ಮುನಿವರೇ । ಣ್ಯಾ—ಪಾಹಿ ।
ಭಯವಿನಾಶ । ನ— । ಅಗ್ರಗ । ಣ್ಯಾ— ॥ ಪಲ್ಲವಿ ॥

ಬುದ್ಧಿವಂತ । [1]ರು—ನಾ । ವಾದೆವ । ಯ್ಯ[1]—ಬಿಲ್ಲು ।
ವಿದ್ಯೆಯ— । ಕಲಿಸಬೇಕು । ಎಮಗೆ ನೀ । ವು— ॥ ೧೬೨ ॥

ಬೇಟೆಗೆ— । ಪೋಪ ಮಕ್ಕ । ಳಿಲ್ಲ ಕಂ, । ಡು—ನಗೆ ।
ಪಾಟ ಮಾಳ್ಪ । ರಯ್ಯ ನಮ್ಮ । ಹೆಡ್ಡರೆಂ, । ದು— ॥ ೧೬೩ ॥

ಕರುಣಿಸಿದಿ । ರಿ—ವಿ । ದ್ಯೆಗಳನೆ, । ಲ್ಲ—ನಮ್ಮ ।
ಗುರುವೆ ನಿಮ್ಮ । ಕರುಣೆಗಿನ್ನು । ಎರಕವಿ, । ಲ್ಲ— ॥ ೧೬೪ ॥

ಸಣ್ಣವರ । ಯ್ಯ—ನಿಮಗೆ । ಬಿಲ್ಲುವಿ— । ದ್ಯ— ।
ಬಣ್ಣವ, । ಲ್ಲೀಗ ಕೇಳಿ । ರಪ್ಪಗಳಿ । ರ— ॥ ೧೬೫ ॥

(ಸೀತೆಯ ಪ್ರವೇಶ)

೫೬ ರಾಗ ಕಾಂಭೋಜಿ—ಏಕತಾಳ ೪

ವಾಲ್ಮೀಕಿ—

,ನೋಡು ಜಾ । ನಕಿ ಮ ।, ಕ್ಕಳು ಬಿಲ್ಲು । ವಿದ್ಯವ ।
,ಗಾಢದಿ । ಕಲಿಸೆಂದು ।, ಕಾಡುತ್ತ । ಲಿಹರೆಂದು ॥ ೧೬೬ ॥

---

1 ರಾದೆವಯ್ಯ । ನಾವು—ನ । ಮಗೆ (ಕಾ)

,ಚೆಲುವ ಬಾ । ಲಕರಿವರು ।, ಬಲವಂತ । ವಾಗಿಹ ।
,ಕಲಿಗಳೆ । ದುರು ನಿಂತು ।, ಕಾದಿ ಕೊ । ಲ್ಲುವರೆಂತು ॥ ೧೬೭ ॥

,ಸುಲಭವ । ಲ್ಲೆನಲಿಂದು ।, ಛಲಮಾಡು । ವರು ಬಂದು ।
, ಹುಲಿಮರಿ । ಗಳು ಹೊಲ । ಹುಲ್ಲ,ಮೇ । ಯುವವೆ ಹೇಳು ॥ ೧೬೮ ॥

೫೭ ಭಾಮಿನಿಷಟ್ಪದಿ

ಆಗಲಾ ಮುನಿಯೆಂದ ವಚನವ
ನಾಗವೇಣಿಯು ಕೇಳ್ದು ಪ್ರೇಮದಿ
ಯೋಗಿಮುನಿಪತಿಗೆರಗಿ [1]ಮಕ್ಕಳ ನೋಡಿ ನಗುತಿರಲು[1] ।
ಆಗದಾಗದು ಗುರುವೆನುತ ತಲೆ
ವಾಗಿ ಸೀತೆಯು ಕರೆದು ಮೆಚ್ಚಿಸ
ಲಾಗ ಮಕ್ಕಳಿಗೆಂದಳಬಲೆ ವಿವೇಕಮಾರ್ಗಗಳ ॥ ೧೬೯ ॥

೫೮ ರಾಗ ಪಂತುವರಾಳಿ—ಮಟ್ಟೆತಾಳ ೨

ಸೀತೆ—

ಸದರವಲ್ಲ । ಬೇಟೆ ಮಕ್ಕಳಿ । ರ— ಸ । ಣ್ಣವರು ನಿಮಗೆ ॥ ಪಲ್ಲವಿ ॥

ಸದರವಲ್ಲ । ಬೇಟೆ ನಿಮಗೆ । ಯದರ ತಳ್ಳಿ । ಬೇಡ ನಮಗೆ ।
ಚದುರರ್ನೀವು । ಚಿಣ್ಣರು ಮುನಿ । ಪದದ ಸೇವೆ । ಮಾಡುತ— ॥
ಮುದದಿ ವೇದ । ಶಾಸ್ತ್ರ ಪೌರಾ । ಣದ ಸುಗೀತಿ । ರಾಜ್ಯನೀತಿ ।
ಯದನು ತಿಳಿದು । ಮೇಲೆ ನಾನಾ । ಯುಧದ ವಿದ್ಯೆ । ಕಲಿಯಿರಪ್ಪ॥೧೭೦॥

ಕಾಡಿನೊಳಗೆ । ಬಹಳ ಕರಡಿ । ಸಿಂಹ ಶಾ, । ರ್ದೂಲ ಹಂದಿ ।
ಕಾಡುತಿಹವು । ವಿಷಸರ್ಪಗ । ಳಾಡಿ ಕೂಡಿ । ಬೆದರಿಸುವವು ।
ಮೂಢರ, । ಕ್ಕಸರು ಮನೆಯ । ಮಾಡಿರುವರು । ಕಂಡ ಜನರ ।
ಪೀಡಿಸುವರು । ಸಟೆಮಾತಲ್ಲ । ಕೇಡು ಬಪ್ಪು । ದು, ಮಕ್ಕಳಿರ ॥ ೧೭೧ ॥

---

1 ಪೇಳ್ದಳು ಭಾವ ಭಕ್ತಿಯಲಿ (ಕಾ)

ಕುಶಲವರು—

ಸೀತೆ ಜೀಡ | ವೆಂದು ಪೇಳ್ದ | ಮಾತ ಕೇಳ | ದೆ— | ಮುನಿ |
ನಾಥನಡಿಗೆ | ನಮಿಸಿ ಧನುವ | [1]ಚಾತುರ್ಯದಿ[1] | ಪಿಡಿಯುತ— |
ಆತು ಶರವ | ತೊಡುವ ಬಿಡುವ | ರೀತಿ [2]ಕ್ಷಣದಿ[2] | ಕಲಿಯುತಾ ಕಿ |
ರಾತಮಕ್ಕ | ಳೊಡನೆ ಮೃಗ | ವ್ರಾತವನ್ನು | ಸದೆದರಾಗ || ೧೭೨ ||

೫೯ ಭಾಮಿನಿಷಟ್ಪದಿ

ಹುಲಿ ಕರಡಿ ಶಾರ್ದೂಲ ಸಿಂಹ
ಜ್ವಲಿತಗಜ ಕಾಡ್ಕೋಣ ಹಂದಿಯ
ಬಳಗವನು ಎಸೆದೆಸೆದು ಮೃಗಜಾತಿಗಳ ಸಂಹರಿಸಿ |
ನಲಿದು ಬಹರಾಶ್ರಮಕೆ ಈ ಪರಿ
ಕಳೆಯುತಿರಲೊಂದು ದಿನ ವರುಣನು
ಕಳುಹಿದೋರ್ವನು ಬಂದು [3]ಮುನಿಪದಕೆರಗುತಿಂತೆಂದ[3] || ೧೭೩ ||

(ವರುಣದೂತನ ಪ್ರವೇಶ)

೬೦ ರಾಗ ಸೌರಾಷ್ಟ—ತ್ರಿವುಡೆತಾಳ ೩

ವರುಣದೂತ—

ಚಿತ್ತಯಿಸು ಮುನಿ | ನಾಥ ವರುಣನು |
ಮತ್ತೆ ಯಜ್ಞವ | ನಡೆಸಲೋಸುಗ |
[4]ವಿಸ್ತರದಿ[4] ಕಳು | ಹಿಸಿದ ಓಲೆಯ | ನಿತ್ತು ನಿಮಗೆ || ೧೭೪ ||

ಕಾದಿಹರು ಕೂ | ಡಿರುವ ಋಷಿಗಳು |
ಹಾದಿಯನ್ನೀ | ಕ್ಷಿಸುವನಬ್ಧಿಪ |
ಓದಿ ನೋಡೀ | ಕ್ಷಣವೆ ತೆರಳೆಂದು | ಪಾದಕೆರಗೆ || ೧೭೫ ||

ಓಲೆಯನು ಕೊಂ | ಡಾಕ್ಷಣವೆ ಮುನಿ |
ಪಾಲ ಸೀತೆಯ | ಕರೆದು ಪೇಳಿದ |
ಲೋಲಲೋಚನೆ | ಕರೆ[5]ಯಿಹುದು[5] ಪಾ | ತಾಳದಿಂದ || ೧೭೬ ||

---

1 ಖಾತಿಯಿಂದ(ಓ) 2 ಯನ್ನು (ಕಾ, ಅ) 3 ಬಿನ್ನೈಸಿದನು ಮುನಿಯೊಡನೆ (ಓ, ಕಾ) 4 ಉತ್ತರವ (ಅ) 5 ದಿಹರು (ಕಾ)

೬೧ ರಾಗ ತೋಡಿ—ಏಕತಾಳ ೪

ವಾಲ್ಮೀಕಿ—

ಪೋಗಿ ಬರು । ವೆ ಯಾಗಕ್ಕೆ । ಈಗ ಮಕ್ಕಳ್ । ಜೋಕೆ— ।
ನಾಗವೇಣಿ । ನಿನ್ನ ಕುವರ । ರ್ಪೋಗದಿರಲಿ । ದೂರ— ॥ ೧೭೭ ॥

ಎಂದಿಗೆ ಬ । ರುವಿರಿ ಇತ್ತ । ತಂದೆ ಮುನಿ । ರಾಯ— ।
ಕಂದರಿರ್ವ । ರೇ ಬೇಸರ್ವ । ರೆಂದಳಾಗ । ಸೀತೆ— ॥ ೧೭೮ ॥

ನಾಳೆ ಬರುವೆ । ನೆಂದು ಮತ್ತಾ । ಬಾಲರ ನೋ । ಡುತ್ತ— ।
ಲೀಲೆಯಿಂದ । ಮುದ್ದು ಮಾಡಿ । ಕಾಲಿಗೆರಗಿ । ಸುತ್ತ— ॥ ೧೭೯ ॥

೬೨ ರಾಗ ನಾದನಾಮಕ್ರಿಯೆ—ಅಷ್ಟತಾಳ ೧

ಕುಶಲವರು—

ನಾಳೆ ಬ । ಹದು ಬದ್ಧ । ವೇನಯ್ಯ— । —ಮುನಿ ।
ಪಾಲ ಬೇ । ಸರ್ವೆವು । ನಾವಯ್ಯ ॥
ನಾವು ಸಂ । ಗಡ ಬಂದ । ರಾಗದೇ— । —ಅಲ್ಲಿ ।
ನೀವು ಹೋ । ಗದೆ ಯಜ್ಞ । ಸಾಗದೆ— ॥ ೧೮೦ ॥

ವಾಲ್ಮೀಕಿ—

ಘರವಲ್ಲ । ವಿಪಿನದೊ । ಳೊಬ್ಬಳೆ — । —ಅಮ್ಮ ।
ಅರೆಗಳಿ । ಗೆಯು ಬಿಟ್ಟು । ಇರುವಳೆ— ॥
ತರಳರು । ನಡೆವುದೆಂ । ತಲ್ಲಿಗೆ— । —ಸುಮ್ಮ ।
ನಿರಿ ನಾಳೆ । ಬಹೆನು ನಾ । ನಿಲ್ಲಿಗೆ— ॥ ೧೮೧ ॥

ಒಬ್ಬೊಬ್ಬ । ರ್ತಿರುಗದಿ । ರಡವಿಗೆ । —ಕುಶ ।
ದರ್ಭೆಗೆ । ಹೊರಡ ಬೇ । ಡಾಚೆಗೆ ॥
ಇಬ್ಬರೂ । ಜೋಡಾ, । ಗಿರಿಯೆಂದು । —ಮುನಿ ।
ತಬ್ಬಿ ಬೀ । ಳ್ಕೊಂಡು ಸ । ಡೆದನಂದು ॥ ೧೮೨ ॥

(ಸೀತೆ ಮತ್ತು ವಾಲ್ಮೀಕಿಯ ನಿಷ್ಕ್ರಮಣ)

## ಯಜ್ಞಾಶ್ವಬಂಧನ

೬೩ ಭಾಮಿನಿಷಟ್ಪದಿ

ತೆರಳಿದನು ಮುನಿಯತ್ತ ಕುಶ ತಾ
ವರವಿಪಿನದೆಡೆಗಿತ್ತಲಾ ಲವ
ತರಳರೊಡನಾಡುತ್ತಲಿರಲಾಶ್ರಮಸಮೀಪದಲಿ ।
ಇರುತಿರಲು ಲೀಲೆಯೊಳಯೋಧ್ಯಾ
ಪುರದ ವೃತ್ತಾಂತವನು ಪೇಳುವೆ
ಧರಣಿಪತಿ ರಘುನಾಥ ಜನಹತ್ಯೆಯನು ಕಳೆವುದಕೆ ॥ ೧೮೩ ॥

(ಕುಶಲವರ ನಿಷ್ಕ್ರಮಣ ಮತ್ತು ರಾಮನ ಒಡ್ಡೋಲಗ)

೬೪ ರಾಗ ಕಾಂಭೋಜಿ—ಜಂಪೆತಾಳ ೨

ರಾಮ—

ಅಶ್ವಮೇ । ಧವ ರಚಿಸ । ಬೇಕೆಂದು । ಶ್ರೀರಾಮ ।
ಶಶ್ವತದಿ । ಸನ್ನಹವ । ತರಿಸಿ—॥
ವಿಶ್ವಮಿ । ತ್ರಾದಿಗಳು । ಯಾಗಶಾ । ಲೆಯ ರಚಿಸಿ ।
ವಿಶ್ವನಾ । ಯಕ ದೀಕ್ಷೆ । ವ[1]ರಿ[1]ಸಿ— ॥ ೧೮೪ ॥

ಮತ್ತಲ್ಲಿ । ಕುದುರೆಯನು । ತರಿಸಿ ಶೃಂ । ಗರಿಸಿ [2]ಶಾ ।
ಸ್ತ್ರೋಕ್ತದಿಂ । ಪೂಜೆಗಳ । ನಡೆಸಿ[2]—॥
ಉತ್ತಮದ । ಬಿರುದುಗಳ । ಬರೆದು ಕುದು । ರೆಯ ಹಣೆಗೆ ।
ಸುತ್ತಿದರು । ಮಂತ್ರವಿಧಿ । ವೆರಸಿ— ॥ ೧೮೫ ॥

(ಎಲ್ಲರ ನಿಷ್ಕ್ರಮಣ)

ಆನೆ ಕುದು । ರೆಯು ಮಂದಿ । ಸೇನೆ ಮಾ । ರ್ಬಲ ಸಹಿತ ।
ತಾನೆ ತೆರ । ಳಿದನು ಶ । ತ್ರುಘ್ನ—॥
ನಾನಾವಿ । ಧದಿ ಮೊರೆವ । ವಾದ್ಯಸಂ । ದಣಿಯಿಂದ ।
ಲಾನಂದ । ದಲಿ ಪೊರಟು । ಪುರವ— ॥ ೧೮೬ ॥

ಅಂಗ ಕಾಂ । ಭೋಜ ಕ । ರ್ಣಾಟ ಮಾ । ಳವ ಗೌಳ ।
ವಂಗ ಮಲೆ । ಯಾಳ ದ್ರಾ । ವಿಡರ—॥

---

1 ಹಿ (ಕಾ) 2 ಮಂತ್ರೋಕ್ತರದಿ ಪೂಜೆಯನು ರಚಿಸಿ (ಓ, ಕಾ)

ಸಂಗರದಿ । ಸೋಲಿಸುತ । ಸರಕುಕ । ಪ್ಪವಗೊಂಡು ।
ಹಿಂಗದೆ । ಲ್ಲರನು ಒಳ । ಗೊಂಡು— ॥ ೧೮೭ ॥

ಛಪ್ಪನ್ನ । ದೇಶದೊಳ । ಗಿಪ್ಪ ರಾ । ಯರ ಕೈಯ ।
ಕಪ್ಪವನು । ಸೆಳೆದು[1]ಧುರ । ವಾಂ[1]ತು—॥
ತಪ್ಪದೇ । ಮಂದಿ ಕುದು । ರೆಯ ಸಹಿತ । ವಾಲ್ಮೀಕಿ ।
ಇಪ್ಪಾಶ್ರ । ಮಕೆ ಬಂದ । ರೆಲ್ಲ— ॥ ೧೮೮ ॥

(ಯಜ್ಞಾಶ್ವ ಸೇನೆ ಸಹಿತ ಶತ್ರುಘ್ನನ ಪ್ರವೇಶ, ಆಮೇಲೆ ಲವಕುಶರು)

ಲವ—

ಎತ್ತಣ ತು । ರಂಗವಿದು । ಪೊಕ್ಕು ಪೂ । ದೋಟಗಳ ।
ಕತ್ತರಿಸಿ । ಕೆಡಿಸಿತೆಂ । ದೆನುತ—॥
ಚಿತ್ತದಲಿ । ಕೋಪಿಸುತ । ಹತ್ತಿರಕೆ । ಬಂದು ಲವ ।
ಮಸ್ತಕದ । ಲಿಪಿಯನೋ । ದಿದನು— ॥ ೧೮೯ ॥

೬೫ ರಾಗ ಘಂಟಾರವ—ಜಂಪೆತಾಳ ೩

ವೀರವಿತ । ರಣ ಶೂರ । ವಿಜಯಸ । ದ್ಗುಣಸಾರ ।
ಸಾರಸಾಂ । ಬಕ ಧೀರ । ಶರಧಿಗಂ । ಭೀರ— ॥ ೧೯೦ ॥

ವೈರಿಮದ । ಗಜಸಿಂಹ । ವಾಸವಾ । [2]ರ್ಚಿ[2]ತ ಧರ್ಮ ।
ಪೌರುಷಾ । ಗ್ರಣಿ ರಾಮ । ಭಳಿರೆ ನಿ । ಸ್ಸೀಮ— ॥ ೧೯೧ ॥

ಈತನದು । ಯಜ್ಞಾಶ್ವ । ವಿದರ ಕ । ಟ್ಟಿದರೀಗ ।
ಭೂತಳದೊ । ಳವ ಜಾಣ । ಭುಜಬಲ । ತ್ರಾಣ— ॥ ೧೯೨ ॥

ಹೀಗೆಂದು । ಬರೆದ ಲಿಪಿ । ಯೋದಿನೋ । ಡಿದ ಲವನು ।
ಮೂಗಿನಲಿ । ಬೆರಳಿಟ್ಟು । ತೂಗಿದನು । ಶಿರವ— ॥ ೧೯೩ ॥

೬೬ ರಾಗ ಶಂಕರಾಭರಣ—ಅಷ್ಟತಾಳ ೨

ಸೀತಾ, । ನಂದನ । ನು—ಓ । ಲೆಯ ನೋಡಿ ।
ನ್ನೇತರ । ಬದುಕೆಂದ । ನು—॥

---

1 ತರವರಿ (ಕಾ, ಓ) 2 ರ್ಜಿ (ಕಾ)

ಭೂತಳ । ದೊಳಗೊರ್ವ । ಖ್ಯಾತನಾ । ಗಿಹ ಮೇಲೆ ।
ಪೇತುಗ । ರೆಂದೆಂಬ । ಮಾತು ಬಂ । ತೆಮಗೆ— ॥ ೧೯೪ ॥

ಬಂದದ್ದೆ । ಲ್ಲವು ಬರ । ಲಿ—ಈ । ಪ್ರಾಣವು ।
ಇಂದೇ ಹೋ । ದರು ಹೋಗ । ಲಿ—॥
ಮುಂದುವ । ರಿಯಲು ತಾಯ್ । ಮುನಿ ಕೋಪಿ । ಸಲಿ ಬಿಡೆ ।
ನೆಂದು ಹ । ತ್ತಿರೆ ಬಂದು । ನಿಂದು ನೋ । ಡಿದನು— ॥ ೧೯೫ ॥

ಮರನ ಬ । ಳ್ಳಿಯ ತೆಗೆ । ದ—ಆ । ಕುದುರೆಯ ।
ಕೊರಳ ಸಂ ।ದಿಗೆ ಬಿಗಿ । ದ—॥
ವರಕದ ।ಳಿಗೆ ಕಟ್ಟ । ಲರಸುಗ । ಳದು ಬಿಡು ।
ಪರಿಹಾಸ್ಯ । ವಲ್ಲಿಂ[1]ದ । ರರಿದು ಬಾ । ಲಕರು[1]— ॥ ೧೯೬ ॥

ಮನದಿ ಹೂಂ । ಕರಿಸಿದ । ನು—ಕೈ । ಯೊಳಗಿದ್ದ ।
ಧನುವ ಠೇಂ । ಕರಿಸಿದ । ನು—॥
ಅನುಮಾನ । ವೇನು ಹ । ತ್ತಿರಬಂದು । ಕಟ್ಟಿರ್ದು ।
ದನು ಬಿಡೆ । ತುರಗ[2]ವ । ನೆಂದು ಗ । ರ್ಜಿಸಿದ[2]— ॥ ೧೯೭ ॥

೬೭ ರಾಗ ಕೇದಾರಗೌಳ, (ಆಹೇರಿ)—ಜಂಪೆತಾಳ ೩

ಕಂಡು ಬೆರ । ಗಾದರಿವ । ರೆಲ್ಲ—।—ಇವನ ।
ದಿಂಡತನ । ಕೀಗ ಬಾ । ಲರೊಳು ಜೋ । ಡಿಲ್ಲ— ॥ ಪಲ್ಲವಿ ॥

ಮುದ್ದುಮೊಗ । ಮುಗುಳ್ನಗೆಯ । ಮುನಿ[3]ಬಾಲ । ಕರ ಕೆಳೆ[3]ಯ ।
ತಿದ್ದಿದ ಕಿ । ರೀಟಗಳ । ಥರಥರದ । ಮಾಟಗಳ ।
ಬುದ್ಧಿವಂ । ತರ ನುಡಿಯು । ಬಲ್ಲತನ । ಗಳ ನಡೆಯು ।
ವಿದ್ಯೆಯನು । ಕಲಿತ ಬಾ । ಯ್ದೆರೆಯ ।—ಕೈಯೊ ।
ಳಿದ್ದ ಧನು । ಶರವೆಸೆವ । ನೂತನದ । ಪರಿಯು— ॥ ೧೯೮ ॥

---

1 ದು ಋಷಿಬಾಲಕರು ಪೇಳೆ (ಅ) 2 ವೆಂದೆಸೆ ನಸುನಗುತ (ಕಾ) 3 ದವರೊಡನೆ ಹಗೆ (ಕಾ)

ಕಡಿದನಾ । ನೆಯ ಕರವ । ಬಡಿದ ಕುದು । ರೆಯ ಶಿರವ ।
ಹೊಡೆದ ರಾ । ವ್ತರ ಬದಿಯ । ಒಡೆದ ಮಾ । ವುತರೆದೆಯ ।
ತಡೆದ ನೋ । ಡುವ ಭಟರ । ಹಿಡಿದನ । ಗ್ಗದಘಟರ ।
ಮಿಡಿದ ವ್ಯೆ । ರಕ್ತದೋ । ಕುಳಿಯ ।—ಖಾತಿ ।
ವಡೆದ ರಣ । ರಂಗಸಾ । ಹಸದ ವೆ । ಗ್ಗಳೆಯ— ॥ ೧೯೯ ॥

ವಚನ ॥ ಇಂತು ಮಾರ್ಬಲವಂ ಧಾನಾಹಾನಿಯಂ ಮಾಡೆ ಶತ್ರುಘ್ನಂ ಬಾಲಕನ ಸಮೀಪಕ್ಕೆ ಬಂದು ಏನೆಂದನು ಎಂದರೆ —

೬೮ ರಾಗ ನಾದನಾಮಕ್ರಿಯೆ—[1]ಮಟ್ಟೆತಾಳ ೨[1]

ಶತ್ರುಘ್ನ—
ಯಾರ ಕಂದ । ನಯ್ಯ ನೀನು । ಅಂಜಿಕಿಲ್ಲ । ದೆ—ಇಂಥ ।
ಘೋರ ಕಾಡೊ । ಳೊರ್ವನೆ ನ । ಮ್ಮಶ್ವ ಕಟ್ಟ । ದೆ— ॥ ೨೦೦ ॥

ಲವ—
ಕಟ್ಟದರೇ । ನಾಯಿತಯ್ಯ । ದಿಟ್ಟನಾದ । ರೆ—ಇದರ ।
ಬಿಟ್ಟುಕೊಂಡು । ಪೋಗೊ ಧ್ಯೆರ್ಯ । ವಪ್ಪುಂಟಾದ । ರೆ— ॥ ೨೦೧ ॥

ಶತ್ರುಘ್ನ—
ನಾಡ ರಾಯ । ನೆಂದು ಮಾತ । ನಾಡಬೇಡ । ವೊ—ನಿನ್ನ ।
ಕೂಡೆ ಯುದ್ಧ । ಮಾಡಿ ಗೆಲ್ವ । [2]ದೇನು ಗಣ್ಯ[2] । ವೊ— ॥ ೨೦೨ ॥

ಲವ—
ಬೇಡ ಬೇಡ । ಸುಮ್ಮನಿಪ್ಪು । ಪಂಥವೆಮ್ಮೊ । ಳು—ಅತ್ತ ।
ನೋಡಬಾರ । ದೇ, ಬಿದ್ದ । ರಾರು ನಿಮ್ಮೊ । ಳು— ॥ ೨೦೩ ॥

ಶತ್ರುಘ್ನ—
ಮಕ್ಕಳು ಸ । ಣ್ಣವ,ನೆಂದು । ಬಿಟ್ಟೆನು ನಿ । ನ್ನ—ಇಂಥ ।
ಸೊಕ್ಕಿನವ, । ನೆಂದು ತಿಳಿಯ । ಲಿಲ್ಲವೊ ಮು । ನ್ನ— ॥ ೨೦೪ ॥

ದಕ್ಕದು ದ । ಕ್ಕದು, ಬಿಡು, । ಧರ್ಮ್ಮವಲ್ಲ । ವೊ—ನಿನಗೆ ।
ತಕ್ಕ ಬುದ್ಧಿ । ಯಾಹದಿ, । ನ್ನು ತಡವಿಲ್ಲ । ವೊ— ॥ ೨೦೫ ॥

---

1 ಏಕತಾಳ ೨ (ಕಾ) 2 ದೆಷ್ಟು ಘನ (ಕಾ)

೬೯ ರಾಗ ಕಾಂಭೋಜಿ—ಮಟ್ಟೆತಾಳ ೪

ಲವ—

ನಿಲ್ಲು ನಿಲ್ಲೆ । ಲೋ—। ನೀನು ಸಮರ । ಕೆ—।
ಬಲ್ಲೆ ನಿನ್ನ । ಬಗೆಯನೆಂದು । ಭುಲ್ಲವಿಸಿದ । ನು— ॥ ೨೦೬ ॥

ನೋಡಿ ಧನುವ । ನು—। ಹೂಡಿ ಶರವ ।ನು—।
ಕೂಡೆ ಕೂಡೆ । ಬಿಡಲು, ಕಡಿ । ದಾಡಿ ಬಿಸುಟ । ನು— ॥ ೨೦೭ ॥

ಶತ್ರುಘ್ನ—

ಕೋಪದಿಂದ । ಲೆ—। ಭೂಪನನುಜ । ನು—।
ಚಾಪವನ್ನು । ಸೆಳೆಯೆ ಲವಗೆ । ತಾಪ ಹೆಚ್ಚಿ । ತು— ॥ ೨೦೮ ॥

ಬೆಂಗಾವಲ ಭಟರು—

ಮತ್ತೆಯೆಲ್ಲ । ರೂ—। [1]ಸುತ್ತುಕವಿ[1]ದ । ರು—।
ಎತ್ತಿ ಖಡ್ಗ । ವನ್ನು ಲವನ । ಮುತ್ತಿಕೊಂಡ । ರು— ॥ ೨೦೯ ॥

,ಬೊಬ್ಬಿರಿದ । ರು—। ಇಬ್ಬಗಿವಿದ । ರು—।
ಸರ್ಬ ಬಲವು । ಮುಸುಕೆ ಪೆಟ್ಟಿನ । ಹಬ್ಬವಾಯಿ । ತು— ॥ ೨೧೦ ॥

ಸೀತೆಯಣುಗ । ನು—। ಧಾತುಗೆಟ್ಟ । ನು—।
ಭೂತಳಕ್ಕೆ । [2]ಮೂರ್ಛೆವೋಗಿ । ಸೋತು ಬಿದ್ದ[2] । ನು— ॥ ೨೧೧ ॥

(ಎಲ್ಲರೂ ನಿಷ್ಕ್ರಮಿಸುವರು, ಸೀತೆಯ ಪ್ರವೇಶ)

೭೦ ಭಾಮಿನಿಷಟ್ಪದಿ

ಗರುಡದೇವನ ಗರುವದುರುಬೆಗೆ
ಉರಗನಿದಿರೇ ಸುತ್ತುಮುತ್ತಿಂ
ದರಿಭಟರು ಕುತ್ತಿದರೆ ಲವನೊರಗಿದನು ಮೂರ್ಛೆಯಲಿ ।
ತರಳನನು ಕೈಗಟ್ಟಿ ರಥದೊಳ
ಗಿರಿಸಿ ಕುದುರೆಯ ಬಿಟ್ಟು ಮರಳಿದ
ರರಿತು ತಾಪಸವಟುಗಳೈದಿಂತೆಂದರವನಿಜೆಗೆ ॥ ೨೧೨ ॥

1 ಎತ್ತಿನಿಂ (ಕಾ) 2 ಬಿದ್ದು ಮೂರ್ಛೆಯಾದ ತರಳ (ಕಾ)

(ಭಯದಿಂದ ತತ್ತರಿಸುವ ಮುನಿವಟುಗಳ ಪ್ರವೇಶ)

೭೧ ರಾಗ ಸೌರಾಷ್ಟ—ತ್ರಿವುಡೆತಾಳ ೨

ಮುನಿಪುತ್ರರು—

ಬೇಡವೆಂದರೆ । ಮಾತ ಕೇಳದೆ ।
ನಾಡಪಾಲರ । ಯಜ್ಞದಶ್ವವ ।
ಕಾಡಬಳ್ಳಿಯ । ಹರಿದು ಕಟ್ಟಿದ । [1]ನೋಡಿ[1] ಲವನು ॥ ೨೧೩ ॥

ಬೇಡಿಕೊಂಡರು । ತರಳರೆಮ್ಮವ ।
ರಾಡಿದಾ ನುಡಿ । ಕೇಳದವರೊಳು ।
ಮಾಡಿದನು ಯು । ದ್ಧವನು ಖಾಡಾ । ಖಾಡಿಯಿಂದ ॥ ೨೧೪ ॥

ಅಷ್ಟದಿಕ್ಕನು । ಕವಿದು ಬಾಲಗೆ ।
ಬಿಟ್ಟುಬಾಣವ । ಕಡೆಗೆ ಹೆಡೆಮುಡಿ ।
ಕಟ್ಟಿ ಒಯ್ದರು । ಪುರಕೆ ರಥದೊಳ । ಗಿಟ್ಟು ಜವದಿ ॥ ೨೧೫ ॥

ಸೀತೆ—

ಕೇಳುತಾಕ್ಷಣ । ದೊಳಗೆ ತನ್ನಯ ।
ಬಾಲಕನ ಭಂ । ಗವನು ಧಾತ್ರಿಯ ।
ಮೇಲೆ ತಾ ತಲೆ । ತಿರುಗಿ ಬಿದ್ದಳು । ಲೋಲನಯನೆ ॥ ೨೧೬ ॥

೭೨ ರಾಗ ಸೌರಾಷ್ಟ—ಮಟ್ಟೆತಾಳ ೪

ಕಂಜಲೋಚ । ನ—। ಕಾರುಣ್ಯಾಂಬು । ಧಿ—।
ಮಂಜುಳಾಕ । ರ—। ಮಾಧವ [2]ಪ್ರಿ[2] । ಯ— ॥ ೨೧೭ ॥

ಚಕ್ರಧಾರ । ಣ—। ವಿಕ್ರಮು,ರ । ಣ—।
ಶಕ್ರಸನ್ನಿ । ಭ—। ಸುಪ್ರಭಾಕ । ರ— ॥ ೨೧೮ ॥

ದೇಶಕೋಶ । ವ—। ಬಿಟ್ಟು ನಾ ವ । ನ—।
ವಾಸಿಯಾದ । ರೂ—। ಲೇಸಕಾಣೆ । ನು— ॥ ೨೧೯ ॥

---

1 ಕೂಡೆ (ಕಾ) 2 ಜ (ಕ, ಅ,)

ಈ ಕಾಡಲ್ಲಿ । ವಾ—। ಲ್ಮೀಕಿಮುನಿಪ । ತಿ—।
ಸಾಕಿ ಮಕ್ಕ । ಳ—। ಸಲಹಿದ । ಯತಿ— ॥ ೨೨೦ ॥

ಆತನಿಲ್ಲ । ದ—। ವೇಳ್ಯದಿ ಲ । ವ—।
ಏತಕೈದಿ । ದ—। ಮಾತ ಕೇಳ । ದೆ— ॥ ೨೨೧ ॥

ಇಲ್ಲವೇ ಕು । ಶ—। ಮಲ್ಲಸಾಹ । ಸ—।
ಎಲ್ಲಿಗೈದಿ । ದ—। ಬಲ್ಲರಾರಿ । ಹ— ॥ ೨೨೨ ॥

ಖುಲ್ಲರಾಯ । ರು—। ಕೂಡಿಬಂದ । ವ—।
ರೆಲ್ಲ ಲವನ । ನು—। ಕೊಲ್ವರಲ್ಲ । ವ್ವ ॥ ೨೨೩ ॥

೭೩ ವಾರ್ಧಿಕಷಟ್ಪದಿ

ಧರಣೀಶ ಕೇಳಿಂತು ಜನಕನಂದನೆಯು ತರ
ತರದಿ ಹಲುಬುತ್ತಲುರೆ ಬೆಂಡಾಗಿ ಬುಡಕಡಿದ
ಮರದಂತೆ ಧೊಪ್ಪನೆ ಧರಿತ್ರಿಗುರುಳಿದು ಬಳಿಕ ಚೇತರಿಸಿ ಮೆಲ್ಲನೆದ್ದು ।
ಬೆರಳನೆಡೆಮುರಿದು ಬೆಂಡಾಗಿ ವಿರಹದಿ ತನ್ನ
ತರಳನಾಪತ್ತಿಗೋಸ್ಕರ ಮರುಗುತಿರೆ ಕುಶನು
ಪರಿಸಮೀಪಕೆ ಕುಶವ [1]ನೆತ್ತಿ[1]ಕೊಂಡೈತಂದು ತಾಯ ಕಂಡಿಂತೆಂದನು ॥ ೨೨೪ ॥

(ಕುಶನ ಪ್ರವೇಶ)

೭೪ ರಾಗ ವರಾಳಿ—ಏಕತಾಳ ೭

ಕುಶ—

ಚಿಂತಿಸುವ । ದೇತಕೆ ಪೇ । ಳಮ್ಮ । ಯ್ಯ—ನಿನ ।
ಗಿಂಥದುಃಖ । ಬಂದುದೇತ । ಕಮ್ಮ । ಯ್ಯ—॥
ಅಂತರಂಗ । ದಂತರವೇ । ನಮ್ಮ । ಯ್ಯ—ಚಂದ್ರ ।
ನಂಥ ಮೊಗದ । ಕಾಂತಿ ತಗ್ಗಿ । ತಮ್ಮ । ಯ್ಯ— ॥ ೨೨೫ ॥

ಕಣ್ಣನೀರು । ತುಂಬಿದೇತ । ಕಮ್ಮ । ಯ್ಯ—ಚೆಲ್ವ ।
ಬಣ್ಣಗುಂದಿ । ತಣ್ಣಗಾಯಿ । ತಮ್ಮ । ಯ್ಯ—॥

1 ಪೊತ್ತು (ಕಾ, ಅ)

ಬಣ್ಣಿಸಿ ನೀ । ಸೆಣ್ಣಿಸದಿ, । ರಮ್ಮ । ಯ್ಯ—-ಮು ।
ಕೃಣ್ಣನಾಣೆ । ಅಂಜಬೇಡ । ನಮ್ಮ । ಯ್ಯ— ॥ ೨೨೬ ॥

೭೫ ರಾಗ ನೀಲಾಂಬರಿ—ಏಕತಾಳ ೪

ಸೀತೆ—

ಯಾವ ರಾಯ । ರೊ ನಾನರಿಯೆ । ಕಂದ—ಕಂ । ದ,ನಾವಿರುವ ।
ತಾವಿಗಾಗಿ । ಬಂದರಂತೆ । ಕಂದ ಕಂ, । ದ— ॥ ೨೨೭ ॥

ಕೋವಿದಶ್ವ । ತಂದರಂತೆ । ಕಂದ—ಕಂ । ದ,ಪಾ ।
ರ್ಥಿ,ವರಶ್ವ । ಕಟ್ಟಿ ಲವನು । ಕಂದ ಕಂ, । ದ— ॥ ೨೨೮ ॥

ಹೆಮ್ಮೆಯಿಂದ । ಮಾತನಾಡಿ । ಕಂದ—ಕಲ । ಹವ ಬಯಸಿ ।
ಗಮ್ಮನೆ ಶರ । ವೆಚ್ಚನಂತೆ । ಕಂದ ಕಂ, । ದ—॥
ಸುಮ್ಮಾನದಿ । ಮುತ್ತಿಕೊಂಡು । ಕಂದ—ಕೈ । ಗಟ್ಟಿ ನಿನ್ನ ।
ತಮ್ಮನ ಪಿಡಿ । ದೊಯ್ದರಂತೆ । ಕಂದ ಕಂ, । ದ— ॥ ೨೨೯ ॥

೭೬ ವಾರ್ಧಿಕಷಟ್ಪದಿ

ಕುಶ—

ಪರಿಪರಿಯ ದುಃಖಮಂ ಬಣ್ಣಿಸುತ ಭೂಜಾತೆ
ತರಳನಾಗಮ [1]ಪೇಳೆ ತಾಯ ಮೊಗಮಂ ನೋಡಿ[1]
ಉರಿಗಣ್ಣನಂತೆ ರೋಷಿತನಾಗಿ ಪೌರುಷದೊಳೊರೆದ ತನ್ನಯ ಮಾತೆಗೆ ।
ವರಜನನಿ ಕೇಳು ಎನ್ನಯ ಅನುಜನನ್ನೊಯ್ದ
ದುರುಳರಾರಾದಡಾಗಲಿ ಕಾದಿ ನಿಮಿಷದೊಳು
ಮರಳಿ ಹಯವಂ ಸಹಿತ ಸೆಳೆದು ತಾರದೆ ಬಿಡೆನು ಪರಿಕಿಸೆನ್ನಯ ಸಾಸವ
॥ ೨೩೦ ॥

೭೭ ರಾಗ ಕೇದಾರಗೌಳ—ಅಷ್ಟತಾಳ ೧

ಅಮ್ಮ ಚಿಂ । ತಿಸ ಬೇಡ । ಆದಡೇ । ನಾಯಿತು ।
ಬ್ರಹ್ಮಲಿ । ಖಿತ ತಪ್ಪೊ । ದೆ—॥
ಸುಮ್ಮನೆ । ಮರುಗದಿ । ರ್ಜನನ ಕೊಂ । ಡೊಯ್ದವ ।
ಜೊಮ್ಮನ । ಪಿತನಾಗ । ಲಿ— ॥ ೨೩೧ ॥

---

1 ಪೆಂತುಟೆಂದು ಮರುಗುತ್ತಿರಲ್ (ಕಾ)

ಇಂದ್ರಾಗ್ನಿ । ಯಮ ವಾಯು । ವರುಣ ಕು । ಬೇರ ಗೌ ।
ರೀಂದ್ರ ದಿ । ಕ್ಪಾಲಕ । ರ—॥
ಮಂದಿರ । ಕ್ಕೊಯ್ದು ಡ । ಗಿಸಿದರೆ । ನ್ನಸುಜನ ।
ತಂದು ನಿ । ಮಗೆ ತೋರು । ವೆ— ॥ ೨೩೨ ॥

ಲೋಕವೆ । ಮುಳುಗಲಿ । ನಾಕವೆ । ಬೀಳಲಿ ।
ರಾಕೇಂದು । ಧರ ಮುನಿಯ । ಲಿ—॥
[1]ಶ್ರೀಕಂಠ[1] । ನಾಣೆ ತ । ಪ್ಪಿದರೆ ಎ । ನ್ನಸುಜನ ।
ನಾ ಕರ । ತರುವೆನ । ಮ್ಮ— ॥ ೨೩೩ ॥

ವಚನ ॥ ಇಂತೆಂದು ತಾಯ ಮುಂದೆ ಭಾಷೆಯನ್ನುಚ್ಚರಿಸಿ ರಣಕೆ ಸನ್ನದ್ಧನಾದ ಕುಮಾರ ಕಂಠೀರವನಂ ಕಂಡು ವಜ್ರಪಿಸಕವುಂ ತೊಡಿಸಿ ಶತ್ರುಗಳ ಜೈಸುವಂಥ ಮಂತ್ರೋಪದೇಶವಂ ಮಾಡಿ ಮಂಗಲವಚನದಿಂ ಪರಸಿದಳದೆಂತೆನೆ—

೭೮ ರಾಗ ಭೈರವಿ—ಜಂಪೆತಾಳ ೩

ಸೀತೆ—

ಸ್ಥಿರಜೀವ । ರಾಗಿ ನೆರೆ । ಸಿರಿವಂತ । ರಾಗಿ ಸಂ ।
ಗರಶೂರ । ರಾಗಿರೆಂ । ದ್ದರಸಿದಳು । ಮಗನ— ॥ ಪಲ್ಲವಿ ॥

ಹಗೆಯವರ । ಕೂಡೆ ನಿಜ । ವನು ಪೇಳ । ದಿರಿ ಮಗನೆ ।
ಅಗಲದಿರಿ । ವನದ ಮ । ಧ್ಯದೊಳಿರ್ವ । ರು—॥
ಖಗಮೃಗಂ । ಗಳ ಕೋಟ । ಲೆಗೆ ಎಚ್ಚ । ರಿಕೆಯೊಳಿರಿ ।
ಜಗವುಳ್ಳ । ನಕ ಬಾಳಿ । ರೆಂದು ಪರ । ಸಿದಳು— ॥ ೨೩೪ ॥

ಹಿತಶತ್ರು । ಗಳ ಕೂಡೆ । ಅತಿಸ್ನೇಹ । ಮಾಡದಿರಿ ।
ಅತಿಮಿತ್ರ । ರೊಡನೆ ಸಂ । ಗತರಾಗಿ ।ರಿ—॥
ಸತತ ಹೋ । ದಲ್ಲಿ ಒ । ಳ್ಳಿತ ಕೊಡಲಿ । ಶಿವನೆನುತ ।
ಸತಿ ಯೆತ್ತಿ । ದಳು ಮಗನ । ತಡಸಿ ಮ । ಸ್ತಕವ— ॥ ೨೩೫ ॥

---

1 ಲೋಕೇಶ (ಓ)

## ಕುಶಲವರ ರಣಪರಾಕ್ರಮ

೭೯ ದ್ವಿಪದಿ

ಕುಶ—

ವಾಲ್ಮೀಕಿಮುನಿಪದವನೊಮ್ಮೆ ಧ್ಯಾನಿಸುತ ।
ನಿರ್ಮಲದಿ ಅಷ್ಟದಿಕ್ಕುಗಳಿಗೊಂದಿಸುತ ॥ ೨೩೬ ॥

ಅಮ್ಮ ಜಾನಕಿಗೆರಗಿ ಆ ಕ್ಷಣವೆ ಬಂದ ।
ತಮ್ಮ ಲವನನು ಕಾಂಬ ಕಡುತವಕದಿಂದ ॥ ೨೩೭ ॥

೮೦ ರಾಗ ನಾದನಾಮಕ್ರಿಯೆ—ಮಟ್ಟೆತಾಳ ೩

ಕುಶನು ರಣಕೆ । ತೆರಳಿಬರುವ । ಕುಶಲನಡೆಗ । ಳೊ—।
ವೃಷಭಧ್ವಜನ । ಕಣ್ಣಿಂದುಗುಳ್ವ । ಬಿಸಿಯ ಕಿಡಿಗ । ಳೊ— ॥ ೨೩೮ ॥

ಕುಸುಮಬಾಣ । ನೆಸುವ ಶರದ । ಪೆಸರು ಪಲ್ಲಟ[1] । ವೊ—।
ವಸುಧೇಶರ । ಮಕುಟವಜ್ರ । ದೆಸೆವ ಜಳಕ । ವೊ— ॥ ೨೩೯ ॥

ಬಿಸಜಮುಖಿಯ । ರೆಸಳುಗಣ್ಣೊ । ಳೆಸೆವ ನೋಟ । ವೊ—।
ಪಸುಳೆಗಳ ಕೈ । ಯೆಸಕದಿನುರು । ಳಿಸಿದ ಚಳಕ । ವೊ— ॥ ೨೪೦ ॥

೮೧ ರಾಗ ವೃಂದಾವನಸಾರಂಗ—ಏಕತಾಳ ೬

ಏನ—ನೆಂ । ಬೆನು ಕುಶನ ।, ಧೈರ್ಯ । ವ—ಬಂದು ।
ಆನೆ—ಯ । ಮೇಲೆ ಬಿದ್ದು । ಸೆಣಸು—ವ । ಶೌರ್ಯವ ॥ ಪಲ್ಲವಿ ॥

ತಡೆದ—ನೆ । ಓಡಿ ಹೋಹ ।,ಸೇನೆ । ಯ—ನೆಲ್ಲ ।
ಬಡಿದ—ನೆ । ಮುಂದರಿವ ಮ ।,ದ್ದಾನೆ ।ಯ—ನೆಚ್ಚು ।
ಕೆಡಹಿ—ಶ । ತ್ರುಘ್ನನ । ಬಿಡಿಸಿ—ಕೊಂ । ಡನು ಲವನ ॥ ೨೪೧ ॥

ಬಿಟ್ಟು—ತಂ । ದರು ತಿರಿಗಿ ।,ವಾಜಿ । ಯ—ಬಿಡದೆ ।
ಕಟ್ಟಿ—ಕೊಂ । ಡರು ಮುಖದ ।,ತೇಜಿ । ಯ—ಕುಶನ ।
ದಿಟ್ಟ—ತ ।ನಕೆ ಪುಷ್ಪ । ವೃಷ್ಟಿ—[2]ಸುರಿ । ಯಿತು ವನಕೆ[2] ॥ ೨೪೨ ॥

---

1 ವ (ಕಾ) 2 ಗರೆಯೆ ಸುರರು (ಕಾ)

೮೨ ವಾರ್ಧಿಕಷಟ್ಪದಿ

ಹರಿಹರರು ತಾವಿಬ್ಬರೊಂದಾಗಿ ಕಾದಿದರೆ
ಧುರದೊಳಿದಿರಾಗಿ ನಿಲುಸವರುಂಟೆ ಭೂಪಾಲ
ತರಳರಿರ್ವರು ತವ್ಮೊಳೇಕಮತವಾಗಿರಿವ ಉರುಬೆಗಾನುವರಾವರು ।
ದುರುಳತನದಿಂದಲಿದಿರಾಗಿ ಶತ್ರುಘ್ನನಾ
ಪರಿವಾರಸಹಿತ ತೆರಳಿದನು ಯಮಪಟ್ಟಣಕೆ
ಚರನೊರ್ವನೈತಂದು ರಾಮಚಂದ್ರನ ಕೂಡೆ ಕರವ ಮುಗಿದಿಂತೆಂದನು ॥೨೪೩॥

(ರಾಮನ ಪ್ರವೇಶ, ಚಾರಕನು ಬಂದು ವಂದಿಸುತ್ತಾನೆ)

೮೩ ಘಂಟಾರವ—ಜಂಪೆತಾಳ ೩

ದೂತ—

ವಿಶ್ವನಾ । ಯಕ ಕೇಳು । ಅಶ್ವಮೇ । ಧದ ಕುದುರೆ ।
ತಾ ಸ್ವತಂ । ತ್ರದಿ ತಿರುಗು । ತಷ್ಟದೇ । ಶಗಳ— ॥ ೨೪೪ ॥

ಅರಸರೆ । ಲ್ಲರ ಗೆಲಿದು । ಅಲ್ಲಿ ಕ । ಪ್ಪವ ತಳೆದು ।
ಬರುತಿರಲು । ವಾಲ್ಮೀಕಿ । ಮುನಿಪನಾ । ಶ್ರಮದಿ— ॥ ೨೪೫ ॥

ತರಳನೊ । ರ್ವನು ಕಂಡು । ತಡೆದನಾ । ಕುದುರೆಯನು ।
ಸರಳನೆಸೆ । ದೆಲ್ಲರಿಗು । ಸಾಕುಮಾ । ಡಿದನು— ॥ ೨೪೬ ॥

ಬಾಣವೆಸೆ । ಯಲ್ಕವನ । ತ್ರಾಣಕ್ಕೆ । ಜೋಡಿಲ್ಲ ।
ಪ್ರಾಣವಳಿ । ದವರ ಗೀ । ರ್ವಾಣ ತಾ । ಬಲ್ಲ— ॥ ೨೪೭ ॥

ಮಕ್ಕಳಾ । ಟಕೆ ಕಡೆಗೆ । ಮಾರಿಯಾ । ಯಿತು ನಮಗೆ ।
ಒಕ್ಕಣಿಸ । ಲೇನಿನ್ನು । ಶತ್ರುಘ್ನ । ನೊಸಗೆ— ॥ ೨೪೮ ॥

೮೪ ರಾಗ ಆಹೇರಿ—ಜಂಪೆತಾಳ ೨

ರಾಮ—

ಕೇಳಿ ಮೂ । ರ್ಛಿತನಾದ । ರಾಮ— । ತನ್ನವರು ।
ಕಾಳಗದೊ । ಳಗೆ ಮಡಿದ । ವೃತ್ತಾಂತ । ಗಳನು ॥ ೨೪೯ ॥

ಮಖತುರಗ । ಮಾರ್ಬಲವು । ಸಹಿತ— । ಶತ್ರುಹನ ।
ಸಕಲ ರಾ । ಯರನು ಬಾ । ಲಕರು ಗೆಲಿ । ದುದನು ॥ ೨೫೦ ॥

ಲಕ್ಷ್ಮಣನೆ । ಬಾರೊ ಸಂ । ಗರಕೆ—। ಸೇನೆ ಸಹಿ ।
ತೀಕ್ಷಣದೊ । ಳತಿಜವದಿ । ಪೋಗಯ್ಯ । ಧುರಕೆ ॥ ೨೫೧ ॥

ಆ ಕ್ಷಣಕೆ । ಬಲಗೂಡಿ । ಬಂದು—। ನಿಂದಿರಲು ।
ರಾಕ್ಷಸಾಂ । ತಕ [1]ನಿಂತು । ಪೇಳ್ದ ಕಾ । ಹುರ[1]ಕೆ ॥ ೨೫೨ ॥

೮೫ ರಾಗ ದೇಶಿ—ಅಷ್ಟತಾಳ

ಲಕ್ಷ್ಮಣ—

ರಣಕೆ ಸ । ನ್ನಹವಾದ । ರೆಲ್ಲ—।—ಲಕ್ಷ್ಮ ।
ಮಣ ತಮ್ಮ । ನಪಜಯ । ವನು ಕೇಳಿ । ಸೊಲ್ಲ ॥ ಪಲ್ಲವಿ ॥

ಆನೆ ಕು । ದುರೆಗಳ । ತರಿಸಿ—।—ಅದರ ।
ನಾನಾ ವಿ । ಧದ [2]ಪದುವಾ । ಯಿಂದ ಶೃಂ । ಗರಿಸಿ[2]॥
ಠಾಣರಾ । ವುತರನ್ನೆ ।ಬರಿಸಿ—।—ತನ್ನ ।
ಸೇನೆಯ । ನೆರಹಿ ಡಂ । ಗುರವನ್ನೆ । ಹೊಯ್ಸಿ ॥ ೨೫೩ ॥

ಛತ್ರ ಚಾ । ಮರ ಪತಾ । ಕೆಗಳ—।—ಸುಭ ।
ಟೋತ್ತಮ । ರ್ಪಿಡಿದ ಬ । ತ್ತೀಸಾಯು । ಧಗಳ ॥
ಎತ್ತಲು । ಕುದುರೆ ಮುಂ । ದಿಗಳ—।—ಸುತ್ತ ।
ಮುತ್ತಲು । ವಾದ್ಯ ತಂ । ಬಟೆಯ ಭೇ । ರಿಗಳ ॥ ೨೫೪ ॥

ಈಡಾದ । ರಥವ ಹ । ತ್ತಿದರು ।—ಮುಂದೆ ।
ಜೋಡಾಗಿ । ಕುದುರೆ ಮುಂ । ದಿಗಳನೊ । ತ್ತಿದರು ॥
ಓಡುತ್ತ । ವನವ ಮು । ತ್ತಿದರು ।—ಅವರ ।
ನೋಡಲು । ಕಾಡುಕಾ । ಡೆಲ್ಲ ಸು । ತ್ತಿದರು ॥ ೨೫೫ ॥

ವಚನ ॥ ಇಂತು ಮಾರ್ಬಲವು ಕವಿಯುತ್ತಿರಲಾಗಿ ಕಂಡು ಕುಶನು ಲವನೊಡನೆ ಏನೆಂದನು ಎಂದರೆ—

೮೬ ರಾಗ ಕಾಂಭೋಜಿ—ಏಕತಾಳ ೪

ಕುಶ—

ನೋಡಿ,ದೆ । ಯಾ ತಮ್ಮ, । ನೋಡಿದೆ । ಯು—ನಮ್ಮ ।
ಕೊಡೆ ಖಾಡಾ । ಖಾಡಿ ಯುದ್ಧ । ಮಾಡಲು ಬಂ । ದಂಥ ಪಡೆಯ ॥ ಪಲ್ಲವಿ ॥

---

1 ನಂತು ಪೇಳ್ದನಾಹವ (ಕಾ) 2 ಲಿ ಶೃಂಗರಿಸಿ—ಮುತ್ತೆ (ಕಾ)

ಮೊದಲು ನಾವು | ಕಟ್ಟಿಕೊಂಡ | ಕುದುರೆಗಾಗಿ | ಸೆಣಸಿದವರ |
ಸದೆದು ಘಾನಾ | ಹಾನಿಯನ್ನು | ಮಾಡಿದ ಮೇ | ಲೆ—||
ಅದರೊಳೊರ್ವ | ತಪ್ಪಿಸಿಕೊಂ | ಡೊದಗಿ ಊರಿ | ಗೈದಿ ಮತ್ತೆ |
ಬದಲು ಪಡೆಯ | ಕೂಡಿಕೊಂಡು | ಎದುರು ಬಂದು | ನಿಂದಿರುವುದ || ೨೫೬ ||

ಎತ್ತಣಿಂದ | ಬಂದುದೊ ಭೂ | ಪೋತ್ತಮರ | ಮಂದಿ ಕುದುರೆ |
ಕತ್ತಲೆ ತಾ | ಬಂದು ರವಿಯ | ಮುತ್ತುವ ಹಾ | ಗೆ—||
ಬತ್ತೀಸಾಯು | ಧಂಗಳನ್ನು | ಹಸ್ತದಿ ಪಿ | ಡಿದು ಸುತ್ತ |
ಮುತ್ತಲು ನ | ಮ್ಮೊಡನೆ ಖಡ್ಗ | ವೆತ್ತಿ ರಣಕೆ | ನಿಲುವ ಭಟರ || ೨೫೭ ||

೮೭ ರಾಗ ಮಾರವಿ—ಮಟ್ಟೆತಾಳ ೧

ಅಬ್ಬರಿಸಿ, | ತಮ್ಮೊಳು ತಾ | ವಿಬ್ಬರು ಮಾ | ತಾಡಿಕೊಂಡು |
ಸರ್ಬ ಬಲ, | ಕಿದಿರು ಬಿಲ್ಲ | ತೆಬ್ಬನೇರಿ | ಸಿ—||
ಜೊಬ್ಬಿಡುತ್ತ | ಸರಳ ಬಿಡುವ | ಉಬ್ಬಟೆಯ, | ಕಂಡು ಲಕ್ಷ್ಮ |
ಣಾರ್ಭಕರ, | ಸಮ್ಮುಖಕ್ಕೆ | ಎಬ್ಬಟ್ಟಿದ | ತನ್ನ ಪಡೆಯ || ೨೫೮ ||

ಬಿಟ್ಟು ಬಿಟ್ಟು | ಬಾಣವ ಬಂ | ದಷ್ಟೂ ಕುದುರೆ | ಮಂದಿಗಳನು |
ಕುಟ್ಟಿ ಕುಟ್ಟಿ | ತಲೆಯ ಕಣದೊ | ಳೊಟ್ಟುತಿರ್ದ | ರು—||
ಅಟ್ಟಿ ಹಿಡಿದು | ಬಡಿದು [1]ಮು[1]ಲ್ಲ | ಮುಷ್ಟಿಯಿಂದ | ತಿವಿದು ನಾವಿ |
ನ್ನೆಷ್ಟು ಕಾದ | ಲೆಂದು ಯಮನ | ಪಟ್ಟಣಕ | ಟ್ಟಿದರೆಲ್ಲರ || ೨೫೯ ||

ಲಕ್ಷ್ಮಣ—

ಬಂದ ಬಂದ | ಪಡೆಯನೆಲ್ಲ | ಕೊಂದು ಕೊಂದು | ಬಿಸುಟ ಮೇಲೆ |
ನಿಂದನು ಲ | ಕ್ಷ್ಮಣನು ಕಾದ | ಲೆಂದು [2]ಗರುವ[2] | ದಿ—||
ಒಂದೆ ಬಾಣ | ವೆಸೆದು,ರಥ | ದಿಂದ ಕೆಡಹೆ | ಮೂರ್ಛೆಯೋದ |
ಅಂದವ ಕಾ | ಣುತ್ತ,ಸುರ | ರಂದು ಪೊಗಳ | ಲಂಬರದೊಳು || ೨೬೦ ||

(ಎಲ್ಲರೂ ನಿಷ್ಕ್ರಮಿಸುವರು. ರಾಮನ ಪ್ರವೇಶ)

೮೮ ಕಂದಪದ್ಯ

ಲಕ್ಷ್ಮಣ ರಥದೊಳು ಮೈಮರೆ
ದಾಕ್ಷಣದೊಳ್ ದೂತನೈದಿ ಪೇಳಲ್ ಕೇಳ್ದು |
ಆ ಕ್ಷಿತಿಧರ ಮನಮರುಗಿದ
ನಿಕ್ಷ್ವಾಕ್ವಕುಲದೀಪ ನಂದಿದುದೆ ಹಾಯೆನುತಂ || ೨೬೧ ||

---

1 ಬಿ (ಕಾ) 2 ಹರುಷ (ಕಾ)

೮೯ ರಾಗ ತೋಡಿ—ಏಕತಾಳ ೪

ರಾಮ—

ಲಕ್ಷ್ಮಣ ರು । ದ್ರಪ್ರತಾಪ । ಇಕ್ಷ್ವಾಕ್ವಕ್ಕುಲ । ದೀಪ—।
ನೀ ಕ್ಷಿತಿಯೊಳ್ । ಬಿದ್ದಮೇಲೆ । ದೀಕ್ಷೆ ಯೇತ । ಕಿನ್ನು ॥ ೨೬೨ ॥

ಬ್ರಹ್ಮಾದಿ ದೇ । ವರ್ಕಳೊಳು । ತಮ್ಮಗೆಣೆ । ಯುಂಟೆ—।
ನಮ್ಮ ಶೌರ್ಯ । ತಗ್ಗಿ ಕ್ಷಾತ್ರ । ಧರ್ಮ ಕೆಟ್ಟ । ತಿನ್ನು— ॥ ೨೬೩ ॥

ಕರ್ಮವಶ । ವಲ್ಲದಿಷ್ಟು । ವರ್ಮ ಬಾರ । ದಲ್ಲ—।
ಸುಮ್ಮನೇ, । ಕಳುಹಿ ಮೋಸ । ನಮ್ಮಿಂದಾಯಿ । ತಲ್ಲ— ॥ ೨೬೪ ॥

೯೦ ರಾಗ ನೀಲಾಂಬರಿ—ರೂಪಕತಾಳ ೨

ಏನ,ಮಾ । ಡಲಿ ನಾನು । ಈ ವಿಷಮು, । ಗತಿಗಿನ್ನೀ ।
ಸೂನುಗಳಿಂ । ದೀವಂಶಕೆ । ಊನವು ಬಂ । ತಲ್ಲ— ॥ ಪಲ್ಲವಿ ॥

ಶರಧಿಗೆ ಸೇ । ತುವ ಕಟ್ಟಿದೆ । ಸರ್ವರಿಗೂ । ಸಮನೆನಿಸಿದೆ ।
ಧುರದೊಳು ದು । ಷ್ಟರ ಶಿರಗಳ । ತರಿದೆನು ರ । ಕ್ಕಸರ—॥
ಪರಶುವಿನಾ । ಯುಧ ಸೆಳೆದೆನು । ಪಂಥವ ಹಿ । ಗ್ಗಿಸಿದೆನು ಈ ।
ತರಳರೊ ವಂ । ಶವ ಕೆಡಿಸುವ । ದುರುಳರೊ ನಾ । ನರಿಯೆ— ॥ ೨೬೫ ॥

ಏತಕೆ ತೊಡ । ಗಿದೆ ಯಜ್ಞವ । ನೇತಕೆ ಕಳು । ಹಿದೆಯನುಜರ ।
ಏತಕೆ ತಡೆ । ದರೊ ತರಳರು । ಏತಕೆ ಕಾ । ದಿದರೊ—॥
ಏತಕೆ ಮುಡಿ । ದರೊ ಇವರಿ । ನ್ನೇತಕೆ ರಾ । ಜ್ಯವು ತನಗಿ ।
ನ್ನೇತಕೆ ಜೊರೆ । ತನವೆಂಬುದು । ಪಾತಕ ಶಿವ । ಶಿವನೆ— ॥ ೨೬೬ ॥

೯೧ ಕಂದಪದ್ಯ

ಅನುಜನ ಕೇಡಿಂಗೋಸ್ಕರ
ವನಜಾಂಬಕ ಚಿತ್ತದಲ್ಲಿ ಮರುಗುತ್ತಿರಲು ।
ಘನಶೌರ್ಯಾಗ್ರಣಿ ಕೈಕಾ
ತನುಜಂ ಬಂದಣ್ಣನಂಘ್ರಿಗೆರಗುತ ಪೇಳ್ದಂ ॥ ೨೬೭ ॥

(ಭರತನ ಪ್ರವೇಶ)

೯೨ ರಾಗ ಸೌರಾಷ್ಟ—ತ್ರಿವುಡೆತಾಳ ೩

ಭರತ—

ಅಣ್ಣ ಚಿಂತಿಸ । ಬೇಡ ಕಾರ್ಯವ ।
ಬಣ್ಣಗಾರರ । ಮಾತಿದಲ್ಲದೆ ।
ಪುಣ್ಯನಿಧಿ ಲ । ಕ್ಷ್ಮಣನ ಕೆಡಹುವ । ಚಿಣ್ಣರುಂಟೆ ॥ ೨೧೮ ॥

ನಾಡಮಾತಿಗೆ । ನೀವು ಚಿಂತೆಯ ।
ಮಾಡಲೇತಕೆ । ಪುಸಿಯೊ ದಿಟವೋ ।
ನೋಡಿ ಬರುವೆನು । ಕಳುಹು ತನ್ನನು । ಗಾಢದಿಂದ ॥ ೨೧೯ ॥

ಅಪ್ಪಣೆಯ ಕೊಡಿ । ಎನುತಯೋಧ್ಯೆಯೊ ।
ಳಿಪ್ಪ ಬಲವನು । ನೆರಹಿ ಕಡೆಗಾ ।
ಸರ್ಪಶಯನಗೆ । ಕರಮುಗಿದ ಕಂ । ದರ್ಪರೂಪ ॥ ೨೨೦ ॥

೯೩ ಶಾರ್ದೂಲವಿಕ್ರೀಡಿತ ವೃತ್ತ

ಪಾರಾವಾರಸಮಾನಮಾರ್ಬಲಗಳಿಂ ಸೇನಾನಿಗಳ್ ಸಂಗಡ ।
ಭೇರೀಶಂಖ ಮೃದಂಗ ವಾದ್ಯರವದಿಂ ನಾನಾಭ್ರಘೋಷಂಗಳಿಂ ॥
ಶೂರತ್ವಾನ್ವಿತರಾಗಿ ಮುತ್ತಿದರಿಯಂ ತೋರಿಪ್ಪ ಭೂಪಾಲರಾ ।
ಮಾರಾರಿ ತ್ರಿಪುರಂಗಳಂ ಮುರಿವವೋಲೋರಂತೆ ಬೆಪ್ಪಾಗಲು ॥ ೨೨೧ ॥

೯೪ ರಾಗ ಕಲ್ಯಾಣಿ—ಏಕತಾಳ ೪

ಕುಶಲವರು—

,ಭರತ ಸಂ । ಗರಕೆಂದು ।, ಬಂದ—ನೆಂ । ಬುದ ಕಂಡು ।
,ಅರಿತ—ರ್ಬಾ । ಲಕರಂದು ।,ತ್ವರಿತಾಗ್ರ । ಗೊಂ,ಡು—॥
,ಶರತುದಿ । ಗೇರಿಸಿ ವ್ಯೆ ।,ಮರೆತಿರ । ಬಾರದೆಂದು ।
,ತರತರ । ಬಾಣಗಳ ।, ಎಚ್ಚರೊ । ಬ್ಬರೊಂದೊಂದು ॥ ೨೨೨ ॥

,ಎಚ್ಚ ಬಾ । ಣಗಳು ಬಂದು ।,ಕಚ್ಚಿತೆ । ಲ್ಲಗೊಂಡೊಂದು ।
,ಬೆಚ್ಚಿತ । ವರದಂಡು ।,ಆಶ್ಚರ್ಯ । ಗೊಂ,ಡು—॥
,ಬಚ್ಚರು । ತವ್ಮೊಳವು ।,ಹೆಚ್ಚಿತು । ವಿಕ್ರಮವು ।
,ಮಚ್ಚರ । ದಿಂದ ಕಂಡು ।,ಕೊಚ್ಚಿತ । ವರ ದಂಡು ॥ ೨೨೩ ॥

,ಬಾಲಕರ್ । ಳ,ವೊಗದ ।,ಹೋಲುವೆ । ಕಂ,ಡಾಗ ।
,ಶ್ರೀಲೋಲ । ಸಾಹದ್ದೇ ।, ಹೋಲುವೆ । ವೊಗದ—॥

,ಲೀಲೆಯಿಂ । ದಲಿ ಬಂದು ।,ಪೇಳಲಿಂ । ತೆಂದು ಹನುಮ ।
,ಕೇಳಬೇ । ಕದ ನೆಂದು ।, ಭರತ ನ್ಯೆ । ತಂದು— ॥ ೨೭೪ ॥

೯೫ ರಾಗ ಕೇದಾರಗೌಳ—ಅಷ್ಟತಾಳ

ಭರತ—

ಕಂದ ನಿ । ಮ್ಮನು ಪೆತ್ತ । ತಂದೆ ತಾ । ಯಿಗಳಾರು ।
ಬಂದುದೆ । ಲ್ಲಿಂದ ನೀ । ವು—॥
ಇಂದು ನ । ಮ್ಮಯ ವಾಜಿ । ಯನು ಕಟ್ಟಿ । ಅನುಜನ ।
ಕೊಂದ ಕಾ । ರಣವದೇ । ನು— ॥ ೨೭೫ ॥

ಈ ಧುರ । ದೊಳು ವೊದ । ಲಾದ ದು । ರ್ಬುದ್ಧಿಯ ।
ಕಾದೆ ನಿ । ಮ್ಮವಗುಣ । ವ—॥
ಕ್ರೋಧವ । ಬಿಟ್ಟು ಹ । ಯವ ಬಿಡಿ । ಹಿಂದಕಿ ।
ನ್ನಾದರೂ । ನಡೆಯಿರ । ಣ್ಣ— ॥ ೨೭೬ ॥

ಕುಶಲವರು—

ತುರಗವ । ಬಿಡಬೇಕಾ । ದರೆ ಕೆಲ । ಸಗಳುಂಟು ।
ಮರುಳರಂ । ದವಲಿ ನೀ । ವು—॥
ತರಳರಿ । ರೆಲ್ಲಿ ನೀ । ವಾರೆಂದು । ಬೆಸಗೊಂಬ ।
ದುರುಳತ । ನಗಳೇ, । ನು— ॥ ೨೭೭ ॥

ಸಂಗರ । ದಲಿ ಬಿಡು । ಸರಳ ಸಾ । ಹಸದಿ ಪ್ರ ।
ಸಂಗವೇ । ತಕೆ ಮರು । ಳಿ—॥
ಅಂಗದೊ । ಳಗೆ ಭಯ । ವುಳ್ಳೊಡೆ । ನಿನಗೆ ತು ।
ರಂಗದಾ । ಶೆಯನು ಬಿ । ಡು— ॥ ೨೭೮ ॥

೯೬ ಉತ್ಸಾಹದಂಡಕ—ಮಾರವಿ ರಾಗ—ಏಕತಾಳ ೧-೨

ಏನೆಂ । ಜೆ ಬಂದ । ಸೇನೆಗ । ಳೆಲ್ಲವ ।
ಸೂನುಗ । ಳಿರ್ವರು । ಒಂದೇ । ನಿಮಿಷಕೆ ।
ಆನೆ ಕು । ದುರೆ ಮಂದಿ । ವಾನರಾ । ಧಿಪ ಸಹ ।
ಮಾಣದೆ । ಭರತನ । ಕಾನನ । ದೊಳಗೆ ॥ ೨೭೯ ॥

ಹತ್ತು ಭ । ರತಗಿ । ಪ್ಪತ್ತು ನ । ಳಗೆ ಮೂ ।
ವತ್ತು ಜಾಂ । ಬವಗೆ ಸಾ । ಲ್ವತ್ತು ನೀ ।, ಲಗೈ ।
ವತ್ತಂ । ಗದಗರು । ವತ್ತು ಗ । ವಯನಿಗೆ ।
ಮತ್ತು ಮ ।, ತ್ತಂಬ । ನಿತ್ತು ಕಾ ।, ದಿದರು । ಏನಾನೆಂಬೆ ॥ ೨೮೦ ॥

ಮುರಳಿದ । ಹನುಮ ಬಿ । ದ್ದುರುಳಿ ಜಾಂ । ಬವನೆ ।
ಜ್ಜರಳಿದ । ಸುಷೇಣ । ತೆರಳಿದ । ಗವಯನು ।
ನರಳಿದ । ನಳ ಬೀ । ಸುರುಳಿದಂ । ಗದ ಕ ।
ಣ್ಣರಳಿದ । ಭರತನು । ತೆರಳಿದ । ರೆಲ್ಲ—। ಏನಾನೆಂಬೆ ॥ ೨೮೧ ॥

೯೭ ಭಾಮಿನಿಷಟ್ಪದಿ

ಕೆಲರು ಬಿಸುಟರು ಧನುವ ರಣದಲಿ
ಕೆಲರು ಶಸ್ತ್ರವ ಮರೆದರಲ್ಲಿಯೆ
ಕೆಲರು ಪ್ರಾಣವ ತೊರೆದರಲ್ಲಿಯೆ ಕೆಲರು ಮೂರ್ಛೆಯಲಿ ।
ಕೆಲರು ಮುರಳಿದರದರೊಳಗೆ ಕೆಲ
ಕೆಲರಯೋಧ್ಯೆಗೆ ಪೋಗಿ ಪೇಳ್ದರು
ಕೆಲರು ಬದುಕಿದೆವೆಂದು ಬಿಟ್ಟೋಡಿದರು ಸಂಗರವ ॥ ೨೮೨ ॥

(ಕುಶಲವರ ಸಮೇತ ಎಲ್ಲರೂ ಹೊರಟು ಹೋಗುವರು)

೯೮ ರಾಗ ಘಂಟಾರವ—ಜಂಪೆತಾಳ ೨

ರಾಮ—

ಭರತ ಸಂ । ಗರದಿ ಮ್ಮೈ । ಮರೆದನೆಂ । ಬುದ ಕೇಳಿ ।
ಅರಿತ ರಾ । ಘವನೆಂದು । ನೆರೆ ಕೇಡಿ । ದೆಂದು ॥ ೨೮೩ ॥

ಯಾಗದೀ । ಕ್ಷೆಯ ನಿಲಿಸಿ । ಬೇಗ ಮಂ । ತ್ರಿಯ ಕರೆಸಿ !
ರಾಘವನು । ಹೊರಪಯಣ । [1]ಕಾಗಿ ನಡೆ । ತಂದ[1] ॥ ೨೮೪ ॥

೯೯ ರಾಗ ಅಹೇರಿ—ಜಂಪೆತಾಳ ೩

ಪುರವ ಹೊರ । ಸಂಟ ಶ್ರೀ । ರಾಮು—।—ತನ್ನ ।
ಪರಿವಾರ । ಸಹಿತ ಸಂ । ಗರಕೆ ನಿ । ಸ್ಸೀಮ— ॥ ಪಲ್ಲವಿ ॥

1 ವಾದನಾಕ್ಷಣಕೆ (ಕಾ)

ಪೊಡವಿಯುಗ । ಲದೊಳೆಯುದ್ದ । ವಾನೆಗಳ । ಸೇನೆಗಳ ।
ಎಡಬಲಕೆ । ಬಿಡದಿರುವ । ದಂತಿಗಳ । ಪಂತಿಗಳ ।
ನಡನಡುವೆ । ಸಂದಣಿಸಿ । ವಾಜಿಗಳ । ತೇಜಿಗಳ ।
ಜಡಿವ ವಾ । ದ್ಯಗಳ ಜೋ । ದ್ಯಗಳ— । ನಡೆದು ಸಂ ।
ಗಡ ಬರುವ । ವಂದಿಮಾ । ಗಧರ ಪ । ದ್ಯಗಳ— ॥ ೨೮೫ ॥

ಶಿವನ ಹಣೆ । ಗಣ್ಣೊ ಪ್ರಳ । ಯಾಂಧಕಾ । ರದ ಮಳೆಯೊ ।
ವಿವರಿಸಲು । ವಡಬಾನ । ಳನೊ ಕಾಲ । ಭೈರವನೊ ।
ಜವನ ಕಡೆ । ಚತುರಂಗ । ಮಾರ್ಬಲವೊ । ಎನುತ ಜನ ।
ನಿವಹವಾ । ಶ್ಚರ್ಯಗೊಳು । ತಿರಲು— । ಕುಶಲವರಿ ।
ರುವ ವನವ । ಸುತ್ತಲೂ । ಕವಿಯುತ್ತ । ಬರಲು— ॥ ೨೮೬ ॥

(ಯುದ್ಧಸನ್ನದ್ಧನಾದ ರಾಮನ ಪ್ರವೇಶ)

೧೦೦ ರಾಗ ಗೌಳಮುಲಹರಿ—ಅಷ್ಟತಾಳ ೧

ರಾಮ—

ಕುಶಲವ । ರನು ಕಂಡ । ರಾಮ— । —ಸಾ ।
ಹಸದಿ ಬಿಲ್ । ಬಾಣ ರಂ । ಜಿಸಲು ನಿ । ಸ್ಸೀಮ— ॥ ಪಲ್ಲವಿ ॥

ರಣದಿ ಬಿ । ದ್ದವರನ್ನು । ನೋಡಿ । —ಸತ್ತ ।
ಹೆಣಗಳ । ನೆಳೆದು ತಿ । ನ್ನುವ ನಾಯ । ಗಾಡಿ— ।
ನೊಣಗಳು । ಕವಿದೊಂದು । ಗೂಡಿ— । —ಲಕ್ಷ್ಮು ।
ಮಣನ ನೋ । ಡುತ ಮನ । ದೊಳು ಚಿಂತೆ । ಮಾಡಿ— ॥ ೨೮೭ ॥

ಭರತಶ । ತ್ರುಘ್ನರ । ಕಂಡ— । —[1]ಮನ ।
ಕರಗಿ ಕಾ । ತರಿಸುತ್ತ । ತಾ[1] ಮೂರ್ಛೆ । ಗೊಂಡ— ।
ಕರಿ ತುರ । ಗವು ರಥ । ತಂಡ— । —ಬಿದ್ದು ।
ಹೊರಳಲು । ರಣದಲ್ಲಿ । ಸುಭಟರ । ಮುಂಡ— ॥ ೨೮೮ ॥

೧೦೧ ಭಾಮಿನಿಷಟ್ಪದಿ

ರಣದೊಳಗೆ ಪವಡಿಸಿದ ವೀರರ
ಗಣಿಸಿ ತುದಿಯಾಗುವರೆ ಎಲ್ಲಿಯು
ಹೆಣನ ಮಯವೇ ಮಯವು ಮುನಿವಾಲ್ಮೀಕಿಯಾಶ್ರಮದಿ ।

1 ಕಾ । ತರಿಸಿ ಚಿಂ । ತಿಸಿ ಮನ । ದೊಳು (ಕಾ)

ಗುಣಕೆ ಹುರುಡೇ ಜಾಣರೆನುತಾ
ಕ್ಷಣಕೆ ಬಂದಾ ಮಕ್ಕಳಿರ್ವರ
ಕೆಣಕಿ ಮಾತಾಡಿದನು ತನ್ನಯ ರಾಜನೀತಿಗಳ ‖ ೨೮೯ ‖

೧೦೨ ರಾಗ ಕಾಪಿ—ಅಷ್ಟತಾಳ ೧

ರಾಮ—

ಇನ್ನಾ, । ದರು ಬೇಡ । ಬೇಡ ಮ । ಕ್ಕಳಿರ ।
ಸನ್ಮತ । ನಿಮಗಲ್ಲ । ಇದು ಬಾಲ । ಕರಿರ— ‖ ಪಲ್ಲವಿ ‖

ಶಿಶುಗಳಾ । ಗಿಹ ನಿಮ್ಮೊ । ಳಿಮಗೆ ಕಾ । ಳಗವೇಕೆ ।
ವಶವಾದ । ಡಾದರಾ । ಗಲಿ ನಿಮ್ಮ । ರಾಜ್ಯದ ।
ಪೆಸರೇನು । ತಂದೆ ತಾ । ಯ—ಬಿಲ್ । ವಿದ್ಯ ಕ ।
ಲಿಸಿದವ । ನಾವ ರಾ । ಯ—ನೀ । ವಿಬ್ಬರು ।
ಋಷಿಯಾಶ್ರ । ಮದೊಳಿಪ್ಪ । ಹಸನೇನು । ಮಾಯ— ‖ ೨೯೦ ‖

ಕುಶಲವರು—

ಮಕ್ಕಳು । ನಮ್ಮೊಳು । ಕಾದಲಾ । ರದೆ ನೀ ಹೆ ।
ಮಕ್ಕಳಂ । ದದಿ ನಮ್ಮ । ನಾರೆಂದು । ಬೆಸಗೊಂಬು ।
ದಕ್ಕೆ ನ । ಮ್ಮೊಡನೆ ನಂ । ಟಿ—ನ । ಮ್ಮನು ಕಕ್ಕು ।
ಬೆಕ್ಕಾಗಿ । ಕಾಂಬುದುಂ । ಟಿ—ಕ್ಷ । ತ್ರಿಯರ ವಂ ।
ಶಕ್ಕಿದು । ನೀತಿ ಕಾ । ದಲು ಮನ । ಸುಂಟಿ— ‖ ೨೯೧ ‖

ಚತುರಸಾ । ಗರವನಾ । ಳುವ ದೊರೆ । ನೀನು ನಿ ।
ನ್ನತಿಶಯ । ಬಿರುದು ವಿ । ಕ್ರಮಶಾಲಿ । ಯಾದರೆ ।
ಗತಿಯಿಲ್ಲ । ದವರು ನಾ । ವು—ಕಾ । ದುವ ವೀರ ।
ರ್ಮತಿಯಿಲ್ಲ । ದಿಹಿರಿ ನೀ । ವು—ನಿ । ಮಗೆ ಬಾಣ ।
ಪ್ರತಿಯಾಗಿ । ಹೂಡಿ ಕಾ । ದುವಡರಿ । ಯೆವು ನಾವು ‖ ೨೯೨ ‖

ವಚನ ‖ ಇಂತೆಂಬ ಬಾಲಕರ ನುಡಿಯಂ ಕೇಳಿ ರಾಮನು ಸುಗ್ರೀವನೊಡನೆ ಏನೆಂದನು ಎಂದರೆ—

೧೦೩ ರಾಗ ಘಂಟಾರವ—ಜಂಪೆತಾಳ ೧

ಕಪಿರಾಜ । ಕೇಳಿದೆಯ । ಬಾಲಕರ । ನುಡಿಗಳನು ।
ನಿಪುಣರಿವ । ರಾವ ಪುರು । ಷಂಗೆ ಜನಿ । ಸಿದರೊ ‖ ೨೯೩ ‖

ಈಗಲಿವ | ರೊಳು [1]ಕದನ[1] | ಹೇಗಾಗು | ವುದೊ ಕಾಣೆ |
ನಾಗಭೂ | ಷಣ ಬಲ್ಲ | ನಟನೆಯಿದ | ನೆಲ್ಲ || ೯೪ ||

ನಮ್ಮ ಕಾ | ರ್ಯದ ಮೇಲೆ | ತಮ್ಮಂದ್ಯ | ರಳಿದಿರಲು |
ಎಮ್ಮ ಜೀ | ವಗಳಿದ್ದು | ಇನ್ನೇಸು | ಫಲವು || ೯೫ ||

ವಚನ || ಹೀಗೆಂದು ನಿಶ್ಚಯವಂ ಮಾಡಿ ರಣಕೆ ಸನ್ನದ್ಧನಾದ ರಾಮನಂ ಕಂಡು ಕುಶನು ಲವನೊಡನೆ ಏನೆಂದನು ಎಂದರೆ—

೧೦೪ ರಾಗ ಸೌರಾಷ್ಟ್ರ—ಅಷ್ಟತಾಳ ೧

ಕುಶ—

ಮೊದಲು ಬಂ | ದವರಂಥ | ಹದಗರ | ನಲ್ಲೀತ |
,ನೋಡೆ | ತ—| ಮ್ಮ—|—ಈತ |
ಗಿದಿರಾಗಿ | ನಿಲುವಡೆ | ಸದರವ | ಲ್ಲವೊ ಜೋಕೆ |
,ನೋಡೆ | ತ—| ಮ್ಮ— || ೯೬ ||

ಬಿಲ್ಲುವಿ | ದ್ಯಗಳ ತಾ | ಬಲ್ಲ ಕೋ | ವಿದನೀತ |
,ನೋಡೆ |—ತ—| ಮ್ಮ—|—ಮಾತಿ |
ನಲ್ಲಿ ಚ | ದುರಗೆಣೆ | ಯಿಲ್ಲ ಕೇ | ಳೆನ್ನಾಣೆ |
,ನೋಡೆ | ತ—| ಮ್ಮ— || ೯೭ ||

ತುಂಗವಿ | ಕ್ರಮ ರಣ | ರಂಗಸಾ | ಹಸಿಯಿತ |
,ನೋಡೆ | ತ—| ಮ್ಮ—|—ಈಗ |
ಸಂಗರ | ದೊಳು ನಮ್ಮ | ಭಂಗಕಿ | ಕ್ಕದೆ ಬಿಡ |
,ನೋಡೆ | ತ—| ಮ್ಮ— || ೯೮ ||

೧೦೫ ರಾಗ ನಾದನಾಮಕ್ರಿಯೆ—ಅಷ್ಟತಾಳ ೧

ಲವ—

ಅಣ್ಣನಾ | ಡಿದ ಮಾತ | ಲವ ಕೇಳಿ |—ಅಗ್ರ |
ಗಣ್ಯನು | ಮನದಿ ಧೈ | ರ್ಯವ ತಾಳಿ |
ಕಣ್ಣಾರೆ | ನೋಡಿವನ | ಪಾಡೇನು |—ತಾಯ |
ಪುಣ್ಯವಿ | ದ್ದರಸಡ್ಡೆ | ಮಾಡೆನು || ೯೯ ||

1 ಕಾದೆ (ಕಾ)

ಧನು ಶರ | ವನು ಕೈಯೊ | ಳ್ಪಿಡಿದನು |—ತಾಯಿ |
ಮುನಿವಾಲ್ಮೀ | ಕಿಗೆ ಕೈಯ | ಮುಗಿದನು |
ಮಣಿಸಿ ಬಿ | ಲ್ಲಿಗೆ ತೆಬ್ಬ | ಬಿಗಿದನು |—ರಾಮು |
ನನು ತಾಗೆ | ನ್ನುತ ಬಾಣ | ವೆಸೆದನು || ೩೦೦ ||

೧೦೬ ವಾರ್ಧಿಕಷಟ್ಪದಿ

ಹಲವು ಮಾತಾಡಿ ರೋಷಿತರಾಗಿ ತಮ್ಮೊಳಗೆ
ಕಲಹ ಕಾರಣಗಳಾಯಿತು ತಂದೆಮಕ್ಕಳಿಗೆ
ಉಳಿದ ಪಟುಭಟರೆದೆಯು ತಲ್ಲಣಿಸಿತಲ್ಲಲ್ಲಿ ಬೆರಗಾಗಿ ನೋಡುತಿರಲು |
ಪ್ರಳಯಕಾಲದ ರುದ್ರನುರಿಗಣ್ಣೊ ವಡಬಾನ
ಳನ ಬಾಯ್ದೆರೆಯೊ ಕಾಲಭೈರವನ ದಾಡೆಯೋ
ಎನಲಾರ್ಭಟಿಸುತ ಕಾದಲು ರಾಮುಗಿದಿರಾಗಿ ಶರಬಂದು ಕವಿಯುತಿರಲು
|| ೩೦೧ ||

೧೦೭ ರಾಗ ಶಂಕರಾಭರಣ—ಮಟ್ಟೆತಾಳ ೨

ರಾಮು—

ವೀರ ರಾಮು | ರಣದಿ,ಮುದ | ವೇರಿ ಹೂಂ,| ಕರಿಸಿ ಸರಳ |
ವಾರಿಧಿಯವೊ | ಲೆಸೆದು ಕುಶನ | ಮೋರೆಗಿಟ್ಟ | ನು—||

ಕುಶ—

ಮಾರಿ ಮುಂದು | ವರಿದು ಬಾಣ | ಘೋರುಗುಡಿಸಿ | ಬಹದ ಕಂಡು |
ಬೇರೆ ಬೇರೆ | ಕಡಿದು ಬಿಸುಟ | ಧಾರಿಣಿ,ಯ | ಲಿ— || ೩೦೨ ||

ಕಂಡು ಪರ್ವ | ತಾಸ್ತ್ರಗಳನು | ಮುಂಡೆಗಾಗಿ | ಬಿಡಲು ತರಳಾ |
ಖಂಡಲಾಯು | ಧಂಗಳಿಂದ | ಖಂಡಿಸಿರ್ದ | ನು—||

ಲವ—

ಪುಂಡರೀಕ | ನಯನನೆಸೆದ | ತಂಡ ತಂಡ | ದುರಗಶರವ |
ದಿಂಡುಗಡಿದ | ಗರುಡಬಾಣ | ದಿಂದ,ಲವ | ನು— || ೩೦೩ ||

ಭಾಪು ಭಳಿರೆ | ತರಳನೆಂದು | ಚಾಪವನ್ನು | ನೆಗಹಿಕೊಂಡು |
ಭೂಪನೆಸೆದ | ನಗ್ನಿಶರವ | ಕೋಪದಿಂದ | ಲೆ—||
ತಾಪವಡರಿ | ಜಗವನೆಲ್ಲ | ರೂಪುಬಾಣ | ಸುಡುತಲಿರಲು |
ಶ್ರೀಪತಿಯಾ | ತನಯ ಜಲದಿ | ಮಾಪುಗೈದ | ನು— || ೩೦೪ ||

ಕುಶ—

ಎಚ್ಚ ಬಾ,। ಣಂಗಳೆಲ್ಲ । ನುಚ್ಚು ನೂ,। ರಾಗೆ ಕಂಡು ।
ಕಿಚ್ಚಿನಂತೆ । ಕುಶಗೆ ಶೌರ್ಯ । ಹೆಚ್ಚಿತಾಗ । ಲೆ— ॥ ೩೦೫ ॥

ಹಿಂದೆ ರಾವ । ಣಾದಿಗಳನು । ಕೊಂದು [1]ಬಂ,। ದಿ[1]ರುವ ಕಣೆಗ ।
ಳೊಂದುಳಿಯ,। ದಂತೆ ರಣದಿ । ಸಂದವಾಗ । ಲೆ—॥
ಕಂದರಾಟ । ಮಾರಿಯಾಯಿ । ತೆಂದು ಪೇಳಿ । ಕುಶನ ಕಣ್ಣ ।
ಮುಂದೆ ನಿಲುವ । ವೀರರಾವ । ರೆಂದರಾಗ । ಳೆ— ॥ ೩೦೬ ॥

೧೦೮ ರಾಗ ಕೇತಾರಗೌಳ—ಅಷ್ಟತಾಳ ೧

ಮಕ್ಕಳೊ । ಡನೆ ರಾಮ । ಚಂದ್ರದೇ । ವಗೆ ಮನ ।
ದಕ್ಕರುಂ । ಟೆಂಬುದ । ನು—॥
ಲೆಕ್ಕಿಪ । ಬಗೆಯಂತೆ । ಕುಶನಿಟ್ಟ । ಶರ ಬಂದು ।
ಹೊಕ್ಕಿತಂ । ದೊಡಲೊಳ । ಗೆ— ॥ ೩೦೭ ॥

ರಾಮ—

ರಕ್ಕಸ । ರಿಪು ಬಸ । ವಳಿದು ಬೇ । ಸಗೆಯ ರ್‍ಘು ।
ಳಕ್ಕೆ ಬಾ । ಡಿದ ಲತೆ । ಯ—॥
ಮಿಕ್ಕಂತೆ । ರಥದಿಂದ । ಬಿದ್ದು ಮೂ । ರ್ಛಿತನಾಗಿ ।
ಗಕ್ಕನೆ । ಪವಡಿಸಿ । ದ— ॥ ೩೦೮ ॥

ಲೋಕನಾ । ಯಕ ರಣ । ದೊಳು ಮಲ । ಗಿರೆ ಸುರಾ ।
ನೀಕವಂ । ಬರದೊಳ । ಗೆ—॥
ರಾಕೇಂದು । ಮಂಡಲ । ವಿರದೆ ಬಾ । ಧಿಸೆ ರಾಹು ।
ಸೋಕಿದಂ । ದದ ಮುಖ । ದ— ॥ ೩೦೯ ॥

ಶ್ರೀಕಂಬು । ಕಂಠದೊ । ಳೆಸೆದು ರಾ । ಜಿಸುತಿಪ್ಪ ।
ಏಕಾವ । ಳಿಯ ಹಾರ । ವ—॥
ಆ ಕುಮಾ । ರರು ಕಂಡು । ಭರತಶ । ತ್ರುಘ್ನರಿ ।
ದ್ದಾ ಕಡೆ । ಗೈದಿದ । ರು— ॥ ೩೧೦ ॥

ಕುಶ—

ವಿಪರೀತ । ವಿದು ನೋಡು । ತಮ್ಮ ಕ । ಟ್ಟಿದಮುತ್ತಿ ।
ನಪರಂಜಿ । ಕೊರಳ ದಂ । ಡೆ—॥

---

1 ಕೊಂದು ಬ (ಕಾ, ಅ)

ಅಪರೂಪ | ವಿದು ನಮ್ಮ | ತಾಯಿಗಾ | ಗುವದೆಂದು |
ಅಪಹರಿ | ಸಿದರಿರ್ವ | ರು— || ೩೧೧ ||

ತಪಸಿಗೆ | ಕಾಣಿಕೆ | ಕೊಡಬೇಕೆಂ | ದೆನುತಲೆ |
ಕಪಿಗಳಿ | ರ್ವರ ಸಾಯು | ದ—||
ನಿಪುಣರೆಂ | ದ್ಧ ಡೆಗ್ಯೆಯ | ಬಿಗಿಯೆ ಮಾ | ರುತಿ ಕಂಡು |
ಲಪಗುಟ್ಟು | ತಿಂತೆಂದ । ನು— || ೩೧೨ ||

೧೧೯ ರಾಗ ಆಹೇರಿ—ಅಷ್ಟತಾಳ ೧

ಹನುಮಂತ—

ಕಂಡಿರೇ |—ನೀವು | ಕಂಡಿರೇ—|
ಕಂಡಿರೆ | ನೀವು ಕಂ | ಡಿರೆ ಕುಶ | ಲವರು—|
ಹಿಂಡುಸೇ | ನೆಯನೆಲ್ಲ | ಭಂಡುಮಾ | ಡಿದರು || ಪಲ್ಲವಿ ||

ರಣದೊಳ | ಗೆಲ್ಲರ | ಮಲಗಿಸಿ | ಮತ್ತಾ |
ಗುಣನಿಧಿ | ರಾಮನ | ಕೊರಳಿಂದ । ಕಿತ್ತ—||
ಮಣಿಗಣ | ರತುನ ಹಾ | ರವನೆಲ್ಲ | ಪೊತ್ತಾ |
ಕ್ಷಣದೊಳ | ಗೈದಿ ಬ | ರುವರು ನ | ಮ್ಮತ್ತ— || ೩೧೩ ||

ಕೊಂಡುಹೋ | ಗಲಿ ನಮ್ಮ | ನಲ್ಲಿಗೆ | ಸೀತೆ—|
ಕಂಡರೆ | ರಕ್ಷಿಸು | ವಳು ಜಗ | ನ್ಮಾತೆ—||
ಪುಂಡುಹು | ಡುಗರೊಳು | ಜಗಳಾಟ | ವೇಕೆ [1]ಭೂ[1]|
ಮಂಡಲ | ದೊಳು ನಮ್ಮ | [2]ಕೊಂ[2]ದಂತೆ | ಜೋಕೆ || ೩೧೪ ||

(ಎಲ್ಲರೂ ನಿಷ್ಕ್ರಮಿಸುವರು)

ವಚನ ‖ ಇಂತೆಂದು ಹನುಮಜಾಂಬವರು ಪ್ರಸಂಗಿಸುತ್ತಿರಲಾಗಿ ಅತ್ತಲಾ ಜಾನಕಿಯು ಪುತ್ರರು ಬಾರದಿರಲು ಏನೆನುತಿರ್ದಳದೆಂತೆನೆ—

---

1 ರಣ (ಕಾ) 2 ಕೊಲ (ಕಾ)

(ಸೀತೆಯ ಪ್ರವೇಶ)

೧೧೦ ರಾಗ ಮಧ್ಯಮಾವತಿ—ಏಕತಾಳ ೪

ಸೀತೆ—

,ತರಳಲ । ವನ ಕುಶ ।,ತರುವೆನೆಂ । ದೆನುತಲಿ ।
,ತೆರಳಿಪೋ । ದವನಿನ್ನೂ ।,ಬರಲಿಲ್ಲ । ವೇ,ಕೆ— ॥ ಪಲ್ಲವಿ ॥

,ಏನುಮಾ । ಡಿದರೊ ಇ ।,ನ್ನೆಂತು ಕಾ । ದಿದರೊ ಈ ।
,ಸೂನುಗ । ಳಳಿದರೊ ।,ಕಾನನ । ದೊಳಗೆ ॥
,ತಮ್ಮನ । ಕರೆದು ತಾ ।,ರೆಂದೆನು । ತಲೆ ಮಗನ ।
,ಸುಮ್ಮನೆ । ಕಳುಹಿದೆ ।,ನಯ್ಯಯ್ಯೊ । ವಿಧಿಯೆ— ॥ ೩೧೫ ॥

,ಹದಿಮೂರು । ವರುಷವಾ ।,ಗದ ಬಾಲ । ರಿವರೀಗ ।
,ಕದನದೊ । ಳೆಂತು ಕಾ ।,ದುವರೆಂದು । ತಿಳಿಯೆ ॥
,ಸದನದೊಳ್ । ಮುನಿಪನಿ ।,ಲ್ಲದ ವೇಳೆ । ಯಲಿ ಲವ ।
,ಕುದುರೆ ಬಂ । ದುದರನ್ನು ।,ಕಟ್ಟಿದ । ನೇ,ಕೊ— ॥ ೩೧೬ ॥

,ಬೇಡ ಇಂ । ತೆಂಬ ಬಾ ।,ಲಕರ ಮಾ । ತನು ಮೀರಿ ।
,ಕೇಡಿಗ । ಲ್ಲವೆ ಕದನ ।,ಅವರೊಳೀ । ಸಾರಿ ॥
,ಮಾಡುವ । ದೇನಿನ್ನು ।,ಮತ್ತೊಬ್ಬ । ರೆನಗಿಲ್ಲಿ ।
,ನೋಡಿಬ । ರುವರಿಲ್ಲ ।, ಮಕ್ಕಳ । ನ,ಲ್ಲಿ— ॥ ೩೧೭ ॥

೧೧೧ ದ್ವಿಪದಿ

ಮರಳಿ ಜಾನಕಿ ಸುತರು ಬರಲಿಲ್ಲವೆಂದು ।
ಮರುಳುಗೊಂಡಳು ತನ್ನ ಮನಸಿನೊಳಗಂದು ॥ ೩೧೮ ॥

ಪಾತಾಳದಿಂದ ಮುನಿನಾಥ ಬರನೇಕೆ ।
ಸೀತೆ ಹೀಗೆಂದು ಮೂರ್ಛಿತಳಾದಳಾಕೆ ॥ ೩೧೯ ॥

(ಹನುಮಂತ ಮತ್ತು ಜಾಂಬವರನ್ನು ಬಂಧಿಸಿ ಕರಕೊಂಡು ಕುಶಲವರ ಪ್ರವೇಶ)

ಎಂಬ ಸಮಯದಿ ಹನುಮ ಜಾಂಬವರ ಬಿಗಿದು ।
ಕುಂಭಿನಿಯೊಳೆಳಕೊಂಡು ಬರುತಿರಲು ನೆ[1]ರೆ[1]ದು ॥ ೩೨೦ ॥

---

1 ಗೆ (ಕಾ)

ಏನಾದರೋ ತನಯರೆಂದು ಚಿಂತಿಸುವ ।
ಜಾನಕಿಯ ಮುಂದಿರಿಸಿ ಕೈಮುಗಿದನು ಲವ ॥ ೩೨೧ ॥
ತಾವು ತಂದೊಡವೆಗಳ ತಾಯ ಮುಂದಿರಿಸಿ ।
ಪ್ರೀಯದಲಿ ತೋರಿದನು ಬೇರೆ ವಿಂಗಡಿಸಿ ॥ ೩೨೨ ॥

೧೧೨ ರಾಗ ಸೌರಾಷ್ಟ—ಅಷ್ಟತಾಳ ೧

ಲವ—

ಮಂಗಳ । ಮಹಿಮ ರಾ । ಮನ ಕಂಠ । ಸರಗಳ ।
,ನೋಡೆ । ಯ—। ಮ್ಮ—।—ಸಮ ।
ರಾಂಗಣ । ದಲಿ ಬಿದ್ದ । ಶತ್ರುಘ್ನ । ನುಡುದಾರ ।
,ನೋಡೆ । ಯ—। ಮ್ಮ— ॥ ೩೨೩ ॥
ಕಂಗೊಳಿ । ಸುವ ಭರ । ತನ ಕೈಯ । ಕಡಗವ ।
,ನೋಡೆ । ಯ—। ಮ್ಮ—।—ಬಹು ।
ತುಂಗವಿ । ಕ್ರಮ ಲಕ್ಷ್ಮ । ಮಣನಿಟ್ಟ । ಮಕುಟವ ।
,ನೋಡೆ । ಯ—। ಮ್ಮ— ॥ ೩೨೪ ॥
ಪೊಡವಿಪಾ । ಲಕ ಕೈಯೊ । ಳ್ಪಿಡಿವ ಬಿ । ಲ್ಬಾಣವ ।
,ನೋಡೆ । ಯ—। ಮ್ಮ—।—ಇಕೊ ।
ಕಡುಜಾಣ । ಹನುಮಂತ । ಮಿಡುಕಾಡು । ತ್ತಿರುವಂಥ ।
,ನೋಡೆ । ಯ—। ಮ್ಮ— ॥ ೩೨೫ ॥
ಬಿಡದೆ ಸಂ । ಗರದಿ ನ । ವ್ಮೊಡನೆ ಕಾ । ದಿದನೀತ ।
,ನೋಡೆ । ಯ—। ಮ್ಮ—।—ಈಗ ।
ನಡುಗುವ । ಜಾಂಬವ । ಹೆಡೆಗೈಯ । ಬಿಗಿದವ ।
,ನೋಡೆ । ಯ—। ಮ್ಮ— ॥ ೩೨೬ ॥

೧೧೩ ವಾರ್ಧಿಕಷಟ್ಪದಿ

ಸೀತೆ—

ಮೃಗವು ಹುಲಿಗಂಜಿ ಸಿಂಹದ ಬಾಯ ಹೊಗುವಂತೆ
[1]ಬಗೆಬಗೆಯ ಚಿಂತೆಯಿಂದಿಪ್ಪ ಜಾನಕಿಗೆ ಶ್ರೀ[1]
[2]ರಘುವರನ ಕೊರಳ ಹಾರಗಳ ತಂದಿರಿಸಿ ಕೈಮುಗಿದ ಮಕ್ಕಳ[2] ನೋಡುತ ।

---

1 ಸುಗಿದು ಚಿಂತಿಸುತಿಪ್ಪ ಜಾನಕಿಗೆ ರಘುವರನ (ಕಾ, ಅ)
2 ಮಿಗುವ ಹಾರಗಳ ತಂದಿತ್ತು ಕೈಮುಗಿದ ಮಕ್ಕಳನಬಲೆ ತಾ (ಕಾ)

ತೊಗಲೆದ್ದು ಮೈಯುಡುಗಿ ಬಿದ್ದಿರುವ ಜಾಂಬವಾ
ದಿಗಳ ಕಂಡಂಜಿ ಮೂರ್ಛಿತೆಯಾಗಿ ಜನಕಸುತೆ
ನುಗುಳೆದ್ದು ಪತಿಯಳಿದ ಕ್ಲೇಶದಿಂ ಹಲುಬಿ ಕುಶನಿಗೆ ಪೇಳ್ದಳಂಬುಜಾಕ್ಷಿ || ೩೨೭ ||

೧೧೪ ರಾಗ ಸಾವೇರಿ—ಏಕತಾಳ ೪

ಮಗುವೇ, ನೀ | ನಿಂತು ಮಾಳ್ಪ | ರೇ—ಅ | ಯ್ಯಯ್ಯೊ ಎನ್ನ || ಪಲ್ಲವಿ ||

ರಘುವಂಶಾಬ್ಧಿ | ಪೂರ್ಣಚಂದ್ರ | ಅಗಣಿತಭೋ | ಗದೇವೇಂದ್ರ |
ಸುಗುಣ—ಎ | ನ್ನಯ ಕಾಂ | ತ—ರಾ | ಘವರಾಯ || ೩೨೮ ||

ತಂದೆ ರಾಮು | ಚಂದ್ರನ ತ | ಮ್ಮಂದ್ಯರು ಜೇ | ರೆ ಮೂವರ |
ಕೊಂದಿರಲ್ಲ | ಕಾದಿ ರಣ | ದಿ—ಅ | ಯ್ಯಯ್ಯೊ ವಿಧಿಯೆ || ೩೨೯ ||

ಮಾನವರ | ಕುಲಕ್ಕಭಿ | ಮಾನವಂತ | ರಿವರಿಗಿಂಥ |
ಮಾನಭಂಗ | ವೇ, ಮಕ್ಕಳಿ | ರ—ಅ | ಯ್ಯಯ್ಯೊ ವಿಧಿಯೆ || ೩೩೦ ||

ಪಾತಾಳಲೋ | ಕದಿಂದ ಮುನಿ | ನಾಥ ಬರ | ಲಿಲ್ಲವಿನ್ನೂ |
ಏತರ ಉ | ಪಾಯ ವಿದ | ಕ್ಕೆ—ಅ | ಯ್ಯಯ್ಯೊ ವಿಧಿಯೆ || ೩೩೧ ||

೧೧೫ ರಾಗ ಮಧ್ಯಮಾವತಿ—ಏಕತಾಳ ೩

,ಸೀತೆ ಮ | ಕ್ಕಳಿಗೆಂದ |,ಮಾತ ಕೇ | ಳುತಲಾಗ |
,ಕೋತಿಗ | ಳರಸನಿ |,ಗಾಯ್ತು ಸಂ | ತೋ,ಷ |
,ಭೀತಿಯ | ಬಿಟ್ಟು ತ |,ನ್ನೊಳಗೆ ತಾ | ನ್ಮಾತಾಡೆ |
,ಪಾತಾಳ | ದಿಂ ಮುನಿ |,ನಾಥನು | ಬಂದ— || ೩೩೨ ||

,ಬಂದ ಮು | ನಿಯ ದೂರ |,ದಿಂದ ಕಾ | ಣುತ ಸೀತೆ
,ನಂದನರ್ | ಸಹ ಪಾದ |,ದ್ವಂದ್ವಕ್ಕೆ | ನಮಿಸೆ |
,ತಂದೆ ನೀ |ವಿಲ್ಲಿರ |,ದೊಂದೇ ದಿ | ವಸವೆನ್ನ |
,ಕಂದಮ್ಮಾ | ಡಿದ ಕೃತ್ಯ |, ವೆಂದಳಾ | ಮುನಿಗೆ— || ೩೩೩ ||

,ಕರವ ಮು | ಗಿದು ಬೆದ |,ರಿರುವ ಮ | ಕ್ಕಳ ನೋಡಿ |
,ವರಮುನಿ | ಪ್ರೇಮದಿ |,ವ್ರ್ಗರನು ಕು | ಳ್ಳಿರಿಸಿ |
,ತರಣಿವಂ | ಶಜರೊಳಿಂ |,ತಾಯ್ತು ಸಂ | ಗರ ಯಾವ |
,ಪರಿಯಿಂದ | ನೀವ್ ಕಾದಿ |,ದಿರಿ ಬಾಲ | ಕರಿರ— || ೩೩೪ ||

೧೧೬ ರಾಗ ರೇಗುಪ್ತಿ—ಅಷ್ಟತಾಳ ೧

ಕುಶಲವರು—

ಕೇಳಿ ವಾ | ಲ್ಮೀಕಿಮ | ಹಾಮುನಿ | ರಾಯ |
ಕಾಳಗ | ದೊಳು ನಮ್ಮೊ | ಳಾದಂಥ | ಬಗೆಯು— || ಪಲ್ಲವಿ ||

ರಾಮನೆಂ | ಬವನೊಂದು | ಸೀಮೆಯ | ದೊರೆಯುಂತೆ |
ಪ್ರೇಮದಿಂ | ದನುಜರು | ಮೂವರಂ | ತೆ—||
ಆ ಮಖ | ತುರಗಕೋ | ಸ್ಕರ ನಮ್ಮೊ | ಡನೆ ಸಂ, |
ಗ್ರಾಮದೊ | ಳಗೆ ಯುದ್ಧ | ಮಾಡಿದ | ಪರಿಯನು || ೩೩೫ ||

ಆನೆ ಕು | ದುರೆ ಮಂದಿ | ಸೇನೆ ಸೂ | ರ್ಬಲಸಹ |
ತಾನೆ ರಾ | ಘವನನು | ಜರುಸಹಿ | ತ—||
ನಾನಾವಿ | ಧದಿ ನಮ್ಮ | ಕೂಡೆ ಯು | ದ್ಧವ ಮಾಡೆ |
ನಾನೆ ನಿ | ಮ್ಮ ಕಟಾಕ್ಷ | ದಿಂದ ಸಂ | ಹರಿಸಿದೆ || ೩೩೬ ||

ವಾನರ | ಕುಲಕಭಿ | ಮಾನಿಗ | ಳಿವರಂತೆ |
ಏನುಮಾ | ಡಿದರೂ ಸಾ | ವಿಲ್ಲನಂ | ತೆ—||
ತಾನೆ ನಿ | ಮ್ಮಯ ಪಾದ | ಕೊಪ್ಪಿಸ | ಬೇಕೆಂದು |
ಮಾನಭಂ | ಗವ ಮಾಡಿ | ಕೊಂಡುಬಂ | ದೆವು ನಾವು || ೩೩೭ ||

ವಚನ || ಇಂತೆಂಬ ಬಾಲಕರ ನುಡಿಯಂ ಕೇಳಿ ವಾಲ್ಮೀಕಿಮುನಿವರನು ನೊಂದು ಕೊಂಡವನಾಗಿ ಏನೆಂದನು ಎಂದರೆ—

## ವಾಲ್ಮೀಕಿಯ ಅನುಗ್ರಹ

೧೧೭ ರಾಗ ಸಾವೇರಿ*—ಅಷ್ಟತಾಳ ೨

ವಾಲ್ಮೀಕಿ—

ತಪ್ಪ ಮಾ | ಡಿದಿರಿಬ್ಬ | ರೂ—ಕೇ | ಳಿದರಿದ |
ಕೊಪ್ಪಲ್ಲೋ | ಕದ ಜನ | ರು—||
ಸ್ವಲ್ಪಬು | ದ್ಧಿಗಳಾಯಿ | ತವರ ಕೊಂ |, ದು ರಾಮ |
ನಪ್ಪನ | ಲ್ಲವೆ ನಿಮ | ಗೆ—ಬಾ | ಲಕರಿರ || ೩೩೮ ||

ಭೂಮಿಗೋ | ಸ್ಕರ ದುಷ್ಟ | ರ—ಕೊ | ಲ್ಲದಕೆಂದು |
ರಾಮಾವ | ತಾರನಾ | ದ—||

* ಸುರುಟ ರಾಗದಲ್ಲಿಯೂ ಹಾಡುವುದಿದೆ

ಪ್ರೇಮದಿ । ದಶರಥ । ನುದರದಿ । ಜನಿಸಿದ ।
ಶ್ರೀ ಮಹಾ । ವಿಷ್ಣು ರಾ । ಮ—ಜಾ । ನಕಿ ಲಕ್ಷ್ಮಿ ॥ ೩೫೯ ॥

ಶಾಲೆಯ । ಬಿಟ್ಟು ದೂ । ರ—ಪೋ । ಗದಿರೆಂದು ।
ಪೇಳಲಿ । ಲ್ಲವೆ ಕುವ । ರ—॥
ಕೇಳದೆ । ಹೀನಕ । ರ್ಮವ ಮಾಡಿ । ದಿರಿ ನಿಮ್ಮ ।
ಚಾಳಿಗಿ । ನ್ನೇನೆನ್ನ । ಲಿ—ಭೂ । ಲೋಕದಲ್ಲಿ ॥ ೩೬೦ ॥

ತರಳ ನೀ । ಮರುಗದಿ । ರಿ—ಆ ।ದರೆ ನೋಡಿ ।
ಬರುವೆ ಬಿ । ದ್ದವರ ಮೋ । ರೆ—॥
ಅರಿಯದೆ । ಬಂದ ಕೃ । ತ್ಯಗಳಿವು । ದೋಷಕ್ಕೆ ।
ಪರಿಹಾರ । ವುಂಟು ಮುಂ । ದೆ—ಕೇ । ಳಿದೆ ಹಿಂದೆ ॥ ೩೬೧ ॥

ವಚನ ॥ ಇಂತೆಂದು ಮುನಿ ಚಾಲ್ವರಿಯಲು ಮಕ್ಕಳು ಭಯಭ್ರಾಂತರಾಗಿ ಕಣ್ಣುಕಣ್ಣು ಬಿಡಲು ಜಾನಕಿ ಏನೆನ್ನುತ್ತಿರ್ದಳದೆಂತೆನೆ —

೧೧೮ ರಾಗ ದೇಶಿ—ಅಷ್ಟತಾಳ ೧

ಸೀತೆ—
ಏನುಮಾ । ಡಲಿ ಮುನಿ । ಯೆ—ತಿ । ಳಿಯದೆನ್ನ ।
ಸೂನುಗ । ಳೆಸಗಿದ । ಹೀನಕ । ರ್ಮಗಳಿಗಿ । ನ್ನೇನುಮಾಡಲಿ— ॥ ಪಲ್ಲವಿ ॥

ತಂದೆ ತಾ । ಯಿಗಳಣ್ಣ । ಬಂಧುಬಾಂ । ಧವರನ್ನು ।
ಮಂದಿರ । ಬದುಕು ಬಾ । ಳುವೆಗಳೆ । ಲ್ಲವ ಬಿಟ್ಟು ।
ಬಂದೆ ನಾ । ವನದೆಡೆ । ಗೆ—ಕಳು । ಹಿದ ರಾಮು ।
ಚಂದ್ರ [1]ಜಾ । ಲ[1]ರ ನುಡಿ । ಗೆ—[2]ಮು । ನಿಯೆ[2] ಕೃಪೆ ।
ಯಿಂದ ರ । ಕ್ಷಿಸೆ ಮತ್ತೆ । ಕಂದರಿ । ವರ ಪೆತ್ತೆ ॥ ೩೬೨ ॥

ಹಿಂದೆ ನಾ । ಬಲು ಬಲು । ನೊಂದುಕೊಂ । ಡವಳಿನ್ನು ।
ಮುಂದಾ, । ದರು ಲೇಸಾ । ಗಿರುವೆನೆಂ ।ದರೆ ಯೆನ್ನ ।
ಕಂದರಿಂ । ದಿನಿತಾಯಿ । ತು—ಓ । ಲೆಯ ಭಾಗ್ಯ ।
ಕುಂದಿ ಲ । ಕ್ಷಣ ಹೋಯಿ । ತು—ಮ । ಕ್ಕಳು ಪುಣ್ಯ ।
ವಂದ್ಯರಾ । ದಡೆ ಹೀಗೆ । ಬಂದಿರು । ವದು ಹೇಗೆ ॥ ೩೬೩ ॥

1 ಚಾರ (ಕಾ) 2 ನಿಸ್ಸಯ (ಅ)

ವನದೊಳ | ಗಿರಲೆನ್ನ | ದನುಜನೊ |ಯ್ಯಲು ಮುನ್ನ |
ವನಜಾಕ್ಷ | ಕಳುಹಿದಾ | ಕ್ಷಣಕೆ ಸಾ | ಹಸದಿಂದ |
ಹನುಮ ಲಂ | ಕೆಗೆ ಹಾರಿ | ದ—ಎ | ನಗಶೋಕ |
ವನದಿ ಮು | ದ್ರೆಯ ತೋರಿ | ದ—ಭ | ಕ್ತನನಿಂಥ |
ಗುಣವುಳ್ಳ | ಕಪಿಯು ಬಂ | ಧನವ ಮಾ | ಡಿದರಲ್ಲೊ || ೩೪೪ ||
ಬಲವಂತ | ರಾಗಲು | ಬೇಕೆಂದು | ನೀವು ಸ |
ಕಲವಿದ್ಯೆ | ಗಳ ಪೇಳಿ | ದವರಿಗೆ | ಧನುರ್ವಿದ್ಯ |
ಕಲಿಸಿದ್ದೆ | ಕೇಡಾಯಿ | ತು—ಅದ | ರಿಂದಲೀ |
ಕುಲವೆ ಸಂ | ಹಾರಾಯಿ | ತು—ಇ | ನ್ನಿದ ಹೇಳಿ |
ಫಲವೇನೆ | ನ್ನಯ ಪುಣ್ಯ | ಫಲವು ಹೀ | ಗಾಯಿತು || ೩೪೫ ||

೧೧೯ ರಾಗ ಘಂಟಾರವ—ಜಂಪೆತಾಳ ೨

ಅಮ್ಮ ಕೇ | ಳೀಗ ನೀ | ನಳಲಿ ಮಾ | ಡುವದೇನು |
ಬ್ರಹ್ಮಲಿಪಿ | ತಪ್ಪುವುದೆ | ಭಯದಿ [1]ಕೆಡ[1] | ಗಿದರೆ || ೩೪೬ ||
ಸಾವು ಹು | ಟ್ಟುಗಳೆಂಬ | ಸಂಸಾರ | ಮಾನವರ |
ಯಾವನಾ | ದರು ಬಿಡದು | ಅವರವರ | ಕರ್ಮ || ೩೪೭ ||
ನಿತ್ಯವ | ಲ್ಲೀ ದೇಹ | ನೀರೆ ಜಾ | ನಕಿ ಕೇಳು |
ಅತ್ತು ಸಾ | ವವರುಂಟೆ | ಸತ್ತವರ | ಕೂಡೆ || ೩೪೮ ||
ಇಂದವರು | ನಾಳೆ ನಾ | ವೆಂದಿಗಾ | ದರು ಕಾಲ |
ಹೊಂದುವುದು | ಈ ದೇಹ | ಒಂದು ದಿವ | ಸದಲಿ || ೩೪೯ ||
ನೀತಿಯನು | ಪೇಳ್ದು ಭೂ | ಜಾತೆಯನೊ | ಡಂಬಡಿಸಿ |
ಆ ತಪಸಿ | ಹನುಮನೊಳು | ಮಾತಾಡು | ತಿರ್ದ || ೩೫೦ ||

೧೨೦ ವಾರ್ಧಿಕಷಟ್ಪದಿ

~~ವಾಲ್ಮೀಕಿ~~

ಪರಿಪರಿಯದುಃಖದಲಿ ಮರುಗುತಿಹ ಜಾನಕಿಯ
ವರಮುನಿಪ ಸಂತೈಸಿ ಒಡನೆದ್ದನಾಕ್ಷಣದಿ
ತರಳರಂ ಕರಕೊಂಡು ತನ್ನ ಶಿಷ್ಯರುಸಹಿತ ಸಂಗ್ರಾಮಭೂಮಿಗಾಗಿ |

1 ಕೊರ (ಕಾ)

ಶರಧಿಬಂಧನಕೆಂದು ತರಿಸಿದಂ ಬೆಟ್ಟಗಳ
ಧರಣಿಗಾಧಾರವಿಲ್ಲೆಂದವನ ಸುತರು ಕರಿ
ತುರಗವಾನರರ ಹೆಣಪರ್ವತವನೆಸಗಿದರೊ ಎಂದು ಕಾಣಿಸಿತು ಮುನಿಗೆ ॥ ೩೫೧ ॥

೧೨೧ ರಾಗ ಕೇತಾರಗೌಳ—ಅಷ್ಟತಾಳ ೧

ಎತ್ತ ನೋ । ಡಿದರು ರಾ । ಮನ ಮುಂದಿ । ಕುದುರೆಗಳ್ ।
ಸತ್ತ ಹೆ । ಣಗಳ ರಾ । ಸಿ—॥
ಛತ್ರ ಚಾ । ಮರ ವಾದ್ಯ । ಕೊಂಬು ತಂ । ಬಟೆ ಭೇರಿ ।
ಸುತ್ತುಮು । ತ್ತೊಡವೆರ । ಸಿ— ॥ ೩೫೨ ॥

ಹಸ್ತದೊ । ಳಗೆ ಬಿಲ್,। ಬಾಣ ಬಿ । ದ್ದಿರುವರ ।
ರಕ್ತದೋ । ಕುಳಿಯ ಮೇ । ಲೆ—॥
ಮುತ್ತಿ ನೊ । ಣಗಳು ಕ । ವಿವರಾ,। ಮನ ಮುನಿ ।
ಪೋತ್ತಮ । ರಣದಿ ಕಂ । ಡ— ॥ ೩೫೩ ॥

ಕಂದಿದಾ । ನನದ ಕಾಂ । ತಿಯ ಬಿಲ್,। ಚಾಯುದ ।
ಅಂದವಾ ।ದವಯವ । ದ—॥
ಹಿಂದೆ ಮುಂ । ದಡಬಿದ್ದ । ತೊಡೆ ಕಾಲು । ಕರಗಳ ।
ಕುಂದಣಂ । ಗಳ ಚಿನ್ನ । ದ— ॥ ೩೫೪ ॥

ಚಂದ ಚಂ । ದದ ಮಣಿ । ಮಕುಟ ಕಂ । ಕಣ ಹಾರ ।
ದಿಂದ ರಾ । ಜಿಸುತಿರು । ವ—॥
ಒಂದಾಗಿ । ಮಲಗಿರ್ದ । ಭರತಶ । ತ್ರುಘ್ನರ ।
ಹಿಂದೆ ಲ । ಕ್ಷ್ಮಣನ ಕಂ । ಡ— ॥ ೩೫೫ ॥

೧೨೨ ರಾಗ ಸೌರಾಷ್ಟ—ತ್ರಿವುಡೆತಾಳ ೩

ರಣದೊಳಗೆ । ಸಾಲಾಗಿ ಮಲಗಿದ ।
ಹೆಣಗಳನು ತಾ । ನೋಡಿ ಮುನಿಪತಿ ।
ಮನಸಿನಲಿ ನೆನ । ಸಿದನು ನಾರಾ । ಯಣನ ಪದವ ॥ ೩೫೬ ॥

ಈಕ್ಷಿಸುತ ಭೂ । ಪಾಲಸೇನೆಗೆ ।
ಪ್ರೋಕ್ಷಿಸಿದನು ಕ । ಮಂಡಲುದಕವ ।
ರಾಕ್ಷಸಾಂತಕ । ನೆದ್ದ ಸುರಪನ । ವೃಕ್ಷದಂತೆ ॥ ೩೫೭ ॥

ನಿದ್ದೆಯಲಿ ಮಲ । ಗಿರ್ದ ಲಕ್ಷ್ಮಣ ।
ನೆದ್ದನಾಕ್ಷಣ । ದೊಳಗೆ ಭರತನು ।
ಇದ್ದ ಮಾರ್ಬಲ । ವೆಲ್ಲ ಕುಣಿಯು । ತ್ತಿದ್ದುದಲ್ಲಿ ॥ ೩೫೮ ॥

ತಳಿದರನಿಮಿಷ । ರಮೃತಧಾರೆಯ ।
ಮಳೆಯ ಮೈಮರೆ । ದೊರಗಿದವರೆ ।
ಚ್ಚರಿಕೆಯಾದುದು । ಸೈನ್ಯ ರಾಘವ । ಹರುಷದಿಂದ ॥ ೩೫೯ ॥

೧೨೩ ರಾಗ ಪಂತುವರಾಳಿ—ಮಟ್ಟೆತಾಳ ೩

ರಾಮ—

ಜಯ ಜಯಾ,। ಲೋಕಪಾಲ । ಕ—ವಾ । ಲ್ಮೀಕಿಮುನಿ ॥ ಪಲ್ಲವಿ ॥

ಸೂರ್ಯಕೋಟಿ । ಪ್ರಭಾಮಾನ । ಧೈರ್ಯ ಬುದ್ಧಿ । ಧರ್ಮಜ್ಞಾನ ॥ ೩೬೦ ॥

ಕರ್ಮವರ್ಜಿ । ತಾಪರೋಕ್ಷ । ಧರ್ಮಸಂಗ । ನಿರ್ಮಲಾಂಗ ॥ ೩೬೧ ॥

೧೨೪ ಕಂದಪದ್ಯ

ಚರಣಕೆ ಪೊಡಮಟ್ಟೆಂದಾ
ಕರುಣಾಂಬುಧಿ ರಾಮು ತನ್ನ ಸೈನ್ಯಸಮೇತಂ
ವರಮುನಿಪನ ಕೊಂಡಾಡುತ
ತರಳರ ಮೊಗನೋಡಿ ರಾಮು ಮತ್ತಿಂತೆಂದಂ ॥ ೩೬೨ ॥

೧೨೫ ರಾಗ ನಾದನಾಮಕ್ರಿಯೆ—ಅಷ್ಟತಾಳ ೧

ಕಂದರಿ । ವರು ಯಾರು । ಮುನಿಯೆ ।—ಇವರ ।
ತಂದೆತಾ । ಯಿಗಳಾರು । ಮುನಿಯೆ ॥
ಮಂದಿರ । ದೆಡೆಯೆಲ್ಲಿ । ಮುನಿಯೆ ।—ಇವರ್
ನಿಂದ ಠಾ । ವಾವುದು । ಮುನಿಯೆ ॥ ೩೬೩ ॥

ಬಿಲ್ಲುವಿ । ದ್ಯಗಳನ್ನು । ಮುನಿಯೆ ।—ಇವ
ರೆಲ್ಲಿ ಕ । ಲ್ತವರಯ್ಯ । ಮುನಿಯೆ ॥
ಇಲ್ಲಿ ಬಂ । ದಿಹುದೇಕೆ । ಮುನಿಯೆ ।—ನಮ್ಮ ।
ನೆಲ್ಲ ಕೊಂ । ,ದುದೇಕೆ । ಮುನಿಯೆ ॥ ೩೬೪ ॥

೧೨೬ ರಾಗ ಘಂಟಾರವ—ಜಂಪೆತಾಳ ೩

ವಾಲ್ಮೀಕಿ—

ದಾನವಾಂ । ತಕ ಕೇಳು । ಧರ್ಮಶಾ । ಸ್ತ್ರಂಗಳೊಳ ।
ಗೀ ನಡತೆ । ಮೊದಲುಂಟೆ । ಈ ರಾಜ್ಯ । ದೊಳಗೆ ॥ ೩೬೫ ॥

ತಂದೆ ಮ । ಕ್ಕಳು ಕೂಡಿ । ತವ್ಮೊಳಗೆ । ಕಾದುವುದು ।
ಹಿಂದೆ ಕೇ । ಳಿದುದಿಲ್ಲ । ಹೀಗೆಂಬ । ವಾರ್ತೆ ॥ ೩೬೬ ॥

ಭಾನುವಂ । ಶಜ ಕೇಳು । ಬಹಳ ಮಾ । ತುಗಳೇಕೆ ।
ಏನಾಗ । ಬೇಕಿವರು । ಜಾನಕಿಯ । ಸುತರು ॥
ಅರಿಯದವ । ನೇ ನೀನು । ಆಯಿತಾ । ಯಿತು ಸಾಕು ।
ಬರಿಯ ಮಾ । ತುಗಳಿವ್ಮ । ವಹೇಳುವಾ । ಡುವುದು ॥ ೩೬೭ ॥
ಮಕ್ಕಳಿವ । ರಿಂತೆಂಬ । ಮಾತ ಕೇ । ಳುತ ರಾಮ ।
ಆಕ್ಷಣವೆ । ಕೇಳಿದನು । ಲಕ್ಷ್ಮಣನ । ಕರೆದು ॥ ೩೬೮ ॥

೧೨೭ ರಾಗ ಮಧ್ಯಮಾವತಿ—ಅಷ್ಟತಾಳ ೨

ರಾಮ—

ಏನಯ್ಯ ।—ತಮ್ಮ । ಏನಯ್ಯಾ ।
ಏನಯ್ಯ । ತಮ್ಮ ಈ । ಮುನಿಗಳ । ಮಾತು—।
ಜಾನಕಿ । ಪಡೆದಳು । ಮಕ್ಕಳ । ನೆಂತು— ॥ ಪಲ್ಲವಿ ॥

ಜನರಪ । ವಾದ ಬಂದಿ । ದೆ ಸೀತೆ । ಗೆಂದು—।
ವನಕೊಯ್ದಿ । ವಳನಲ್ಲಿ । ಬಿಟ್ಟು ಬಾ । ರೆಂದು—।
ನಿನಗೆ ಪೇ । ಳಿದವೇಲೆ । ಏನಾಯಿ । ತಲ್ಲಿ—।
[1]ವಿನ[1]ತ ನೀ । ಪೇಳಿದ । ಮಾತು[2]ಗ । ಳಲ್ಲಿ[2]— ॥ ೩೬೯ ॥

ಕಾಡಿನೊ । ಳಿರುವರೆ । ಮನೆ ಯೆಲ್ಲಿ । ಬಂತು—।
ರೂಢಿಯೊ । ಳಗೆ ಇಷ್ಟು । ದಿನವೆಲ್ಲಿ । ಸಂತು—।
ನೋಡಿದ । ರತಿಮುದ್ದು । ಸೊಬಗಿನೊ । ಳಿಂತು—।
ಜೋಡುಮ । ಕ್ಕಳ ಸೀತೆ । ಪಡೆದಳಿ । ನ್ನೆಂತು— ॥ ೩೭೦ ॥

ಲಕ್ಷ್ಮಣ—

ಅಣ್ಣ ನೀ । ನಾಡಿದ । ಪ್ಪಣೆ [3]ಹೊತ್ತು[3] । ತಾನು ।
ಮಿಣ್ಣನೆ । ರಥವೇರಿ । ಸೀತೆಯೊ । ಬ್ಬಳನು ।
ವನ್ಯದೊ । ಳಗೆ ಬಿಟ್ಟು । ಬಂ[4]ದಲ್ಲ । ದಾ[4]ನು ।
ಬಣ್ಣಿಸ । ಲರಿಯೆನು ।* ಆವೇಲಾ । ದುದನು ॥ ೩೭೧ ॥

ವಚನ ॥ ಇಂತೆಂದು ಲಕ್ಷ್ಮಣಂ ನುಡಿಯಲಾಗಿ ಸಂತೋಷದಿಂದ ಮುನಿವರಂ ಏನೆಂದನು ಎಂದರೆ—

---

1 ಎಸು (ಕಾ, ಅ) 2 ಮೇಲಲ್ಲಿ (ಅ) 3 ಯಿಂದ (ಕಾ) 4 ದೆನು ನಾ (ಕಾ, ಅ)
* ಈ ಪದ್ಯವನ್ನು ಏಕತಾಳದಲ್ಲಿ ಹಾಡುವ ಸಂಪ್ರದಾಯವೂ ಉಂಟು.

೧೨೮ ರಾಗ ಘರಜು—ಮಟ್ಟೆತಾಳ ೪

ವಾಲ್ಮೀಕಿ—

ಒಂದೇ—| ಮನಸ—| ಲ್ಲ—| ರಾಘವನಿಗೆ |
ಹಿಂದ,ಣ, | ದಿನಿಸ—| ಲ್ಲ— || ಪಲ್ಲವಿ ||

ಕಂಡವರ, | ಮಾತಕೇಳಿ | ಹೆಂಡತಿಯು, | ಬಿಡುವರೇ |
ಕಂಡು ಕಂಡು | ತಿಳಿದು ತಿಳಿದು | ಕಪಟ, ಮಾ | ಡಾಡುವರೇ |
ಮಂಡಲಾಧಿ | ನಾಯಕ ನೀ | ಭಂಡಾಟಗಳ | ಮಾಳ್ಪರೇ |
ಹಿಂಡುದೊರೆಗ | ಳಿದರ ಕೇಳಿ | ಕಂಡು ಹರುಷ | ಬಡುವರೇ || ೩೭೨ ||

ಕಾಡಿನಲ್ಲಿ | ಅಳುವ ಸತಿಯ | ಕಂಡು ನಾ ಒಡ | ಬಡಿಸಿದೆ |
ಬೇಡ ದುಃಖ | ವೆಂದು ಧೈರ್ಯ | ಪೇಳಿ ಅಭಯ | ಕೊಡಿಸಿದೆ |
ಮಾಡಿ ಪರ್ಣ | ಶಾಲೆಯನ್ನು | ಮತ್ತೆ ನಾ ವಿಂ | ಗಡಿಸಿದೆ |
ಜೋಡುಮಕ್ಕ | ಳ್ಹೆತ್ತಮೇಲೆ | ಇಷ್ಟು ದಿವಸ | ನಡೆಸಿದೆ || ೩೭೩ ||

ಕುಶಲವರೆಂ | ದು ಪೆಸರಿಟ್ಟು | ಬರಹವೆಲ್ಲ | ಬರೆಸಿದೆ |
ಕುಶಲದಿಂದ | ರಣದಿ ಬಾಣ | ವೆಸೆವ ವಿದ್ಯೆ | ಕಲಿಸಿದೆ |
ಹಸುಮಕ್ಕಳ | ಇಷ್ಟುದಿವಸ | ಈ ಪರಿಯಲಿ | ಮೆರೆಸಿದೆ |
ಅಸುರವೈರಿ | ಇನ್ನು ರಕ್ಷಿ | ಸೆನುತ ಮುಂದೆ | ನಿಲಿಸಿದೆ || ೩೭೪ ||

೧೨೯ ಕಂದಪದ್ಯ

[ತರಳರು ನಿನ್ನವರೆಂದೇ
ಅರಿಯುವಡೀ ಕಷ್ಟವೊದಗಿಬಂತಾ ವಿಧಿಯಿಂ
..........................................]

೧೩೦ ರಾಗ ಪುನ್ನಾಗವರಾಳಿ—ಏಕತಾಳ ೪

ಓದಿದ | ರು—ಮಕ್ಕ | ಳೋದಿದ | ರು—ಮುನಿಯ |
ಪಾದ,ಕ್ಕೆ | ರಗಿ ಬಂದ | ವೇದ ಶಾಸ್ತ್ರ | ಪುರಾಣಗಳ || ಪಲ್ಲವಿ ||

ತಂಬೂರಿ ವೀ | ಣೆ ಮದ್ದಳೆ | ಸಂಗೀತ ಸಾ | ಹಿತ್ಯ ಶ್ರುತಿ |
ತುಂಬುರಗಂ | ಧರ್ವ ಯಕ್ಷ | ರಿಂದ ಮಿಗಿ | ಲು— ||
ಕುಂಭಿನೀಜಾ | ತೆಯ ಮಕ್ಕ | ಳೆಂಬ ರೀತಿ | ಪಾಡುತಿರಲು |
ಸಂಭ್ರಮವ | ನೋಡಿ ಹರ್ಷ | ವಾಗುತಿದ್ದ | ರಾಮಚಂದ್ರ || ೩೭೫ ||

ಬಣ್ಣಿಸಿ ಬ । ಣ್ಣಿಸಿ ಸ್ವರ । ಕಿನ್ನರಿಯ । ನುಡಿಸುತಿರಲು ।
ಸಣ್ಣ ಸಣ್ಣ । ಬೆರಳ ಸೊಬಗ । ಸರ್ವರು ನೋ । ಡಿ— ॥
ಪುಣ್ಯವಂತೆ । ಸೀತೆ ಯೆನಲು । ಕಣ್ಣನೀರಿಂ । ದಪ್ಪಿ ರಾಮ ।
ಚಿಣ್ಣರನ್ನು । ತೆಗೆದು ಮುದ್ದು । ಮಾಡುತಿದ್ದ । ಗಳಿಗೆ ಗಳಿಗೆ ॥ ೩೭೬ ॥

೧೩೧ ರಾಗ ಘಂಟಾರವ—ಝಂಪೆತಾಳ ೩

ರಾಮ—

ವಾಲ್ಮೀಕಿ । ಮುನಿ ನಿಮಗೆ । ಶರಣು ಶರ । ಣು— ॥ ಪಲ್ಲವಿ ॥

ಗುರುರಾಯ । ನಿಮ್ಮಂಥ । ಗುಣನಿಧಿಗ । ಳಿನ್ನುಂಟೆ ।
ಕರವ ಮುಗಿ । ವೆನು ನಿಮಗೆ । ಕರುಣಿಸ । ಯ್ಯ— ॥ ೩೭೭ ॥

ಭಾನುಕುಲ । ಸಸಿಯುರಿದು । ಕ್ಷೀಣವಾ । ಗಲು ಕಂಡು ।
ತಾನೆ ನೀ । ರೆರೆದು ಕಾ । ಯ್ದರಿ ನಿರ್ಣ । ಯ— ॥ ೩೭೮ ॥

ಸರ್ವಜ್ಞ । ನೀನಿಂದು । ಸಕಲಕ । ರ್ಮಂಗಳಿಗೆ ।
ನಿರ್ವಹಿಸು । ವಾಧಾರ । ನಿನ್ನದ । ಯ್ಯ— ॥ ೩೭೯ ॥

ಪುರಕೆ ಹೋ ।ಗುವ ನಾವು । ಪುತ್ರರನು । ಕರಕೊಂಡು ।
ತರಳೆಜಾ । ನಕಿಸಹಿತ । ತೆರಳಿ ನೀ । ವು— ॥ ೩೮೦ ॥

ಬಳಿಕ ಯಾ । ಗವ ಮುಗಿಸಿ । ಬರಬಹುದು । ನಿಮಗಿತ್ತ ।
ಪುಳಕಾಪ್ಲು । ತಾಬ್ಧಿಯಲಿ । ಪುಣ್ಯನಿಧಿ । ಯೆ— ॥ ೩೮೧ ॥

೧೩೨ ದ್ವಿಪದಿ

ವಾಲ್ಮೀಕಿ—

ರಾಘವನ ನುಡಿಕೇಳಿ ಹಾಗಾಗಲೆನುತ ।
ಬೇಗದಲಿ ವಾಲ್ಮೀಕಿಮುನಿಪ ನಸುನಗುತ ॥ ೩೮೨ ॥

ಶಿಷ್ಯರನು ಕಳುಹಿದನು ಶೀಘ್ರದೊಳಗಂದು ।
ಆಶ್ರಮದ ಸೀತೆಯನು ಕರೆತನ್ನಿರೆಂದು ॥ ೩೮೩ ॥

ಹೋದರಾ ಕ್ಷಣ ಕಂಡು ಪೇಳೆ ಜಾನಕಿಯ ।
ಪಾದದಪ್ಪಣೆಯಾಯ್ತು ವಾಲ್ಮೀಕಿ ಮುನಿಯ ॥ ೩೮೪ ॥

ತೆರಳಬೇಕೆಂದವರು ವಾರ್ತೆಯನು ಪೇಳೆ ।
ತರಳೆಜಾನಕಿ ಮನದಿ ಹರ್ಷವನು ತಾಳೆ ॥ ೩೮೫ ॥

ಬಂದಳೊಯ್ಯನೆ ಕಣಕೆ ಬಲು ಬೇಗದಿಂದ ।
ಮಂದಗಾಮಿನಿಗೆ ಕೈಮುಗಿಯೆ ಜನವೃಂದ ॥ ೩೮೬ ॥

ಧರಣಿಜೆಯ ನೋಡಿದಾ ಕ್ಷಣವೆ ಶ್ರೀರಾಮು ।
ಹರುಷದಿಂದಿದಿರಾಗಿ ಬಂದ ನಿಸ್ಸೀಮು ॥ ೩೮೭ ॥

೧೩೩ ರಾಗ ಮೋಹನ—ಅಷ್ಟತಾಳ ೨

ಸೀತೆ—

ಪತಿಯ ನೋ । ಡಿದಳು ಸೀ । ತೆ—ಮೂ । ಜಗವ ರ । ಕ್ಷಿಸುವಂಥ
॥ ಪಲ್ಲವಿ ॥

ಕ್ಷಿತಿಯ ಜ । ನರಿಗೆ ಸ । ದ್ಗತಿಯ ಪಾ । ಲಿಪ ಪಶು ।
ಪತಿಪ್ರಿಯ । ವರರಘು । ಪತಿಯ ನೋ । ಡಿದಳು— ॥ ಅನುಪಲ್ಲವಿ ॥

ಎಡಬಲ । ದಲಿ ಮೂವ । ರು—ತ । ಮ್ಮಂದ್ಯರು ।
ತೊಡೆಯೊಳಿ । ರ್ವರು ಮಕ್ಕ । ಳು— ॥
ಕಡುಜಾಣ । ಹನುಮ ಸು । ಷೇಣ ಜಾಂ । ಬವಸಹ ।
ನಡುವೆ ಕು । ಳ್ಳಿರಿಸಿ ಸಂ । ಗಡ ವಿರಾ । ಜಿಸುತಿಪ್ಪ ॥ ೩೮೮ ॥

೧೩೪ ವಾರ್ಧಿಕಷಟ್ಪದಿ

ರಥವೇರಿದಂ ರಾಮಚಂದ್ರ ಜಾನಕಿಸಹಿತ
ಅತಿಶಯದಿನೊಪ್ಪುತಿಹ ಅಂದಣಾವಳಿಗಳಿಂ
ಪೃಥಿವಿಜೆಯ ಸನಿಯದಲಿ ಮಿಕ್ಕನಾರಿಯರೆಲ್ಲ[1]ರೆಡೆಬಿಡದೆ[1] ಮಕ್ಕಳೊಡನೆ ।
ಜೊತೆಯವರು ವಾಹನಂಗಳನೇರಿ ಬ[2]ರಲು ಮುನಿ
ಪ[2]ತಿಯು ಪಲ್ಲಂಕಿಯೊಳು ಕುಳ್ಳಿರಿಸಿ ಬಳಿಕ ರಘು
ಪತಿಯು ಸೇನಾಸಮುದ್ರವು ಬರುತಿರಲು ಸರ್ವಜನರು
ಸಂತೋಷದಿಂದ ॥ ೩೮೯ ॥

1 ರೊಡಗೊಂಡು (ಕಾ, ಅ) 2 ರುತಿರಲು । ಯ (ಕಾ, ಓ)

೧೩೫ ರಾಗ ಮೋಹನ—ಏಕತಾಳ ೪

ಪುರಕೆ, ತೆರ | ಳಿದ ರಾ | ಮ—ಸಂ | ತೋಷದಿ ನಿಜ |
ಪುರಕೆ, ತೆರ | ಳಿದ ರಘುರಾ | ಮ— || ಪಲ್ಲವಿ ||

ಪರಿಪರಿಯ | ಪಾಠಕರು | ವಿಧವಿಧದಲಿ | ಪೊಗಳುತ್ತ |
ಭರದಿ ಶಂಖ | ಭೇರಿ ವಾದ್ಯ | ಕೊಂಬು ತಂಬಟೆ | ಮೊರೆಯುತ್ತ |
ನೆರೆದ ಕೇರಿ | ಕೇರಿ ಜನರು | ಇರದೆ [1]ಮಕ್ಕಳ | ನೋಡು[1]ತ್ತ— |
ಪರಮಪುಣ್ಯ | ವಂ[2]ತರೆಂದು | ಕೈಗಳೆತ್ತಿ | ನಲಿಯು[2]ತ್ತ— || ೩೯ ||

೧೩೬ ವಾರ್ಧಿಕಷಟ್ಪದಿ

ಭೂಮಿಪತಿ ಕೇಳ್ಬಳಿಕ ಉಳಿದ ಯಜ್ಞವ ಮುಗಿಸಿ
ರಾಮಚಂದ್ರಂ ತನ್ನ ಸತಿಸುತರುಸಹಿತ ಸು
ಪ್ರೇಮದಿಂ ರಾಜ್ಯಮಂ ಪಾಲಿಸುತ ಬಹುಕಾಲ ಸುಖದಿಂದಲಿರ್ದರೆನುತ |
ನೇಮದಿಂ ಜನಮೇಜಯಕ್ಷಿತಿಪ ಕೇಳೆಂದು
ಆ ಮುನಿವರಂ ಪೇಳ್ದ ಕುಶಲವರ ಕಾಳಗವ
ನಾ ಮನಕೆ ಬಂದವೋಲೊರೆದೆ ಶ್ರೀ ಕಣ್ವಪುರಕೃಷ್ಣನ ಕಟಾಕ್ಷದಿಂದ ||೩[illegible]||

— ಕುಶಲವರ ಕಾಳಗ ಸಂಪೂರ್ಣ ಮಂಗಲ ಮಹಾ —

---

1 ರಾಮನ ಪೊಗಳು (ಕಾ, ಅ)  2 ತೆ ಸೀತೆಯೆಂದು ತಮ್ಮೊಳಾಡು (ಕಾ) ; ತರೆಂದು ತಮ್ಮೊಳ್ತಾವೆ ನಲಿಯು (ಕಾ)

# ಕೃಷ್ಣಚರಿತೆ

## ಪ್ರಸಂಗದ ಕಥಾಸಾರ

ದ್ವಾಪರಯುಗದಲ್ಲಿ ಹಿಂದೆ ದುಷ್ಟದಾನವರ ದುರಾಚಾರದಿಂದಲಾಗಿ ಸತ್ಯಧರ್ಮಕ್ಕೆ ಗ್ಲಾನಿಯುಂಟಾಗುತ್ತಿರಲು ಭೂದೇವಿಯು ಸೃಷ್ಟಿಕರ್ತನಾದ ಬ್ರಹ್ಮನಿಗೆ ಮೊರೆಯಿಡುತ್ತಾಳೆ. ಬ್ರಹ್ಮನು ಭೂದೇವಿಯನ್ನೂ ಇಂದ್ರಾದಿ ದೇವತೆಗಳನ್ನೂ ಕ್ಷೀರಸಾಗರತಟಕ್ಕೆ ಕರಕೊಂಡುಹೋಗಿ ಶೇಷತಲ್ಪಶಾಯಿಯಾದ ಮಹಾವಿಷ್ಣುವನ್ನು ಪ್ರಾರ್ಥಿಸುತ್ತಾನೆ. ಮಹಾವಿಷ್ಣುವು ತಾನು ದೇವಕಿಯ ಗರ್ಭದಲ್ಲಿ ಜನನಕ್ಕೆ ಬಂದು, ಕಂಸಾದಿ ದುಷ್ಟದಾನವರನ್ನು ಸಂಹರಿಸಿ ಭೂಲೋಕದಲ್ಲಿ ಧರ್ಮಸಂಸ್ಥಾಪನೆ ಮಾಡುವುದಾಗಿ ಅಭಯವಚನವನ್ನಿತ್ತು ಅನುಗ್ರಹಿಸುತ್ತಾನೆ.

ಮಧುರೆಯಲ್ಲಿ ಉಗ್ರಸೇನಮಹಾರಾಜನು ತನ್ನ ಮಗಳಾದ ದೇವಕಿಯನ್ನು ವಸುದೇವನಿಗೆ ಮದುವೆಮಾಡಿಕೊಡುತ್ತಾನೆ. ವಿವಾಹಮಹೋತ್ಸವದ ನಂತರ ದೇವಕಿಯ ಅಣ್ಣನಾದ ಕಂಸನು, ತಾನೇ ವಧೂವರರನ್ನು ರಥದಲ್ಲಿ ಕುಳ್ಳಿರಿಸಿ ಬಳುವಳಿಸಮೇತ ಕರಕೊಂಡು ಹೋಗುತ್ತಿರುವಲ್ಲಿ, ಆ ದೇವಕಿಯ ಅಷ್ಟಮ ಗರ್ಭದಲ್ಲಿ ಜನಿಸುವ ಪುತ್ರನಿಂದ ತನಗೆ ಮರಣವು ಸಂಭವಿಸುವುದೆಂಬ ಗಗನವಾಕ್ಯವನ್ನು ಕೇಳಿ ಭಯಭ್ರಾಂತನಾಗಿ ಅವಳನ್ನು ಕೊಲ್ಲಲು ಉದ್ಯುಕ್ತನಾಗುತ್ತಾನೆ. ಆಗ ವಸುದೇವನು, ಆಕೆಯಲ್ಲಿ ಹುಟ್ಟುವ ಮಕ್ಕಳನ್ನೆಲ್ಲ ಆಗಿಂದಾಗಲೇ ತಾನು ತಂದೊಪ್ಪಿಸುವೆನೆಂದು ಆಣೆಭಾಷೆಯನ್ನಿತ್ತು ಅತಿದೈನ್ಯದಿಂದ ಬೇಡಿ ಒಡಂಬಡಿಸುತ್ತಾನೆ.

ಆ ಪ್ರಕಾರ, ಕ್ರಮೇಣ ದೇವಕಿಯು ಹಡೆದ ಆರು ಮಕ್ಕಳನ್ನು ಕಂಸನು ಕೊಂದು ವಸುದೇವ ದೇವಕಿಯರನ್ನು ಸೆರೆಯಲ್ಲಿಡುತ್ತಾನೆ. ಅನಂತರ, ದೇವಕಿಯ ಏಳನೆಯ ಗರ್ಭವು ಭಗವಂತನ ಮಹಿಮೆಯಿಂದ ರೋಹಿಣಿಯ ಬಸಿರನ್ನು ಸೇರಿ, ಭಗವಂತನು ಅವತಾರಕ್ಕೆ ಬರುವ ಎಂಟನೇ ಗರ್ಭವು ಕಾಣಿಸಿಕೊಳ್ಳಲಾಗಿ ದೇವಕಿಯು, ಅಣ್ಣನಾದ ಕಂಸನ ಭಯದಿಂದ ತತ್ತರಿಸುವಳು. ಆಗ ಬ್ರಹ್ಮನು ಕೊರವಂಜಿಯಾಗಿ ಬಂದು, ಪ್ರಸ್ತುತ ಗರ್ಭದಲ್ಲಿ ಶ್ರೀ ಮಹಾವಿಷ್ಣುವೇ ಪ್ರತ್ಯಕ್ಷ ಅವತರಿಸಿದವನಾಗಿ ಕಂಸಭಯವನ್ನು ತಾನೇ ಪರಿಹರಿಸುವನೆಂದು ಕಣಿ ಹೇಳಿ ಸಮಾಧಾನಪಡಿಸುತ್ತಾನೆ.

ಆ ಪ್ರಕಾರ ನವಮಾಸ ತುಂಬುತ್ತಲೇ ಶ್ರಾವಣ ಬಹುಳ ಅಷ್ಟಮಿ ತಿಥಿಯಂದು ಮಧ್ಯರಾತ್ರಿ ವೇಳೆಯಲ್ಲಿ ಆ ಮಹಾಮಾತೆಯು ಶ್ರೀ ಕೃಷ್ಣಮೂರ್ತಿಯನ್ನು ಪ್ರಸವಿಸಲಾಗಿ ಒಡನೆಯೇ ಭಗವಂತನ ಅಪ್ಪಣೆಯಂತೆ ವಸುದೇವನು ಈ ದಿವ್ಯಶಿಶುವನ್ನು ಗೋಕುಲಕ್ಕೆ ಕೊಂಡೊಯ್ದು, ಅಲ್ಲಿ ಯಶೋದೆಯ ಗರ್ಭದಲ್ಲಿ ಜನಿಸಿದ ಮಾಯೆಯನ್ನು ಬದಲಾಗಿ ತಂದಿರಿಸುತ್ತಾನೆ.

ತಂಗಿಯ ಪ್ರಸವವಾರ್ತೆಯನ್ನು ಕೇಳಿದ ಕಂಸನು ಬಂದು ಶಿಶುವನ್ನು ಸೆಳೆದು ಶಿಲೆಯಮೇಲೆ ಅಪ್ಪಳಿಸಿ ಕೊಲ್ಲಲು ಕೈಯೆತ್ತುವಷ್ಟರಲ್ಲಿ ಆ ಮಾಯಾಶಿಶುವಾದ ದುರ್ಗೆಯು, ಕಂಸವೈರಿಯಾದ ಶ್ರೀ ಕೃಷ್ಣನು ನಂದಗೋಕುಲದಲ್ಲಿ ಬೆಳೆಯುತ್ತಿರುವುದನ್ನ ರುಹಿ ಗಗನಕ್ಕೆ ಚಿಗಿದು ಅಂತರ್ಧಾನವಾಗುವಳು. ಅನಂತರ ಹತಾಶನಾದ ಕಂಸನು, ಬಾಲಕೃಷ್ಣನನ್ನು ವಿಷದ ಮೊಲೆಯುಣಿಸಿ ಕೊಲ್ಲುವುದಕ್ಕಾಗಿ ಪೂತನಿಯನ್ನು ಕಳುಹಿ ಸುತ್ತಾನೆ. ಶಿಶುಕೃಷ್ಣನು ಅವಳ ಪ್ರಾಣವನ್ನೇ ಹೀರಿ ಕೊಲ್ಲುವುದಲ್ಲದೆ ಆಮೇಲೆ ಕಂಸನು ಕಳುಹಿಸಿದ ಶಕಟ, ಧೇನುಕಾದಿ ರಾಕ್ಷಸರನ್ನೂ ಸಂಹರಿಸಿ ಗೋಕುಲದಲ್ಲಿ ತನ್ನ ಅಣ್ಣನಾದ ರೋಹಿಣೀಪುತ್ರ ಬಲರಾಮನನ್ನು ಕೂಡಿಕೊಂಡು ಇತರ ಗೋವಳಹುಡುಗರೊಡನೆ ಗೋಪಾಲಕನಾಗಿ ಬೆಳೆಯುತ್ತಿದ್ದು ತನ್ನ ನಾನಾವಿಧದ ಬಾಲಲೀಲೆಗಳಿಂದ ಗೋಪಸ್ತ್ರೀಯ ರನ್ನು ದಣಿಸುತ್ತಾ, ಮುಂದೆ ಅವರೊಮ್ಮೆ ಯಮುನಾ ನದಿಯಲ್ಲಿ ಜಲಕ್ರೀಡೆಯಲ್ಲಿರುತ್ತಿ ದ್ದಾಗ ಅವರು ಬಿಚ್ಚಿಟ್ಟಿದ್ದ ಉಟ್ಟವಸ್ತ್ರಗಳನ್ನು ಅಪಹರಿಸಿ ಕದಂಬವೃಕ್ಷವನ್ನೇರಿ ವಿನೋದಗೊಳಿಸಿದನೆಂಬಲ್ಲಿಗೆ 'ಶ್ರೀಕೃಷ್ಣಬಾಲಲೀಲೆ'ಯೆಂದೂ ಕರೆಯಲ್ಪಡುವ ಈ ಪ್ರಸಂಗಕ್ಕೆ ಮಂಗಲವಾಗುವುದು.

| **ಮುಖ್ಯಪ್ರಕರಣಗಳು** | **ಭೂಮಿಕೆಗಳು** |
|---|---|
| ಅನಂತಶಯನನ ಅಭಯವಾಣಿ | ಬ್ರಹ್ಮ |
| ಕಂಸನ ದುಷ್ಕೃತ್ಯ | ಮಹಾವಿಷ್ಣು |
| ಬ್ರಹ್ಮಕೊರವಂಜಿ | ದೇವತೆಗಳು |
| ಕೃಷ್ಣಜನನ | ಕಂಸಾಸುರ |
| ಪೂತನಾಮೋಕ್ಷ | ವಸುದೇವ |
| ಬಾಲಲೀಲೆ | ನಾರದಮುನಿ |
| ವಸ್ತ್ರಾಪಹರಣ | ನಂದಗೋಪ |
| | ಬಾಲಕೃಷ್ಣ |
| | ದೂತರು |
| | ಭೂದೇವಿ |
| | ದೇವಕಿ |
| | ಯಶೋದೆ |
| | ಪೂತನಿ |
| | ಮಾಯಾಪೂತನಿ |
| | ಕೊರವಂಜಿ |
| | ಗೋಪಸ್ತ್ರೀಯರು |

# ಕೃಷ್ಣಚರಿತೆ

## ಅನಂತಶಯನನ ಅಭಯವಾಣಿ

೧ ಶಾರ್ದೂಲವಿಕ್ರೀಡಿತವೃತ್ತ

ಶ್ರೀ ಗೋಪಾಲಮಶೇಷಭಕ್ತವರದಂ ಶಾಂತಂ ಯಶೋದಾರ್ಭಕಂ ।
ನಾಗಾರಾತಿಸುವಾಹನಂ ನಗಧರಂ ಕ್ಷೀರಾಬ್ಧಿಜಾತಾಧವಂ ।
ವಾಗೀ[1]ಶಾದ್ಯಮರೌಘಸನ್ನುತಪದಂ[1] ಗೋಪಾಂಗನಾವೇಷ್ಟಿತಂ ।
ಯೋಗೀಂದ್ರಾರ್ಚಿತಪಾದಪದ್ಮಯುಗಳಂ ವಂದೇ ಸರೋಜಾಂಬಕಂ ॥ ೧ ॥

೨ ರಾಗ ನಾಟಿ—ಜಂಪೆತಾಳ ೩

ಜಯ ಬಾಲ । ಗೋಪಾಲ । ಜಯ ಜಯಾ । ಜಯತು— ॥ ಪಲ್ಲವಿ ॥

ಜಯ ಗೋಪಿ । ಕಾನಂದ । ಜಯ ಗೋಪ । ಜನವೃಂದ ।
ಜಯ ಸಚ್ಚಿ । ದಾನಂದ । ಜಯತು ಗೋ । ವಿಂದ— ॥ ಅನುಪಲ್ಲವಿ ॥

ನಂದಗೋ । ಪಕುಮಾರ । ನವನೀತ । ವರಚೋರ ।
ಸಿಂಧುಕ । ನ್ಯಾರಮಣ । ಸರಸಿರುಹ । ಚರಣ— ।
ಇಂದ್ರಾದಿ । ಸುರನಮಿತ । ಈಶಸಖ । ಮಹಿಮಯುತ ।
ಸುಂದರಾ । ತ್ಮಕವರ್ಣ । ಸಕಲಗುಣ । ಪೂರ್ಣ— ॥ ೨ ॥

ಕಂಸದೈ । ತ್ಯವಿನಾಶ । ಕಮಲನೇ । ತ್ರವಿಲಾಸ ।
ಹಂಸವಾ । ಹನತಾತ । ಹಲಧರನು । ಜಾತ— ।
ವಂಶರ । [2]ತ್ನಾಕರಸು । ಸೋಮ ಶರ । ಣ[2]ಪ್ರೇಮ ।
[3]ನೀಂ ಸಕಲ । ಸುರಸೇವ್ಯ । ನತಜನೋ । ದ್ಧಾವ್ಯ[3]— ॥ ೩ ॥

ಪುಣ್ಯನಾ । ಮವಿಧೇಯ । ಪರಮಮಂ । ಗಳಕಾಯ ।
ಅರ್ಣವಸು । ಗಂಭೀರ । ಆಶ್ರಿತೋ । ದ್ಧಾರ— ।

---

1 ಶಂದಿವಿಜೌಘ ಸಂಸ್ತುತ ಮಹಾ (ಓ) 2 ತ್ನಸ್ತೋಮ ಶರಣು ಮುನಿಜನ (ಕಾ)
3 ಹಂಸಡಿಬಿಕರ ಪ್ರಾಣ । ಕಳೆದ ನೆರೆ ಜಾಣ (ಕಾ)

ಪೂರ್ಣಚಂ | ದ್ರ[1]ಸುವದನ[1] | ಪರಮಶೋ | ಭಿತ[2]ರದನ[2] |
ಕಣ್ವಪುರ | ಸ್ಥಿರವಾಸ | ಕೃಷ್ಣ ಜಗ | ದೀಶ— || ೪ ||

೩ ವಾರ್ಧಿಕಷಟ್ಪದಿ

ಗುರುಗಣಪಗೌರಿಶಂಕರಶಾರದಾಂಬಿಕೆಯ
ಚರಣಕಮಲಕೆ ನಮಿಸಿ ಸರಸಿಜಾಸನಗೆರಗಿ
ತರಣಿ ಶಶಿ ಮುಂತಾದ ಸಕಲಸುರದೇವರ್ಕಳಿಗೆ ಕರವ ಮುಗಿದು ಬಳಿಕ |
ಪರಮವೈಷ್ಣವ ಶುಕಾಚಾರ್ಯಮುನಿವದನಸರ
ಸಿರುಹದಿಂದೊಗೆದ ಶ್ರೀಕೃಷ್ಣಚರಿತವನು ನಾ
ವಿರಚಿಸುವೆ ಕನ್ನಡದ ಯಕ್ಷಗಾನದಲಿ ಶಿವಕರುಣಿಸಿದ ಬುದ್ಧಿಯಿಂದ || ೫ ||

೪ ರಾಗ ಸೌರಾಷ್ಟ—ತ್ರಿವುಡೆತಾಳ ೨

ಶ್ರೀ ಮಹೋನ್ನತ | ಭಾಗವತವ |
ನ್ನಾ ಮಹಾಯೋ | ಗೀಂದ್ರ ಶುಕನತಿ |
ಪ್ರೇಮದಿಂ ಪೇ | ಳ್ದನು ಪರೀಕ್ಷಿತ | ಭೂಮಿಪತಿಗೆ || ೬ ||

ಆ ಪುರಾಣಕ | ಥಾಸಮುದ್ರದಿ |
ಗೋಪಜನ ಲೀ | ಲಾಚರಿತ್ರವ |
ನಾ ಪೊಗಳಿ ವ | ರ್ಣಿಸುವೆನತಿಸಂ | ಕ್ಷೇಪದಿಂದ || ೭ ||

ಜಾಲಮಾತುಗ | ಳಲ್ಲ ಮಾನವ |
ರಾಳಿದಂಥ ಚ | ರಿತ್ರವಲ್ಲಿದು |
ಪೇಳಿ ಪೊಗಳಲು | ಮುಕುತಿರಾಜ್ಯವ | ನಾಳಬಹುದು || ೮ ||

೫ ದ್ವಿಪದಿ

ಆ ಪರೀಕ್ಷಿತರಾಯ ಬೆಸಗೊಂಡನೊಲಿದು |
ಭೂಪಾಲ ಬಲುಭಕುತಿಯಿಂದ ಕೈಮುಗಿದು || ೯ ||

ಜಗದುಪತಿ ದೇವಕಿಗೆ ಜನಿಸಿ ರಾಕ್ಷಸರ |
ಪಗೆಯಿಂದ ಸಂಹರಿಸಿ ಪಾಲಿಸಿದ ಸುರರ || ೧೦ ||

---

1 ವದನ್ನ (ಕಾ) 2 ಕರ್ಣ (ಕಾ)

ಬಲರಾಮಸಹಿತೊಡನೆ ಬೆಳೆದು ಗೋಕುಲದ ।
ಲಲನೆಯರು ಮೋಹಿಸಲದೆಂತು ಸೋಲಿಸಿದ ॥ ೧೧ ॥

ದನುಜಶಿಶುಪಾಲ ಖಳದಂತವಕ್ತ್ರರನು ।
ಘನಪರಾಕ್ರಮಿಯಾದ ಕಂಸದೈತ್ಯನನು ॥ ೧೨ ॥

ಎಂತು ಬಕ ಚಾಣೂರ ಮುಷ್ಟಿಕಾಸುರರ ।
ಅಂತಕನ ನಗರಿಗಟ್ಟಿದನೆಂಬ ವಿವರ ॥ ೧೩ ॥

ಎನಗೆ ಕರುಣಿಪುದೆಂದು ಎರಡಿಲ್ಲದಂದು ।
ಮುನಿಯ ಪಾದಕೆ ನಮಿಸಲಾ ದಯಾಸಿಂಧು ॥ ೧೪ ॥

ಕೇಳಿದನು ಭೂಪತಿಯ ಕಡುದೈನ್ಯ [1]ಕತ[1]ವ ।
ಪೇಳಿದನು ಭಾಗವತ ಪೌರಾಣಕ[2]ಥ[2]ವ ॥ ೧೫ ॥

೬ ರಾಗ ಸೌರಾಷ್ಟ—ತ್ರಿವುಡೆತಾಳ ೩

ಭೂಪ ಕೇಳ್ಳೈ । ಮೊದಲು ಸಂದ ।
ದ್ವಾಪರ, ಯುಗ । ದೊಳಗೆ ರಕ್ಕಸ ।
ಭೂಪರಿದ್ದರು । ಭೂಮಿಗಧಿಕ ಪ್ರ । ತಾಪದಿಂದ ॥ ೧೬ ॥

ದಾನವರು ದಿನ । ದಿನದೊಳೆಸಗುವ ।
ಹೀನಕರ್ಮವ । ತಡೆಯಲಾರದೆ ।
ತಾನೆ ಭೂ ಯೋ । ಚಿಸಿದಳಂದು ನಿ । ದಾನದಿಂದ ॥ ೧೭ ॥

ಧರಣಿ ಬಹು ಬಡ । ಗೋವುರೂಪವ ।
ಧರಿಸಿ ಬಂದಳು । ಸತ್ಯಲೋಕಕೆ ।
ಸರಸಿಜೋದ್ಭವ । ಗೆರಗಿ ಪೇಳ್ದಳು । ಮರುಕದಿಂದ ॥ ೧೮ ॥

(ಬ್ರಹ್ಮನ ಪ್ರವೇಶ, ಭೂದೇವಿಯು ಬಂದು ವಂದಿಸುತ್ತಾಳೆ)

೭ ರಾಗ ಕಾಂಭೋಜಿ—ಅಷ್ಟತಾಳ ೧

ಭೂದೇವಿ—

ಕರುಣಿಸು । ಕಮಲಸಂ । ಜಾತ— । —ಅವ ।
ಧರಿಸಿ ಲಾ । ಲಿಪುದೊಂದು । ಮಾತ— ॥

---

1 ದಿರ (ಕಾ) 2 ರ (ಕಾ)

29

ದುರುಳ ದಾ । ನವರು ಮಾ । ಡುವ ದುಶ್ಚ । ರಿತ್ರವ ।
ನೊರೆಯಲಿ । ಸ್ನಳವಲ್ಲ । ಹರನೊಬ್ಬ । ಬಲ್ಲ— ॥ ೧೯ ॥

ಸುಜನರ । ತಿರುಗಾಡ । ಗೊಡರು— । —ದೈತ್ಯ ।
ಕುಜನರೆ । ಸಗುವಂಥ । ತೊಡರು—॥
ಯಜನಕ । ರ್ಮಗಳಿಲ್ಲ । ವನದ ಪಾ । ಲಾಯಿತು ।
ನಿಜವೇದ । ಮತಗಳು । ತ್ಯಜವಾಯಿ । ತಯ್ಯ— ॥ ೨೦ ॥

ಪುಂಡುಪೋ । ಕರ ಸಂಚಾ । ರಗಳ— । —ಗಂಡ ।
ಹೆಂಡ್ಯರೊ । ಳಿಕ್ಕುವರ್ । ಜಗಳ—॥
ಉಂಡಮ । ನೆಗೆ ಎರ । ಡೆಣಿಸುವ । ರ್ದಣಿಸುವರ್ ।
ಕೊಂಡೆಯ । ವರ ಚಾಳಿ । ಘನವಾಯಿ । ತಯ್ಯ— ॥ ೨೧ ॥

ಮರುತಾನ । ಲಾದಿತ್ಯ । ರ್ಗಳಿಗೆ— । —ತೊಡರ್ ।
ಬರುತಿದೆ । ತಿರುಗಾಟ । ದೊಳಗೆ— ॥
ಪರರ ದ್ರ । ವ್ಯವನಪ । ಹರಿಸುವ । ರರಸುವರ್ ।
ಪರವಧು । ಗಳ ಗೋಷ್ಠಿ । ಸ್ಥಿರವಾಯಿ । ತಯ್ಯ— ॥ ೨೨ ॥

ತಂದೆ ಮ । ಕ್ಕಳ ನಂಬ । ಲಾರ— । —ಬಂಧು ।
ಬಾಂಧವ । ರೊಳು ಬದ್ಧ । ವೈರ— ॥
ಒಂದ ಕೊ । ಟ್ಟೊಂಭತ್ತ । ಕೊಂಬರ । ನ್ಯಾಯವ ।
ಬಂದಿಕಾ । ರರ ಕಾಟ । ನಿತ್ಯ ಕೊಂ । ದಾಟ— ॥ ೨೩ ॥

ಧರ್ಮ[1]ವು । ಖಿ[1]ಲವಾಯಿ । ತಯ್ಯ ।—ಅವ ।
ಧರ್ಮ ಶಾ । ಶ್ವತವಾಯಿ । ತಯ್ಯ— ॥
ನಿರ್ಮಲಾ । ತ್ಮಕ ನಿರಂ । ಜನನ ಪೂ । ಜಿಸದ ದು ।
ಷ್ಕರ್ಮಿಗ । ಳನು ಹೊತ್ತು । ದಣಿದೆ ಬೇ । ಸತ್ತು— ॥ ೨೪ ॥

೮ ಕಂದಪದ್ಯ

ಧರಣಿಯ ಸಂತೈಸುತ್ತಂ
ಸುರರೆಲ್ಲರ ಕೂಡಿಕೊಂಡು ಬಂದಲ್ಲಿಂದಂ ।

1 ನಕ (ಕಾ)

ಸರಸಿಜಸಂಭವನಾ ಪಾಲ್
ಶರಧಿಯ ತಡಿಯಲ್ಲಿ ನಿಂದು ಹರಿ ಶರಣೆಂದಂ || ೨೫ ||

೯ ರಾಗ ನೀಲಾಂಬರಿ—ಜಂಪೆತಾಳ ೩

ಬ್ರಹ್ಮ—

ಜಯ ಸದಾ । ನಂದಪರಿ । ಪೂರ್ಣ— । ಕಮಲಾಕ್ಷ ।
ಜಯ ಲೋಕ । ನಾಥ ಜಯ । ಜಯ ರಮಾ । ಕಾಂತ— || ಪಲ್ಲವಿ ||

ಶಿಶುಪಾಲ । ದನುಜ ಮದ । ಕಂಸ— । ರಾಕ್ಷಸರ ।
ವಿಸರ ಘನ । ವಾಯ್ತು ಖಳ । ವಂಶ—। ಅನ್ಯಾಯ ।
ವೆಸಗುವರೆ । ಮಿತಿಯಿಲ್ಲ । ತಿಂದು ಮಧು । ಮಾಂಸ— || ೨೬ ||

ಸಜ್ಜನರಿ । ಗೆಡೆ ಇಲ್ಲ । ವಯ್ಯ— । ಲೋಕದೊಳು ।
ದರ್ಜನರು । ಘನವಾದ । ರಯ್ಯ—। ದಾನವರ ।
ಗರ್ಜನೆಯ । ನಿಲಿಸಿ ನ । ಮ್ಮವನು ಸಲ । ಹಯ್ಯ— || ೨೭ ||

ಭೂಕನ್ಯೆ । ಮೊರೆಯಿಡುವ । ಳೆನಗೆ—। ಬಿನ್ನಪವ ।
ನಾ ಕಾಲ । ದೊಳು ಗೈದೆ । ನಿನಗೆ— । ಜಗದುಪತಿ ।
ನೀ ಕರುಣ । ದಿಂದ ಪಥ । ವಿಡಿಯೊ ಧಾ । ರಿಣಿಗೆ— || ೨೮ ||

೧೦ ವಾರ್ಧಿಕಷಟ್ಪದಿ

ಗಗನವಾಕ್ಯ—

ಇಂತೆಂದು ಸುರರೆಲ್ಲ ಮೊರೆಯಿಡುತ್ತಿರಲಾಗ
ನಂತಶಯನದೊಳಿದ್ದು ಲಾಲಿಸಿದ ರಾಕ್ಷಸರ
ಸಂತಾನಸಹಿತ ಸಂಹರಿಸುವೆನು ವಸುದೇವಕಾಂತೆ ದೇವಕಿಗೆ ಜನಿಸಿ ।
ಚಿಂತೆ ಬೇಡಿನ್ನು ಗೋಕುಲದೊಳಗೆ ಪಶುವ ಕಾ
ವಂಥ ಚೆನ್ನಿಗರಾಗಿ ನೀವೆಂದು ಗಗನನುಡಿ
ಯಿಂತು ಕೇಳಿಸಿತದನಾಲಿಸುತ್ತಜನು ಭೂಕಾಂತೆಯೊಡನಿಂತೆಂದನು || ೨೯ ||

೧೧ ರಾಗ ವರಾಳಿ—ಏಕತಾಳ ೪

ಬ್ರಹ್ಮ—

ಕೇಳಿದೆಯಾ । ಭೂಮಿದೇವಿ । ಇನ್ನೇ । ನೆ—ಲಕ್ಷ್ಮೀ ।
ಲೋಲ ದಯ । ಮಾಡಿದ ಮೇ । ಲಿನ್ನೇ । ನೆ— ||

ಕೇಳಬೇಕೆ । ನಿನ್ನ ಪುಣ್ಯ । ವಿನ್ನೇ । ನೆ—ಸತ್ಯ ।
ಕಾಲವು ಬಂ । ದೊದಗಿದ ವೋ । ಲಿನ್ನೇ । ನೆ— ॥ ೩೦ ॥

ನೀಗಿತಮ್ಮ । ನಿನ್ನ ಬಾಧೆ । ಇನ್ನೇ । ನೆ—ಲಯ ।
ವಾಗುವರು । ದನುಜರು ಮುಂ । ದಿನ್ನೇ । ನೆ—॥
ಪೋಗು ನಿನ್ನ । ಸದನಕ್ಕೆ ಮ । ತ್ತಿನ್ನೇ । ನೆ—ಧೈರ್ಯ ।
ಳಾಗು ಸುಖ । ದಿಂದ ಬಾಳು । ಇನ್ನೇ । ನೆ— ॥ ೩೧ ॥

೧೨ ಕಂದಪದ್ಯ

ಕಮಲಜ ಸಂಭ್ರಮದಿಂತೀ
ಕ್ರಮದಿಂದಾ ಭೂಮಿಯನ್ನು ಬೀಳ್ಕೊಟ್ಟಾಗಳ್ ।
ನಮೊ ನಾರಾಯಣ ಎನ್ನುತ
ಅಮರರ ತಾ ಕರೆದುಕೊಂಡು ಮುನ್ನಡೆಗೊಂಡಂ ॥ ೩೨ ॥

(ಬ್ರಹ್ಮಾದಿಗಳ ನಿಷ್ಕ್ರಮಣ)

೧೩ ರಾಗ ಕಾಂಭೋಜಿ—ಏಕತಾಳ ೪

ಅತ್ತಲಾ, । ಮಧುರೆಯೊಳ । ಗುತ್ತಮಾಂಗ । ದೇವಕನ್ನ ।
ಪುತ್ರಿಯಾದ । ದೇವಕಿಯ । ನರ್ತಿಯಿಂದ । ಲೆ—॥
ಸತ್ಯವಂತ । ವಸುದೇವ ನೃ । ಪೋತ್ತಮನು ತಾ । ಮದುವೆಯಾಗೆ ।
ಪೃಥ್ವಿಪಾಲ । ರೆಲ್ಲ ಬಂದ । ರುತ್ಸವಕೆಂ । ದು— ॥ ೩೩ ॥

ಪೊಂಗಳಶ । ಕುಚದ ಮೋಹ । ನಾಂಗಿಯರೆ । ಲ್ಲರು ಶೋಭಾ ।
ನಂಗಳ ಪಾ । ಡುತ್ತಲತಿ । ಸಂಭ್ರಮದಿಂ । ದ—॥
ರಂಗಮಂಟ । ಪದಿ ಕೋಮ । ಲಾಂಗಿ ವಸು । ದೇವರಿಂಗೆ ।
ಮಂಗಳಾರ । ತಿಯ ಮಾಡೆ । ಶೃಂಗಾರದಿಂ । ದ— ॥ ೩೪ ॥

೧೪ ರಾಗ ಕೇದಾರಗೌಳ—ಅಷ್ಟತಾಳ ೧

ದಾರೆ ಚ । ತುರ್ಥಿ ನಾ । ಗೋಲೆಯ । ಕಳೆದುಪ ।
ಚಾರಮ । ನ್ನಣೆಗಳಿಂ । ದ—॥
ಬೇರೆ ಬೇ । ರರಸುಗ । ಳಿಗೆ ಕೊಟ್ಟ । ನುಚಿತವ ।
ಭೂರಿಸಂ । ತೋಷದಿಂ । ದ— ॥ ೩೫ ॥

ಚಾರುಚ । ರಿತೆ ತನ್ನ । ಮಗಳಿಗೆಂ । ದೆನುತಾರು ।
ನೂರು ತು । ರಗ ಕೊಟ್ಟ । ನು—॥
ಮಿಾರಿದ । ಮದವೆತ್ತಾ । ನೆಗಳ ಶೃಂ । ಗರಿಸಿ ನಾ ।
ನೂರೆಣಿ । ಕೆಯಲಿ ಕೊ । ಟ್ಟ— ॥ ೩೬ ॥

ಸಾರಥಿ । ಸಹಿತ ಸಂ । ದಣಿಸಿದ । ತೇರ್ಗಳ ।
ತೋರಿದ । ನುಚಿತದಿಂ । ದ—॥
ಹೇರಾಳ । ಪಟ್ಟೆ ಪೀ । ತಾಂಬರ । ವಿತ್ತ ಕು ।
ಮಾರಿಗೆ । ಬಳುವಳಿ । ಯ— ॥ ೩೭ ॥

ಮೂರುಸಾ । ವಿರ ದನ । ಕರೆವೆಮ್ಮೆ । ಮುಂಚವಿ ।
ನ್ನೂರು ತ । ನ್ನಳಿಯಗೆಂ । ದು—॥
ಕಾರುಣ್ಯ । ದಿಂದಿತ್ತು । ಕನಕಗ । ಳನು ತೂಗಿ ।
ಭಾರ ಭಾ । ರವ ಕೊಟ್ಟ । ನು— ॥ ೩೮ ॥

ಪಾವಕ । ನಂತೆ ಪ್ರ । ಜ್ವಲಿಪ ರ । ತ್ನಗಳ ರಾ ।
ಜೀವಲೋ । ಚನೆಗೆನ್ನು । ತ್ತ—॥
ಸೇವೆಯ । ಮಾಳ್ಪ ದಾ । ಸಿಯರ ಕೊ । ಟ್ಟದಕಿನ್ನು ।
ದೇವಶಂ । ಕರನೆ ಬ । ಲ್ಲ— ॥ ೩೯ ॥

ಎಲ್ಲಿ ನೋ । ಡಿದರು ದಂ । ಡಿಗೆಯಾನೆ । ಕುದುರೆಯ ।
ಚೆಲ್ಲಾಟ । ಘನವಾಯಿ । ತು—॥
ಅಲ್ಲಲ್ಲಿ । ಪಿಡಿದ ಚಾ । ಮರ ಛತ್ರ । ಬಿರುದಿನ ।
[1]ಘಲ್ಲಣೆ । ಮಿತಿಮಿಾರಿ । ತು[1]— ॥ ೪೦ ॥

ಭೋರೆಂಬ । ಮರವಾದ್ಯ । ಭೇರಿಶ । ಬ್ದವ ಕೇಳಿ ।
ಕೂರುಮ । ನೆದೆಗೆಟ್ಟ । ನು— ॥
ನಾರಿಯ । ರುಲಿವ ಶೋ । ಭಾನ ದಿ । ಬ್ಬಣದ ವಿ ।
ಸ್ತಾರ ಸಂ । ಭ್ರಮಿಸಿತ । ಲ್ಲಿ— ॥ ೪೧ ॥

1 ತಲ್ಲಣ ಬಿರುಗೊಂಡವು (ಕಾ)

ವಲ್ಲಭೆ । ಸಹಿತಾಗ । ವಸುದೇವ । ಮಣಿರಥ ।
ದಲ್ಲಿ ಕು । ಳ್ಳಿರಲು ಕಂ । ಡು— ॥
ಬಲ್ಲಿದ । ಕಂಸ ವಾ । ಘೆಯ ಪಿಡಿ । ದಾರಥ ।
ದಲ್ಲಿಯೆ । ಬರುತಿರ್ದ । ನು— ॥ ೪೨ ॥

(ರಥದಲ್ಲಿ ವಸುದೇವ ದೇವಕಿಯರನ್ನೊಡಗೊಂಡು ಕಂಸನ ಪ್ರವೇಶ)

## ಕಂಸನ ದುಷ್ಕೃತ್ಯ

ವಸುಧಾಪಾ । ಲಕನೆ ಕೇ । ಳಾವೇಳೆ । ಯೊಳಗೊಂದು ।
ವಿಷಮ ಸಂ । ಭವಿಸಿದು । ದ— ॥
ವಸುದೇವ । ದೇವಕಿ । ಯರ ಕಳು ।ಹಲು ಬಂದ ।
ಅಸುರಕಂ । ಸಾಖ್ಯಗಾ । [1]ಗ[1]— ॥ ೪೩ ॥

೧೫ ರಾಗ ಭೈರವಿ—ಅಷ್ಟತಾಳ ೧

ಗಗನವಾಕ್ಯ—

ಖಳಕುಲಾ । ಧಮನೆ ನಿ । ನ್ನ—ತಂ । ಗಿಯ ಗರ್ಭ ।
ದೊಳು ದಯ । ವಿಟ್ಟು ಮು । ನ್ನ— ॥
ನಳಿನಲೋ । ಚನನೆಂಟ । ನೆಯಲಿ ಜ । ನಿಸಿ ನಿನ್ನ ।
ತಲೆಯನ । ರಿವನೆಂಬ । ನುಡಿ ಗಗ । ನದಿ ಕೇಳೆ ॥ ೪೪ ॥

ಕಂಸ—

ಮಂಗಲ । ಕರವೆಸೆ । ದು—ರಾ । ಜಿಸುವಾಗ ಅ ।
ಮಂಗಲ । ವೆರಗಿತ । ಲ್ಲ— ॥
ತಂಗಿಯ । ಸುತನಿಂದ । ಮರಣವೆಂ । ಬುದ ಕೇಳಿ ।
ಕಂಗಳೆ । ರಡರಲ್ಲಿ । ಕಿಡಿಗೆದ । ರಿದ ಕಂಸ ॥ ೪೫ ॥

ನೀರ ಬ । ತ್ತಿಸಿದ ಮೇ । ಲೆ—ಮು । ತ್ತಿನ ಚಿಪ್ಪು ।
ಗಾರಾಗ । ದುಳಿವದುಂ । ಟೆ— ॥
ಬೇರು ಕ । ಡಿದ ಮೇಲೆ । ಜೆಳಿವುದೆ । ಗಿಡ ಇಂದೀ ।
ನಾರಿಯಿ । ಲ್ಲದಡೆ ಕು । ಮಾರರಾ । ಗುವದೆಂತು ॥ ೪೬ ॥

---

1 ಘುಸನದೊಳೆಸೆದುದ (ಕಾ) ; ಗಸದೊಳಗೆಸೆದುದ (ಅ)

ಸಾಲ ರೋ । ಗಗಳು ಶ । ತ್ರು—ಮಿಾ । ರಿದ ವಹ್ನಿ ।
ಜ್ವಾಲೆ ನಾ । ಲ್ಕವಕೆ ಹೆ । ಚ್ಚು— ॥
ಕಾಲದೊ । ಳಗೆ ಪರಿ । ಹರಿಸದಿ । ರ್ದಡೆ ಮುಂದೆ ।
ಕೀಳುವ । ಡರಿದು ಚಾ । ತುರ್ಯವು । ಳ್ಳವರಿಗೂ ॥ ೪೭ ॥

ಎಂಬ ಯು । ಕ್ತಿಗಳ ತ । ನ್ನ—ಚಿ । ತ್ತದೊಳಿಟ್ಟು ।
ಹೆಂಬಲಿ । ಸಿದನು ಮು । ನ್ನ— ॥
ಮುಂಬರಿ । ದುಗಿದು ಖ । ಡ್ಗವ ರ್ಝಳ । ಪಿಸಿ ಕೋಮ ।
ಲಾಂಗಿ ದೇ । ವಕಿಯ ಗಂ । ಟಲಿಗೆ ಸೆ । ಡೆದ ಕಂಸ ॥ ೪೮ ॥

೧೬ ವಾರ್ಧಿಕಷಟ್ಪದಿ

ವಸುದೇವ—

ಕಂಸರಾಕ್ಷಸ ಮರಣಭಯದಿಂದ ದೇವಕಿಯ
ಹಿಂಸೆಯಂ ಮಾಡುತಿರಲದ ಕಂಡು ವಸುದೇವ
ಮುಂಸರಿಸಿ ಕೈಯ ಖಡ್ಗವ ಪಿಡಿದು ದೈನ್ಯತನಮಂ ಸಲಿಸುತಿಂತೆಂದನು ।
ನೀಂ ಸಕಲಮಂ ತಿಳಿದು ಫಲವೇನಕಟ ನಿನ್ನ
ವಂಶಕಪಕೀರ್ತಿಯಂ ತರಬಹುದೆ ಈ ತರುಣಿ
ಯಂ ಸದೆದು ಹೆಂಗೊಲೆಗೆ ಬಯಸುವರೆ ರಣಧೀರರಿಂಗಿದು ಪವಿತ್ರವಲ್ಲ॥ ೪೯ ॥

೧೭ ರಾಗ ವರಾಳಿ—ಏಕತಾಳ ೨

ಲೇಸುಕಾರ್ಯ । ವೇನೊ ನಿನಗೆ । ಕಂಸರಾ,। ಯ—ಇವಳ ।
ಘಾಸಿಮಾಳ್ಪ । ದುಚಿತವೇನೊ । ಕಂಸರಾ,। ಯ— ॥
ಹೇಸದಿಹಳೆ । ಭಾಗ್ಯಲಕ್ಷ್ಮಿ । ಕಂಸರಾ,। ಯ—ಕೀರ್ತಿ ।
ಮಾಸುವದು । ನಿಮಿಷದಲ್ಲಿ । ಕಂಸರಾ,। ಯ— ॥ ೫೦ ॥

ಮಾನಿನಿಯ । ಕೊಲೆಗೆ ಬಯಸಿ । ಕಂಸರಾ,। ಯ—ನಿನ್ನ ।
ಮಾನಕೆಡಿಸಿ । ಕೊಳದಿರಯ್ಯ । ಕಂಸರಾ,। ಯ—॥
ಜ್ಞಾನವಂತ । ನಾಗಿ ನೀನು । ಕಂಸರಾ,। ಯ—ಇಂತು ।
ಹೀನಬುದ್ಧಿ । ಯೋಚಿಸುವರೆ । ಕಂಸರಾ,। ಯ— ॥ ೫೧ ॥

ಒಡಲು ಶಾ,। ಶ್ವತವಲ್ಲ । ಕಂಸರಾ,। ಯ—ಪುಣ್ಯ ।
ಬಿಡುವದೊಂದೆ । ನಿಮಿಷದಲ್ಲಿ । ಕಂಸರಾ,। ಯ— ॥

ಮಡದಿ ಮಕ್ಕ | ಳೆಂಬ ಭಾಗ್ಯ | ಕಂಸರಾ,| ಯ—ಸುಳಿ |
ಹೊಡೆದ ನೀರ | ನೆರೆಗಳಂತೆ | ಕಂಸರಾ,| ಯ— || ೫೨ ||

ಕಂಡುಕಂಡು | ತಿಳಿದು ತಿಳಿದು | ಕಂಸರಾ,| ಯ—ಯಮನ |
ದಂಡನೆಗೆ | ಸಿಲುಕುವೆಯ | ಕಂಸರಾ,| ಯ—||
ಬಂಡಾಟಗ | ಉಚಿತವಲ್ಲ | ಕಂಸರಾ,| ಯ—ನರಕ |
ಕುಂಡದೊಳಗೆ | ಬೀಳ್ವೆಯಲ್ಲ | ಕಂಸರಾ,| ಯ— || ೫೩ ||

೧೮ ರಾಗ ನೀಲಾಂಬರಿ—ರೂಪಕತಾಳ ೧

ಕೊಂದವರಿಗೆ | ಕೊಲೆತಪ್ಪದು | ಕಡೆಗೀ ಭಯ | ನಿನಗಪ್ಪುದು |
ಸಂದರೆ ಪ್ರಾ | ಣದ ಹಗೆ ಎಂ | ದೆಂದಿಗು ಬಿಡ | ದಯ್ಯಾ— || ಪಲ್ಲವಿ ||

ಹುಟ್ಟಿಸಿದಾ | ಗಲೆ ಮರಣವ | ಕಟ್ಟಿಹುದಾ | ವಿಧಿ ಫಣೆಯಲಿ |
ಕೆಟ್ಟಾವೋ | ಲಲ್ಲದೆ ಮತಿ | ಪುಟ್ಟದು ಜೀ | ವರಿಗೆ—||
ಭ್ರಷ್ಟಾಗದ | ಮೊದಲೇ ದಯ | ವಿಟ್ಟರೆ ಗುಣ | ವೀತರುಣಿಯ |
ಬಿಟ್ಟರೆ ಲೇ | ಸಿನ ಕಾರಣ | ಇಷ್ಟರ ಭಯ | ವೇಕೆ— || ೫೪ ||

ಮುಳ್ಳೊನೆ ಕಾ | ಲಿಗೆ ನೆಟ್ಟರೆ | ಪಲ್ಲೊನೆ ಚು | ಚ್ಚುವದೇತಕೆ |
ಕೀಳ್ಮನಸಿನ | ಕಂಗೆಡಿಕೆಯ | ಕಲ್ಮನ ಮಾ | ಡದಿರು—||
ತಾಳ್ಮಮತೆಯ | ನೆನ್ನೀ ಸತಿ | ಯೊಳ್ಮಾಡದಿ | ರವಕೃತ್ಯವ |
ಜನ್ಮಾಂತ್ರಕು | ಬಿಡದವಗುಣ | ಪಾಳ್ಮಾಡಿಸ | ದಿರದು— || ೫೫ ||

ಮುತ್ತೊಂದನು | ಕೇಳೀ ಸತಿ | ಪೆತ್ತಂದಿಗೆ | ತನಗುದಿಸಿದ |
ಪು[1]ತ್ರರನಂ | ದಂದೇ[1] ತಂ | ದಿತ್ತೊಂದಿಗೆ | ನಿನ್ನ—||
ಚಿತ್ತದ ಭಯ | ನೀಗಿಸುವೆನು | ಸತ್ಯದ ಮಾ | ತಿದು ಲಾಲಿಸು |
ಉತ್ತಮ ಮಾಂ | ಗಲ್ಯದೊಳವ | ಕೃತ್ಯವ ಮಾ | ಡದಿರು— || ೫೬ ||

೧೯ ರಾಗ ಮಧುಮಾಧವಿ—ಅಷ್ಟತಾಳ ೨

ನಿಜವಲ್ಲ |—ಮಾತು | ನಿಜವಲ್ಲ— || ಪಲ್ಲವಿ ||

ಕಂಸ—

ನಿಜವಲ್ಲ | ವೀ ಮಾತು | ನಿನ್ನಂತ | ರಂಗ— |
ಕುಜನರ | ಕೂಡಾಡು | ವಂಥ ಪ್ರ | ಸಂಗ— || ಅನುಪಲ್ಲವಿ ||

---

1 ತ್ರಂಧ್ಯರನೆಲ್ಲರ (ಕಾ)

ಬೀಸಿದ | ಕೈತಪ್ಪಿ | ಸಡೆದರೆ | ಮುಂದೆ— |
ಸಾಸಿರ | ಕಾಲವೆಂ | ಬರು ಗಾದೆ | ಹಿಂದೆ— ||
ನೀ ಶಿಶು | ಗಳ ತಂದು | ಕೊಡುವ ಮಾ | ತುಂಟೆ— |
ಲೇಸೆಂದು | ನಂಬಿ ಬಿ | ಟ್ಟರೆ ಟೆಂಟೆ | ಮೆಂಟೆ— || ೫೭ ||

ಬೆಟ್ಟದ | ಮೊಸಳೆಯ | ಜಲದೊಳು | ತಂದು— |
ಬಿಟ್ಟವ | ನುಪಕಾರ | ವರಿವುದೆ | ಮುಂದು— ||
ದುಷ್ಟರಿ | ಗುಂಟೆ ದಾ | ಕ್ಷಿಣ್ಯವೆಂ | ದೆಂದೂ— |
ಭ್ರಷ್ಟಕಾ | ರ್ಯದ ಮಾತಾ | ಡುವರೆ ನೀ | ನಿಂದು— || ೫೮ ||

ಕೊಂಡದ | ನೆಲೆನೀರ | ತಿಳಿದು ತಾ | ಮೊದಲೆ— |
ಗುಂಡಿಯೊ | ಳಗೆ ಬಿದ್ದು | ಸಾವರೆ | ಮರುಳೆ— ||
ಕಂಡು ಹಾ | ದಿಯೊಳಿದ್ದ | ಮಾರಿಯ | ಮನೆಗೆ— |
ಕೊಂಡುಹೋ | ಗುವರುಂಟೆ | ಕಡುಜಾಣ | ರೊಳಗೆ || ೫೯ ||

(ಎಲ್ಲರೂ ನಿಷ್ಕ್ರಮಿಸುವರು)

೨೦ ವಾರ್ಧಿಕಷಟ್ಪದಿ

ಹುಟ್ಟಿದಣುಗರ ತಾ ಕೊಡುವೆನೆಂಬ ನಂಬುಗೆಯ
ಕೊಟ್ಟ ಮಾತಿನಮೇಲೆ ದೇವಕಿಯ ಮುಂದಲೆಯ
ಬಿಟ್ಟು ಕಳುಹಿಸಿಯುವರನರಮನೆಗೆ ಕಂಸ ನಿಜಪಟ್ಟಣಕೆ ನಡೆತಂದನು |

(ಕಂಸನ ಪ್ರವೇಶ)

ದುಷ್ಟಭಾವನದೊಂದು ಅನುಜೆಯಕ್ಕರವೊಂದು
ಕೃಷ್ಣಜನನಸ್ಥಿತಿಯ ಮರಣದಾ ಭಯವೊಂದು
ಅಷ್ಟಮದಹಂಕಾರದೆಳೆಯೊಂದು ಇನಿತರಿಂ ಭ್ರಷ್ಟಮನ ಕರಗುತಿರ್ದ || ೬೦ ||

೨೧ ರಾಗ ಘಂಟಾರವ—ಜಂಪೆತಾಳ ೧

ವಸುದೇವ—

ಇತ್ತಲರ | ಮನೆಗೆ ನಡೆ | ತಂದು ಕಾ | ಲಾಂತರಕೆ |
ಪುತ್ರರನು | ಪಡೆದಳಾ | ಮತ್ತಗಜ | ಗಮನೆ— || ೬೧ ||

ಉತ್ತಮಗು । ಣಾಢ್ಯವಸು । ದೇವ ತಂ । ದಿತ್ತನೈ ।
ಪುತ್ರನ । ನ್ನಿಕೊ ಅರಸಿ । ಪೆತ್ತಳೆಂ ।ದೆನುತ— ॥ ೬೨ ॥

(ವಸುದೇವನು ಶಿಶುವನ್ನು ತಂದು ಕಂಸನಿಗೆ ಒಪ್ಪಿಸುತ್ತಾನೆ)

ಕಂಸ—

ಕಂಡನಾ । ಖಳತಿಲಕ । ಗಂಡುಗಲಿ । ತನದಿರವ ।
ಕೊಂಡುಪೋ । ಗೀ ಶಿಶುವ । ದಂಡಿಸಲ । ದೇಕೆ— ॥ ೬೩ ॥

ಏಳುಪ । ರ್ಯಂತವೂ । ಎನಗೆ ಗೋ । ಚರವಿಲ್ಲ ।
ಮೇಲೆ ನಿನ । ಗುದಿಸಿದರೆ । ಬಾಲಕರ । ನೆನಗೆ— ॥ ೬೪ ॥

ತಂದುಕೊಡು । ಸಾಕೆನ್ನ । ಕುಂದನೆಣಿ । ಸದೆ ನಿನ್ನ ।
ಕಂದರನು । ಸಲಹೆಂದ । ತಂದೆ ಇರು । ವನಕ— ॥ ೬೫ ॥

(ವಸುದೇವನ ನಿಷ್ಕ್ರಮಣ)

೨೨ ಕಂದಪದ್ಯ

ಅಸುರಂ ದಯವಿಟ್ಟಂದಾ
ಶಿಶುವಂ[1]ಕೊಡೆ ತಿರುಗಿ ತಂದು ದೇವಕಿಗಿತ್ತಂ[1] ।
ಋಷಿ ನಾರದನಾಕಾಶದ
ದೆಸೆಯೊಳಗಿಂದಿಳಿದುಬಂದು ಕಂಸಂಗೆಂದಂ ॥ ೬೬ ॥

(ನಾರದನ ಪ್ರವೇಶ)

೨೩ ಸಾಂಗತ್ಯ ; ರಾಗ ತೋಡಿ—ರೂಪಕತಾಳ ೧, ೨

ನಾರದ—

ಮರುಳಾದೆ । ಏನಯ್ಯ । ಕಂಸ ನೀ । ಮಾಡಿದ್ದು ।
ಸರಿಬರ । ಲಿಲ್ಲೆನ್ನ । ಮನಕೆ—॥
ಒರೆಯುಲಿ । ನ್ನೇತಕೆ । ವಸುದೇವ । ನಣುಗರ ।
ತಿರುಗಿ ನೀ । ಕೊಟ್ಟುದ । ನ್ಯಾಯ— ॥ ೬೭ ॥

---

1 ದೇವಕಿಯ ಕಯ್ಯೊಳಿಟ್ಟು ಕಳುಹಲ್ ಮತ್ತಾ (ಕಾ)

ಒಂದೆರ । ಡೆಂಟೀಳು । ಲೆಕ್ಕವ । ನೆಣಿಸಲು ।
ಹಿಂದು ಮುಂ । ದಕು ಸೆಮ । ನಹುದು—॥
ಇಂದಿರೆ । ಯರಸ ಯಾ । ವಾಗ ಪು । ಟ್ಟುವನು ಹೇ ।
ಗೆಂಬ ನಿ । ಶ್ಚಯವಾರಿ । ಗುಂಟು— ॥ ೬೮ ॥

ವೊಳೆಯಲ್ಲಿ । ಕಿಚ್ಚ ನಂ । ದಿಸದಿರ್ದ । ಡದು ಮತ್ತೆ ।
ಬೆಳೆದಡೊ । ಬ್ಬರನಿದಿ । ರ್ಗೊಳದು ॥
ತಲೆಗೇರ । ದನಕ ತ । ಗ್ಗಿಸದಡೆ । ವಿಷವದು ।
ನೆಲೆಗೊಳ್ಳ । ದಯ್ಯ ಪಂ । ಡಿತರ— ॥ ೬೯ ॥

ಸುರರಿಗೆ । ವೈರ ನಿ । ನ್ನಲಿ ಪೂ,। ರ್ವದೊಳು ನಿ ।
ನ್ನಿರವ ನೋ । ಡಲು ಕಾಲ । ನೇಮಿ—॥
ಅರಿತುಕೊಂ । ಡಿರುವೆವು । ನಾವೀಗ । [1]ಹಿತವ[1]ರು ।
ಪರರಿಲ್ಲ । ನಿನಗಾಗು । ವವರು— ॥ ೭೦ ॥

ಯಾರೆತ್ತ । ಲಾದರೆ । ನಮಗೇನು । ಗೋವಿಂದ।
ನಾರಾಯ । ಣಾ ಕೃಷ್ಣಾ । ಎನುತ—॥
ನಾರದ । ತೆರಳಿಪೋ । ಗಲು [2]ಹೆಡೆ । ಹೆರೆ[2]ದ ಕಾ ।
ಳೋರಗ । ಗೆಣೆಯಾದ । ನಸುರ— ॥ ೭೧ ॥

(ನಾರದಮುನಿಯ ನಿಷ್ಕ್ರಮಣ)

ಕಂಸ—

ಖಳರಾಯ । ಕೋಪಿಸಿ । ವಸುದೇವ । ನೊಡನೆ ಮ ।
ಕ್ಕಳನೆಲ್ಲ । ತರಹೇಳಿಂ । ದೆನುತ—॥
ಕಳುಹಿದ । ದೂತರು । ವಸುದೇವ । ಭೂಪನ ।
ಬಳಿಗೆ ಬಂ । ದರು ನಿಮಿ । ಷದಲಿ— ॥ ೭೨ ॥

ದೂತ—

ಕರವ ಮು । ಗಿದು ಇದಿ । ರಲಿ ನಿಂದು । ನಿಮ್ಮನು ।
ಬರಹೇಳಿ । ದನು ಕಂಸ । ರಾಯ—॥

1 ಲಹಿತ (ಶಾ, ಓ) 2 ಪೊರೆಕಳೆ (ಓ)

ತರಳರೆ । ಲ್ಲರನೀಗ । ತಂದೊಪ್ಪಿ । ಸಲುಬೇಕೆಂ ।
ಬರಸನ । ಪ್ಪಣೆಯ ಪೇ । ಳಿದರು— ॥ ೭೩ ॥

ವಸುದೇವ—

ಕೋಪದೊ । ಳಿಹನೆಂಬ । ಮಾತಿಗೆ । ಮನದ ಸಂ ।
ತಾಪವು । ಒಡಲೊಳು । ಪ್ಪಿರಿದು—॥
ಆ ಪುಣ್ಯ । ವಂತೆಯ । ಕರೆದು ಏ । ಕಾಂತದಿ ।
ತಾ ಪೇಳಿ । ದನು ವೃತ್ತಾಂ । ತಗಳ— ॥ ೭೪ ॥

ದೇವಕಿ—

ಪರಮ ಪಾ । ತಿವ್ರತ್ಯ । ದೊಳು ಸೀತೆ । ಯೈಶ್ವರ್ಯ ।
ದೊಳಗೆ ಸಾ । ಗರಸುತೆ । ಲಕ್ಷ್ಮಿ—॥
ಧರೆಯ ಸ । ಜ್ಜನಪುಣ್ಯ । ಚರಿತೆ ದೇ । ವಕಿಯುಂತಃ ।
ಕರಣವ । ನೇನ ಬ । ಣ್ಣಿಪೆನು— ॥ ೭೫ ॥

ಪತಿಯಂತ । ರಂಗವ । ತಿಳಿದು ದೇ । ವಕಿ ತನ್ನ ।
ಮತಿಯೊಳೊಂ । ದಿಷ್ಟು ದುಃ । ಖಿಸದೆ—॥
ಸುತರ ಆ । ರ್ವರ ತಂದು । ದೃಢಮನ । ಸ್ಸಿನಲಿ ಭೂ ।
ಪತಿಯ ಕೈ । ಯಲಿ ಕೊಟ್ಟ । ಳಾಗ— ॥ ೭೬ ॥

(ವಸುದೇವನು ಮಕ್ಕಳನ್ನು ತಂದೊಪ್ಪಿಸುತ್ತಾನೆ)

೨೪ ರಾಗ ಸೌರಾಷ್ಟ್ರ—ತ್ರಿವುಡೆತಾಳ ೨

ಕಂಸ—

ಬಂದು ಕೈಯಲಿ । ಶಿಶುಗಳಾರ್ವರ ।
ತಂದುಕೊಡಲಾ । ಕಂಸ ಕೋಪಿಸಿ ।
ಕೊಂದು ಶಿಲೆಗ । ಪ್ಪಳಿಸುತಾರ್ಭಟೆ । ಯಿಂದ ಮುಳಿದು ॥ ೭೭ ॥

ಆರು ಮಕ್ಕಳ । ನೊರಸಿ ಶಿಲೆಯಲಿ ।
ಸೇರಿಸಿದ ದಂ । ಪತಿಗಳಿರ್ವರ ।
ಕಾರಗರದೊಳು । ಕಾಲ್ಗೆ ಸಂಕಲೆ । ಸೇರಿಸಿದನು ॥ ೭೮ ॥

ಶಕಟ ಕೇಶಿ ಪ್ರ । ಲಂಬ ಧೇನುಕ ।
ಬಕ ವಿವಿದ ತೃಣ । ವರ್ತ ವತ್ಸಾಂ ।
ತಕಬಲಾಢ್ಯರ । ಕಾವಲಿಟ್ಟನು । ಯುಕುತಿಯಿಂದ ॥ ೭೯ ॥

## ಬ್ರಹ್ಮಕೊರವಂಜಿ

(ಕಂಸವಸುದೇವರ ನಿಷ್ಕ್ರಾಮ, ಆಮೇಲೆ ಬ್ರಹ್ಮನ ಪ್ರವೇಶ)

೨೫ ವಾರ್ಧಿಕಷಟ್ಪದಿ

ಬ್ರಹ್ಮ—
ಮದಕಂಸನಾಜ್ಞೆಯಲಿ ವಸುದೇವದೇವಕಿಯು
ರೆದೆಗುದಿತದಿಂದ ಸೆರೆಮನೆಯೊಳಿರುತಿರಲಾಗ
ಪದುಮಸಂಭವನರಿತು ಪರರಿಗುಪಕಾರವಂ ಮಾಳ್ಪುದೇ ಸತ್ಯವೆಂದು ।
ಮುದದಿಂದ ಕೃಷ್ಣಜನನಸ್ಥಿತಿಯ, ಗೋಕುಲದ
ಸುದತಿಯರ ಸೌಭಾಗ್ಯ ದುಷ್ಟಜನ ಸಂಹಾರ
ಮೊದಲಾದ ಗುಣಗಳನು ಪೇಳುವಡೆ ಮನದೊಳಗೆ ನೆನೆಯುತ್ತ
ಕಣಿಯಾದನು ॥ ೮೦ ॥

೨೬ ರಾಗ ಸೌರಾಷ್ಟ—ತ್ರಿವುಡೆತಾಳ ೩

ಅರಸ ಕೇಳಾ । ಹರಿಯ ಜನನದ ।
ಹರುಷ ದೇವಕಿ । ಗೊರೆಯಲೋಸುಗ ।
ಸರಸಿಜೋದ್ಭವ । ನಂದು ಮಾಯದ । ಕೊರವಿಯಾದ ॥ ೮೧ ॥

ಉತ್ತಮರ ಭಯ । ತಾಪಶರಧಿಯ ।
ನುತ್ತರಿಪ ಮಂ । ತ್ರವನುಸುರ್ವಡೆ ।
ಬಿತ್ತರಿಸಿ ಕೊರ । ವಂಜಿವೇಷವ । ಹೊತ್ತನಜನು ॥ ೮೨ ॥

ದುಷ್ಟಕಂಸಾ । ಸುರನ ಭಯದಲಿ ।
ಕಷ್ಟಬಡುತಿಹ । ದೇವಕಿಯ ಮನ ।
ದಿಷ್ಟ ಪೇಳ್ವರೆ । ಕೊರವಿಯಾದನು । ಸೃಷ್ಟಿಯರಸ ॥ ೮೩ ॥

ವಚನ ॥ ಇಂತೀ ಸತ್ಯಲೋಕವಾಸಿಯಾದಂಥ ಬ್ರಹ್ಮದೇವರು ವಿನೋದದಿಂದ ಪರೋಪಕಾರಗೋಸ್ಕರವಾಗಿ ನಿಜರೂಪಮಂ ಬಿಟ್ಟು ಕೊರವಂಜಿ ವೇಷಮಂ ತಾಳ್ದು ಶೃಂಗಾರವಾದರದೆಂತೆನೆ—

(ಬ್ರಹ್ಮನು ಹೊರಟುಹೋಗಲಾಗಿ ಕೊರವಂಜಿಯ ಪ್ರವೇಶ)

೨೭ ರಾಗ ದ್ವಿಜಾವಂತಿ—ಅಷ್ಟತಾಳ ೨

ಕೊರವಂಜಿ—

ಚಾರುಚ । ರಿತ್ರೆ ಸ । ದ್ಗುಣವಂತೆ । ಶರಧಿಗಂ ।
ಭೀರೆ ಲಾ । ವಣ್ಯಪಾ । ರಾವಾ, । ರೆ—॥
ವಾರಿಜ । ವದನವಿ । ರಾಜಿತೆ । ಕೊರವಿ ಶೃಂ ।
ಗಾರವಾ । ದಳು ಮುದ್ದು । ಲಲಿತಾಂ,। ಗಿ— ॥ ೮೪ ॥

ಮುಕುರಕ । ಪೋಲೆ ಮಂ । ದಸ್ಮಿತೆ । ಮೃದುಹಸ್ತೆ ।
ಮಕರಧ್ವ । ಜನ ಚಿ,। ನ್ನದ ಬೊಂ,। ಬೆ—॥
ಸಕಲಕ । ಲಾನ್ವಿತೆ । ನಳಿತೋಳ್ಗ । ಳಬಲೆ ಕಂ ।
ಚುಕವನಿ । ಟ್ಟಳು ಕುಂಭ । ಕುಚಯುಂ,। ಗೆ— ॥ ೮೫ ॥

ಮುತ್ತಿನ । ಓಲೆ ಮೂ । ಗುತಿ ಕೊಪ್ಪಿ । ನೆಸಳುಗ ।
ಳುತ್ತಮ । ಚೌಲಿ ರಾ । ಕಟಿ ಬಂ,। ದಿ— ॥
ರತ್ನದ । ಕಾಲ[1]ಚಿ । ಲಬು[1] ಚಳ । ಕಿಗಳಿಂದ ।
ಮತ್ತೇಭ । ಗಮನೆ ರಾ । ಜಿಸಿದ,। ಳು— ॥ ೮೬ ॥

ಕಂಕಣ । ಕೈಯ ತೋ । ಳ್ಬಳೆ ಮುಂಗೈ । ಸರಿಗೆ ಪ ।
ದ್ಮಾಂಕಿತ । ಹಸ್ತೆ ಕೇ । ಸರಿಮು,। ಧ್ಯೆ—॥
ಕುಂಕುಮ । ಗಂಧ ಕ । ಸ್ತುರಿ ಪರಿ । ಮಳ ಸರ್ವಾ ।
ಲಂಕಾರ । ವಾದಳಂ । ಬುಜನಯ । ನೆ— ॥ ೮೭ ॥

ಕಂಬುಕಂ । ಧರೆ ಚೆಲ್ವ । ಕಳಕೀರ । ಮೃದುವಾಣಿ ।
ಪೊಂಬಾಳೆ । ದೊಡೆ ತಳಿ । ರ್ಪದಯು,। ಗೆ—॥
ತುಂಬಿದ । ಗುರುನಿತಂ । ಬಿನಿಯುಟ್ಟ । ಳೆಸೆವ ದಿ ।
ವ್ಯಾಂಬರ । ಗಳ ಮದ । ಗಜಗಮ । ನೆ— ॥ ೮೮ ॥

ಮೇಲುಮು । ತ್ತಿನಹಾರ । [2]ಮೆರುಗು[2] ಮೂ । ಗುತಿಯ ನೀ ।
ಲಾಳಕಿ । ಧರಿಸಿದ । ಳಳವಡಿ । ಸಿ—॥

---

1 ಹಿಂಬಳೆ (ಕಾ, ಓ) 2 ಮೆರೆವ (ಕಾ, ಅ)

ಕಾಲಲಂ | ದುಗೆ ಗೆಜ್ಜೆ | ಕಂಕಣ | ಕಡಗ ಹೊ |
ನ್ನೋಲೆ ಇ | ಟ್ಟಳು ವರ | ಕರಿಗಮ | ನೆ— || ೮೯ ||

ರನ್ನದ | ಕೊಪ್ಪು ರ | ತ್ನದ ತಾಲಿ | ಬಾವಲಿ |
ಚಿನ್ನದ | ಕಾಂಚಿ ಶ | ರಾವಂ,| ತಿ—||
ಕನ್ನಡಿ | ಕೊಳಗ ಮು | ದ್ರಿಕೆ ನೇ,| ವಳ ಮುಖ್ಯ |
ಸನ್ನಾಹ | ದಿಂದ ಸಿಂ | ಗರವಾದ | ಳು— || ೯೦ ||

ಮರಳಿ ಮಂ | ಜಟಿ ಗುಂಜಿ | ಹಾರ ಕೊ | ರಳಿಗಿಕ್ಕಿ |
ಕರದೊಳಾಂ | ತೊಡನೆ ವೀ | ಳೆಯಪ,| ಟ್ಟ—||
ಪರಿಮಳ | ವನೆ ಪೂಸಿ | ಸಣ್ಣನಾ | ಮವನಿಕ್ಕಿ |
ಮರಿಮೃಗ | ನಯನೆ ತಾ | ನೊಪ್ಪಿದ | ಳು— || ೯೧ ||

೨೮ ದ್ವಿಪದಿ

ಇನಿತು ಶೃಂಗಾರದಿಂ ಏಣಾಕ್ಷಿಯಂದು |
ಕನಕನಿರ್ಮಿತ ಬಣ್ಣಗೋಲಧರಿಸಿದಳು || ೯೨ ||

ವರಕಸುಂಡಲವನ್ನು ತೆರೆದು ವಿಸ್ತರಿಸಿ |
ಮೆರೆವ ಬಾಲನ ಮಾಡಿ ಮಗ್ಗುಲೊಳಗಿರಿಸಿ || ೯೩ ||

ಕನ್ನಡಿಯ ನಸುನೋಡಿ ಕನಕವಸ್ತ್ರವನು |
ಮುನ್ನಿಸುತ ಮುಸುಕಿಕ್ಕಿ ಮುದದಿ ಗಮಿಸಿದಳು || ೯೪ ||

ಭೂಲೋಕಕಿಳಿದಳಾ ಭಾಮಿನೀರನ್ನೆ |
ಶ್ರೀ ಲಲಾಮನ ನೆನೆದು ಶರಣು ಶರಣೆನ್ನೆ || ೯೫ ||

೨೯ ರಾಗ ಕುರಂಜಿ—ಅಷ್ಟತಾಳ ೧

ಬಂದಳು | ಕೊರವಂಜಿ | ನೀರೆ—|—ಮುದ |
ದಿಂದ ತ್ರೈ | ಭುವನವಿ | [1]ಸ್ತಾ[1]ರೆ—|—ನವ |
ಸೌಂದರ್ಯ | ವಯದ ಶ | ರೀರೆ—|—ಮನ |

---

1 ಚಾ (ಕಾ)

ಕುಂದದ । ಶರಧಿಗಂ । ಭೀರೆ— । —ಪೂರ್ಣ ॥
ಚಂದಿರ । ವದನೆ ಆ । ನಂದಿಪೂ । ರದನೆ ಬಾ ।
ಲೇಂದುಶೇ । ಖರ ಶರ । ಣೆಂದು ಸಂ । ಸ್ತುತಿಸುತ್ತ ॥ ೯೬ ॥

ಕಡುಮುದ್ದು । ಸೊಬಗಿನ । ರನ್ನೆ— । —ಎಡೆ ।
ಮಡುಗದ । ಭಾಗ್ಯಸಂ । ಪನ್ನೆ— । —ಕಡು ।
ಸೆಡವಿನ । ನಿಜಗುಣ । ರನ್ನೆ— । —ಖ್ಯಾತಿ ।
ವಡೆದ ಶ್ರೀ । ಮಂಜುಳ । ವರ್ಣೆ— । —ಕೂಡೆ ॥
ಬಡನಡು । ಬಳುಕುತ್ತ । ನಡೆ ಮೆಲ್ಲ । ನಡಿಯಿಡು ।
ತ್ತೊಡನೆ ಪೊಂ । ಗೊಡವೊಲೆ । ಯಡಗಿಸಿ । ಕೊಳ್ಳುತ್ತ ॥ ೯೭ ॥

ಮಾತಿನ । ಮಧುರ ಸು । ನೀತೆ— । —ಶ್ರುತಿ ।
ನೂತನ । ಸಾರಸಂ । ಗೀತೆ— । —ಘೋರ ।
ಪಾತಕ । ದುರಿತವಿ । ಘಾತೆ— । —ಖಳ ।
ವ್ರಾತತಿ । ಮಿರಸುಪ್ರ । ಭಾತೆ— । —ಹರಿ ॥
ಜಾತೆ ನಿ । ರ್ಭೀತೆ ಸು । ದಾತೆ ಸ । ಕಲಜನ ।
ಮಾತೆ ಸ । ಜ್ಜನಮನಃ । ಪ್ರೀತೆ ಸು । ಖ್ಯಾತೆ— ॥ ೯೮ ॥

೩೦ ಕಂದಪದ್ಯ

[1]ಸರಸಿಜಲೋಚನೆ ಇಂತೀ
ಪರಿಯಿಂದಂ ಸತಿಯರಿಂಗೆ ಕಣಿಯಂ ಪೇಳಲ್ ।
ತಿರುಗುತ್ತ ರಾಜ್ಯ ರಾಜ್ಯವ
ವರಮಧುರಾಪುರಕೆ ಬಂದು ಸತಿಯರ ಕಂಡಳ್[1] ॥ ೯೯ ॥

(ದೇವಕಿಯ ಪ್ರವೇಶ)

೩೧ ರಾಗ ಕಾಂಭೋಜಿ—ಅಷ್ಟತಾಳ ೨

ಕೊರವಂಜಿ—
ಮಧುರಾಪ । ಟ್ಟಣಕಾಗಿ । ಬಂದಳು । —ಅಲ್ಲಿ ।
ಚದುರೇರ । ಮನೆಯ ಬಾ । ಗಿಲ ಮುಂದೆ । ನಿಂದಳು ॥
ಮುದದಿ ಕ । ಣಿಯ ಕೇಳಿ । ರೆಂದಳು । —ಹಿಂದಾ ।
ಮದ ಮುಂದಾ । ಹುದನೆಲ್ಲ । ನಾ ಪೇಳ್ವೆ । ನೆಂದಳು ॥ ೧೦೦ ॥

---

1 ವಿಧುಲೋಚನೆ ಈಪರಿಯಿಂ । ಮುದದಿಂ ಕಣಿಪೇಳ್ದು ತಿರುಗುತಾರಾಜ್ಯದೊಳಂ ।
ಮಧುಹರನಂ ನೆನೆಯುತ್ತಾ । ಮಧುರಾಪುರಕಾಗಿ ಬಂದಳಾ ಗಜಗಮನೆ॥ (ಕಾ)

ದೇವಕಿ—

ಈ ವಿಧ । ಗಳ ಸುದ್ದಿ ಕೇಳುತ್ತ । — ನಾರಿ ।
ದೇವಕಿ । ಮನದಲ್ಲಿ । ಹರ್ಷವ । ತಾಳುತ್ತ ॥
ಕಾವಲಂ । ಗನೆಯರ್ಗೆ । ಪೇಳುತ್ತ । — ಕರೆಸಿ ।
ಕೋವಿದೆ । ಕೊರವಿಯ । ಕಂಡು ಮು । ತ್ತೀಳುತ್ತ ॥ ೧೦೧ ॥

ಕೊರವಂಜಿ—

ವಚನ ॥ "[1]ಅಮ್ಮೇ । ಕೇಳಡಿಯಮ್ಮೇ, ನೀಂಗಳ್ಕು ಸುಗಂ ಉಂಡಾವು, ನಿನ್ನುಡೆಯ ಬಂಧನಂಜಳೆಲ್ಲಾಂ ತೀರ್ಕುಂ, ಯೋಚನೈ ವೇಂಡ,ನೀಂನಿನಚ್ಚ ಕಾರ್ಯಮೆಲ್ಲಾಂ ಕೈಗೂಡುಂ, ಶ್ರೀಮನ್ನಾರಾಯಣನುಡೆ ಅಡಿಕ್ಕೂರಿತ್ತು ತಪಂಗಳಂ ಶೈದು ಮನಂ ತೆಳಿವಳಿಚ್ಚಾವರಂಗಳಂ ವೇಂಡಿಕ್ಕುಂ[1]" ತರುಣಿಯರೊಡನೆ ಇಂತೆಂಬ ಕೊರವಿಯಂ ಮನ್ನಿಸುತ್ತಂ ದೇವಕಿ ಏನೆಂದಳು ಎಂದರೆ—

೩೨ ರಾಗ ಗೌಳಮಲಹರಿ—ಏಕತಾಳ ೫ (ತಿತ್ತಿತೈ)

ದೇವಕಿ—

ಯಾವ । ದೇಶ । ದಿಂದ । ಬಂದೆ । ದೇವಿ । ಕೊರವಂ । ಜಿ — ।
ಕೋವಿ । ದ ಭಾ । ಷೆಗಳ । ಬಲ್ಲ । ಭಾವೆ । ಕೊರವಂ । ಜಿ— ॥ ೧೦೨ ॥

ಕ್ಷೋಣಿ । ಯ ಹೆಂ । ಗಳೊಳ । ಗೆ ಸು । ಶ್ರೇಣಿ । ಯೊಳು । ನಿನ । ಗೆಣೆ ।
ಗಾಣೆ । ಶಿವ । ನಾಣೆ । ಸಲೆ । ಜಾಣೆ । ಕೊರವಂ । ಜಿ— ॥ ೧೦೩ ॥

ಪೊಂಗ । ಳಸ । ಕುಚ[2]ಗ । ಳನ್ನೆ । ನೋಡಿ । ದರೆ । ಸೊಗಸು । ರನ್ನೆ ।
ಸಿಂಗಾ । ರವಾ । ಗಿರುವೆ[2] । ಸುಪ್ರ । ಸನ್ನೆ । ಕೊರವಂ । ಜಿ— ॥ ೧೦೪ ॥

ನೋಡಿ । ನಿನ್ನ । ಕೂಡೆ । ಮಾತ । ನಾಡು । ವರೆ । ಮನಸಾ । ಗಿದೆ ।
ಪಾಡು । ಬಿಟ್ಟು । ನೋಡು । ದಯೆ । ಮಾಡು । ಕೊರವಂ । ಜಿ— ॥ ೧೦೫ ॥

ಗುಲ್ಲು । ಮಾಡ । ದಿಲ್ಲಿ । ನಿಮಿಷ । ನಿಲ್ಲು । ನಿನ್ನ । ಗುಣವ । ಕಂಡೆ ।
ನೆಲ್ಲ । ತಿಳಿದು । ಬಲ್ಲೆ । ದಯವ । ಚೆಲ್ಲೆ । ಕೊರವಂ । ಜಿ— ॥ ೧೦೬ ॥

1 ಅಮ್ಮೇ, ಕೇಳಡಿಯಮ್ಮ ಅಮ್ಮೋಯಮ್ಮ, ಸಂದೋಷಮಾಯೊಲ್ ಪೋರ್ಂದು, ಕಣಿಯಾನ್ ಚೊಲ್ವೇನ್ ನಾನ್, ಯೋಚನೈ ವೇಂಡಾಮ್ ನೀನ್ ನಿನಚ್ಚುಕಾರ್ಯಮೆಲ್ಲಾಂ ಕೈಗೂಡುಂ ತಿರುನಾರಾಯಣನ್ ಕೃಪಯಾನೇ—

2 ದಬಲೆ ಯಾರೆ ಕೊರವಂಜಿ । ಶೃಂಗಾರದ ಸದನೆ (ಕಾ)

೩೩ ರಾಗ ಕೇದಾರಗೌಳ—ಅಷ್ಟತಾಳ ೧

ಕೊರವಂಜಿ—

ನೀ ಕೇಳು । ತರುಣಿನಾ । ಯಕರನ್ನೆ । ನಾ ಸತ್ಯ ।
ಲೋಕದೊ । ಳಿರುವೆನ । ಮ್ಮ— ॥
ನಾಕುರಾ । ಜ್ಯವನೆಲ್ಲ । ತಿರುಗುತಿ । ಲ್ಲಿಗೆ ಬಂದೆ ।
ನಾ ಕೊರ । ವಂಜಿ ಕಾ । ಣೆ— ॥ ೧೦೭ ॥

ಲೋಕದ । ಸಕಲ ಪ್ರ । ಪಂಚವ । ನರಿತು ವಿ ।
ವೇಕದಿ । ಸತಿಯರ್ಗೆ । ಲ್ಲ—॥
ವಾಕುತ । ಪ್ಪದೆ ಪೇಳ್ವ । ಡೆನಗುಂಟು । ಕೊಲ್ಲೂರ ।
ಮೂಕಾಂಬೆ । ಮ್ಮನ ಕರು । ಣ— ॥ ೧೦೮ ॥

ದೇವಕಿ—

ಎಂಬ ಮಾ । ತನು ಕೇಳಿ । ಏಣಾಕ್ಷಿ । ತರಿಸಿದ ।
ಳಂಬುಜ । ಕುಸುಮಗ । ಳ— ॥
ಪೊಂಬಣ್ಣ । ರಂಗುವಾ । ಲೆಯನಿಕ್ಕಿ । ಅಕ್ಷತೆ ।
ತಾಂಬೂಲ । ಗಳನಿರಿ । ಸಿ— ॥ ೧೦೯ ॥

ನಿಂಬೆಯ । ಹಣ್ಣ ಕಾ । ಣಿಕೆ ಇತ್ತು । ಹರಿವಾಣ ।
ತುಂಬ ಮು । ತ್ತಿನ ಸೇಸೆ । ಯ—॥
ಮುಂಬರಿ । ದಿಡುವ ದೇ । ವಿಯ ನೋಡಿ । ಕೊರವಿ ಹೇ ।
ರಂಬನ । ಭಜಿಸಿದ । ಳು— ॥ ೧೧೦ ॥

೩೪ ಕಂದಪದ್ಯ

ಕೊರವಂಜಿ—

[1]ಗಣಪತಿಯನರ್ಚಿಸುತ್ತಾ
ತ್ರಿಣಯಂಗೆರಗುತ್ತ ನಮಿಸಿ ನಿರ್ಜರರಿಂಗಾ ।
ಕಣಿಗೂಡೆಗೆ ಕೈ ಮುಗಿಯಲು
ವನಜಾಂಬಕಿ ತನಗೆ ದುಃಖವೇನೆನಲೆಂದಳ್[1] ॥ ೧೧೧ ॥

---

1 ಗಣಪತಿಯಂ ಪೂಜಿಸುತಂ । ತ್ರಿಣಯಂಗೆರಗುತ್ತ ಮನದಿನತಿಭಕ್ತಿಯೊಳಂ ।
ಮಣಿದಾ ಕಣಿಗೂಡೆಗೆ ಮನ । ದಣಿಕೆಯದೇನೆನಲು ಪೇಳ್ದ
ಳಾಗ ದೇವಕಿ ಮುದದಿಂ ॥ (ಅ)

೩೫ ಸಾಂಗತ್ಯ (ಚರಿತೆ) ; ರಾಗ ತೋಡಿ—ರೂಪಕತಾಳ ೩

ದೇವಕಿ—

ನೀಕೇಳು । ಕೊರವಿ ಎ । ನ್ನಂಗದ । ವ್ಯಥೆಯನ್ನು ।
ಲೋಕೇಶ । ಶಿವನೊಬ್ಬ । ಬಲ್ಲ ॥
1ಕಾಕಗ । ಳಟ್ಟುತ । ಲಿರಲೋಡಿ । ಬ[1]ಹ ಮರಿ ।
ಕೋಕಿಲೆ । ಯಂತಾಯಿ । ತೆನಗೆ ॥ ೧೧೨ ॥

ಶ್ವಾನನ । ಬಾಲದ । ತ್ರಾಣ ತ । ಗ್ಗಿಸಲೆಂದು ।
ಕೋಣನ । ಬಲಿಯ ಕೊ । ಟ್ಟಂತೆ ॥
ಬಾನಮಾ । ತನು ಕೇಳಿ । ಬರಿದೆ ಎ । ನ್ನಣುಗರ ।
ಪ್ರಾಣವ । ಕಳೆದನ । ಗ್ರಜನು ॥ ೧೧೩ ॥

ಮೋರೆಯ । ಗಂಟಿಕ್ಕಿ । ಬಂದು ನ । ಮ್ಮಿರ್ವರ ।
ಸೇರಿಸಿ । ದನು ಸೆರೆ । ಮನೆಯ ॥
ಘೋರದಾ । ನವರ ಕಾ । ವಲನಿಕ್ಕಿ । ನಿತ್ಯ ಕ ।
ಣ್ಣೀರಕೊ । ಳುಣಿಸುವ । ನಮಗೆ ॥ ೧೧೪ ॥

ಶೂರಸೇ । ನರಸಿನ । ಮಗಳೆತ್ತ । ಕಾಲಸಂ ।
ಕೋಲೆ ಸೇ । ರಿಸಿಕೊಂಬು । ದೆತ್ತ ॥
ಧಾರೆಯ । ನೀರಿಗೆ । ಕೈಯೊಡ್ಡಿ । ದಂದಿಂದ ।
ನೀರ ತಾ । ನುಂಡ ಭಾ । ಗ್ಯಗಳ ॥ ೧೧೫ ॥

೩೬ ಕಂದಪದ್ಯ

ಮಕ್ಕಳ ಕೊಂದೀ ಸೆರೆಯೊಳ
ಗಿಕ್ಕಿದರ್ಗಾ ಕ್ಲೇಶದಿಂದ ದುಃಖವನಿಂತು ।
ಬಿಕ್ಕುತ ಪೇಳಲ್ಕಾನಿನಿ
ತಕ್ಕೈಸುತ ಪೇಳ್ದಳಾಗ ಮಾಯದ ಕೊರವಿ ॥ ೧೧೬ ॥

೩೭ ರಾಗ ಸೌರಾಷ್ಟ—ಅಷ್ಟತಾಳ ೧

ಕೊರವಂಜಿ—

ಕೈಯ ತೋ । ರಿಸೆ ನಾರಿ । ಯರ ಪೌಕ್ತಿ । ಕವೆ ನಿನ್ನ ।
,ಕೈಯ । ತೋ— । ರೆ — । — ಬಲು ॥

1 ಲೋಕದಿ ಕಾಗೆಗಳಟ್ಟುತ್ತಲಿ (ಕಾ, ಅ)

ಒಯ್ಯಾರ । ದಿಂದಲಿ । ರಾಜಿಸು । ತ್ತೊಲೆಯುವ ।
,ಕೈಯ । ಶೋ — । ರೆ— । — ॥ ಪಲ್ಲವಿ ॥

ಅಕ್ಕರಿಂ । ದಲೆ ಬಾಂ, । ಧವರನು । ದ್ಧರಿಸುವ ।
,ಕೈಯ । ತೋ— । ರೆ— । —ಸಣ್ಣ ॥
ಮಕ್ಕಳ । ಬಿಡದೆ ಮು । ದ್ದಿಸಿ ಆಡಿ । ಸಲಹುವ ।
,ಕೈಯ । ತೋ— । ರೆ—॥
ಧಿಕ್ಕರಿ । ಸದೆ ಜನಂ । ಗಳಿಗೆ ದಾ । ನವನೀವ ।
,ಕೈಯ । ತೋ— । ರೆ— । —ದೇವ ॥
ಮುಕ್ಕಣ್ಣ । ಮುರಹರ । ನನ್ನು ಪೂ । ಜಿಸುವಂಥ ।
,ಕೈಯ । ತೋ— । ರೆ— ॥ ೧೧೭ ॥

ಪೊಂಗೇದ । ಗೆಸಳುಗು । ರ್ಗಳಲಿ ಶೋ । ಭಿಸುವಂಥ ।
,ಕೈಯ । ತೋ— । ರೆ— ।—ಮಾ ॥
ತಂಗದ । ಮರಿಯ ಸೊಂ । ಡಿಲ ಪೋಲ್ವ । ಬಾಮದ ।
,ಕೈಯ । ತೋ— । ರೆ— ॥
ಉಂಗುರ । ದಂಗುಲಿ । ಯಿಂದ ಶೋ । ಭಿಸುವಂಥ ।
,ಕೈಯ । ತೋ— । ರೆ— । —ಮೂರು ॥
ಕಂಗಳು ।,ಳ್ಳ ಶಿವನ । ಪೂಜೆಯ । ಮಾಳ್ಪಂಥ ।
,ಕೈಯ । ತೋ— । ರೆ— ॥ ೧೧೮ ॥

೩೮ ರಾಗ ಮಧ್ಯಮಾವತಿ—ಏಕತಾಳ ೩

,ವಸುದೇವ । ನರಸಿ ಕೇಳ್ । ಪರಶಿವೆ । ನಾನು—।
,ಉಸುರ್ವೆ ಕೈ । ಗುಣವ ಕುಂ । ದಿಸದಿರು । ನೀನು—।
,ಎಸಳುರೇ । ಖೆಗಳು ಸಂ ।,ತಸದ ಕಾ । ರ್ಯಗಳು ಹೆಂ ।
,ಗುಸರಿಲ್ಲ । ನಿನ್ನಂಥ ।, ಪುಣ್ಯಮಾ । ನಿಗಳು— ॥ ೧೧೯ ॥

,ಪೂರ್ವಜ । ನ್ಮದಿ ನೀನು ।,ಮಾಡಿದೆ । ತಪವ—।
,ಸರ್ವಲೋ । ಕೇಶನೊಳ್ ।,ಬೇಡಿದೆ । ವರವ—।
,ಸರ್ವಥಾ । ಮಗನಾಗ ।,ಲೆಂದ ಕಾ । ರಣವ—।
,ಗರ್ವೆ ನಿ । ಸ್ಸುದರದೊ ।,ಳೀಗ [1]ಜೀ । ವಿ[1]ಸುವ— ॥ ೧೨೦ ॥

---

1 ಜನಿ (ಅ)

,ಮೊದಲೆರ | ಡಂತ್ರ ಪು |,ಟ್ಟಿದನು ಗೋ | ವಿಂದ—|
,ಇದು ಮೂರ | ನೆಯ ಪ್ರಾರಂ |,ಭದೊಳಾದ | ಕಂದ—|
,ಬೆದರಬೇ | ಡಿನ್ನು ಕಾ |, ರ್ಯಗಳೆಲ್ಲ | ಚಂದ—|
,ಅದರಿಂದ | ಮೇಲೆ ನಂ |,ಬೀ ಮಾತ | ನೊಂದ— || ೧೨೧ ||

,ಶಿಶುಪಾಲ | ದಂತವ |,ಕ್ತ್ರರ ಕೊಲ್ವ | ಬಗೆಗೆ—|
,ವಸುಧೆಯೊ | ಳವತರಿ |,ಸುವನಮ್ಮ | ನಿಮಗೆ—|
,ಅಸುರಕಂ | ಸನ ಪಡೆ |,ಸಹ ಯಮ | ನೆಡೆ ಹೊಂ |
,ದಿಸಿ ಪಟ್ಟ | ಕಟ್ಟುವ |,ನುಗ್ರಸೇ | ನನಿಗೆ— || ೧೨೨ ||

,ಪಾಂಡವ | ರೊಡನೆ ಬಂ |,ಧುತ್ವವ | ಬಳಸಿ—|
,ಹಿಂಡುಕೌ | ರವಪಡೆ |,ಎಲ್ಲ ಸಂ | ಹರಿಸಿ—|
,ಕಂಡು ಹದಿ | ನಾರು ಸಾ |,ವಿರದ ನೂ | ರೆಂಟು—|
,ಹೆಂಡಿರ | ನೊಲಿಸಿ ಆ |,ಳುವ ಯೋಗ | ಉಂಟು— || ೧೨೩ ||

೩೯ ಕಂದಪದ್ಯ

ಕಂದನು ನಿನಗುದಿಸಿಯೆ ಸೆರೆ
ಬಂಧನಮಂ ತೆಗೆಸಿ ಕಾವಲಿದ್ದರ ಮರೆಸಿ |
ಮುಂದತಿ ಸುಖದೊಳಗಿರುವಿರಿ
ಎಂದಾ ಕಣಿ ಪೇಳ್ದನುಡಿಗೆ ಮತ್ತಿಂತೆಂದಳ್ || ೧೨೪ ||

೪೦ ರಾಗ ಶಂಕರಾಭರಣ—ಅಷ್ಟತಾಳ ೨

ದೇವಕಿ—

ಮನಸೊಡಂ | ಬಡದು ಕಾ | ಣೆ—ಮಾ | ತಿನ ಹೋಲ್ವೆ |
ಎನಗಾಹ | ದಿಲ್ಲ ಜಾ | ಣೆ— ||
ಘನಪುಣ್ಯ | ಸಾಧನ | ವೆನಿಸುವ | ಶ್ರೀಕೃಷ್ಣ |
ಜನಿಸಿ ಖಂ | ಡಿಸುವ ಬಂ | ಧನವೆಂಬ | ಮಾತಿಗೆ || ೧೨೫ ||

ಹುಟ್ಟಿದ | ರೆಂತಾದ | ರು—ರ | ಕ್ಷಿಸುವಂಥ |
ಬಟ್ಟೆ ಏ | ನಮ್ಮ ಹೇ | ಳು— ||
ಕಟ್ಟಿಕಾ | ವಲು ಕಂಸ | ನಾಜ್ಞೆ ಎಂ | ಟನೆಯಲ್ಲಿ |
ಕೃಷ್ಣ ಅವ | ತರಿಸಿ ಕೊ | ಲ್ಲುವನೆಂಬ | ಮಾತಿಗೆ || ೧೨೬ ||

ಭಟ್ಟ ಜೋ । ಯಿಸಗಾರ । ರು—ಶ । ಕುನವ ಕೈ ।
ಮುಟ್ಟಿ ಪೇ । ಳ್ವಂಥವ । ರು—॥
ಹೊಟ್ಟೆಗೋ । ಸುಗವಾಗಿ । ನುಡಿದು ನಿ । ಮಿತ್ಯವ ।
ಪಟ್ಟಿಹೇ । ಳುವದೆಲ್ಲ । ನಿಜವಲ್ಲೀ । ಮಾತಿಗೆ ॥ ೧೨೭ ॥

ಉಂಬಾಗ । ಉಡುವಾಗ । ಲು—ವೀ । ಳ್ಯವ ಕೊಟ್ಟು ।
ಕೊಂಬಾಗ । ನಡೆವಾಗ । ಲು—॥
ಮುಂಬರಿ । ದುಡುಗಿ ನಿ । ದ್ರೆಯೊಳಿರ । ಲಾತನ ।
ಹಂಬಲ । ಲ್ಲದೆ ಜೇರೊಂ । ದಿಲ್ಲ ಕಂ । ಸಾಖ್ಯಗೆ ॥ ೧೨೮ ॥

೪೧ ರಾಗ ಶಂಕರಾಭರಣ—ತ್ರಿವುಡೆತಾಳ ೨

**ಕೊರವಂಜಿ—**

ಹೊನ್ನಿನಾಸೆಗೆ । ಬಂದಳಲ್ಲ, । ಹಸ್ತಿಗಮನೇ । —ನಿನ್ನಯ ।
ಪುಣ್ಯವನು ನಿನ । ಗೊರೆಯಲೋಸುಗ । ಬಂದೆನಮ್ಮ ॥ ೧೨೯ ॥

ಭಾಸುರದ ಭೂ । ಷಣದ ಲಾಭಕೆ । ಬಂದಳಲ್ಲ ।—ಮನಸಿನ ।
ಬೇಸರವ ಪರಿ । ಹರಿಸಲೋಸುಗ । ಬಂದೆನಮ್ಮ ॥ ೧೩೦ ॥

ಗ್ರಾಮಭೂಮಿಯ । ಪಡೆಯಲೋಸುಗ । ಬಂದಳಲ್ಲ ।—[1]ನೆನಸಿದ[1] ।
ಕಾಮಿತವ ನಿನ । ಗೊರೆಯಲೋಸುಗ । ಬಂದೆನಮ್ಮ ॥ ೧೩೧ ॥

ನಾಡಮಾತುಗ । ಳಾಡಿಪೋಗಲು । ಬಂದಳಲ್ಲ ।—ಶಿವ ದಯೆ ।
ಮಾಡಿದಿರವನು । ಪೇಳಲೋಸುಗ । ಬಂದೆನಮ್ಮ ॥ ೧೩೨ ॥

ಕಟ್ಟುಬಣ್ಣದ । ಜಾಲಮಾತಿನ । ಕೊರವಿಯಲ್ಲ ।—ಲೋಕದ ।
ಸೃಷ್ಟಿಯಧಿಪತಿ । ತನಕೆ ಯೋಗ್ಯದ । ಕೊರವಿಯಮ್ಮ ॥ ೧೩೩ ॥

೪೨ ದ್ವಿಪದಿ

ತನುನಿತ್ಯವೆಂಬೆನೇ ತನುನಿತ್ಯವಲ್ಲ ।
ಕನಸಿಲೊಡ್ಡಿದ ನೆಂಟತನದ ಸುಖವೆಲ್ಲ ॥ ೧೩೪ ॥

---

1 ಒಲಿಸುವ (೨)

ನಿತ್ಯವಲ್ಲದ ತನುವ ನೆರೆನಂಬಿ ಬರಿದೆ ।
ಸತ್ಯವನು ಕೆಡಿಸುವರು ಸಾಮಾನ್ಯಜನರು ॥ ೧೩೫ ॥

ನರರ ಪಾಡೇನವ್ವ ನಿರ್ಜರಾದಿಗಳು ।
[1]ಹರಿಯಲಾರದ[1] ಮೃತ್ಯುಪಾಶದೊಳಗಿಹರು ॥ ೧೩೬ ॥

ಮೃತ್ಯುಪಾಶವ ಹರಿವ ಮನವುಳ್ಳ ಜನರು ।
ಸತ್ಯದಲಿ ಸರಸಿಜಾಂಬಕನ ಭಜಿಸುವರು ॥ ೧೩೭ ॥

೪೩ ರಾಗ ಘಂಟಾರವ—ಜಂಪೆತಾಳ ೧

ನಿನ್ನ ಪಾ । ಡೇನಮ್ಮ । ಮುನ್ನ ನಾ । ರಿಯರೊಳಗೆ ।
ಬನ್ನಬ । ಟ್ಟವರುಂಟು । ಬಹಳ ದುಃ ।ಖದಲಿ— ॥ ೧೩೮ ॥

ಹಿಂದೆ ಜನ । ಕನ ಮಗಳು । ಹೇಗಾದ । ಳದ ಹೇಳು ।
ಮುಂದವಳ । ಸುಖವೇನು । ಮನದಿ ತಿಳಿ । ನೀನು— ॥ ೧೩೯ ॥

ನಳರಾಯ । ಭೂಪಾಲ । ಸರಸಿ ದಮ । ಯಂತಿಸತಿ ।
ಸುಳಿದಾಡು । ತಿರುತಿರ್ದ । ಸುಖವೆಲ್ಲಿ । ಹೇಳು— ॥ ೧೪೦ ॥

ಪೊಡವಿಯೊಳು । ಹರಿಚಂದ್ರ । ಸತಿಯು ಚಂ ।
ದ್ರಾವತಿಯು । ಪಡೆದ ಮಗ । ರೋಹಿತನ । ಬುಡವ ತಿಳಿ । ನೀನು—
॥ ೧೪೧ ॥

ಎಲೆ ದೇವಿ । ಕೇಳವ್ವ । ಎಂದಿಗಾ । ದರು ದೈವ ।
ನೆಲೆಯ ಮಾ । ರುವರುಂಟೆ । ಧರೆಯೊಳಗೆ । ಕಾಂತೆ— ॥ ೧೪೨ ॥

೪೪ ಕಂದಪದ್ಯ

ದೇವಕಿ—

ನೀತಿಯ ಪೇಳ್ದಾ ಕೊರವಿಯ
ಮಾತಿಂಗುರೆ ಮೆಚ್ಚುತಾಗ ತನ್ನಯ ಮನದ ।
ಕಾತರ ದಂದುಗವೆಲ್ಲವ
ಭೀತಿಯೊಳೇ ಪೇಳ್ದಳಾಗ ಕೊರವಂಜಿಯೊಳು ॥ ೧೪೩ ॥

---

1 ಅರಿಯಲಾರದೆ (ಕಾ)

೪೫ ರಾಗ ನೀಲಾಂಬರಿ—ಅಷ್ಟತಾಳ ೧

ಎಷ್ಟು ಹೇಳ । ಲಮ್ಮ ಎನ್ನ । ಇನಿಯನ । ಬವಣೆಯ ।
ಕಷ್ಟಬಡು । ತಿಹ ಬಲು । ಕ್ಲೇಶವ ।— ಭಯ । ಪಾಶವ ॥ ೧೪೪ ॥

ಶ್ರೀಧರನ್ನ । ಹಗೆಗಾಗಿ । ಸಂತತ ಕಂ । ಸ ತಾನೆನ್ನ ।
ಬಾಧಿಸಿ ಕೊ । ಲ್ಲನೆಂಬುದ । ಬಲ್ಲೆನೆ । —ತನುವ । ನೊಲ್ಲೆನೆ ॥ ೧೪೫ ॥

ಹಿಂಸೆಯ ಮಾ । ಡುವದಕ್ಕೆ । ಹೇಸದ ಪಾ । ತಕಿಯಾದ ।
ಕಂಸನ ಕ । ತ್ತಿಗೆ ತನುವ । ಕೊಟ್ಟೆನೆ ।—ಜೀವ । ಬಿಟ್ಟೆನೆ ॥ ೧೪೬ ॥

ಎಂದಿಗೆ ನೀ । ಗುವದೆಮ್ಮ । ಬಂಧನಬಾ । ಧಕವಮ್ಮ ।
ಇಂದಿರೇಶ । ದಯವಿಟ್ಟು । ಕಾವದು ।—ಜೀವ । ಈವದು ॥ ೧೪೭ ॥

ಕಾಯಕಷ್ಟ । ಬಟ್ಟು ನಾನ । ತ್ಯಾಯಾಸಗೊ । ಳ್ಳ ವೇಳ್ಯದಿ ।
ನೀಯೆಂದ ಮಾ । ತಿಗೆ ಭಯ । ಹೋಯಿತು ।—ಧೈರ್ಯ ।
ವಾಯಿತು ॥ ೧೪೮ ॥

೪೬ ರಾಗ ಪುನ್ನಾಗವರಾಳಿ—ಏಕತಾಳ ೩ ತಿಶ್ರಿತ್ರೈ

ಕೊರವಂಜಿ—

ಸೊಲ್ಲ ಕೇಳೆ । ಸೊಲ್ಲ ಕೇಳೆ । ಸೊಗಸುಗಾರ । ವ್ವ— ।
ಬಲ್ಲಿದ ಸು । ಜಾಣೆ ಮರಿ । ಹುಲ್ಲೆಗಣ್ಣೆ । ನವ್ವ—। ॥ ೧೪೯ ॥

ಏಳುಲೋಕ । ದಪ್ಪ ನಿನ್ನ । ಬಾಲನು ಕೇ । ಳವ್ವ— ।
ವೇಳೆಗವ । ತರಿಸಿ ಖಳರ । ಕೊಲುವನು ನೋ । ಡವ್ವ— ॥ ೧೫೦ ॥

ಗೆಲವಿಂದ ನ । ಮ್ಮೆಲ್ಲರ, । ಸಲಹುವ ನೋ । ಡವ್ವ—।
ನಲವಿಂದ ನಿ । ಮ್ಮೆಲ್ಲರ, । ನಲಿಸುವ ನೋ । ಡವ್ವ— ॥ ೧೫೧ ॥

ಸಣ್ಣ ಬಾಲ । ಕೊಸಿಂಗೊಂದಿ । ಷ್ಟನ್ನವ ಕೊ । ಡವ್ವ— ।
ಎನ್ನ ಮಂಡೆ । ಗಿಷ್ಟು ಎ, । ಣ್ಣೆಣ್ಣೆಯ ಹಾ । ಕವ್ವ— ॥ ೧೫೨ ॥

ಚಿಣ್ಣ ಕೃಷ್ಣ । ನಾದನೆಂದು । ಚೆಲುವೆಯಾಗಿ । ರವ್ವ— ।
ಪುಣ್ಯವಂತೆ । ಯಾಗಿ ಸುಜನ । ರನ್ನು ಪಾಲಿ । ಸವ್ವ— ॥ ೧೫೩ ॥

(ಕೊರವಂಜಿಯ ನಿಷ್ಕ್ರಮಣ)

## ಕೃಷ್ಣಜನನ

೪೭ ವಾರ್ಧಿಕಷಟ್ಪದಿ

ವಿಷ್ಣು—

ಪರಮಮಂಗಳಕರವ ಪೇಳ್ದ ಕೊರವಂಜಿಗಾ
ತರುಣಿ ತಾ ಸಕಲವಸ್ತುವನಿತ್ತು ಬೀಳ್ಕೊಟ್ಟೊ
ಡರವಿಂದಭವನೆಯ್ದೆ ನಿಜರೂಪಿನಿಂದ ಹರಿಶರಣೆಂದು ನುತಿಗೆಯ್ಯುತ ।
ಸೆರೆಮನೆಯೊಳಿರಲು ದೇವಕಿಗೇಳನೆಯ ಗರ್ಭ
ಕರಗಿದುರಗಾಧಿಪತಿ ರೋಹಿಣಿಗೆ ಜನಿಸಿದಂ
ಸುರರಿಗಭಯವನಿತ್ತ ಹವಣೆಮಂ ಮನದಿ ಗೋಚರಿಸಿದಂ ಜಗದೀಶನು ॥ ೧೫೪ ॥

೪೮ ರಾಗ ಕುರಂಜಿ—ಅಷ್ಟತಾಳ ೧

ದಯವಿಟ್ಟ ।—ಪರ । ಮಾತ್ಮ ಭ । ಕ್ತರ ಮೇಲೆ । ದಯವಿಟ್ಟ ॥ ಪಲ್ಲವಿ ॥

ದಯವಿಟ್ಟ । ಧರೆಗವ । ತರಿಸಿ ।—ಚಿ ।
ನ್ಮಯರೂಪ । ಖಳರ ಸಂ । ಹರಿಸಿ—।—ಲಕ್ಷ್ಮೀ ।
ಪ್ರಿಯ ಸಾಧು । ಜನರನು । ದ್ಧರಿಸಿ— ॥
ಭಯಗೊಳು । ತಿರುವ ಭೂ । ಮಿಯ ಭಾರ । ವಿಳುಹಿ ತ ।
ನ್ನಯ ಚಾರಿ । ತ್ರಗಳನ । ಕ್ಷಯವ ಮಾ । ಡುವೆನೆಂದು ॥ ೧೫೫ ॥

ಕೊಡನೊಳ । ಗಿಹ ದೀಪ । ದಂತೆ—।—ಮುಸು ।
ಕಿಡಲು ರ । ತ್ನದ ಛಾಯೆ । ಯಂತೆ—।—ಮುಗಿ ।
ಲೆಡೆಯ ಭಾ । ಸ್ಕರಬಿಂಬ । ದಂತೆ—॥
ಕಡುಮುದ್ದು । ವೊಗ ಬಿಳು । ಪಿಡೆ ಮೊಲೆ । ತುದಿ ಕಪ್ಪು ।
ತೊಡರಿತ । ವಳ ಪಾದ । ದಡಿಯರ । ಸಿನವಾಗೆ ॥ ೧೫೬ ॥

ಆಸರು । ಬ್ಬಸ[1]ವೆತ್ತಿ[1] । ತಂತೆ—।—ಮೆಯ್ಯ ।
ಬೇಸರು । ಘನವಾಯಿ । ತಂತೆ—।—ನವ ।
ಮಾಸ ತುಂ । ಬಲು ಪುಣ್ಯ । ವಂತೆ—॥

---

1 ವೇರಿ (ಕಾ)

ಈ ಸೆರೆ । ಮನೆಯೊ[1]ಳೇ । ಗುವೆನೆಂಬ । ಚಿಂತೆಯಿಂ ।
ದಾ ಸರೋ । ಜಾಕ್ಷಿ ದುಃ । ಖದಲಿ[1] ಮು । ಳುಗಲಾಗ ॥ ೧೫೭ ॥

೪೯ ವಾರ್ಧಿಕಷಟ್ಪದಿ

ಮಂಗಲೋತ್ಸವವೆಸೆದು ರಾಜಿಸುತ ಸುರಪುರದೊ
ಳಂಗಡಿಯ ಮೇಲೆ ತೋರಣ ಕಲಶ ಕನ್ನಡಿಗ
ಳಂಗವದಿರತುನಾರತಿಯ ಪಿಡಿಯೆ ಶ್ರಾವಣದ ತಿಂಗಳ ಸಿತಾಷ್ಟಮಿಯಲಿ ।
ಕಂಗೊಳಿಪ ಸೌಮ್ಯವಾಸರ ತಾರೆ ರೋಹಿಣಿಯೊ
ಳಂಗಜನ ಪಿತನು ದೇವಕಿಯ ಜಠರದಲಿ ನವ
ತಿಂಗಳಿದ್ದಾಮೇಲೆ ಭೂಮಿಗವತರಿಸಿದಂ ಶುಭಯೋಗ ಶುಭಕರಣದಿ ॥ ೧೫೮ ॥

೫೦ ದ್ವಿಪದಿ

ಸಿರಿಮುಡಿಯ ಸುಳಿಗುರುಳ ತರುಣತುಲಸಿಗಳ ।
ಮಿರುಪ ಬಾಸಿಗದ ಮಣಿಮುಕುಟದೀಪ್ತಿಗಳ ॥ ೧೫೯ ॥

ಕರ್ಣಕುಂಡಲಗಳ ಕಪೋಲ ಚಿಬುಕಗಳ ।
ಅರ್ಣವಸುಗಂಭೀರದತಿಶಯುದ ಕೊರಳ ॥ ೧೬೦ ॥

ವೈಜಯಂತಿಯ ಮಾಲೆ ಕೌಸ್ತುಭದ ಮೇಲೆ ।
ತೇಜದಿಂದುರಿವ ನವರತುನಗಳ ಸಾಲೇ ॥ ೧೬೧ ॥

[2]ಜಲದನಿಭಕಾಂತಿಗಳ[2] ಭುಜಚತುಷ್ಟಯದ ।
[3]ಬಲ[3]ಶಂಖ ಚಕ್ರ ಗದ ಪದ್ಮಧಾರಣದ ॥ ೧೬೨ ॥

ಮುಂದಿರುವ ಬಾಲಕನ ಕಂಡು ವಸುದೇವ ।
ವಂದಿಸಿದ ದೇವಕಿಯು ಸಹಿತಲರೆಜಾವ ॥ ೧೬೩ ॥

(ತೆರೆ ಎತ್ತಿ ಕೃಷ್ಣಮೂರ್ತಿಯ ದರ್ಶನ—ವಸುದೇವದೇವಕಿಯರ ಸಮೇತ)

---

1 ಳಿಂತೆಸಗುವೆನೆಂದು ಚಿಂ । ತಾಸನುದ್ರದಿ ಪಂಕಜಾಕ್ಷಿ (ಓ)
2 ಸಜಲಜಲದಸಕಾಂತ (ಓ, ಕಾ) 3 ನಿಜ (ಕಾ)

೫೧ ರಾಗ ಶಂಕರಾಭರಣ—ಆಷ್ಟತಾಳ ೧

ವಸುದೇವ, ದೇವಕಿ—

ಕೃಷ್ಣ—ಹ । ರೇ ಪಾಹಿ । ಮಾಂ— । ಜಯ ಬಾಲ ।
ಕೃಷ್ಣ—ಹ । ರೇ ಪಾಹಿ । ಮಾಂ— ॥
ಜಿಷ್ಣುಮು । ಖ್ಯಾದಿ ಸು । ರೌಘಸ । ನ್ನುತ ಪರ ।
ಮೇಷ್ಠಿವಂ । ದಿತಪಾ, । ದ—ವಿ । ನೋದ— ॥ ೧೬೪ ॥

ಇಂದಿರಾ । ಸತಿರಮ । ಣ—ಸ । ಕಲಮುನಿ ।
ವಂದಿತಾಂ ।, ಘ್ರಿ ಕರು । ಣ—॥
ಸುಂದರಾಂ ।, ಗಸರ್ವ । ಲೋಕನಾ । ಯಕ ಜಯ ।
ವೆಂದು ಜ । ಗತ್ಪಾವ । ನ—ಸ । ದ್ವಚನ— ॥ ೧೬೫ ॥

೫೨ ರಾಗ ಘರಜು—ಏಕತಾಳ ೩ (ವಿಲಂಬಿತ, ದ್ರುತ)

ಕರುಣಿ—ಸು । ಕಂಜದಳ । ನೇತ್ರ—ಕೋ । ಮಲಗಾತ್ರ ।
ಪರಮ—ಪಾ । ವನ ಸಚ್ಚ । ರಿತ್ರ—ಸ । ಜ್ಜನಮಿತ್ರ ॥ ಪಲ್ಲವಿ ॥

ಎಂತು—ಪೊ । ರೆದೆ ನಿನ್ನ । ನಾನು—ಎ । ನ್ನುದರದೊ ।
ಳೆಂತು—ಪು । ಟ್ಟಿದೆಯಯ್ಯ । ನೀನು—ಈ । ವಿಲಾಸದೊ ।
ಳಂತ—ವಿ । ಲ್ಲದ ಕಾಮ । ಧೇನು—ಕಾ । ಲಕಾಲದೊ ॥
ಳಂತರಂಗದಲಿ । ಚಿಂತಿಪ ಭಕ್ತರ । ಸಂತತಿಗೊಲಿದ ಅ । ನಂತಗುಣಾಢ್ಯ ॥ ೧೬೬ ॥

ಕಂಸ—ದೈ । ತ್ಯನು ಕಡು । ಕೋಪಿ—ಕಂ । ಡರೆ ನಿನ್ನ ।
ಹಿಂಸೆ—ಯ । ಮಾಡದುಳಿಯ । ಪಾಪಿ—ನೋ । ಡಲು ನಮ್ಮ ।
ವಂಶ—ದೊ । ಳಿಲ್ಲ ಸುಪ್ರ । ತಾಪಿ—ಹೊ । ತ್ತಿಲ್ಲ ಕಾಯೊ ॥
ಹಂಸಗಮನಪಿತ । ನೀಂ ಸರ್ವೋತ್ತಮ । ಕಂಸಖಳನ ಭಯ ।
ವಂ ಸದೆಯಯ್ಯ ॥ ೧೬೭ ॥

೫೩ ವಾರ್ಧಿಕಷಟ್ಪದಿ

ಬಾಲಕೃಷ್ಣ—

ವಸುದೇವದೇವಕಿಯರಿಂತೆಂದು ಕೈಮುಗಿದು
ಅಸುರಕಂಸನ ಬಾಧೆಗಣೆಯಿಲ್ಲವೆನಲು, ಪು
ಟ್ಟಿಸಿದೆ ಗೋಕುಲದೊಳು ಯಶೋದೆಯಲಿ ಮಗಳಾಗಿ ಮಾಯೆ ಇಹಳೀ ರಾತ್ರಿಯೇ ।

ಕೊಸರುಗೊಳದೆನ್ನ ಕೊಂಡಲ್ಲಿರಿಸಿ ತರುತಲಾ
ಶಿಶುವ ಕಂಸಂಗೆ ಕೊಡಿರೆನಲುಟ್ಟಧೋತ್ರವನು
ಮುಸುಕಿದರೆ ಸತಿಪುರುಷರಿಬ್ಬರಿಗೆ ಕಾಲಸಂಕಲೆ ಕಳಚಿತಾ ಕ್ಷಣದೊಳು ॥ ೧೬೮ ॥

೫೪ ರಾಗ ವೃಂದಾವನಸಾರಂಗ—ಅಷ್ಟತಾಳ ೩

ವಸುದೇವ—

ಲಾಲಿಸು ।—ಮಾತ । ಲಾಲಿಸು ।—
ಮೂಲೋಕ । ದೊಡೆಯನ । ಮಹಿಮೆಯ । ಕಿವಿಗೊಟ್ಟು ॥ ಪಲ್ಲವಿ ॥

ಕಾರೆಂಬ । ಕತ್ತಲೆ । ಕವಿಯಲು । ದಶದಿಕ್ಕು ।
ಘೋರೆಂದು । ಮಳೆ ಹೊಯ್ಯು । ತ್ತಿರುವಾ,। ಗ—ಪುರ ।
ದ್ವಾರಂಗ । ಳ,ಳದಂ । ಡಿಗೆ ಬೇ, । ಗ—ಕಳಚಿ ।
ದಾರಿಯಾ । ಯಿತು ಶೌರಿ । ಬರುವಾ,। ಗ—ಕಾಣು ।
ತ್ತಿರುವಾ, । ಗ—ಕಾವ ।
ಲವರಾ,। ಗ—ನಿದ್ದೆ ।
ಬಾರಿಸ । ಲೆಚ್ಚರಿ । ಲ್ಲದ ಯೋ,। ಗ—ಸೂತ್ರ ।
ಧಾರಿಯ । ಮಹಿಮೆಯಂ । ದವನೀ,। ಗ— ॥ ೧೬೯ ॥

ಒಡೆಯ ಕೋ । ಪಿಸಬಾರ । ದೆನುತ ಪ । ನ್ನಗರಾಜ ।
ನಡುವಿರು । ಳಿನೊಳೆದ್ದು । ಬಂದ,। ನು—ಮಳೆ ।
ಹೊಡೆಯಲಂ । ಜುವದನ್ನು । ಕಂಡ,। ನು—ತನ್ನ ।
ಹೆಡೆಯನಂ । ಬರಕೆತ್ತಿ । ನಿಂದ,। ನು—ಮಾಣಿ ।
ಕ್ಯಗಳ,। ನು—ಪ್ರಕಾ ।
ಶಗಳ,। ನು—ಮಾಡಿ ।
ಕೊಡುತಾಡು । ತಲೆ ನಡೆ । ತಂದ,। ನು—ಭೋ ।
ರ್ಗುಡಿಸುವ । ಯಮುನೆಯ । ಕಂಡ,। ನು— ॥ ೧೭೦ ॥

ಬಂದ ತ । ನ್ನಯ್ಯಗೆ । ತಾ ಕೈಯ । ಮುಗಿಯಬೇ ।
ಕೆಂದಾಗ । ದೃಢಮನ । ಸಿಟ್ಟ,। ಳು—ಸವೊ ।
ಎಂದು ಪಾ । ದಕೆ ಪೊಡ । ಮಟ್ಟ,। ಳು—ಮುದ ।
ದಿಂದ ಪೋ । ಗಲು ದಾರಿ । ಕೊಟ್ಟ,। ಳು—ಪಥ ।

ವಿಡಿದ,। ನು—ದಾಟಿ ।
ನಡೆದ,। ನು—ಭಯ ।

ದಿಂದ. ಗೋ । ಕುಲವನು । ಕಂಡ,। ನು— ಕಾಣು ।
ತ್ತೊಂದು ನಿ । ಮಿಷ ಭ್ರಮೆ । ಗೊಂಡ,। ನು— ॥ ೧೭೧ ॥

ಪೊತ್ತುಕೊಂ । ಡಿರ್ದ ಗೋ । ವಿಂದನ । ವಸುದೇವ ।
ಜತ್ತನ । ದಲೆ ತ । ಗ್ಗಿರಿಸಿ,। ದ—-ಕೈಯೊಳ್ ।
ಮತ್ತೆ ಮಾ । ಯಾಂಗಿಯ । ಧರಿಸಿ,। ದ—- ಕಾ ।
ಣುತ್ತ ಮ । ನದೊಳು ಕಾ । ತರಿಸಿ,। ದ—ತಿರು।

ಗಿದ ಬೇ,। ಗ—ಸೆರೆ ।
ಮನೆಗಾ,। ಗ—ಬಳಿ ।

ನಿತ್ತೊಳ । ಪೊಗಲು ಮು । ಚ್ಚಿತು ಕ,। ದ—ಕಾಲಿ ।
ಗೊತ್ತೆ ಸಂ । ಕಲೆ ಪೇಳ । ಲೇನ,। ದ— ॥ ೧೭೨ ॥

೫೫ ಮತ್ತೇಭವಿಕ್ರೀಡಿತ ವೃತ್ತ

ಮುದದಿಂ ಗೋಕುಲದಿಂದ ತಂದಿಹ ಮಹಾ ಮಾಯಾಂಗಿಯಂ ಕಾಣುತ ।
ಮೊದಲಿದ್ದಂದದೊಳಿರ್ದರಿತ್ತ ಖಳರಾ ಬಾಲಾರುತಂ ಕೇಳುತ ॥

(ಕಂಸನು ರೋಷಾವೇಶದಿಂದ ಪ್ರವೇಶಿಸುತ್ತಾನೆ)

ಚಾರಕರು, ಕಂಸ—

ಮದಕಂಸಾಖ್ಯಗೆ ಪೇಳಲಾರ್ಭಟಿಸುತ್ತೈತಂದಾಗಲಾ ದೇವಕಿ ।
ಇದನೊಂದಾದರು ಬೇಡಿಕೊಂಬೆನೆನುತಂ ತನ್ನಣ್ಣಗಿಂತೆಂದಳು ॥ ೧೭೩ ॥

೫೬ ರಾಗ ಕಾಪಿ—ಅಷ್ಟತಾಳ ೧

ದೇವಕಿ—

ಅಣ್ಣ ಕೊ । ಲ್ಲುವದೇಕೊ । ಮುಗಳ— । —ಇಕೊ ।
ಹೆಣ್ಣು ಹು । ಟ್ಟಿತು ನೋಡು । ಪುಣ್ಯಭಾ । ಗಗಳ ॥ ಪಲ್ಲವಿ ॥

ಗಗನದ । ಸುಡಿ ತಪ್ಪಿ । ತಲ್ಲ— । —ನಿನ್ನ ।
ಪಗೆಯನೆಂ । ಬಾ ಮಾತು । ಪುಸಿಯಾಯಿ । ತಲ್ಲ—॥

ಮಗು ನಿನ್ನ । ಸೊಸೆ ವೈರಿ । ಯಲ್ಲ— । —ಕೈಯ ।
ಮುಗಿದು ಬೇ । ಡುವೆ ಪಾಲಿ । ಸಿದನೊಂದು । ಸೊಲ್ಲ— ॥ ೧೭೫ ॥

ಹಿಂದೆ ಪು । ಟ್ಟಿದ ಮಕ್ಕ । ಳಿಲ್ಲ— । —ಕೊಲ್ಲ ।
ಲಂದು ನಿ । ನ್ನೊಡನೆ ಕೇ । ಳಲು ಬಂದು । ದಿಲ್ಲ— ॥
ಮುಂದುವ । ರಿದೆ ಕಾರ್ಯ । ವೆಲ್ಲ— । —ಪಾಪ ।
ಹೊಂದದಿ । ರ್ದಪುದೇನೊ । ಶಿವನೊಬ್ಬ । ಬಲ್ಲ— ॥ ೧೭೫ ॥

ನಿನ್ನ ಸಂ । ಗಡ ಹುಟ್ಟಿ । ಬಂದು— । —ನಿತ್ಯ ।
ಕಣ್ಣನೀ । ರ್ಗೊಳುಣಿ । ಸಿದೆಯೊ ಇಂ । ತಿಂದು— ॥
ಇನ್ನಾದ । ರಿದ ಮನ । ತಂದು— । —ಪಾಲಿ ।
ಸೆನ್ನ ಪು । ಣ್ಯದೊಳಾದ । ಶಿಸುವನಿ । ದೊಂದು— ॥ ೧೭೬ ॥

## ೫೭ ವಾರ್ಧಿಕಷಟ್ಪದಿ

ಕಂಸ—

ಹಲವುಪರಿಯಲಿ ಬೇಡಿಕೊಳೆ ಕೇಳದಾ ಶಿಶುವ
ಸೆಳೆದು ಕಾಲೆರಡಪಿಡಿದಪ್ಪಳಿಪೆನೆನಲೆದೆಯ
ತುಳಿದು ಚಿಗಿದಂಬರದೊಳಷ್ಟಭುಜೆಯಾಗಿ ತಾ ಖಳನ ಜರೆದಿಂತೆಂದಳು ।
ಎಲೆ ಪಾಪಿ ಕೇಳು ನೀನೆನ್ನ ಕೊಲುವುದಕೆ ಗಂ
ಟಲೊಳಿಳಿವ ತುತ್ತಲ್ಲ, ನಿನ್ನರಿಪು ಧಾತ್ರಿಯಲಿ
ಬೆಳೆಯುತ್ತೈದನೆ, ಕೊಲ್ಲದಿರ, ಸಾಯದುಳಿಯೆ ನೀನೆಂಬ ನುಡಿ ಕೇಳಿಸಿದುದು ॥ ೧೭೭ ॥

## ೫೮ ರಾಗ ಘಂಟಾರವ—ಜಂಪೆತಾಳ ೩

ಚಂಡಿಕೆಯ । ನುಡಿಗೆ ಭಯ । ಗೊಂಡು ಕಂ । ಸಾಸುರಗೆ ।
ಮುಂಡೆಯನು । ಬಡಿದಂತೆ । ಮನಕಾಯ್ತು । ಚಿಂತೆ— ॥ ೧೭೮ ॥

ಋಷಿನಾರ । ದನ ಮಾತು । ಪುಸಿಯಾಯ್ತು । ವ್ಯರ್ಥ ದಂ ।
ಡಿಸಿದೆ ತಂ । ಗಿಯನು ರಿಪು । ವಶವಾದು । ದಿಲ್ಲ— ॥ ೧೭೯ ॥

ನಾನು ಮನ । ದೊಳು ನೆನೆದು । ದೊಂದಾಯ್ತು । ದೈವಗತಿ ।
ತಾನೊಂದ । ನೆಣಿಸಿತಿದ । ಕೇನು ಗತಿ । ಮುಂದೆ— ॥ ೧೮೦ ॥

ಎನ್ನ ಪ್ರಾ । ಣವ ಕಳೆವ । ಚಿಣ್ಣನನು । ಕೊಲುವುದಕೆ ।
ಕನ್ನಡಿಯ । ಗಂಟಾಯ್ತು । ಕೈತಪ್ಪಿ । ಹೋಯ್ತು— ॥ ೧೮೧ ॥

ಇಳೆಯೊಳಗೆ । ಬೆಳೆವ ಮ । ಕ್ಕಳನೆಲ್ಲ । ಕೊಲಿರೆನುತ ।
ಖಳರಿಗ । ಪ್ಪಣೆಯಿತ್ತ । ಕಂಸ ಕೋ । ಪಿಸುತ— ॥ ೧೮೨ ॥

೫೯ ಕಂದ

ಹಿಂದವಗುಣವಾಯ್ತೆಂದಾ
ಬಂಧನವಂ ಬಿಡಿಸಿ ಸೆರೆಯ ಕಾವಲ ತೆಗೆಸಿ ।
ಮುಂದಿರಿ ಸುಖದೊಳಗೆನ್ನುತ
ಒಂದಾಗಿಹ ದಂಪತಿಗಳನುಪಚರಿಸಿದನು ॥ ೧೮೩ ॥

(ದೇವಕೀಕಂಸರ ನಿಷ್ಕ್ರಮಣ)

೬೦ ರಾಗ ಗೌಳಿಪಂತು—ಏಕತಾಳ ೪

ಬಹಳ—ಸಂ । ಭ್ರಮವಾಯಿ । ತು—ಆ ವೇಳ್ಯದಲ್ಲಿ ॥ ಪಲ್ಲವಿ ॥

ನಂದ—

ಬಹಳ ಸಂಭ್ರ । ಮವಾಯಿತು । ಧ್ವನಿಸಿದ ವೇ । ಳೆಯನರಿತು ।
ಕಹಳೆ ಭೇರಿ । ಮದ್ದಳೆ ತಾ । ಳ—ಆ । ವೇಳ್ಯದಲ್ಲಿ ॥ ಅನುಪಲ್ಲವಿ ॥

ಹೆತ್ತಳು ಯ । ಶೋದೆ ಗಂಡು । ಪುತ್ರನೆಂಬು । ದನ್ನು ಕಂಡು ।
ಮತ್ತಾ ನಂದ । ಗೋಪ ಹರ್ಷ । ವೆತ್ತಿ ದೂತ । ರನ್ನು ಕಳುಹಿ ।
ಸುತ್ತ ಜೋ, । ಯಿಸರ ಕರೆಸಿ । ದ—ಜ । ನನವಾದ ।
ಹೊತ್ತ ಸಾಧಿ । ಸುತ್ತ ಬರೆಸಿ । ದ—ಸ । ಕ್ಕರೆಗಳರು ।
ವತ್ತು [1]ಭಾರ[1] । ಗಳನೆ ಹೊರಿಸಿ । ದ—ಮನೆ । ಮನೆ[2]ಗಳಲ್ಲಿ[2] ।
[3]ಎತ್ತಿ[3] ಜಾಕ । ಟೆ[4]ಗಳ[4] ಹೊಡೆಸಿ । ದ—ಪಾ । ತ್ರಗಳ[5]ನೋಡಿ ॥
ಉತ್ತಮ ದಾ । ನಗಳ ಮಾಡಿ । ಮುತ್ತೈದೆಯ । ರೆಲ್ಲ ಕೂಡಿ[5] ।
[6]ಮುತ್ತಾರ ಮಂ । ಗಳವ ಪಾ[6]ಡಿ । ಎತ್ತುಸ್ವರಗ । ಳಿಂದಲಾಡಿ ।
ಸುತ್ತ ಪಾತ್ರ । ಗಳನೆ ಮೆರೆ । ಸುತ್ತ ಸಂತೋ । ಷಗಳ ಮಾಡಿ ।
ಬಹಳ—ಸಂ । ಭ್ರಮವಾಯಿ । ತು— ॥ ೧೮೪ ॥

---

1 ವತ (ಕಾ) 2 ಗೆಬೀ (ಕಾ) 3 ರುತ್ತ (ಕಾ) 4 ಭೇರಿ (ಕಾ) 5 ನಾಡಿ ಸುತ್ತ ಬೀದಿ ಬೀದಿ ಮೆರೆಸಿದ (ಕಾ) 6 ಮೋತ್ತಮನ ಕೊಂಡಾ (ಕಾ)

ಲೇಸು ಕಾರ್ಯ | ದಿಂದ ಗಂಡು | ಕೂಸಾಯಿತೆಂ | ಬುದ ಕಂಡು |
ದೇಶದೇಶ | ದಿಂದ ಬಂದ | ಭೂಸುರರಿ | ಗೆಲ್ಲ ನಂದ |
ರಾಶಿ ದ್ರವ್ಯ | ಗಳನೆ ಹೊರಿಸಿ | ದ—ಬ್ರಾ | ಹ್ಮರಿಗೆ ಉ |
ಲ್ಲಾಸದಿಂದ | ಲೇಸನುಣಿಸಿ | ದ—ಎ | ಳೈಸ ಕಾಳ |
ಷ್ಟಾಸೆಯಿಲ್ಲ | ದೆಲ್ಲರ ತಣಿಸಿ | ದ—ಈ | ವಾರ್ತೆಯ ಕಂ |
ಸಾಸುರ ಬ್ರಾ | ಹ್ಮರ ಮುಖದಿ | ಕೇಳಿ—ಪೂ | ತನೆಯೆಂಬ |
ಆಸುರೆ ಹೆಂ | ಗಳೊಳೆಲ್ಲ ಗ | ಯಾಳಿ—ನೆ | ಯ್ಯ ನೋಡಿದರೆ |
ಹೇಸಿಗೆ ಬಾಯ್ | ಕಳೆದು ಹುಚ್ಚು | ಮೂಳಿ—ನಂ | ದನ ಮಗುವ ||
ಮೋಸದಿ ಕೊ | ಲ್ಲಿಸಲೆಂದು | ಭಾಷೆಯಾಡ | ಲವಳು ನಿಜ |
ವೇಷವನ್ನೆ | ಮರೆಸಿ ಕಪಟ | ದಾ ಶರೀರ | ಶೃಂಗರಿಸಿ || || ೧೮೫ ||

(ಮಾಯಾಪೂತನಿಯ ಪ್ರವೇಶ)

## ಪೂತನಾಮೋಕ್ಷ

೬೧ ರಾಗ ಭೈರವಿ—ತ್ರಿವುಡೆತಾಳ ೩

ಪೂತನಿ—

ಬಂದಳಾಗ |—ಪೂತನಿ | ಬಂದಳಾಗ |—
ಮಂದಮತಿ ಕಂ | ಸಾಖ್ಯನಾಜ್ಞೆಯೊ | ಳಂದು ಶಿಶುಗಳ | ಕೊಂದು ಕೂಗುತ || ಪಲ್ಲವಿ ||

ಅಸುರಭಾವವ | ಮರೆಸಿ ನಡುವಿನೊ | ಳೆಸೆವ ಸೀರೆಯ | ನುಟ್ಟಳು— |
ಬಿಸಜಕೋರಕ | ಕುಚಗಳೆದೆಗೊ | ಪ್ಪಿಸುವ ಕುಪ್ಪಸ | ತೊಟ್ಟಳು— |
ನೊಸಲಿಗರಸಿನ | ದಿವ್ಯಕಸ್ತುರಿ | ಎಸಳುನಾಮವ | ನಿಟ್ಟಳು— |
ಕುಸುಮಶರನರ | ಗಿಣಿಯ ಭಾವದೊ | ಳೊಸಗೆಮಿಗೆ ರಂ | ಜಿಸುತ ಬೇಗದಿ || ೧೮೬ ||

ದೂರದಿಂದೀ | ಕ್ಷಿಸುವ ಜನರನು | ಓರೆಗಣ್ಣಲಿ | ನೋಡುತ |
ದಾರಿಯಲಿ ನಡೆ | ವಾಗ ಸೆರಗನು | ಮಾರಲದ ಸರಿ | ಮಾಡುತ |
ಬಾರಿ ಬಾರಿಗೆ | ಕೊರಳಸರ ಉಡು | ಸೀರೆ ನೆರಿಗಳ | ನೋಡುತ |
ಊರನುಳಿದ್ಕೈ | ತಂದು ನಂದನ | ಕೇರಿಯೊಳು ನಲಿ | ದಾಡುತೊಯ್ಯನೆ || ೧೮೭ ||

೬೩ ರಾಗ ಸೌರಾಷ್ಟ—ತ್ರಿವುಡೆತಾಳ ೪

ವನಿತೆಯರ ಸಂ । ಗಡದಿ ನಂದನ ।
ಮನೆಗೆ ಬಂದಳು । ದುಷ್ಟೆ ರಾಕ್ಷಸಿ ।
ಘನಪರಾಕ್ರಮ । ದಿಂದ ಕೃಷ್ಣನ । ಕೊಲುವೆನೆಂದು ॥ ೧೮೮ ॥

ಗರುಡನನು ಕೊಲ । ಬಂದ ನಾ[1]ಗಿಯೊ ।
ಕರಿಣಿಯೋ ಕೇ । ಸರಿಯ ಸೆಣಸುವ[1] ।
ಉರಗಪುತ್ರ[2]ನ । ಕೆರೆಯ ಬಂದಿಹ[2] । ಇಲಿಯ ಮರಿಯೊ ॥ ೧೮೯ ॥

ಮರೆದು ಮಲಗಿಹ । ಹರಿಯನೀಕ್ಷಿಸಿ ।
ಎರಡು ಕೈಯಲಿ । ನೆಗಹಿ ಗರಳವ ।
ಸುರಿವ ಮೊಲೆಯನು । ಬಾಯೊಳಿಟ್ಟಳು । ಮರುಳು ಮೂಳಿ ॥ ೧೯೦ ॥

ಲೋಕಶಿಶುಗಳ । ಕೊಂದ ಮೊಲೆಯನು ।
ತಾ ಕರಾಗ್ರದಿ । ಪಿಡಿದು ಬಾಯ್ಗಿ ।
ಟ್ಟಾಕಿ ಪಲ್ಗಳೊ । ಳೆಳೆಯುತುಂಡನು । ಲೋಕನಾಥ ॥ ೧೯೧ ॥

೬೪ ರಾಗ ಕಾಂಭೋಜಿ—ಜಂಪೆತಾಳ ೩

ಸೋಕಿದರೆ । ಪ್ಸೈಸುಡುವ । ವಿಷವ ಕಟ । ವಾಯಿಂದ ।
ಲೋಕುಳಿಸು । ತುಗುಳೆ ಧಾ । ರೆಗಳ— ॥
ಆ ಕುಟಿಲೆ । ಯಂಗರಕು । ತವ ಹೀರಿ । ಬಿಡಲು ಪರಿ ।
ದೋಕುಳಿಯು । ನಗರ ತುಂ । ಬಿದುದು— ॥ ೧೯೨ ॥*

ಸಾಕು ಬಿಡು । ಬಿಡು ಚಿಣ್ಣ । ಎಂದೆರಡು । ಕೈಯಿಂದ ।
ನೂಕಿದರೆ । ಬಿಡದಡರು । ತುಣಲು— ॥

---

1 ನಾಗರ ಮರಿಯೊ ಸಿಂಹನ । ಸೆಣಸುವಾನೆಯೊ । (ಕಾ)
2 ನೊಳಿರಲು ಸೊಕ್ಕಿದ (ಕಾ)

*ರಾಗ ಪಂತುರಾವಳಿ—ಏಕತಾಳ

ಬಿಡುಕಂದ—ಬಿಡುಕಂದ । ವೊಂದೇ ಕ್ಷಣಮಾತ್ರ । ಬಿಡುಕಂದ ॥ ಪಲ್ಲವಿ ॥
ಎನ್ನಯ ಕಂದಗೆ । ಇಮ್ಮಡಿ ನೀನೆಂ । ದಿನ್ನೆಣಿಸುವೆ ದ । ಮ್ಮಯ್ಯಾ ಕೊಲದಿರು ।
ತೊತ್ತಾಗುವೆ ಕ । ಣ್ಗತ್ತಲೆ ಬರುತಿದೆ । ವೃತ್ತಕುಚಂಗಳ । ಒತ್ತಿದನೆನ್ನಯ ।
ಒರಗಿಸದಿರು ಕರಿ । ವರದ ವೆಂಕಟಗಿರಿ । ಯರಸನೆ ಈಗ । ಕರವಮುಗಿ । ಯುವೆನು ॥ (ಅ)

ಸೇಕುತೆದೆ । ಗೆಟ್ಟು ಬಾ । ಯಾರಿ ಬಸ । ವಳಿದು ನಿಜ ।
ದಾಕೃತಿಯ । ನಾಗ ತೋ । ರಿದಳು— ॥ ೧೯೩ ॥

ಮಗುವಲ್ಲ । ಇದು ಮಾರಿ । ಎನುತ ನಿ । ಷ್ಠುರದ ಶ ।
ಬ್ದಗಳಿಂದ । ಕೂಗಿ ಬಾ । ಯ್ಬಿಡುತ— ॥
ಅಗಣಿತದ । ಪರ್ವತಕೆ । ವಜ್ರನಿ । ಟ್ಟಂತೆ ಕೈ ।
ಯುಗುರ ಕೊನೆ । ಯಿಂದ ಚಿವು । ಟಿದಳು— ॥ ೧೯೪ ॥

ಜಗದುಪತಿ । ಯವಳ ಅಸು । ಚೇತನವ । ದೇಹದಿಂ ।
ತೆಗೆದು ವಿಂ । ಗಡಿಸಿದಾ । ಕ್ಷಣಕೆ— ॥
ನಗರಕಭಿ । ಮುಖವಾಗಿ । ಐದು ಯೋ । ಜನದುದ್ದ ।
ವಗಲದಿಂ । ಕೆಡೆಪವಡಿ । ಸಿದಳು— ॥ ೧೯೫ ॥

ಒಡಲು ಬೀ । ಳ್ವಾಗ ಪ । ಟ್ಟಣಗೋಪು । ರಗಳು ಮನೆ ।
ಪುಡಿಯಾಯ್ತು । ನೇಕ ವಿ । ಸ್ತರದಿ— ॥
ಬುಡತುದಿಯ । ನೋಡಿದರೆ । ನೀಲಾದ್ರಿ । ಯಂತೆ ಕಂ ।
ಗೆಡಿಸಿದುದು । ನಂದಗೋ । ಕುಲವ— ॥ ೧೯೬ ॥

ಯಶೋದೆ, ಗೊಲ್ಲಹೆಂಗಳು—

ಮಡದಿಯರು । ಕಂಡೆಶೋ । ದೆಗೆ ಪೇಳ । ಲವಳು ಬಾಯ್ ।
ಬಿಡುತ ರ । ಕ್ಕಸಿ ಯೆಡೆಗೆ । ಬಂದು— ॥
ಅಡರಿದಣು । ಗನ ಪಿಡಿದು । ಮನೆಗೊಯ್ದು । ವಿಷದ ಗಾ ।
ರುಡಿಗರನು । ಕರೆಸಿ ಮಂ । ತ್ರಿಸುತ— ॥ ೧೯೭ ॥

೬೪ ರಾಗ ಮಧ್ಯಮಾವತಿ—ಅಷ್ಟತಾಳ ೧

ಸೊಪ್ಪನಿ । ಕ್ಕಿದರು ಗಾ । ರುಡಿಗರು ।—ಶೇಷ ।
ತಲ್ಪಗೆ । ವಿಷ ತಲೆ । ಗೇರಿತೆಂ । ದೆನುತ— ॥ ಪಲ್ಲವಿ ॥

ಎಂಭತ್ನಾ । ಲುಕು ಲಕ್ಷ । ಜೀವರಾ । ಶಿಗಳೆಲ್ಲ ।
ಬೊಂಬೆಯ । ಮಾಡಿ ಕು । ಣಿಸುವಾತ । ಗೆ— ॥
ಢಂಬಕ । ತನದಿ ಪೂ । ರ್ಣೇಂದುಬಾ । ಲಗೆ ವಿಷ ।
ದುಂಬಿ ರಾ । ಕ್ಷಸಿರಾಹು । ಸೋಂಕಿತೆಂ । ದೆನುತ— ॥ ೧೯೮ ॥

ವಿಷವ ಭುಂ । ಜಿಸುವನ । ಮೇಲೇರಿ । ಬಪ್ಪಗೆ ।
ವಿಷಕಂಥ । ರನ ಮಿತ್ರ । ಮಾಧವ । ಗೆ— ॥
ವಿಷವ ತೊ । ಡೆದ ಮೊಲೆ । ಯುಂಡನೆ । ನುತಲನಿ ।
ವಿಷರು ಸಂ । ದಿಸುವಂಥ । ಪಾದಸ । ರೋಜಕ್ಕೆ ॥ ೧೯೯ ॥

ಭೂತಸಂ । ಚಕದೇಹ । ತನ್ನಿಂದು । ದ್ಭವಿಸಿದ ।
ಭೂತಳ । ನಿರ್ಮಿಸಿ । ದಾತನಿ । ಗೆ— ॥
ಪ್ರೇತ ಪಿ । ಶಾಚಿಗ । ಳಿಗೆ ಬಲಿ । ಗಳ ನಾಡ । ಭೂತಕ್ಕೆ ।
ಹರಕೆ ತಂ । ಬಿಲ ಕೋಲ । ಕೊಡುತೊಳ್ಳೆ ॥ ೨೦೦ ॥

ಕಣ್ಣು ಕ್ಕೆ । ಕಾಲಾಡಿ । ತಿನ್ನು ಯ । ಶೋದೆಯ ।
ಪುಣ್ಯದಿಂ । ದುಳಿಯಿತು । ಶಿಶುವೆನು । ತ— ॥
ಕಣ್ಣಪು । [1]ರದಿ ಸಿಂತ । ಶ್ರೀಕೃಷ್ಣ । ಕರುಣಾಳು[1] ।
ಚೆನ್ನಾಗಿ । ಸುಖದಲಿ । ಬಾಳು ಬಾ । ಳೆನುತ— ॥ ೨೦೧ ॥

೬೫ ವಾರ್ಧಿಕಷಟ್ಪದಿ

ಘೋರಪೂತನಿಯ ಕೊಂದಾಮೇಲೆ ಶಕಟನ ಶ
ರೀರವನ್ನರೆದು ಯಮಳಾರ್ಜುನರ ಭಂಗಿಸುತ
ವೀರತೃಣವರ್ತ ಧೇನುಕ ವತ್ಸ ವಿವಿದರಂ ಸೇರಿಸಿದ ಯಮುನಪುರಕೆ ।
ಮಾರಮಣ ಕೃಷ್ಣ ಬಲರಾಮರೆಂದಿಬ್ಬರಿಗು
ಚಾರುನಾಮುವ ರಚಿಸಿ ನಂದಗೋಪನ ಸತ್ಕು
ಮಾರಕರ ತೊಟ್ಟಿಲೊಳಗಿಟ್ಟು ತೂಗಿದರಂದು ನಾರಿಯರು ಸಂಭ್ರಮದೊಳು
॥ ೨೦೨ ॥

೬೬ ಜೋಗುಳ—ಅಷ್ಟತಾಳ ೨

ಸ್ವ,ರ್ಣ । ಸೌರಮ್ಯ । ಮಂಟಪ । ದೊಳಗೆ ।
,ರನ್ನ । ದ ನೆಲೆ । ಗಂಭವ । ನಿಲಿಸಿ— ॥
ಪೂ,ರ್ಣ । ಶೋಭಿತ । ಸರಪಣಿ । ಗಳನು— ।
ಹೊ[2]ನ್ನ ಗ । ಉರಗ[2]ದ । ತೊಲೆಗೆ ಕ । ಟ್ಟಿದರು— ॥ ಜೋಜೋ ॥ ೨೦೩ ॥

---

1 ರೀಶ ಶ್ರೀ ಗೋಪಾಲಕೃಷ್ಣನೀ (ಕಾ) 2 ನ್ನಾಗ ಮರದ (ಕಾ)

ಮಿಾ,ಸ । ಲಮ್ಮದ । ತೊಟ್ಟಿಲ । ತಂದು ।
,ಜೇಸ । ರಿಲ್ಲದೆ । ಕಟ್ಟಿದ । ರಂದು ॥
ಭಾ,ಸು । ರಾಂಗದ । ಸತಿಯರು । ಬಂದು ।
ಕೇಶವ । ರಾಮರ । ತೂಗಿದ । ರಂದು ॥ ಜೋ ಜೋ ॥ ೨೦೪ ॥

ಮಾ,ಧ । ವಯ್ಯನ । ತೊಟ್ಟಿಲ । ಮೇಲೆ ।
ಮಾಣಿಕ । ಗುಲಗುಂ, । ಜಿಯು ಚೆಂಡ । ಮಾಡಿ ॥
ಮ್ಹಾ,ಣು । ಮ್ಹಾಣೆಂದು । ಮದ್ದಳೆ । ಹೊಯ್ದು ।
ಮಾಧವ । ಮಾಧವ । ಶರಣೆಂದು । ಗೋಪಿ ॥ ಜೋ ಜೋ ॥ ೨೦೫ ॥

ಜೋ ಜೋ । ಪನ್ನಗ । ಶಾಯಿ ಮು । ರಾರೇ ।
ಜೋ ಜೋ । ಭಾವಿತ । ಭಕ್ತಸಂ । ಸಾರೇ ॥
ಜೋ ಜೋ । ಗರುಡವಾ । ಹನ ಚಕ್ರ । ಧಾರೇ ।
ಜೋ ಜೋ । ಶ್ರೀಕೃಷ್ಣ । ದೈತ್ಯಸಂ । ಹಾರೇ ॥ ೨೦೬ ॥

ಜೋ ಜೋ । ಅಚ್ಯುತಾ । ನಂತ ಗೋ । ವಿಂದ ।
ಜೋ ಜೋ । ಸಚ್ಚಿದಾ । ನಂದ ಮು । ಕುಂದ ।
ಜೋ ಜೋ । ಸಚ್ಚರಿ । ತಾತ್ಮ ನಿ । ತ್ಯಾತ್ಮ ।
ಜೋ ಜೋ । ಪರಮಾತ್ಮ । ಬ್ರಹ್ಮ ಸ । ರ್ವಾತ್ಮ ॥ ೨೦೭ ॥

೬೭ ಭಾಮಿನಿಷಟ್ಪದಿ

ಇಂತು ಗೋವಿಂದನನು ತೂಗಿದ
ಕಾಂತೆಯರ ಮನ್ನಿಸಿ ಯಶೋದೆ ಮ
ಹಾಂತವಿಭವದೊಳಣುಗರನು ಸಲಹುತ್ತಲಿರುತಿರಲು ।
ಚಿಂತಿತಾರ್ಥಪ್ರದನು ತಾನೆಂ
ಬಂತೆ ಗೋಕುಲವಾಸಿಗಳಿಗ
ತ್ಯಂತ ಮಹಿಮೆಯ ತೋರುತಿರ್ದನು ಬಾಲಲೀಲೆಯಲಿ ॥ ೨೦೮ ॥

೬೮ ರಾಗ ಘಂಟಾರವ—ಜಂಪೆತಾಳ ೩

ಗೊಲ್ಲ ಹೆಂಗಳು—
ಬಾಲರುಡಿ । ಗೆಯನುಟ್ಟು । ಭಂಗಾರ । ಗಳ ತೊಟ್ಟು ।
ಕಾಲೊಳಾ । ಡುತ ಬರುವ । ಕಾಣಲತಿ । ಗರುವ— ॥ ೨೦೯ ॥

ನಡೆವದನು । ಕಲಿಸುವರು । ನಂದನರು । ಕೈವಿಡಿದು ।
ನುಡಿಕಲಿಸು । ವರು ನಟನೆ । ಗಾರನಿಗೆ । ಮುದದಿ— ॥ ೨೧೦ ॥

ಅಂಬೆಗಾ । ಲಿಕ್ಕುತಂ । ಗಣದೊಳಗೆ । ಸುಳಿದಾಡೆ ।
ಬೆಂಬಿಡದೆ । ನಡೆಸುವರು । ಬೀಳುತಡಿ ।ಗಡಿಗೆ— ॥ ೨೧೧ ॥

## ಬಾಲಲೀಲೆ

೬೯ ವಾರ್ಧಿಕಷಟ್ಪದಿ

ಮೆಲ್ಲಮೆಲ್ಲಡಿಯಿಡುತ ಪಶುಪಾಲಕರ ಸ್ನೇಹ
ದಲ್ಲಿ ಗೋವ್ಗಳ ಮೇಯಿಸುತ್ತ ಬಹರನವರತ
ಎಲ್ಲಿ ಮುಳ್ಬೇಲಿ ಹಾವ್ಚೇಳುಗಳ ನಿಕರವಿದ್ದಲ್ಲಿಗೊದಗುವರು ಬಿಡದೆ ।
ಬಲ್ಲತನದಿಂ ಗೋಪಿಯರು ಮೊಸರಗಡಿಗೆಗಳ
ಉಲ್ಲಾಸದಿಂ ಪೊತ್ತುಕೊಂಡು ಪುರಬೀದಿಯೊಳ
ಗಲ್ಲಲ್ಲಿ ಮಾರುತ್ತೈತಂದರೊಂದು ದಿನ ಪುರದಂಗಡಿಯ ಬಾಗಿಲೊಳಗೆ ॥ ೨೧೨ ॥

೭೦ ರಾಗ ಶಂಕರಾಭರಣ—ಅಷ್ಟತಾಳ ೧

ಗೋಪಿಯರು—

ಮೊಸರ ತೆ । ಕ್ಕೊಳ್ಳಿರ । ವ್ವ—ಮಾ । ನಿನಿಯರು ।
ಮೊಸರ ತೆ । ಕ್ಕೊಳ್ಳಿರ । ವ್ವ— ।
ಪಶುಗಳನ್ನೇ । ಕರೆದ ಹಾಲಿಗೆ । ಹೆಪ್ಪಕೊ ।, ಟ್ಟ ಅಚ್ಚ ॥ ಪಲ್ಲವಿ ॥
....................................

ಕೃಷ್ಣ—

ನಂದನ । ಮನೆಬಾಗಿ । ಲಿಂದೋಡುವ । ಚಿಣ್ಣತನ್ನಾ ।
ನಂದವ,ನೋ । ಡುತ್ತ ಬರುವ । ಮಂದಗಮ । ನೆಯರ ಕಂಡು ।
....................................
ಬಂದು ಸುಂಕ । ಗಾರನು ತಾ । ನೆಂದು ತಡೆದು । ನಿಲ್ಲಿಸಿದ ॥ ೨೧೩ ॥

೭೧ ರಾಗ ಶಂಕರಾಭರಣ—ಅಷ್ಟತಾಳ ೨

ಕೊಟ್ಟುಪೋಗಿ । ರೆನ್ನ ಸುಂಕ । ವ—ಕೊ । ಡದೆ ಕಣ್ಣ ।
ಬಿಟ್ಟರಂ । ಜುವನಲ್ಲ । ದಿಟ್ಟೆ ಹೆಂ । ಗಳಿರ— ॥ ಪಲ್ಲವಿ ॥

ಕುಂಭಿನಿ । ಯೊಳಗೆ ಈ । ನಂದಗೋ । ಕುಲದಲ್ಲಿ ।
ಒಂಭತ್ತು । ಕಡೆಯಲ್ಲಿ । ಠಾಣ್ಯವುಂ । ಟು— ॥
ಒಂಭತ್ತು । ಕಡೆಯೊಳು । ತೊಂಭತ್ತು । ಸರತಿಗೆ ।
ಡೊಂಬಿಗೆ । ಹೋಗುವ । ಜಂಬಾರ । ವಾಯ್ತು— ॥ ೨೧೪ ॥

೭೨ ರಾಗ ದೇಶಿ (ದೇಶ್ಯಕಾಪಿ)—ಅಷ್ಟತಾಳ ೧

ಗೋಪಿಯರು—
ಸುಂಕದ । ನಿಜವೇನು । ಪೇಳು,। —ನಿನ್ನ ।
ಅಂಕೆಗೆ । ನಾವಂಜು । ವವರಲ್ಲ । ಕೇಳು— ॥
ಬಿಂಕವು । ಸಲ್ಲ ಬೀ । ದಿಯೊಳು ।—ಕಣ್ಣು ।
ಸೋಂಕಿದ । ರೆಡರಕ್ಕು । ವ್ಯೆಗಾಯ । ಸವು ಬಕ್ಕು ॥ ೨೧೫ ॥
ಬೆಣ್ಣೆ ಮ । ಣವಿಗೊಂದು । ತಾರ, । —ಮೂರು ।
ಹೊನ್ನು ಮೊ । ಸರ ಭಾರ । ಕಹುದು ನೀ । ವಿದರ— ॥
ಮನ್ನಿಸ । ದಿರೆ ನಿಮ್ಮ । ಲ್ಲವರ,।—ಮನೆ ।
ಯನ್ನೊಳ । ಪೊಕ್ಕು ಸೆಳ । ಕೊಂಬೆ ಪಾ । ಲ್ಮೊಸರ— ॥ ೨೧೬ ॥
ನಂದಗೋ । ಪನ ಸುಕು । ಮಾರ,।—ಸಣ್ಣ ।
ಕಂದನೆ । ನಿನಗೇತ । ಕಿನಿತು ವಿ । ಚಾರ— ॥
ಮುಂದೆಮ್ಮ । ತಡೆದಲ್ಲಿ । ವಿವರ,।—ನಿನ್ನ ।
ತಂದೆತಾ । ಯಿಗಳಲ್ಲಿ । ಪೇಳ್ವೆವು । ದೂರ— ॥ ೨೧೭ ॥

೭೩ ಕಂದಪದ್ಯ

ಕೃಷ್ಣ—
ಶಶಿವದನೆಯರಿಂತೈದಿಯೆ
ಮೊಸರಂ ಮಂತಿಸುವ ಪೊಳ್ತನೋಡಿಯೆ ತಾ ಕಾ ।
ಣಿಸಿಕೊಳ್ಳದ ತೆರದಿಂದಾ
ವಸುದೇವಾತ್ಮಜನು ಮುದ್ದೆ ಬೆಣ್ಣೆಯ ಮೆದ್ದಂ ॥ ೨೧೮ ॥

೭೪ ರಾಗ ಮಧ್ಯಮಾವತಿ—ಅಷ್ಟತಾಳ ೨

ಗೋಪಿಯರು—
ಯಾ—ರೆ । ಬಂದವ । ರು—ಇ । ಲ್ಲಿಗೆ ಕಳ್ಳ ।
ರ್‍ಯಾ—ರೆ । ಬಂದವ । ರು— ॥
ಸೋರೆಯ । ಮೊಸರು ಬೆ । ಣ್ಣೆಯ ತಿಂಬು । ತೋಡಿದ ॥ ಪಲ್ಲವಿ ॥

ಸಿಕ್ಕದೊ । ೪ರಿಸಿದ । ನುಡಕೆಗ । ಳೊಳಗೆಲ್ಲ ।
ಬೆಕ್ಕಿನಂ । ದದಿ ನೆಲ್ಲ । ಹುಡುಕಾಡು । ತ್ತ— ॥
ಅಕ್ಕನ । ವರು ಭಾವ । ಗೆಂದು ಕ । ಟ್ಟಿರಿಸಿದ ।
ಸಕ್ಕರೆ । ಜೇನುತು । ಪ್ಪವ ತಿಂಬು । ತೋಡಿದ ॥ ೨೧೯ ॥

ಸುತ್ತಲು । ಚಾವಡಿ । ಯೊಳು ಮಲ । ಗಿರುವಾಗ ।
ಹಿತ್ತಿಲ । ಬಾಗಿಲಿಂ । ದೊಳಗೆ ಬಂ । ದು— ॥
ಅತ್ತೆಯ । ವರು ನಿದ್ರಿ । ಸಿರುವಾಗ । ಕೊರಳಿಂದ ।
ಮುತ್ತಿನ । ಸರ ಬಿಚ್ಚಿ । ಹರಿದುಬಿ । ಟ್ಟೋಡಿದ ॥ ೨೨೦ ॥

ಹುಣ್ಣಿಮೆ । ದಿವಸ ಮು । ತ್ತೈದೆ ಬ್ರಾ । ಹ್ಮರಿಗೆಲ್ಲ ।
ಚೆನ್ನಾಗಿ । [1]ಪನಿವಾರ[1] । ಬಡಿಸಲೆಂ । ದು— ॥
ಅಣ್ಣನ । ವರು ತೆಗೆ । ದಿರಿಸಿದ । ರಸಬಾಳೆ ।
ಹಣ್ಣಿನ । ಗೊನೆ[2]ಪುಳುಂ[2] । ಚನೆಮಾಡು । ತೋಡಿದ ॥ ೨೨೧ ॥

೭೫ ಕಂದಪದ್ಯ

ನಿದ್ದೆಯ ಹೊತ್ತಿಲಿ ಬೆಣ್ಣೆಯ
ಮುದ್ದೆಯ ರಸಬಾಳೆಹಣ್ಣು ಜೇನ್‌ತುಪ್ಪಗಳಂ ।
ಕದ್ದವರಾರೆನೆ ಕೇಳಲು
ಬುದ್ಧಿವಿಶಾಲದಲಿ ಪೇಳ್ದಳೊಬ್ಬಳು ತರುಣಿ ॥ ೨೨೨ ॥

೭೬ ರಾಗ ಕಲ್ಯಾಣಿ—ಅಷ್ಟತಾಳ ೧

ಮರುಳಾದೆ । ಏನೆ ಬಾ । ಲೆ—ಇ । ಲ್ಲಿಗೆ ರಾತ್ರಿ ।
ಬರುವವರಾ । ರುಂಟು ಪೇ । ಳೆ— ॥
ನೆರೆಹೊರೆ । ಯವರು ಎ । ಚ್ಚರಿತುಕೊಂ । ಡಿರಲಾಗಿ ।
ನರಿರಾತ್ರೆ । ಯೊಳಗೊಬ್ಬ । ಸುಳಿವ ಮಾ । ತುಂಟೇನೆ ॥ ೨೨೩ ॥

ಚಿನ್ನ ಬೆ । ಳ್ಳಿಗಳ ಬಿ । ಟ್ಟು—ಸ । ಕ್ಕರೆ ಬಾಳೆ ।
ಹಣ್ಣಿಗೆಂ । ದಾಸೆಬ । ಟ್ಟು— ॥

---

1 ಬರಹೇಳಿ (ಅ, ಕಾ) 2 ಯವಂ (ಅ, ಕಾ)

ಬೆಣ್ಣೆ ತು । ಪ್ಪಗಳ ನೆ । ಲ್ಲವರೆ ಮನೆ । ಯೊಳಗಿರ್ದ ।
ಸಣ್ಣ ವ । ರಾಟವ । ಲ್ಲದೆ ಬೇರಿ । ನ್ನಾರುಂಟು ॥ ೨೨೪ ॥

ಅಕ್ಕ ನೀ । ಸುಮ್ಮನಿ । ರೇ—ಆ । ದರೆ ಕಳ್ಳ ।
ಸಿಕ್ಕದೆ । ಪೋಗ ಬಾ । ರೇ— ॥
ದಕ್ಕದು । ಕಳವು ಹಾ । ದರವೆರ । ಡಕು ಸಣ್ಣ ।
ಮಕ್ಕಳಾ । ದರು ಕಂಡು । ಸೊಕ್ಕ ಮು । ರಿಯಬೇಕು ॥ ೨೨೫ ॥

೭೭ ಭಾಮಿನಿಷಟ್ಪದಿ

ವನಿತೆಯರು ತಮ್ಮೊಡನೆ ಯೋಚಿಸಿ
ಮನೆಗೆ ಬಂದರು ತಮ್ಮ ಮಕ್ಕಳ
ಘನತರದೊಳಂಜಿಸುತ ಕೇಳುತ್ತಿರಲು ರಾತ್ರಿಯಲಿ ।
ಕನಸ ಕಂಡಂದದಲಿ ಮರುದಿನ
ಕೆನೆವೊಸರ ಸುರಿದೋಡುತಿರಲಾ
ಧ್ವನಿಯ ಲಾಲಿಸಿ ತಿಳಿದು ಬಳಿಕಿಂತೆಂದಳಾ ತರುಣಿ ॥ ೨೨೬ ॥

೭೮ ರಾಗ ಘಂಟಾರವ—ಜಂಪೆತಾಳ ೩

ಅಕ್ಕ ಕೇ । ಳೀ ಕೇರಿ । ಒಕ್ಕಲೊಳು । ಕಳುವವರು ।
ಮಕ್ಕಳೊಳ । ಗಲ್ಲದೇ । ಮಗುಳೊಬ್ಬ । ರಿಲ್ಲ— ॥ ೨೨೭ ॥

ಪೇಳಲಂ । ಜುವೆ ಬಂದ । ಪೊಸಪರಿಯ । ಬಾಲಕಗೆ ।
ಕಾಲಲಂ । ದುಗೆ ಗೆಜ್ಜೆ । ಕಡಗ ವೊದ । ಲುಂಟು । ॥ ೨೨೮ ॥

ಪೀತಾಂಬ । ರವನುಟ್ಟು । ಫಣೆಗೆ ತಿಲ । ಕವನಿಟ್ಟು ।
ಜಾತಿತುಳ । ಸಿಯ ದಂಡೆ । ಕೊರಳೊಳಗೆ । ಕಂಡೆ— ॥ ೨೨೯ ॥

ನೀಲವ । ರ್ಣದ ಮೆಯ್ಯ । ನುಡಿವ ಕೊಳ । ಲಿದೆ ಕೈಯ ।
ಬಾಲಕೃ । ಷ್ಣನ ರೂಪ । ಬದಲಾಗಿ । ತೋರ್ಪ— ॥ ೨೩೦ ॥

ನಂದಗೋ । ಪ ಯಶೋದೆ । ಕಂದನ । ಲ್ಲದೆ ಮನೆಗೆ ।
ಬಂದು ಕಳು । ವವರಿಲ್ಲ । ಬೇರೊಬ್ಬ । ರಲ್ಲ— ॥ ೨೩೧ ॥

ಅರಸುಗಳ । ಬಾಲಕರು । ಅನ್ಯಾಯ । ಮಾಡಿದರೆ ।
ಪರರೊಡನೆ । ಪೇಳ್ದರದ । ಪರಿಹರಿಪ । ರಿಲ್ಲ— ॥ ೨೩೨ ॥

೭೯ ಭಾಮಿನಿಷಟ್ಪದಿ

ಶರಧಿ ಮೇರೆಯ ತಪ್ಪಿತಾದರೆ
ಧರಣಿ ತಲೆಕೆಳಗಾಗಿ ಹೋದರೆ
ಕರುಣವಿಲ್ಲದೆ ಬೇಲಿಯೇ ಬೆಳೆತಿಂದು ಕೆಡಿಸಿದರೆ ।
ಅರಸುಗಳೊಳನ್ಯಾಯವಾದರೆ
ಪರಿಹರಿಪರಿಲ್ಲೆಂದು ಗೋಕುಲ ।
ದರಸಿಯಾದ ಯಶೋದೆಯೆಡೆಗೈತಂದರರಮನೆಗೆ ॥ ೨೩೩ ॥

(ಯಶೋದೆಯ ಪ್ರವೇಶ)

೮೦ ರಾಗ ಸೌರಾಷ್ಟ್ರ—ಅಷ್ಟತಾಳ ೧

ಯಶೋದೆ—

ಏನಿರೆ । ಸತಿಯರೆ । ಲ್ಲರು ನಡೆ । ತಂದಿರಿ ।
,ಏನಿ । ರ — । ವ್ವ—।—ಓಹೋ ॥
ಮಾನಿನಿ । ಯರಿರ ಮಂ । ಚದಲಿ ಕು । ಳ್ಳಿರಿ ಬನ್ನಿ ।
,ಏನಿ । ರ—। ವ್ವ—।— ॥
ಆನನ । ರಸತಗ್ಗಿ । ತಂಬುಜ । ವದನೆಯ ।
,ರೇನಿ । ರ ।—ವ್ವ—।—ನಿಮ್ಮ ॥
ಮಾನಸ । ಹರುಷ ನಿ । ಧಾನವಾ । ಗಿರುವದಿ ।
,ದೇನಿ । ರ— । ವ್ವ— ॥ ೨೩೪ ॥

ಊಟ ಮಾ । ಹಗಳಲ್ಲಿ । ತೊಡರು ಬಂ । ದಡರಿತೆ ।
,ಏನಿ । ರ —। ವ್ವ—।—ಬಲು ॥
ಕಾಟಕ । ಜನರಿಂದ । ಕನವು ಬಂ । ದೆಸಗಿತೆ ।
,ಏನಿ । ರ —। ವ್ವ— ॥
ಕೋಟಲೆ । ಮನೆಯ ಸಂ । ಸಾರವೆ । ಗ್ಗಳಿಸಿದು ।
,ದೇನಿ । ರ —। ವ್ವ—।—ಬರಿ ॥
ಯಾಟಕ । ವಲ್ಲಿದು । ವೇಳ್ಯಸಾ । ಧಿಸಿ ಬಂದು ।
,ದೇನಿ । ರ —। ವ್ವ— ॥ ೨೩೫ ॥

ಅಂತರಂ । ಗದೊಳನು । ತಾಪ ವೆ । ಗ್ಗಳಿಸಿಹು ।
,ದೇನಿ । ರ —। ವ್ವ—।— ಬಲು ॥

ಚಿಂತೆಯಿಂ । ದರಮನೆ । ಗೈತಂದ । ಕಾರಣ ।
,ವೇಣಿ । ರ— । ವ್ವ— ॥
ಕಾಂತೆಯ । ರಿರ ಕಪ । ಟವ ಮಾಡ । ದುಸುರಿ ಮ ।
,ತ್ತೇಣಿ । ರ— । ವ್ವ—।—ಲಕ್ಷ್ಮಿ ॥
ಕಾಂತನು । ಸಲಹುವ । ದಯದಿ ನಿ । ಮ್ಮೆಲ್ಲರ ।
,ಕಾಣಿ । ರ —। ವ್ವ— ॥ ೨೩೬॥

೮೧ ಕಂದಪದ್ಯ

ಪದುಮದಳಾಕ್ಷಿ ಯಶೋದೆಯು
ಸುದತಿಯರಂ ಮನ್ನಿಸುತ್ತ ವೀಳ್ಯವ ಕೊಡಲು ।
ಮದಗಜಗಮನೆಯರಾಗಲೆ
ಮುದದಿಂ ಪೇಳಿದರು ಕೃಷ್ಣನಾಟಂಗಳನು ॥ ೨೩೭ ॥

೮೨ ರಾಗ ಪಂತುವರಾಳಿ—ಮಟ್ಟೆತಾಳ ೨

ಗೋಪಿಯರು—

ಕೇಳೆ ಗೋಪಿ । ರಂಗನಾಟ । ವ—ನಿ । ನ್ನಲ್ಲಿ ನಾವು ।
ಪೇಳದಿರುವ । ದುಚಿತವಲ್ಲ । ಪೇಳ್ದರಿಷ್ಟು । ಕಾರ್ಯವಿಲ್ಲ ॥ ಪಲ್ಲವಿ ॥

ಸರಿಯರಾತ್ರೆ । ಯೊಳಗೆ ಬಾಗಿ । ಲ್ಮರಿಯಲಾಗಿ । ಬೆದರಿ ಕದವ ।
ತೆರೆಯಲೊಳಗೆ । ಬಂದು ನಾ, । ವರಿಯದಂತೆ । ಹಾಲು ಮೊಸರ ॥
ಸುರಿಯಲದರ । ನೋಡಿ ಸುಮ್ಮ । ನೆ—ನಾ । ವಿರಲು ಸ ।
ಕ್ಕರೆಯ ಕದ್ದು । ಮೆಲುವ ಗಮ್ಮ । ನೆ— । ನಗುತ ಮೇ ।
ಗರೆಯ ಮಾಡಿ । ಬಿಡುವ ನಮ್ಮ । ನೆ—ನೀ । ಕರುಣದಿಂದ ॥ ೨೩೮ ॥

ಅಟ್ಟದ ಮೇ । ಲಡಗಿಸಿ ಬ । ಚ್ಚಿಟ್ಟರದರ । ಬುಡಕೆ ಕೋಲ ।
ಲಿಟ್ಟು ತೂತು । ಮಾಡಿ ಬಂ, । ದಷ್ಟು ಬಾಯ । ನಿಟ್ಟು ಸವಿಯು ॥
ತೊಟ್ಟನವರ । ಕರೆದು ಕೊಡುವ । ನು—ಬೆದ । ರಿಸಲು ಕ ।
ಲ್ಲಿಟ್ಟು ಭಾಂಡ । ಗಳನೆ ಒಡೆವ । ನು— । ಸತಿಪತಿಯರ ।
ಜುಟ್ಟುಜುಟ್ಟು । ಕಟ್ಟಿಬಿಡುವ । ನು—ನೀ । ಕರುಣದಿಂದ ॥ ೨೩೯ ॥

೮೩ ಕಂದಪದ್ಯ

ಯಶೋದೆ—

ಬಾಲೆಯರಿಂತೆಂದಾ ಗೋ
ಪಾಲನ ದೂರುಗಳ ಪೇಳೆ ನಸುನಗುತಾಗಂ ।

ಬಾಲಕರೆಸಗಿದಡೆಮ್ಮ ಸು
ಶೀಲನಿಗಪಕೀರ್ತಿ ಮತ್ತೆನುತ್ತಿಂತೆಂದಳ್ ॥ ೨೪೦ ॥

೮೪ ರಾಗ ಫರಜು—ಏಕತಾಳ ೩

ಅಮಮಾ—ಇ । ದೆಂಥ ಜೋದ್ಯ । ವೊ—ಇವ । ರಾಡುವ ಮಾತುಗ ।
ಳಮಮಾ—॥ ಪಲ್ಲವಿ ॥

ತಮ್ಮ ಮನೆಗೆ ಸರಿ । ರಾತ್ರಿಯೊಳಗೆ ಸರಿ । ದೊಮ್ಮೆಗೆ ಬಾಗಿಲ ।
ದಿಮ್ಮಿ ಮುರಿದ ಗಡ । ಅಮಮಾ—॥ ಅನುಪಲ್ಲವಿ ॥

ಸಂಜೆ—ಯೊ । ಳಂಗಳಕಿಳಿಯದ । ಬಾಲ—ಪರ । ರೊಡವೆಯ ಮುಟ್ಟಲಿ ।
ಕಂಜು—ತ್ತ । ಅಳುಕುತಲಿಹ ಗೋ । ಪಾಲ—ಮಾ । ಸಲು ವೊಸರ್ಬೆಣ್ಣೆಯ ।
ನೆಂಜ—ಲು । ಮಾಡಿದನಂತೆ ಏ । ಶಾಲ—ಶಿವ । ಶಿವ ನಾವು ।
ರಂಜಿ—ಸಿ । ಕೇಳಿದೆವೀಪರಿ । ಚಾಲ— ಇದು । ಕಷ್ಟದ ಕಾಲ ॥ ೨೪೧ ॥

೮೫ ರಾಗ ಕೇದಾರಗೌಳ—ಅಷ್ಟತಾಳ ೧

ಸರಿರಾತ್ರಿ । ಯೊಳಗೆನ್ನ । ತರಳ ಮ । ನೆಗೆ ಬಂದ ।
ಗುರುತವೇ । ನಮ್ಮ ಪೇ । ಳು— ॥
ಇರುಳು ಪ । ಟ್ಟಣವ ರ । ಕ್ಷಿಪ ತಳ । ವಾರನ ।
ಚರರನ್ನೆ । ಕರೆಸಿ ಕೇ । ಳು— ॥ ೨೪೨ ॥

ಕಂದನಿ । ರುಳು ನಿಮ್ಮ । ಮಂದಿರ । ದೊಳು ಬೆಣ್ಣೆ ।
ತಿಂದಿಹ । ಗುರುತವೇ । ನೆ— ॥
ಒಂದರ । ಮೇಲೊಂದಿ । ಟ್ಟೊಡೆದ ಭಾಂ । ಡದ ಚಿಪ್ಪ ।
ತಂದು ತೋ । ರು[1]ವದು ಕಾ । ಣೆ[1]— ॥ ೨೪೩ ॥

೮೬ ಕಂದಪದ್ಯ

ಪರಿಹಾಸ್ಯದಿಂದ ನಗುತಾ
ತರುಣಿಯುರಂ ಮನ್ನಿಸುತ್ತ ಕಳುಹಲ್ಕಂದಾ ।
ಮರುದಿನ ಮಾಡಿದ ಲೂಟಿಯ
ಭರದಿಂದೈತಂದು ಪೇಳ್ದಳೊರ್ವಳ್ ತರುಣಿ ॥ ೨೪೪ ॥

---

1 ವೆವು ನೋಡೆ (ಕಾ)

೮೭ ರಾಗ ಶಂಕರಾಭರಣ—ಅಷ್ಟತಾಳ ೩

ಎಷ್ಟೆಂದು । ಹೇಳಲ । ಮ್ಮ—ಗೋ । ಪಾಲನ ।
ದುಷ್ಟತ । ನವ ಗೋಪ । ಮ್ಮ— ॥
ಕಟ್ಟಿದ । ಕರುಗಳ । ಬಿಟ್ಟು ಕ । ರೆವ ಮುನ್ನ ।
ಹೆಟ್ಟಿಯಿಂ । [1]ನೆಗೆದೋ[1]ಡಿ । ದ—ಕೇ । ಳು ವಿನೋದ ॥ ೨೫೫ ॥

ಬಣ್ಣಗ । ತಿಯಲಿ ಬಂ । ದ—ಪಾ । ಲ್ಮೊಸರ್ತುಪ್ಪ ।
ಬೆಣ್ಣೆಯ । ಕದ್ದು ತಿಂ । ದ— ॥
ಮಿಣ್ಣನೆ । ಮಲಗಿದ್ದ । ಚಿಣ್ಣನ । ಮೂಗಿಗೆ ।
ಸುಣ್ಣವ । ಬರೆದೋಡಿ । ದ—ಕೇ । ಳು ವಿನೋದ ॥ ೨೫೬ ॥

ಅಷ್ಟೆಲ್ಲ । ಕಂಡು ನಾ । ವು—ಅ ।ಟ್ಟದಲಿ ಬ ।
ಚ್ಚಿಟ್ಟರೆ । ಅದ ನೋಡಿ । ದ— ॥
ಮೆಟ್ಟಿ ಗೋ । ಪರ ಹೆಗ । ಲಲಿ ನಿಂತು । ಬಳಿಕ ಕ ।
ಲ್ಲಿಟ್ಟೋಡಿ । ಪೋದ ಕಾ । ಣೆ—ಕೇ । ಳೆನ್ನಾಣೆ ॥ ॥ ೨೫೭ ॥

ಭಟ್ಟಬಾ್ರ । ಹ್ಮರಿಗೆನ್ನು । ತ—ಮೂ । ಲೆಯಲಿ ಬ ।
ಚ್ಚಿಟ್ಟಿರ್ದ । ಡದ ನೋಡು । ತ— ॥
ಕೆಟ್ಟಮೂ । ಳಿಯ ಮಕ್ಕ । ಳೆನುತ ಬಾ । ಗಿಲ್ಗೆ ಕ ।
ಲ್ಲಿಟ್ಟೋಡಿ । ಪೋದನ । ಮ್ಮ—ಕೇ । ಳಿ ಗೋಪಮ್ಮ ॥ ೨೫೮ ॥

೮೮ ಕಂದಪದ್ಯ

ಯಶೋದೆ—

ಮಕ್ಕಳ ಮಾಣಿಕ, ಪಾಲ್ಮೊಸ
ರಿಕ್ಕಿದರದನುಣ್ಣಲೊಲ್ಲ, ಸೇರದು ಬೆಣ್ಣೆ ।
ಚಿಕ್ಕವ, ನಿಮ್ಮಡಿಗೆಯ ಮನೆ
ಪೊಕ್ಕನು ಸರಿರಾತ್ರೆ ಎಂಬ ಮಾತಿದು ಚೋದ್ಯಂ ॥ ೨೫೯ ॥

೮೯ ರಾಗ ಸಾವೇರಿ—ಅಷ್ಟತಾಳ ೧

ಗೊಲ್ಲತಿಯರು—

ಸಣ್ಣವ । ರಾಟವಲ್ಲ ।—ಸಂ । ಗಡ ಬಂದ ।
ಚಿಣ್ಣರೊಳ್ । ಕೇಳ್ದಿವೆ । ಲ್ಲ— ॥

1 ನಗುತೋ (ಕಾ)

ಅಣ್ಣ ರಾ । ಮರಿಯದಂ । ದದೊಳೋಡಿ । ಬಂದಿವಳ ।
ಬಣ್ಣದು । ಟಯ ಸವಿ । ದ—ಕೇ । ಳು ವಿನೋದ ॥ ೨೫೦ ॥

ಯಶೋದೆ—

ಎಂದೂ ಎ । ನ್ನಣುಗನಿ । ಗೆ—ಆ । ಲದ ಹಣ್ಣ ।
ತಿಂದು ಅ । ಭ್ಯಾಸಮಾ । ಗೆ—॥
ಬಂದರಿ । ಯದ ಬಾಲ । ಮುಗುದ ನಿ । ನ್ನಧರವ ।
ತಿಂದರಿಂ । ದೇನಾಯಿ । ತೆ—ಪೇ । ಳೆಲೆ ಕಾಂತೆ ॥ ೨೫೧ ॥

ಚಿಕ್ಕವ । ನಲ್ಲವೇ । ನೆ—ನಿ । ಮಗೆ ಸಣ್ಣ ।
ಮಕ್ಕಳಿಂ । ದಿಲ್ಲವೇ । ನೆ— ॥ ಪಲ್ಲವಿ ॥

ಗೊಲ್ಲತಿಯರು—

ನಸುಬೆಳ । ಕಾಗುವಾ । ಗ—ಯ । ವ್ವನವತಿ ।
ನೊಸರ ಮಂ । ತಿಸುತಿಪ್ಪಾ । ಗ—॥
ಕುಶಲದಿಂ । ದೆಳೆದಮ । ರ್ದಪ್ಪುತ । ತರುಣಿಯ ।
ಪೊಸಕುಚಂ । ಗಳ [1]ಚೂಟಿ[1] । ದ—ನೋ । ಡು ವಿನೋದ ॥ ೨೫೨ ॥

ಯಶೋದೆ—

ದೇವತಾ । ರ್ಚನೆಗೆನ್ನು । ತ್ತ—ನಿ । ತ್ಯದಲಿ ರಾ ।
ಜೀವಗ । ಳನೆ ಕೊಯ್ಯು । ತ್ತ—॥
ತಾವರೆ । ಮೊಗ್ಗೆ ಎಂ । ದರಿಯದೆ । [2]ಚೂಟಿದ[2] ।
ಡವಮಾನ । ಘನವಾಯಿ । ತೆ—ಪೇ । ಳೆಲೆ ಕಾಂತೆ ॥ ೨೫೩ ॥

ಗೊಲ್ಲತಿಯರು—

ನೀರನು । ತರಹೋಹಾ । ಗ— ಈ । ಸುದತಿಯ ।
ದಾರಿಯ । ,ಡ್ಡ ಕಟ್ಟಿ । ದ—॥
ನಾರಿ ಹೇ । ಳದಕೇನು । ಬೆಲೆಕೊಟ್ಟೆ । ಎನುತುಟ್ಟ ।
ಸೀರೆಯ । ನೆಗ್ಗೋಡಿ । ದ—ಕೇ । ಳು ವಿನೋದ ॥ ೨೫೪ ॥

ಯಶೋದೆ—

ಆರೇಳು । ವರ್ಷವಾ । ದ—ಬಾ । ಲಕನುಟ್ಟ ।
ಸೀರೆಯಂ । ದವ ನೋಡಿ । ದ—॥

---

1 ಮುಟ್ಟಿ (ಕಾ) 2 ಮುಟ್ಟಲು (ಕಾ)

ಸೌರಮ್ಯಾಂ | ಬರವಿದರ | ಬೆಲೆ ಯೇನೆ | ಸ್ಮಿತ [1]ನೆಗ್ಗಿ[1] |
ಹಾರಿಸ | ಲೇನಾಯಿ | ತೇ—ಸೇ | ಳಿಲೆ ಕಾಂತೆ || ೨೫೫ ||

೯೦ ರಾಗ ಕಾಪಿ—ಅಷ್ಟತಾಳ ೧

ಗೊಲ್ಲತಿಯರು—

ಮಗಗಿನ್ನಾ | ದರು ಬುದ್ಧಿ | ಪೇಳಿ—|—ಇದು |
ನಗೆಯಲ್ಲ | ಕೈಮುಗಿ | ವೆವು ಮಾತ | ಕೇಳಿ— || ಪಲ್ಲವಿ ||

ಕಳವು ಹಾ | ದರವು ಮು | ದ್ದಲ್ಲ — | —ನೀವು |
ಇಳಿಯ ಪಾ | ಲಿಸುವರಿ | ಗಿದು ಯೋಗ್ಯ | ವಲ್ಲ— ||
ಬಳಸುವ | ದಪಕೀರ್ತಿ | ಎಲ್ಲ— | ರಾಜ್ಯದೊ |
ಳುಳಿವದು | ಕಷ್ಟವಾ | ಯಿತು ಕೇಳು | ಸೊಲ್ಲ— || ೨೫೬ ||

ಉಂಡದ | ಕಳಲುವ | ರಾರು—|—ನೆಲ |
ನುಂಡು ಕೆ | ಟ್ಟಿತು ಎಲ್ಲ | ಪಾಲ್ಬೆಣ್ಣೆ | ಮೊಸರು— ||
ಕಂಡಕ | ಡೆಯಲಿ ಚೆ | ಲ್ಲುವರು—|—ಕಪಿ |
ವಿಂಡುಗ | ಳಿಗೆ ಮತ್ತೆ | ಕರೆದು ಕೊ | ಡುವರು— || ೨೫೭ ||

(ಯಶೋದೆ ಕರೆಯಲು ಕೃಷ್ಣನ ಪ್ರವೇಶ)

೯೧ ರಾಗ ಪುನ್ನಾಗವರಾಳಿ—ಮಟ್ಟೆತಾಳ ೨

ಯಶೋದೆ—

ಚಂದವಾಯಿ | ತು—ಮಗನೆ | ಚಂದವಾಯಿ | ತು—|
ನಂದಗೋಪ | ನಣುಗ ಕದ್ದು | ತಿಂದನೆಂಬ | ಮಾತ ತಂದು— || ಪಲ್ಲವಿ ||

ಪರರ ಮನೆಯ | ಪಾಲುಮೊಸರು | ಸುರಿಯುತೋಡಿ | ಬರುವುದಕ್ಕೆ |
ಕರೆಹಕೇನು | ಕಡಿಮೆಯಾಯಿ | ತೆ—ಅ | ಯ್ಯಯ್ಯೊ ನಡತೆ— || ೨೫೮ ||

ನರಿಯು ನಾಯಿ | ತಿಂದುಪೋಪು | ದರಿಯೆ ತೋಟ | ದಲ್ಲಿ ಹಣ್ಣ |
ತರಿಸಲಾರು | ಬೇಡವೆಂಬ | ರೇ—ಬೇ | ಕೆಂದರೆ— || ೨೫೯ ||

ಪರರಿಗೆಲ್ಲ | ಬುದ್ಧಿಪೇಳಿ | ಪಾಲಿಸುತ್ತ | ಲಿರುವಂಥವರು |
ನೆರೆಮನೆಯೊಳು | [2]ಕಳವ ಮಾಳ್ಪ | ರೇ—ಕೈ | ಮಾಡಿದರೆ[2]— || ೨೬೦ ||

---

1 ಮೇಲೆ (ಕಾ, ಅ) 2 ತಿರುಗಲಾಪರೇ—ಅಯ್ಯಯ್ಯೊ ವಿಧಿಯೇ (ಕಾ)

೯೨ ರಾಗ ಸಾವೇರಿ—ಅಷ್ಟತಾಳ ೨

ಕೃಷ್ಣ—

ಗೊಲ್ಲಹೆ । ಣ್ಣುಗಳು ಕೊ । ಡಿ—ನಿ । ನ್ನೊಡನೆಲ್ಲ ।
ಸಲ್ಲದ । ಮಾತನಾ । ಡಿ—॥
ಖುಲ್ಲಗಾ । ತಿಯರು ಮ್ಮ। ತ್ಸರದಿ ದೂ । ರುವರೆನ್ನ ।
ಕೊಲ್ಲಬೇ । ಕೆನುತಲ । ಮ್ಮ—ಗೋ । ಪಮ್ಮ— ॥ ೨೬೧ ॥
ನೆರೆಮನೆ । ಯೊಳ್ಕಳುವ । ರೆ—ಪಾ । ಲ್ಮೊಸರ್ಗೇನು ।
ಬರಗೆಟ್ಟು । ಹೋಗಿರ್ಪು । ದೆ— ॥
ಇರುಳು ಪ । ಟ್ಟಣವ ಸಂ । ಚರಿಸಲ್ಕೆ । ನಗೆ ಮತ್ತೆ ।
ಮರುಳಾಟ । ವಾಯ್ತೇನ । ಮ್ಮ—ಗೋ । ಪಮ್ಮ— ॥ ೨೬೨ ॥
ಮೊಸಲು । ನೊಸರುಂಡ । ರೆ—ಮಾ । ನವರ್ಗದು ।
ದೋಷಾವ । ಗುಣವಲ್ಲ । ವೆ—॥
ಆ ಸುದ । ತಿಯರೆಂದ । ಮಾತಿಗ । ಣ್ಣನ ಕೂಡೆ ।
ನೀ ಸಾಕ್ಷಿ। ಗಳನು ಕೇ । ಳು—ಆ । ಮೇಲೆ ಪೇಳು— ॥ ೨೬೩ ॥

೯೩ ಕಂದಪದ್ಯ

ಯಶೋದೆ—

ಕಂದನ ನುಡಿಯಂ ಕೇಳ್ದಾ
ನಂದನ ಸತಿ ಮಗನ ಮುದ್ದುಮಾಡುತ್ತಾಗಂ ।
ಬಂದರೆ ನಿಮ್ಮನೆಗೀತನ
ತಂದೊಪ್ಪಿಪುದೆಂದವರನೊಡಂಬಡಿಸಿದಳು ॥ ೨೬೪ ॥

೯೪ ವಾರ್ಧಿಕಷಟ್ಪದಿ

ಗೋಪಿಕೆಯರು—

ಮಂದಗಾಮಿನಿ ಯಶೋದೆಯ ಮಾತಿಗವರು ನಡೆ
ತಂದು ಕೃಷ್ಣನ ಹಿಡಿಯಬೇಕೆಂಬ ಮೊದಲವರ
ಮಂದಿರವ ಪೊಕ್ಕೊಡನೆ ನಲವಿನಿಂದಿಟ್ಟಿರುವ ಬಿಂದಿಗೆಯ ಮೊಸರ ಸುರಿದು ।
ಮುಂದೆ ಪಾಲ್ಬೆಣ್ಣೆ ಬೆಲ್ಲವನಿಟ್ಟ ಠಾವಾವು
ದೆಂದು ಹುಡುಕಾಡುತಿಹ ಸಮಯದೊಳು ಗೋಪಿಯರು
ಇಂದಿರಾಪತಿಯನಡ್ಡವಗಟ್ಟ ಹಿಡಿದು ಎಳೆತಂದರು ಯಶೋದೆಯೆಡೆಗೆ ॥ ೨೬೫ ॥

೯೫ ರಾಗ ಸೌರಾಷ್ಟ—ತ್ರಿವುಡೆತಾಳ ೨

ಬಂದು ಗೋಪಿಯ । ಕೈಯೊಳಿದ್ದ ಮು ।
ಕುಂದನನು ಕಾ । ಣುತ್ತ ಬರಿಗೈ ।
ಯಿಂದ ತಾವಿ । ದ್ದಿರವನೀಕ್ಷಿಸು । ತಂದು ಭ್ರಮಿಸಿ ॥ ೨೬೬ ॥

ಮಾತನಾಡದೆ । ನಾಚುತಲಿ ಮನ ।
ಸೋತು ಸುಮ್ಮನೆ । ಮನೆಗೆ ಬಂದತಿ ।
ಕೌತುಕದ ಶಿಶು । ವೆನುತ ಕೃಷ್ಣನ । ಪೊಗಳುತಿಹರು ॥ ೨೬೭ ॥

ಕಾರಣೀಕದ । ನಂದಗೋಪಕು ।
ಮಾರಕನ ಪಡೆ । ದವರ ಪುಣ್ಯವಿ ।
ಚಾರವೆಂದೇ । ಪೊಗಳುತಿರ್ದರು । ಕೇರಿಯೊಳಗೆ ॥ ೨೬೮ ॥

(ಎಲ್ಲರ ನಿಷ್ಕ್ರಮಣ)

೯೬ ರಾಗ ನೀಲಾಂಬರಿ—ಅಷ್ಟತಾಳ ೨ (ವಿಲಂಬಿತಲಯ)

ಗೋಪಿಕೆಯರು—

ತಪ್ಪಿಸಿ, ಕೊ । ಳ್ಳದ, ಹಾಗೆ । ಕಟ್ಟುವ, ಸಿ । ಕ್ಕಿದರೆ ಕೈಗೆ ।
ಬಾಲನ ।—ಮುದ್ದು । ಶೀಲನ ।— ॥ ೨೬೯ ॥

ಜಾಗರ, ದೊ । ಳಿರುವ ನಾವು । ಜತನವೆಂದು । ಮಾತಾಡುತ್ತ ।
ಪೋದರು ।—ಮನೆಯೊ । ಳ್ಳಾದರು— ॥ ೨೭೦ ॥

ಕದ್ದು ಮೊಸರು । ಬೆಣ್ಣೆತುಪ್ಪ । ಮೆ,ದ್ದೋಡ । ಲಾ ಕೃಷ್ಣನ ।
ತಡೆದರು ।—ಎಲ್ಲ । ಹಿಡಿದರು । — ॥ ೨೭೧ ॥

(ಗೋಪಸ್ತ್ರೀಯರು ಕೃಷ್ಣನನ್ನು ಬೆರಸಿಕೊಂಡುಬಂದು ಕೈಹಿಡಿದು ನಿಲ್ಲಿಸುತ್ತಾರೆ)

೯೭ ರಾಗ ಮಧ್ಯಮಾವತಿ—ಅಷ್ಟತಾಳ ೧

ಸಿಕ್ಕಿದ ।—ಕಳ್ಳ । ಸಿಕ್ಕಿದ ।—ಇವನ ।
ಸೊಕ್ಕಿಂಗ । ಳನೆ ಮುರಿ । ದಿಕ್ಕದೆ । ಬಿಡೆವೀಗ ॥ ಪಲ್ಲವಿ ॥

ಬೊಂಬೆಯ । ಮದುವೆಯಾ । ಟದೊಳಿರ । ಲಿವ ಬಾಲ ।
ನೆಂಬುದ । ಕಾಗಿ ಸು । ಮ್ಮನೆ ಬಿಟ್ಟೆ । ವು— ॥ ೨೭೨ ॥

ಕಂಭದ । ಮರೆಗಾಗಿ । ಕರೆದೊಯ್ದೀ । ತರುಣಿಯ ।
ಛುಂಬಿಸಿ । ತುಟಿಕಚ್ಚ । ಲುಚಿತವೇ । ನಮ್ಮ—॥ ॥ ೨೭೩ ॥

ನೊಸರು ಬೆ |, ಣ್ಣೆ ಬಾಳೆ | ಹಣ್ಣು ತಾ | ಮೆಲುವಾಗ |
ಹಸುಮಗು | ವೆಂದು ಲಾ | ಲಿಸಿಕೊಂಡೆ | ವು—|| || ೨೭೪ ||

ನಿಶೆಯೊಳ | ಡಗಿ ಬಳಿ | ಗೈತಂದೀ | ತರುಣಿಯ |
ಪೊಸಕುಚಂ | ಗಳ ಮುಟ್ಟ | ಲುಚಿತವೇ | ನಮ್ಮ— || ೨೭೫ ||

ಕಣ್ಣಮು | ಚ್ಚಾಲೆಯಾ | ಡುವ ಎಂದು | ಕರೆವಾಗ |
ಸಣ್ಣವ | ನೆಂದು ಸು | ಮ್ಮನೆ ಬಿಟ್ಟೆ | ವು—||
ಕಣ್ಣವು | ರೀಶ ಶ್ರೀ | ಕೃಷ್ಣ ಈ | ತರುಣಿಯ |
ಬೆನ್ನಮೇ | ಲೇರಿರ | ಬಹುದೆ ಏ | ನಮ್ಮಾ || ೨೭೬ ||

೯೮ ವಾರ್ಧಿಕಷಟ್ಪದಿ

ಗೋಪಾಲಕೃಷ್ಣ ಸಿಕ್ಕಿದನಿವನ ಬೆಳಗಾಗೆ
ಗೋಪಿಯಿದ್ದೆಡೆಗೊಯ್ದು ಬುದ್ಧಿಕಲಿಸುವೆನೆನುತ
ಆ ಪುಣ್ಯಚರಿತೆಯರು ಸರಿರಾತ್ರೆಪರಿಯಂತ ಕಾದಿರ್ದ ರಾಬಾಲನ |
ಶ್ರೀಪತಿಯು ಮನೆಗೆ ತಾ ಬಾರದಿರಲು ಯಶೋದೆ
ತಾಪವನು ನೆರೆತಾಳಿ ಮಗನೆಲ್ಲಿಪೋದನೆಂ
ದಾ ಪುರದ ಕೇರಿಯೊಳಗರಸಿದಳು ಬಾಲಕನ ರೂಪಗುಣಮಂ ಪೊಗಳುತ
|| ೨೭೭ ||

(ಬಾಲಕೃಷ್ಣನನ್ನರಸಿಕೊಂಡು ಯಶೋದೆ ಬರುತ್ತಾಳೆ)

೯೯ ರಾಗ ಪುನ್ನಾಗವರಾಳಿ—ಏಕತಾಳ ೨ (ವಿಲಂಬಿತ)

ರಂಗ ಬಂದ | ನೇ ಪಾಂಡು | ರಂಗ ಬಂದ | ನೆ— |
ರಂಗು,ಮಾ | ಣಿ ಕದ ಹರಳ | ಉಂಗುರದ | ಕಯ್ಯ ಬೆರಳ || ಪಲ್ಲವಿ ||

ಸಿರಿಯು,ಸೋ | ಲ್ಮುಡಿಯ ಸೌಂ | ದರಿಯು,ಪು | ಷ್ಪಮಾಲೆಯ |
ಧರಿಸಿ,ಕುಂ | ಕುಮುವ ಕ | ಸ್ತುರಿಯ ನಾಮ | ಹಣೆಯೊಳಿಟ್ಟು || ೨೭೮ ||

ಕೊರಳ,ಕೌ | ಸ್ತುಭಹಾರ | ಮೆರೆವ,ಕ | ರ್ಣಕುಂಡಲ |
ಕರದಿ,ಕಂ | ಕಣ ಪೀತಾಂ | ಬರದು,ಡಿ | ಗೆಯನುಟ್ಟು || ೨೭೯ ||

ಉರದೊ,ಳೊ | ಪ್ಪುವರತ್ನ | ಸರವೈ,ಜ | ಯಂತೀ ಮಾಲೆ |
ಕರದ,ಕೊ | ಳಲ ಕಣ್ವ | ಪುರದ,ಗೋ | ಪಾಲಕೃಷ್ಣ || ೨೮೦ ||

೧೦೦ ಕಂದಪದ್ಯ

ಗೋಪಸ್ತ್ರೀಯರು—

ತಂದರೆ ಮಾಳ್ಪೆ ವಿಚಾರವ
ನೆಂದಾಡಿದ ಮಾತಿಗಾಗಿ ಗೋಪಿಯರಾಗಳ್ ।
ವಂದಿಸಿ, ಸಿಕ್ಕಿಹ ನಿನ್ನಯ
ಕಂದಗೆ ನೀಂ ಬುದ್ಧಿ ಹೇಳೆನುತ್ತಿಂತೆಂದರ್ ॥ ೨೮೧ ॥

೧೦೧ ರಾಗ ಗೌಳಿಪಂತು—ಏಕತಾಳ ೩

ಗೋ । ಪಮ್ಮ ನಿಮ್ಮ । ಕಂದ,ನ । ಕಳ್ಳಚಾಳಿಯ । ಬಿಡಿಸೇ,ಬೇ ।
ಡ, ಯೆಂದೊಡಂ । ಬಡಿಸೆ, ಬೇ । ಕಾದದ್ದೆಲ್ಲ । ಕೊಡಿಸೇ,ದ ।
ಯದಿಂದೆಮ್ಮ । ನಡೆಸೇ—ಗೋ ॥ ಪಮ್ಮ ನಿಮ್ಮ— ॥ ಪಲ್ಲವಿ ॥

ಸುಳ್ಳು, ಮಾ । ತಾಡುವಿರಿ ನೀ । ವೆಂದೆ—ಗೋ । ಪಾಲಕೃಷ್ಣ ।
ಒಳ್ಳೆಯವ । ನೆಂದೆ ಗುಣದಿ । ಹಿಂದೆ—।—ದಯ ।
ಉಳ್ಳ,ಡಿ । ನ್ನಾ,ದರು । ಮುಂದೆ—।—ಇಕೊ ।
ಕಳ್ಳ—ನ । ನೊಪ್ಪಿಸಿದೆವು ನಾ । ವಿಂದೆ—।—ಸಟೆ ।
ಯಲ್ಲ, ಕೈ । ಮುಗಿದು ಬೇಡುವೆ । ವೊಂದೆ—ಗೋ । ಪಮ್ಮನಿಮ್ಮ ॥ ೨೮೨ ॥

ಬೆಳಗು—ಜಾ । ವದಲಿ ಮೆಲ್ಲಗೆ । ಬಂದ—ದಂ । ಪತಿಗಳು ಕೋಣೆ ।
ಯೊಳಗೆ—ಮಲ । ಗಿರಲು ಲಜ್ಜ । ಮುಂಡ—ಪೇ । ಳಲೇನ್ ಭಂಡ ।
ಇಳೆಯೊಳ್ನೋ । ಡಿದರೀತ,ಬಲು । ಪುಂಡ—ಮಂ । ಚದ ಕೆಳಗೆ ।
ಕುಳಿತಲ್ಲಿ । ಯವರ ನಿಜವ । ಕಂಡ—ನಾ । ಚಿಕಿಲ್ಲದೆ ।
ಒಳಗೆ ನಗು । ತಿರುವನು ದೇವಮು । ಕುಂದ—ಗೋ । ಪಮ್ಮ ನಿಮ್ಮ ॥ ೨೮೩ ॥

೧೦೨ ಭಾಮಿನಿಷಟ್ಪದಿ

ವಾರಿಜಾಕ್ಷಿಯರಿಂತು ಕೃಷ್ಣನ
ದೂರುಸುರುತಿರೆ ತಿಂದ ವೊಸರಿನ
ಸೋರುದುಪ್ಪದ ಜೊಲ್ಲು ಕೈ ಬ್ಬಾಯೆಂಜಲೂಡಿರಲು ।
ಚೋರನಿವನಹುದೆನುತ ತನ್ನ ಕು
ಮಾರಕನ ಕಂಡಬಲೆ ನಾಚಿ ವಿ
ಚಾರಮತಿ ಮನೆಗ್ವೊದು ಸಲೆ ಬೆದರಿಸಿದಳರ್ಭಕನ ॥ ೨೮೪ ॥

೧೦೩ ರಾಗ ಘಂಟಾರವ—ಜಂಪೆತಾಳ ೨

ಯಶೋದೆ—

ಜೋರತನ । ದಲಿ ಪಾಲು । ಮೊಸರು ಬೆ । ಣ್ಣೆಯ ಮೆಲಲು ।
ಧಾರಿಣೀ । ಪತಿಗಳಿಗೆ । ಧೀರತನ । ವೇನೋ ॥ ೨೮೫ ॥

ಇನಿತು ದಿನ । ಸೈರಿಸಿದೆ । ಈ ಮಾತು । ಗಳ ನಿನ್ನ ।
ಘನತರದಿ । ಶೋಧಿಸಿದೆ । ಗಂಭೀರ । ಗುಣವ ॥ ೨೮೬ ॥

ಕಂಡವರ । ಮನೆಯ ಪಾ । ಲುಂಡು ಮೊಸ । ರ್ಗಳುವುದಕೆ ।
ಪುಂಡುಪೋ । ಕನೆ ನೀನು । ಪುರುಷಾರ್ಥ । ವೇನು ॥ ೨೮೭ ॥

ಬೆಣ್ಣೆ ತು । ಪ್ಪವ ಬೇಡಿ । ಬೇಸರಿಸಿ । ಕಾಡುವರೆ ।
ಉಣ್ಣಲಿ । ಲ್ಲದ ತಿರುಕು । ಳಿಯ ಕೊಟ । ದವನೇ ॥ ೨೮೮ ॥

೧೦೪ ರಾಗ ಕಾಂಭೋಜಿ—ಅಷ್ಟತಾಳ ೩

ತರವೇನೊ ।, ರಂಗ । ತಾಳು ತಾ । ಳೆಲೊ ಪರ ।
ತರುಣಿಯ । ರೊಡನಾಟ । ಬೇಟವೆ । ನಿನಗೆ— ॥ ಪಲ್ಲವಿ ॥

ಸರಿರಾತ್ರೆ । ಯವರ ಮಂ । ದಿರದಿ ದಂ । ಪತಿಗಳು ।
ಸರಸದೊ । ಳಿರಲೊಳ । ಸರಿಯುತ । ಲ್ಲಿ— ॥
ಮರಿಯಾದೆ । ಕೆಟ್ಟು ವ್ಯ । ಮುಟ್ಟಿ ವಂ । ಚಿಸುತವ ।
ರರಿಯದಂ । ತೋಡಿ ಕಾ । ಡುವ ಮಂಗ । ಚೇಷ್ಟೆಯು ॥ ೨೮೯ ॥

ಅನ್ಯರ । ಮನೆಯೊಳ । ಗಡಗಿರಿ । ಸಿದ ಬಾಳೆ ।
ಹಣ್ಣು ಸ । ಕ್ಕರೆ ತುಪ್ಪ । ಗಳ ಮೆಲ್ಲು । ತ—।
ಹೆಣ್ಣು ಮೊ । ಸರ ಕಡೆ । ವಾಗ ಬ । ಲುಮೆಯೊಳು ।
ಬೆನ್ನ ಮೇ । ಲಡರಿ ಜಿಂ । ದುಟಿಯ ಕ । ಚ್ಚುವದಿದು ॥ ೨೯೦ ॥

ಬಚ್ಚಲು । ಮನೆಯೊಳ । ಗಡಗಿರು । ವದಕೆ ನೀ ।
ಹು[1]ಚ್ಚಾದೆ । ಏನೊ ಮಂ । ದಿರವ ಬಿ । ಟ್ಟು[1]— ॥
ಉಚ್ಚೆಯ । ಹ್ಯೊ[2]ವಾಗ । ಬಗ್ಗಿ ನೋ । ಡುತ ಬಲು ।
ಲುಚ್ಚತ । ನದ ಹೇಸಿ । ಗೆಯ ಪೋಕಾ । ಟಂಗಳು[2] ॥ ೨೯೧ ॥

---

1 ಚ್ಚನೆ ದೇವಮಂದಿರದಲ್ಲಿ (ಕಾ)
2 ದದರೊಳಗೆ ಪಿಟ್ಟಿಸುವರೆ । ನಚ್ಚಿಂಥ ಪುಂಡಪೋಕನೆ ಬಾಲರೊಡಗೊಂಡು । (ಕಾ)

ಚೋರರ | ಪಿಡಿದು ಬು | ದ್ಧಿಯ ಹೇಳಿ | ನಡೆಸುವ |
ಧಾರಿಣೀ | ಪತಿಗಳೆ | ನಾವಾಗಿ | ದ್ದು— ||
ಸೇರದ | ನಡತೆಯ | ತೋರಿಸಿ | ಅಪಕೀರ್ತಿ |
ಗೂರಮು | ಕ್ಕಳ ಕರ | ಕೊಂಡು ಪುಂ | ಡೇಳ್ವದು || ೯೨ ||

ಅರಿತವ | ರಂತರಂ | ಗದಿ ನಿನ್ನ | ವರ ಕಣ್ವ |
ಪುರದ ಶ್ರೀ | ಗೋಪಾಲ | ಕೃಷ್ಣನೆಂ | ದು— ||
ಹಿರಿಯಣ್ಣ | ಬಲರಾಮ | ಸುರಗೇಂದ್ರ | ನೆಂಬಂಥ |
ಮರಿಯಾದೆ | ಯಲಿ ಪಾತ | ಕರು ಪೊಗ | ಳುವುದಾಗಿ || ೯೩ ||

೧೦೫ ರಾಗ ಪಂತುವರಾಳಿ—ಮಟ್ಟೆತಾಳ ೪*

ಕೃಷ್ಣ—
ಬೆದರಿ | ಸದಿರು | ಇದಕೆ | ಎನ್ನ | ನು— |, ಗೋ | ಪಮ್ಮ | ನೀನು |
ಚದುರ | ತನದೊ | ಳಿವರು | ಬಂದು | ವಿಧವಿ | ಧದಲಿ | ದೂರ್ವ | ರಿದಕೊ
|| ಪಲ್ಲವಿ ||

ತಡೆಯ | ದೆಂದಿ | ನಂತೆ | ಗೋಪ | ಹುಡುಗ | ರೊಡನೆ | ಗೋವ್ಗ | ಳನ್ನು |
ಹೊಡೆದು | ಕೊಂಡು | ಹೋಗ | ಲ್ಕರೆಯೊ | ಳಡಗಿ | ಎನ್ನ | ಬಾ ಬಾ |ರೆಂದು |
ಕಡುವಿ | ನೋದ | ದಿಂದ | ಕರೆವ | ರು— |, ಮುಂ | ದ್ವರಿಯೆ | ಕೈಯ |
ಪಿಡಿದು | ಒಳಮಂ | ದಿರಕೆ | ಒಯ್ವ | ರು— | ಹಲವು | ಚೇಷ್ಟೆ |
ನಡೆಸಿ | ಉಟ್ಟ | ವಸನ | ಸುಲಿವ | ರು— | ಮಂಚ | ದ ಮೇ ||
ಲಡರಿ | ಸುತಲಿ | ತೊಡೆಯ | ಸಂದಿ | ನೆಡೆಯೊ | ಳೌಕಿ | ಬಹಳ | ಭಂಗ |
ಬಡಿಸಿ | ವಿವಿಧ | ಬೆಡಗು | ತೋರಿ | ನಡೆವ | ರಿವರ | ಕೆಡುಕು | ತನಕೆ
|| ೯೪ ||

---

* ಕೆಲವು ಹಸ್ತಪ್ರತಿಗಳಲ್ಲಿ ೧೦೫ ಮತ್ತು ೧೦೬ ನೇ ಪದ್ಯಗಳಿರುವುದಿಲ್ಲ. ಅದಕ್ಕೆ ಬದಲಾಗಿ ಈ ಕೆಳಗಣ ಕಂದಪದ್ಯವಿರುತ್ತದೆ. ಹಾಗೂ ಒಂದು ಕಾಗದ ಪ್ರತಿಯಲ್ಲಿ ೧೦೫-೧೦೬ ನೇ ಪದ್ಯಗಳ ನಡುವೆ ಈ ಕಂದಪದ್ಯವಿರುತ್ತದೆ. ಓಲೆ ಪ್ರತಿಯಲ್ಲಿ ಇಲ್ಲದಿರುವುದರಿಂದ ಹಾಗೂ ೧೦೬ ನೇ ಪದ್ಯದಲ್ಲಿ ಇದೇ ಮಾತು ಬಂದಿರುವುದರಿಂದ ಈ ಕಂದಪದ್ಯವು ಪ್ರಕ್ಷಿಪ್ತವೆಂದೆಣಿಸಬಹುದು—

ಕಂದ ॥ ಮದಗಜ ಗಮನೆ ಯಶೋದೆಯು
ಬೆದರಿಸಲವನಂಜಿದಂತೆ ಸುಮ್ಮನಿರಲ್ಕಾ
ಮದನಪಿತನ ಮೈದಡವುತ
ವಿಧುಮುಖಿ ಪಾಲ್ಗುಡಿಸಿ ಸಂತವಿಟ್ಟಳು ಮಗನ ॥

ಇರುಳಿ । ನಲ್ಲಿ । ಬೆದರಿ । ಒಳಮಂ । ದಿರವ । ಪೊರಡ,। ದಿರುವ । ನಾನೊಂ ।
ದರಿಯೆ । ನಿವರ । ದಾವಾ । ವೆಡೆಯೊ । ಳಿರುವು । ದೆಂಬ । ತರವಿ । ದೆಲ್ಲ ।
ತಿರುಕ । ನಂತೆ । ತಿರುಗ । ಲರಿವೆ । ನೆ— ।, ಪಾ । ಲ್ಮೊಸರ । ಗಡಿಗೆ ।
ಸುರಿದು । ಬೆಣ್ಣೆ । ಮೆಲುತ । ಬರುವೆ । ನೆ—।—ಬ । ಜ್ಜಲಿನೊ । ಳಡಗೆ ।
ಮರುಳ । ನೇ ನಿ । ನ್ನಗಲಿ । ಇರುವೆ । ನೇ—।—ಬೇ । ಕಾದು । ದೆಲ್ಲ ॥
ನಿರುತ । ಉಣಿಸು । ತಿರುವೆ । ಅದನು । ತೊರೆದು । ಕದ್ದು । ಮೆಲ್ಲ । ಲೇನು ।
ಕೆರೆಯೆ । ಎನ್ನ । ಹೊಟ್ಟೆ । ಏಕೆ । ಜರೆವೆ । ಯವರ । ಬರಿಯ । ನುಡಿಗೆ
॥ ೫೫ ॥

೧೦೬ ರಾಗ ಮಧ್ಯಮಾವತಿ—ಏಕತಾಳ ೩ (ವಿಲಂಬಿತ)

,ಎತ್ತಿ ಆ । ಡಿಸಿದಳು ।,ಚಿತ್ತಜ । ಪಿತನ —।
,ಮುತ್ತಿಟ್ಟು । ಹಾಲ ಕು ।,ಡಿಸಿ ಗುಣ । ಯುತನ—॥
,ಅತ್ತಿತ್ತ । ಪೊಗಗೊಡೆ ।,ನೆನುತ ಮೋ । ಹದಲಿ —।
,ಭಕ್ತವ । ತ್ಸಲ ನಿವ ।,ನೆಂದು ಹಿ । ಗ್ಗುತಲಿ— ॥ ೫೬ ॥

,ಮಗುಗಳ । ಮಾಣಿಕ್ಯ ।,ವಗಲದಿ । ರೆನ್ನ— ।
,ಬಗೆ ಬಗೆ ।ಯಲಿ ಬಂದು ।,ದೂರ್ವರು । ನಿನ್ನ— ॥
,ಮುಗುದೆಯ । ರಿವರೊಳು ।,ನುಡಿಯುವ । ದೇಕೆ —।
,ಸೊಗಸಾಗ । ದಪಯಶ ।, ನಮ್ಮಯ । ಕುಲಕೆ— ॥ ೫೭ ॥

,ನಂದನ । ಪವಡಿಸೆ ।,ನ್ನೊತ್ತಿನೊ । ಳೆಂದು— ।
,ಮಂದಗ । ಮನೆ ಪಾಡಿ ।, ನಿದ್ರಿಸ । ಲಂದು— ॥ ೫೮ ॥

(ಎಲ್ಲರೂ ನಿಷ್ಕ್ರಮಿಸುವರು)

೧೦೭ ರಾಗ ಕೇದಾರಗೌಳ—ಅಷ್ಟತಾಳ ೧

ಕೃಷ್ಣ—

ಮರುದಿನ । ಬೆಳಗಾಗೆ । ಗೋಕುಲ । ದೊಳಗಿರ್ದ ।
ತುರುಗಾವ । ರೊಡನಾಡು । ತ— ॥
ಕರುದನ । ಗಳ ಬಿಟ್ಟು । ಹೊಡೆದು ವೃಂ । ದಾವನಾಂ ।
ತರಕೆ ತಾ । ತೆರಳಿಬಂ । ದ— ॥ ೫೯ ॥
ಕೊಳಲ ಧ್ವ । ನಿಯ ಕೇಳಿ । ತಲೆದೂಗಿ । ಗೋವ್ಗಳ ।
ಬಳಗ ಸಂ । ಗಡ ಓಡು । ತ್ತ— ॥

ಬಳಲಿ ನೀ । ರಡಿಕೆ ಆ । ಹಾರವೆ । ನ್ನದೆ ಸುತ್ತಿ ।
ತೊಳಲಾಡು । ತಿರ್ದರೆ । ಲ್ಲ— ॥ ೩೦೦ ॥

ಫಲಮರಂ । ಗಳ ನೇರಿ । ಪಣ್ಗೊ ನೆ । ಗಳ ನೀರಿಂ ।
ಗಿಳಿದು ಪಂ । ಕಜವ ಕೊ । ಯ್ದು— ॥
ಬಲರಾಮು । ಸಹಿತ ಗೋ । ವಳರೊಡ । ನಾಡುತ್ತ ।
ಗೆಲವಿನಿಂ । ದಿರಲಿತ್ತ । ಲು— ॥ ೩೦೧ ॥

## ಗೋಪಿವಸ್ತ್ರಾಪಹರಣ

೧೦೮ ಕಂದಪದ್ಯ

ಗೋಕುಲದೊಳು ಸುದತಿಯರಾ ।
ಶ್ರೀಕೃಷ್ಣನ ಕಾಣದಿರಲು ಬಲು ಬೇಸರದಿಂ ।
ಏಕಾಂತದಿ ಮಾತಾಡುತ ।
ಶ್ರೀಕಾಂತನ್ಮಗುಣವ ಪೊಗಳುತರಸಿದರಾಗಳ್ ॥ ೩೦೨ ॥

(ಗೋಪಸ್ತ್ರೀಯರ ಪ್ರವೇಶ)

೧೦೯ ರಾಗ ಆಹೇರಿ—ಅಷ್ಟತಾಳ ೨

ಗೋಪಸ್ತ್ರೀಯರು—

ಎಲ್ಲಿಗೆ । ಎದ್ದು ಪೋ । ದ—ಗೋ । ಪಾಲ— ।
ಫುಲ್ಲಲೋ । ಚನ ಪರ । ಮಾತ್ಮ ತಾ । ಮುನಿಸಿನಿಂ ॥ ದೆಲ್ಲಿಗೆ—॥ ಪಲ್ಲವಿ ॥

ಬೆದರಿಸೆ । ತಾಯು ಮಾ । ತಿಗೆ ಕೋ, । ಪಿಸಿಕೊಂಡು ।
ಬದಲೊಂದು । ರಾಜ್ಯವ । ಸೇರಿದ । ನೇನೊ— ॥ ೩೦೩ ॥

ಗಾಡಿಕಾ । ರದ ಮುದ್ದು । ಮೋರೆ ನ । ಟನೆಯಿಂದ ।
ಆಡುತ್ತ । ದಿನ ದಿನ । ಬರುವ ಗೋ । ಪಾಲ— ॥ ೩೦೪ ॥

ಬಲರಾಮು । ಸಹಿತ ಗೋ । ವಳರೊಡ । ಗೊಂಡು ಗೋ ।
ಕುಲದ ಬೀ । ದಿಯೊಳಾಡು । ತ್ತಿರುವ ಕೃ । ಷ್ಣಯ್ಯ— ॥ ೩೦೫ ॥

೧೧೦ ರಾಗ ಆನಂದಭೈರವಿ—ತ್ರಿವುಡೆ ಅಷ್ಟತಾಳ (ವಿಲಂಬಿತ)

ಕಾಣದೆ । ನಿಲಲಾರೆ । ನ್ನೈ—ಗೋ । ಪಾಲಕೃಷ್ಣನ ॥ ಪಲ್ಲವಿ ॥

ಕಾಣದೆ । ನಿಲಲಾರೆ । ಪ್ರಾಣನಾ । ಯಕ ಪಂಚ ।
ಬಾಣಜ । ನಕ ಶ್ರೀ । ವೇಣು ಗೋ । ಪಾಲನ ॥ ಅನುಪಲ್ಲವಿ ॥

ಅಂಬುಜ । ದಳನೇತ್ರ । ನ—ಆ । ಶ್ರಿತನಿಕು ।
ರುಂಬಲಾ । ಳಿತಗಾತ್ರ । ನ—ಸ । ದ್ದಿ ವಿಜಕ ।
ದಂಬಸ । ನ್ನುತಿಪಾತ್ರ । ನ— ॥
ಕಂಬು ಚ । ಕ್ರಾಂಕ ಪೀ । ತಾಂಬರ । ಧರ ದೇವ ।
ಶಂಭುಮಿ । ತ್ರ ಸರ್ವೇಶ । ನೆಂಬ ಶ್ರೀ । ಕೃಷ್ಣನ ॥ ೩೦೬ ॥

ವಿಷದ ಮೊ । ಲೆಯನುಂಡ । ನ—ಮ । ಹಾಂತ ರಾ ।
ಕ್ಷಸಿಯ ಪ್ರಾ । ಣವ ಗೊಂಡ । ನ—ಗೋ । ಕುಲಕೆ ಬಂ ।
ದಸಮು ದೈ । ತ್ಯರ ಕೊಂದ । ನ— ॥
ಮೊಸರು ಬೆ । ಣ್ಣೆಯು ಕದ್ದು । ಮೆದ್ದು ಗೋ । ವಳರ್ಗಿತ್ತು
ಹಸನಾಗಿ । ನಲಿದಾಡು । ತಿರುವ ಚಿ । ಕ್ಕಯ್ಯನ ॥ ೩೦೭ ॥

೧೧೦ ಕಂದಪದ್ಯ

ವಾರಿಜಲೋಚನ ತಾ ನೈ
ದೋರದೆ ವಂಚಿಸಿದ, ನಾವಿದೀಗಲೆ ಯಮುನಾ ।
ತೀರದಿ ಮಳಲಿನ ಗೌರಿಯ
ನಾರಾಧಿಸಿ ಪಡೆವ ಬನ್ನಿರಿಷ್ಟಾರ್ಥಗಳಂ ॥ ೩೦೮ ॥

೧೧೧ ರಾಗ (ಆರೆ ಸವಾಯಿ) ನಾದನಾಮಕ್ರಿಯೆ—ಏಕತಾಳ ೩ (ದ್ರುತ)

ಬಂದರು । ಯಮುನಾ । ನದಿಯೊಳ । ಗೆಲ್ಲರು ।
ಮಿಂದು ಮ । ಡಿಯ ವಸ । ನವನು । ಟ್ಟು— ॥
ಚಂದದಿ । ಮಳಲಿನ । ಗೌರಿಯ । ಮಾಡುತ ।
ಮಂದಗ । ಮನೆಯ । ರ್ಪೊಡಮು । ಟ್ಟು— ॥ ೩೦೯ ॥

ಬರಿಸುತ । ಬ್ರಾಹ್ಮಣ । ದಂಪತಿ । ಗಳನುಪ ।
ಚರಿಸಿ । ಕನಕವ । ಸ್ತ್ರಂಗಳ । ಲಿ— ।
ಪರಿಪರಿ । ಯಲಿ ಪೂ । ಜಿಸಿ ಪಾ । ದಾಂಬುಜ ।
ಕೆರಗುತ । ವರೊಳ । ಪ್ಪಣೆ ಬೇ । ಡಿ— ॥ ೩೧೦ ॥

೧೧೨ ರಾಗ ಮಧ್ಯಮಾವತಿ—ತ್ರಿವುಡೆತಾಳ ೧

ಹಲವು ವಿಧದಲಿ । ನಲಿದು ಪ್ರಾರ್ಥಿಸಿ ।
ಕಲಶಕನ್ನಡಿ । ಧೂಪದಿ— ।
ಫಲಮಹಾನ್ನೈ । ವೇದ್ಯ ಪುಷ್ಪಾಂ । ಜಲಿ ಸುಶೋಭನ । ಘೋಷದಿ— ।
ಪೂಜಿಸಿದರು ॥ ೩೧೧ ॥

ಶರಣು ಸಕಲಾ । ಭೀಷ್ಟದಾಯಕಿ ।
ಶರಣು ತ್ರಿಭುವನ । ಪಾಲಕಿ— ॥
ಶರಣು ಪರ್ವತ । ರಾಜಬಾಲಕಿ । ಶರಣು ವರನೀ । ಲಾಳಕಿ—
ಶರಣು ಶರಣು ॥ ೩೧೨ ॥

ಪಂಕಜಾನನೆ । ಪರಮಪಾವನೆ ।
ಶಂಕರಾರ್ಧಶ । ರೀರಿಣಿ— ।
ಶಂಕಚಕ್ರಗ । ದಾಬ್ಜಪಾಣಿ ಭ । ಯಂಕರೋಂಕಾ । ರಾತ್ಮಕಿ—
ಶರಣು ಶರಣು ॥ ೩೧೩ ॥

ವಚನ ॥ ಇಂತೆಂದು ಬೇರೆ ಬೇರೆ ಪ್ರಾರ್ಥಿಸುತ್ತಾ ಆ ಗೋಕುಲದ ನಾರಿಯರು ದಂಪತಿಗಳಿಗೆ ಬಾಯನದಾನವನ್ನಿತ್ತುಪಚರಿಸಿ ನವರತ್ನದಾರತಿಯನ್ನು ಬೆಳಗಿದರದೆಂತೆನೆ—

೧೧೩ ಡವಳಾರ, ರಾಗ ಆಂಘೋಳಿ—ಅಷ್ಟತಾಳ ೨ ಮತ್ತು ಏಕತಾಳ ೩

ಶ್ರೀ ಗೌ । ರಿಗೆ ಶುಭ । ಶೋಭನ । ವೇ— ।
ನಾಗವೇ ।,ಣಿ ಪ । ದ್ಮಾಂಬಕಿ । ಗೆ— ॥ ಪಲ್ಲವಿ ॥

ಭುವನವ । ನುಂಗುವೆ । ತಾನೆಂ । ದ— ।
ಬವರಕೆ । ಮಹಿಷದಾ । ನವ ಬಂ । ದ— ॥
ವಿವರವ । ತಿಳಿದು ರ । ಣಾಂಗಣ । ದೊಳವನ ।
ಜವನಗ । ರಿಗೆ ಕಳು । ಹಿದವಳಿ । ಗೆ— ॥ ಅನುಪಲ್ಲವಿ ॥

ಇಂದ್ರಾ । ದಿ ಸಕಲ । ದಿವಿಜನು । ತೆ— ।
ಕಂದ । [1]ಪಾರಿಮ । ನೋಮುದಿ । ತೆ[1]— ॥

1 ಪರ್ವೈರಿಯು । ರಾಣಿ ಭವಾನಿಗೆ (ಕಾ)

ಚಂದಿರ । ವದನೆಗೆ । ಚಾರುಚ । ರಿತ್ರೆಗೆ ।
ಸುಂದರ । ರೂಪೆ ಮ । ಹೇಶ್ವರಿ । ಗೆ— ॥ ೩೧೪ ॥

ಧರೆಯೊಳು । ಕೊಲ್ಲಾ । ಪುರದೊಳ । ಗೆ— ।
ಸ್ಥಿರವಾಗಿ । ಭಕ್ತರ । ಪೊರೆವಳಿ । ಗೆ— ॥
ಕರಿಮುಖ । ಜನನಿಗೆ । ಕಲಕೀರ । ವಾಣಿಗೆ ।
ತರುಣಿ ಮು । ಕಾಂಬಿ ಕ । ನಕಬೊಂಬೆ । ಗೆ— ॥ ೩೧೫ ॥

[1]ಗಜಮುಖ । ಜನನಿ ಮ । ಹೇಶ್ವರಿ । ಯೆ— ।
ಭುಜಬಲ । ಯುತೆ [2]ಹಿಮ । ಗಿರಿ[2]ತನ । ಯೆ— ॥
ಭಜಿಸಿದೆ । ವೈ ನಿ । ನ್ನಯ ಪಾ । ದವ ಪಂ ।
ಕಜನಾ । ಭನ ಕರು । ಣಿಸು ನಮು । ಗೆ[1]— ॥ ೩೧೬ ॥

೧೧೪ ರಾಗ ಆಹೇರಿ—ಏಕತಾಳ ೪

ಹೂವ ಕೊ । ಡೇ ಗೌರಿ । ಹೂವ ಕೊ । ಡೆ—ಸತ್ಯ ।
ಭಾವೆಯ ರ । ಮಣನೆಮ್ಮ । ನಾಳುವಾತ । ನಾಗುವಂತೆ ॥ ಪಲ್ಲವಿ ॥

ಎನ್ನಮನ । ದಭೀಷ್ಟಂಗ । ಳನ್ನು ನೀ ಪಾ । ಲಿಸಿದರೆ ।
ಹೊನ್ನಗೋಪು । ರಕ್ಕೆ ಕಲಶ । ವನ್ನು ಸಲಿಸು । ವೆ— ॥
ಚಿನ್ನದ ತೋ । ರಣವ ಕಟ್ಟಿ । ಮುತ್ತಿನ ಚ । ಪ್ಪರವನಿಕ್ಕಿ ।
ಹನ್ನೊಂದು ನವ । ಮಿಯುಪವಾಸ । ವನ್ನು ಮಾಳ್ಪೆ । ನೀ ಬಲಗೈಯ ॥ ೩೧೭ ॥

ಪುಂಡರೀಕ । ನೇತ್ರನೆನ್ನ । ಗಂಡನಾಗಿ । ದ್ದರೆ ನಿನ್ನ ।
ಮಂಡೆಗೆ ರ । ತ್ನದ ಮಕುಟ । ಕೊಂಡಿರಿಸು । ವೆ— ॥
ದುಂಡಮಲ್ಲಿ । ಗೆ ಸುವರ್ಣ । ಕೆಂಡಸಂಪಿ । ಗೆಯ ಮುಡಿಸಿ ।
ಮಂಡಲಾರ್ಧ । ದುಪವಾಸ ಕೈ । ಗೊಂಡು ನಾ ಜಾ । ಗರವ ಮಾಳ್ಪೆ ॥ ೩೧೮ ॥

---

1 ಕಂದ ॥ ಗಜಮುಖಜನನಿ ಮಹೇಶ್ವರಿ
ಭುಬಲಗಿರಿಜಾತೆ ನಿನ್ನ ಮಂಗಲ ಪಾದಾಂ
ಬುಜವ . . . ಸಂಬಿದೆವು ಪಂ
ಕಜಾಕ್ಷೆ ಪತಿಯಾಗುವಂತೆ ಪಾಲಿಸು ವರವಂ ॥ (ಓ)

2 ಗಿರಿರಾಜ (ಕಾ)

೧೧೫ ಕಂದಪದ್ಯ

ಮಾಧವನಾಗಲಿ ಪತಿಯೆಂ
ಬಾ ದೇವಿಯ ಬೀಳುಗೊಂಡು ಮುಂದಲ್ಲಿಂದಂ ।
ಪೋದರು ಯಮುನೆಯ ತಡಿಗಂ
ಕ್ಯೊದರು ವನಕುಂಜದೊಳಗೆ ಫಲಪುಷ್ಪಗಳಂ ॥ ೩೧೯ ॥

೧೧೬ ರಾಗ ದೇಶಿ ಕಾಪಿ—ಅಷ್ಟತಾಳ ೧

ಮಿಂದು ಪೋ । ಗುವನಾವು । ಮನೆಗೆ ।—ಇಲ್ಲಿ ।
ಬಂದು ಬ । ಹಳ ಹೊತ್ತಾ । ಯಿತು [1]ಬಿಸಿ । ಲೊ[1]ಳಗೆ ॥ ಪಲ್ಲವಿ ॥

ಉಟ್ಟ ಸೀ । ರೆಗಳ ಬಿ । ಚ್ಚಿರಿಸಿ ।—ಅಳ ।
ವಟ್ಟ ಕು । ಪ್ಪಸದಿ ಚಿ । ನ್ನಗಳ ಕ । ಟ್ಟಿರಿಸಿ ॥
[2]ಕಟ್ಟಿದ । ಮುಡಿಯ ಸ । ಡಿಲಿಸಿ[2] ।—ನೀರಿ ।
ಗೊಟ್ಟಾಗಿ । ಇಳಿದೀಸಿ । ದರು ಥಡ । ಥಡಿಸಿ ॥ ೩೨೦ ॥

ಕಂಕಣ । ಗಳು ಘಿಲಿ । ರೆನುತ ।—ಗಂಧ ।
ಕುಂಕುಮ । ಪರಿಮಳಂ । ಗಳನು ತೊ । ಳೆಯುತ ॥
ಸೋಂಕಿದ । ಕೆಸರನೊ । ರಸುತ ।—ಹರಿ ।
ಣಾಂಕವ । ದನೆಯರೊ । ಬ್ಬೊಬ್ಬರೆ । ಳೆಯುತ ॥ ೩೨೧ ॥

ಜಲಕ್ರೀಡೆ । ಯೊಳಗಿದ್ದ । ರೆಲ್ಲ ।—ತಂತ ।
ಮ್ಮೊಳಗೊಬ್ಬ । ರೊಬ್ಬರು । ಮುಳುಗೇಳು । ತೆಲ್ಲ— ॥
ನಳಿನದೊ । ಯ್ಯಾರವ್ಮ । ಪೋಲ್ವ ।—ಚೆಲ್ವ ।
ಲಲನೆಯ । ರೆಲ್ಲ ನೋ । ಡಿದ ಸಿರಿ । ನಲ್ಲ— ॥ ೩೨೨ ॥

೧೧೭ ಭಾಮಿನಿಷಟ್ಪದಿ

ಕೃಷ್ಣ—

ಬಾಲೆಯರು ತಮತಮಗೆ ಸೊಗಸಿಲಿ
ಮೇಲೆ ಚೆಲ್ಲುವರುದಕಗಳ ಬಿರು
ಗಾಳಿಯಂದದೊಳಿದ್ದು ಧುಮ್ಮಿಕ್ಕುವರು [3]ಜಲದೊಳಗೆ[3] ।

1 ಜಳದೊ (ಓ, ಕಾ) 2 ಬಟ್ಟಬಲ್ಮೊಲೆಗಳ । ಹೊಳೆಸಿ—(ಕಾ)
3 ದಡದಿಂದ (ಕಾ).

ಆಳ[1]ಸರಿ ಮರನೇ[1]ರಿ ಲಂಘಿಸಿ
[2]ಸೊಳ[2]ನಿಡುತೊಬ್ಬೊಬ್ಬರಳುಕದೆ
ಆಳುವರು ಘಟಿಕಾಪ್ರಮಾಣದೊಳಾ ಜಲಾಂತರದಿ ॥ ೩೨೩ ॥

ಅಡುತಿರಲಾ ಸಮಯದೊಳಗದ
ನೋಡುತಿದ್ದನು ಕೃಷ್ಣನಿವದಿರ
ಕೂಡಲಿದುವೇ ಸಮಯವೆನು[3]ತ್ತೈತಂದನಾ ಕ್ಷಣ[3]ಕೆ ।
ಗಾಡದಿಂದೊಟ್ಟಿದ್ದ ಸೀರೆಯ
ಮೋಡಿಯಿಂದಲಿ ತೆಗೆದು ನಲಿನಲಿ
ದಾಡಿ ಕಡಹದ ಮರವನೇರಿದ ನಿಮಿಷಮಾತ್ರದಲಿ ॥ ೩೨೪ ॥

೧೧೮ ಕಂದಪದ್ಯ

ಸೀರೆಯ ನೊಯ್ದುದ ಕಂಡಾ
ನಾರಿಯರಾರೆಂದು ತಿಳಿಯದಿರೆ ಲಜ್ಜಿಸುತಂ ।
ಘೋರೆಂದೆನುತೆಲ್ಲರು ಬಾ
ಯಾರುತ ಕೂಕೂಕುವೆಂದು ಕೂಗಿದರಾಗಳ್ ॥ ೩೨೫ ॥

೧೧೯ ರಾಗ ಮೋಹನ—ಅಷ್ಟತಾಳ ೨

ಗೋಪಸ್ತ್ರೀಯರು—

ಕುಕ್ಕೊ, । ಕೂ ಎಂದು । ಕೂಗಿಡೆ । ಸತಿಯರು ।
ದಿಕ್ಕೆಲ್ಲ । ಕೇಳಿತು । ಕುಕ್ಕೊ । ಕೂ— ॥
ಅಕ್ಕೊ ಮು । ತ್ತಿಕ್ಕೊ ಮು । ರಕ್ಕೇರ । ದಿರು ಬೊಮ್ಮ ।
ರಕ್ಕಸ । ನೈದನೆ । ಕುಕ್ಕೊ, । ಕೂ— ॥ ೩೨೬ ॥

ಕೊಲುವನು । ದನುಜ ಸಾ । ಯಲುಬೇಡ । ಮರದಿಂದ ।
ಇಳಿಯಯ್ಯ । ಶ್ರೀಕೃಷ್ಣ । ಕುಕ್ಕೊ । ಕೂ— ॥
ಮೆಲುವನು । ಬೇತಾಳ । ಬ್ರಹ್ಮರಾ । ಕ್ಷಸನಿಪ್ಪ ।
ಸ್ಥಳವಯ್ಯ । ಇದು ತಿಳಿ । ಕುಕ್ಕೊ । ಕೂ— ॥ ೩೨೭ ॥

ಸೀರೆಯ । ನೊಯ್ವರೆ । ಶ್ರೀಕೃಷ್ಣ । ನಿನಗಿಂಥ ।
ಚೋರವಿ । ದ್ಯೆಯದೇಕೊ । ಕುಕ್ಕೊ । ಕೂ— ॥

1 ಪರಿಮಪವೇ (ಕಾ) 2 ಸೋಲ (ಕಾ) 3 ತಿಳಿತಂದನಾಸ್ಥಳ (ಕಾ)

ಸೋರೆಯ । ವೊಸರ್ಬೆಣ್ಣೆ । ಸೂರೆಯ । ಮಾಳ್ಪ ವಿ ।
ಚಾರವಿ । ದಲ್ಲಯ್ಯ । ಕುಕ್ಕೂ । ಕೂ— ॥ ೩೭೮ ॥

ಅಂಬರ । ಗಳನೊಯ್ವು । ದುಚಿತವೆ । ನಿನಗೆ ಪೀ ।
ತಾಂಬರ । ಧಾರಿಯೆ । ಕೂಕ್ಕೂ । ಕೂ— ॥
ಶಂಬರ । ವೈರಿಯ । ಜನಕ ಈ । ಬಗೆಯಲ್ಲಿ ।
ಡೊಂಬಿಯೇ । ಉವುಥೆಯ್ಯ । ಕುಕ್ಕೂ । ಕೂ— ॥ ೩೭೯ ॥

ಮನೆ ಮನೆ । ಗೈತಂದು । ಕೆನೆವೊಸ । ರನೆ ತಿಂದು ।
ಜುಣುಗಾಡಿ । ದಂತಲ್ಲ । ಕುಕ್ಕೂ । ಕೂ— ॥
ಮನೆಯವ । ರಿದ ಕೇಳಿ । ದರೆ ನಿನ್ನ । ಎಳೆದ್ಕೊಂದು ।
ದಣಿಸಿ ದಂ । ಡಿಸುವರು । ಕುಕ್ಕೂ । ಕೂ— ॥ ೩೮೦ ॥

ಮತ್ಸ್ಯಕೂ । ರ್ಮ ವರಾಹ । ನರಸಿಂಹ । ನಾದ ಶ್ರೀ ।
ಚಿತ್ರಜ । ನಯ್ಯನೆ । ಕುಕ್ಕೂ । ಕೂ— ॥
ಮತ್ತೆ ವಾ । ಮನನಾದ । ಕ್ಷತ್ರಿಯ । ರನು ಕೊಂದ ।
ಉತ್ತಮ । ರಾಮನೆ । ಕುಕ್ಕೂ । ಕೂ— ॥ ೩೮೧ ॥

ಹೊಡೆದಂಥ । ಮಳೆಗಳ । ದಿನ ಗೋವ । ರ್ಧನವನ್ನು ।
ಕೊಡೆ ಮಾಡಿ । ದವನಿಗೆ । ಕುಕ್ಕೂ । ಕೂ ॥
ಮಡದಿಯ । ವ್ರತವನ್ನು । ಕೆಡಿಸಿ ವಾ । ಜಿಯನೇರಿ ।
ನಡೆದ ನಾ । ರಾಯಣ । ಕುಕ್ಕೂ । ಕೂ— ॥ ೩೮೨ ॥

ವಸನಂಗ । ಳನು ಕದ್ದ । ವಸುದೇವ । ನಣುಗನೆ ।
ವಶವಾದೆ । ವೈ ನಿನ್ನ । ಕುಕ್ಕೂ । ಕೂ— ॥
ವಸುಧೆಯೊ । ಳಗೆ ಕಣ್ವ । ಪುರದ ಗೋ । ಪಾಲನ ।
ಬಿಸರುಹ । ಚರಣಕ್ಕೆ । ಕುಕ್ಕೂ । ಕೂ— ॥ ೩೮೩ ॥

೧೨೦ ಕಂದಪದ್ಯ

ಕೃಷ್ಣ—

ಅಂಬುಜವದನೆಯರಿನಿತತಿ
ಸಂಭ್ರಮದಿಂ ಕೂಗೆ ಕೇಳ್ದು ನಸುನುಗುತಾಗಂ ।

ಶಂಬರಮರ್ದನಪಿತನಂ
ದಂಬುಜವದನೆಯರ ನೋಡಿ ನಗುತಿಂತೆಂದಂ || ೩೩೪ ||

೧೨೧ ರಾಗ ಘರಜು—ಏಕತಾಳ ೩

ಕೃಷ್ಣ—

ಮರುಳು,ಗ | ಳಾದಿರೇ ನಿ | ರೇ, ನೀ, । ವೆಲ್ಲ ಹುಚ್ಚು |
ಮರುಳು,ಗ | ಳಾದಿರೇ ನಿ | ರೆ— ||
ಮರುಳು,ಗ | ಳಾದಿರೇನೆ |,ಕೆರೆಯಲ್ಲಿ | ನಿಂತುಕೊಂಡು |
[1]ತಿರವ,ಳಿ[1] | ದವರಂತೆ |, ಮೊರೆಯಿಟ್ಟು | ಮರುಗುವರೆ || ಪಲ್ಲವಿ ||

ಬ್ರಹ್ಮ—ರ | ಕ್ಕಸ ತಿಂದ | ಡೆಮ್ಮ—ವ | ರಿಗೆ ಕುಂದು |
ಉಮ್ಮ—ಳಿ | ಸುತ ನೀವು | ಸುಮ್ಮ—ನೆ | ಕರೆವುದೇಕೆ || ೩೩೫ ||

ಸತ್ಯ—ವು | ಳ್ಳವರೊಳ್ ನಿ | ಮಿತ್ಯ—ವ | ಕೇಳಿಕೊಳ್ಳಿ |
ಮತ್ತಾ,ವು | ದಕ್ಕೊ ಈಗ | ಚಿತ್ತೈಸಿ | ಮನೆಗೆ ಬೇಗ || ೩೩೬ ||

ಕಾಣ,ಲಿ | ಲ್ಲ ನಾನೆಂದು | ಆಣೆ,ಯ | ಕೊಡುವೆ ನಿಮ್ಮ |
ಜಾಣೆ,ಯ | ರೆನ್ನ ಕಳವ | ಕಾಣಿ—ಸಿ | ಕೊಡಿರೆ ಗೆಲವ || ೩೩೭ ||

ಧರೆಯೊ, ಳು | ಕಣ್ವಪುರದ | ಕರುಣಿ,ಗೋ । ಪಾಲಕೃಷ್ಣನ |
ಬರಿದೆ,ದೂ | ರುವದೇಕೆ | ಮರುಳುಹೆಮ್ಮ | ಕ್ಕಳಿರ ಜೋಕೆ || ೩೩೮ ||

೧೨೨ ರಾಗ ಕಾಂಭೋಜಿ—ಏಕತಾಳ ೪

ಗೋಪಸ್ತ್ರೀಯರು—

ಅರಿಯದೆ ಮೋ | ಸಹೋದೆವು | ಮರಿಯಾದೆ ಕೆ | ಡಿಸದಿರು |
ಅರವಿಂದ ನೇ | ತ್ರ ಬೇಡುವೆವು | ಸೆರಗೊಡ್ಡಿನಿ | ನ್ನ— ||

ಕೃಷ್ಣ—

ಬರಿದೆ ಬೇಡಿ | ಕೊಂಬುದೇನು | ಅರಿಯೆ ನಿಮ್ಮ | ವಸ್ತ್ರಗಳನು |
ತರವಲ್ಲ ನಿ | ಮ್ಮ ಕಣ್ಣಾಣೆ | ತರುಣಿಯರಿ | ರ— || ೩೩೯ ||

ಗೋ—

ಕಾಣಿಸಿಕೊಂ | ಡಂಥದಕ್ಕ | ಆಣೆಭಾಷೆ | ಕೊಡುವ ಠಕ್ಕ |
ಜಾಣತನವ | ಬಿಟ್ಟು ಕೊಡಿಸೊ | ಮಾನವಸ್ತ್ರ | ವ— ||

1 ಶಿರವ ಹ್ಯೊ (ಕಾ)

ಕೃಷ್ಣ—

ಏನನೆಂಬೆ । ನಿಂಥ ನುಡಿಯ । ಮಾನಿನಿಯ । ರೆಂದಮೇಲೆ ।
ಜಾಣೇರು ನೀ । ವೆನ್ನ ಕಳವ । ಕಾಣಿಸಿಕೊಡಿ । ರೆ— ॥ ೩೪೦ ॥

ಗೋ—

ಹಾಸಿಯರಾ । ವಾದೆವಯ್ಯ । ವಸನವ ನೀ । ಡೊ ದಮ್ಮಯ್ಯ ।
ಲೇಸಲ್ಲ ಬಳ । ಲಿಸುವದು ವಿ । ಲಾಸ ಶ್ರೀ ಕೃ । ಷ್ಣ— ॥

ಕೃಷ್ಣ—

ಹಾಸಿಯರಾ । ಗಿರುವದತಿ । ಹೇಸಿಕೆ ನಿಂ । ಮನೆಗಳಲ್ಲಿ ।
ಸಾಸಿರ ಸೀ । ರೆಗಳಿಲ್ಲವೆ । ಏ ಸುದತಿಯ । ರೆ— ॥ ೩೪೧ ॥

ಗೋ—

ಅಂಬುಧಿಯೊ । ಳಾಡುವ ದಿ । ಗಂಬರೆಯ । ರಾವು ಮನೆಗೆ ।
ಬೆಂಬಿಡದೈ । ದುವದೆಂತು । ಅಂಬುಜವದ । ನ— ॥

ಕೃಷ್ಣ—

ಕುಂಭನಿಯೊ । ಳಗಚ್ಚರಿಯ ।ವೆಂಬುದ ಕೇ । ಳ್ದಿವೀಪರಿಯ ।
ರಂಭೆಯರ್ಬ । ತ್ತಲೆವಿಾವ । ಸಂಭ್ರಮೆವುಂ । ಟೆ— ॥ ೩೪೨ ॥

ಗೋ—

ಸೀರೆಗಳ । ಕೊಡದಿದ್ದರೆ । ದೂರುವೆವು । ಗೋಪಿಯೊಡನೆ ।
ಸಾರವಲ್ಲ । ವೆಲವೊ ಕೇಳ್ಳೆ । ನೀರಜನಯ । ನ— ॥

ಕೃಷ್ಣ—

ಊರ ತಳವಾ । ರರೊಳು ದೂರ । ಪೇಳಲವರು । ಎನ್ನ ಸದ್ದಿ ।
ಚಾರವ ಮಾ । ಳ್ಪರು ತೆರಳಿ । ನೀರೆಯರೆ । ಲ್ಲ— ॥ ೩೪೩ ॥

ಗೋ—

ಪಾಳುಮಾಡ । ಬೇಡವಯ್ಯ । ಪೇಳ್ವುದ ಕೇ । ಳ್ವೆವು ದಮ್ಮಯ್ಯ ।
ಕಾಲಿಗೆ ಬೀ । ಳ್ವೆವು ಈಗ । ಪಾಲಿಸೊ ಬೇ । ಗ— ॥

ಕೃಷ್ಣ—

ಕಾಲಿಗೆ ಬೀ । ಳುವದೇಕೆ । ಬಾಲೆಯರೆ ನೀ । ರಿಂದ ನೀವು ।
ಮೇಲೆ ಬನ್ನಿ । ಕೊಡುವೆ ನಿಮ್ಮ । ಸೀರೆಗಳನೆ । ಲ್ಲ— ॥ ೩೪೪ ॥

ಗೋ—

ಎಂದ ಮಾತ । ಕೇಳಿ ಮದನ । ಮಂದಿರವ । ಮರೆಗೊಳ್ಳುತ್ತ ।
ಬಂದರಾಗ । ದಡವೇರಿ ನೀ । ರಿಂದೆಲ್ಲರೆ । ದ್ದು— ॥
ಇಂದಿರೆಯ । ರಮಣ ಕೇಳು । ಇನ್ನಾದರು । ದಯೆಯ ಮಾಡು ।
ಬಂದೆವಲ್ಲ । ದಡವ ಹತ್ತಿ । ಕಂದರ್ಪಜನ । ಕ— ॥ ೩೪೫ ॥

ಕೃಷ್ಣ—

ಬತ್ತ[1]ಲೆ ಕೊಳ । ವಿಳಿದ ಪ್ರಾಯ । ಶ್ಚಿತ್ತವಾಗಿ[1] । ನೀವು ಸುರರ್ಗೆ ।
ಭಕ್ತಿಯಿಂದ । ನಮಿಸಿ ಕೊಡುವೆ । ಸುತ್ತುವಸ್ತ್ರ । ವ— ॥

ಗೋ—

ಮಡದಿಯರು । ತಮ್ಮ ತಮ್ಮ । ಜಡೆಯ ಬಿಚ್ಚಿ । ಪಸರಿಸುತ್ತ ।
ಒಡನೆ ಮುಗಿದ । ರೊಂದೇಕೈಯ । ಬಿಡದೆ ನಾಚು । ತ್ತ— ॥ ೩೪೬ ॥

ಕೃಷ್ಣ—

ಒಂದು ಕೈಯ । ಮುಗಿವರೆ ದೇ । ವೇಂದ್ರಮುಖ್ಯ । ದೇವರ್ಕಳಿಗೆ ।
ಚಂದವಲ್ಲ । ಎರಡು ಕೈಗ । ಳಿಂದ ಮುಗಿಯಿ । ರೆ— ॥ ೩೪೭ ॥

ಗೋ—

ಮಾರನ ಮಂ । ದಿರಕೆ ತೊಡೆಯ । ಸೇರಿಸುತ್ತ । ಮುಚ್ಚಿಕೊಂಡು ।
ಬೇರೆ ಬೇರೆ । ಎರಡು ಕೈಯ । ತೋರಿ ಮುಗಿದ । ರು— ॥

ಕೃಷ್ಣ—

ಧಾರಿಣಿಯೊಳು । ಕಣ್ವಪುರದ । ಶ್ರೀರಂಗ ಗೋ । ಪಾಲನೆಂದ ।
ತೋರಿಸಿ ಸೀ । ರೆಯ ಗುರುತ । ನಾರಿಯರೆ ನಿ । ಮ್ಮ— ॥ ೩೪೮ ॥

೧೨೩ ರಾಗ ಕೇದಾರಗೌಳ—ಅಷ್ಟತಾಳ ೧

ಗೋ—

ಅಂಗಜ । ಜನಕ ಕೇ । ಳಾನುಟ್ಟ । ಸೀರೆ ಕು ।
ರಂಗ[2]ಶಾ । ವಕದ[2] ಬ । ಣ್ಣ— ॥
ಹೊಂಗೇದ । ಗೆ[3]ಸಳಿನ । ತರ[3]ಕುಪ್ಪ । ಸವ ದೇವೋ ।
ತ್ತುಂಗನೀ । ದಯಮಾ, । ಡೊ— ॥ ೩೪೯ ॥

ಇಂದ್ರಾದಿ । ಗುರುಸೇವ್ಯ । ಇಭರಾಜ । ವರದ ಶ್ರೀ ।
ಚಂದ್ರಶೇ । ಖರನ ಪ್ರಿ । ಯ— ॥
ಚಂದ್ರಕಾ । ವಿಯ ಸೀರೆ । ಚಂದದ । ರವಕೆ ಗೋ ।
ವಿಂದ ನೀ । ದಯವ ಮಾ । ಡೊ— ॥ ೩೫೦ ॥

ನಗಧರ । ನಾರಾ, । ಯಣ ದೇವ । ನಾನುಟ್ಟ ।
ಪಗಡೆಬ । ಣ್ಣದು ಪಾಲಿ । ಸೊ— ॥ ೩೫೧ ॥

---

1 ಉದಕಕಿಳಿದುದಕೆ ಪ್ರಾಯಶ್ಚಿತ್ತವುಂಟು (ಕಾ) 2 ಲೋಚನ (ಕಾ)
3 ಗೆರಕವಾಗಿರುವ (ಕಾ)

ಶ್ರೀಲೋಲ । ಪರಮ ಕೃಪಾಳು । ದಾ । ನವ ಶಿಶು ।
ಪಾಲಮ । ರ್ದನನೆ ಬೇ । ಗ— ॥
ಶಾಲೆಯ । ದಕೊ ಬಲ । ಗಡೆಯೊಳ । ಗಿಹು[1]ದು ಗೋ ।
ಪಾಲ ನೀ । ದಯೆಪಾಲಿ । ಸೊ[1]— ॥ ೩೫೨ ॥

೧೨೪ ರಾಗ ಆನಂದಭೈರವಿ—ಅಷ್ಟತಾಳ ೧

ಪನ್ನಗಾರಿ । ಧ್ವಜನೆ ಕೇ । ಳೆನ್ನ ವಸ್ತ್ರ । ದಂದವನ್ನು ।
ಸ್ವರ್ಣದ ರೇ । ಖೆ ಸುತ್ತಲು । ಮೆರೆವುದು ।—ಮಿಂಚು । ತಿರುವುದು ॥ ೩೫೩ ॥

ಹಳ್ಳಿಯವ । [2]ಳ[2]ಲ್ಲ ನಾನು । [3]ಹರ್ಷದಿಂದ । ಉ[3]ಟ್ಟಂಥಾದ್ದು ।
ಬೆಳ್ಳಿಯ ಕಂ । ಬಿಯ ಸೀರೆ । ಲಾಲಿಸೊ ।—ಬೇಗ । ಪಾಲಿಸೊ ॥ ೩೫೪ ॥

ಅಚ್ಯುತಾನಂ । ತ ಗೋವಿಂದ । ಅರಮನೆ । ಯೊಳಗಿಂದ ।
ಮೆಚ್ಚಿ,ಕೊ । ಟ್ಟಂಥ ಸೀರೆ । ತೋರಯ್ಯ ।—ಕೈಯೊಳ್ । ತಾರಯ್ಯ ॥ ೩೫೫ ॥

ಬಾಲೆಯರ । ನೆಲ್ಲ ಕರೆದು । ಶಾಲೆಗಳ । ಕೊಟ್ಟನರಿದು ।
ಲೀಲೆಯಿಂದ । ಉಟ್ಟುಕೊಂಡು । ಮೆರೆದರು ।—ಸುಖ । ಪಡೆದರು ॥ ೩೫೬ ॥

ಭಾಳ ಹೊ । ತ್ತಾಯಿತಿಂದು । ಜಲದೊಳಾ । ಡುತ ನಿಂದು ।
ತಾಳಿದರೆ । ಬೈವರೆಮ್ಮ । ಹಿರಿಯರು ।—ಮನೆ । ಕಿರಿಯರು ॥ ೩೫೭ ॥

ಕೃಷ್ಣ—
ಮರದ ಮೇಲಿಂ । ದಿಳಿದು ಕಣ್ವ । ಪುರದ ಶ್ರೀ ಗೋ । ಪಾಲಕೃಷ್ಣ ।
ನೆರೆದ ಗೊಲ್ಲ । ಹೆಂಗಳೆಲ್ಲ । ನೋಡಿದ ।—ಒಡ । ಗೂಡಿದ ॥ ೩೫೮ ॥

೧೨೫ ವಾರ್ಧಿಕಷಟ್ಪದಿ

ಹರಿಯು ಈ ತೆರದಿ ಯಮುನಾನದಿಯ ತೀರದೊಳು
ತರುಣಿಯರನೊಡಗೂಡಿ ಸಂಗಡವೆ ಗೋಕುಲಕೆ
ತೆರಳಿ ನಡೆತಂದು ಸುಖದಿಂದಿರ್ದನೆಂಬಲ್ಲಿ ಸಂಧಿ ಸಂಪೂರ್ಣವಾಯ್ತು ।
ಅರಿತು ಪೇಳುವ ಕೇಳ್ವ ಪುಣ್ಯವಂತರ ಸಕಲ
ದುರಿತಮಂ ಪರಿಹರಿಸಿ ಕರುಣದಿಂ ಕಣ್ವಪುರ
ವರದ ಶ್ರೀ ಗೋಪಾಲಕೃಷ್ಣ ರಾಧಾರಮಣ ಪಾಲಿಸುವನನುಗಾಲವೂ ॥ ೩೫೯ ॥

---

1 ದದ ಪಾಲಿಸೊ ಪರಮ ಕೃಪಾಳು (ಕಾ) 2 ಳಂತ (ಕಾ) 3 ಪೌರುಷದಿಂದು (ಕಾ)

# ಐರಾವತ

## ಪ್ರಸಂಗದ ಕಥಾಸಾರ

ಪಾಂಡುಪುತ್ರರನ್ನು ಇಂದ್ರಪ್ರಸ್ಥದಲ್ಲಿ ನೆಲೆಗೊಳಿಸಿ ಧೃತರಾಷ್ಟ್ರನು ತನ್ನ ನೂರೊಂದು ಮಕ್ಕಳೊಡನೆ ಹಸ್ತಿನಾಪುರದಲ್ಲಿ ಆಳುತ್ತಿರಲಾಗಿ ಒಂದಾನೊಂದು ದಿನ ವೇದವ್ಯಾಸ ಮಹರ್ಷಿಯು ಧೃತರಾಷ್ಟ್ರನಲ್ಲಿಗೆ ಬಂದು ಗಾಂಧಾರಿಯೊಡನೆ, ಮಣ್ಣಿನಾನೆಯನ್ನು ಮಾಡಿ ಗಜಗೌರೀ ಪೂಜಾವ್ರತವನ್ನಾಚರಿಸುವುದು ಶ್ರೇಯಸ್ಕರವೆಂದು ಉಪದೇಶಿಸುತ್ತಾನೆ. ಆ ಪ್ರಕಾರ ಕೌರವರಲ್ಲಿ ಮಹಾ ಸಂಭ್ರಮದಿಂದ 'ಗಜನೋಹಿ' ನಡೆಯಿತೆಂಬ ವರ್ತಮಾನವು, ಅಲ್ಲಿಂದ ದಾನ ದಕ್ಷಿಣೆಗಳನ್ನು ಸ್ವೀಕರಿಸಿ ಹಿಂದಿರುಗಿಬರುತ್ತಿದ್ದ ವಿಪ್ರರ ಮುಖದಿಂದ ಪಾಂಡವರ ತಾಯಿಯಾದ ಕುಂತೀದೇವಿಗೆ ತಿಳಿದುಬರುವುದು. ಈ ಸಮಾರಂಭಕ್ಕೆ ಗಾಂಧಾರಿಯು ತನ್ನನ್ನು ಕರೆಯದೆ ಅವಮಾನಿಸಿದಳೆಂದು ಕುಂತಿಯು ತೀವ್ರವಾದ ಮನೋವೇದನೆಯಿಂದ ಪರಿತಪಿಸುವಳು. ತಾಯಿಯ ಮರುಕವನ್ನು ಕಂಡ ಅರ್ಜುನನು, ಕೌರವರು ಮಾಡಿದ ಈ ಅವಮಾನಕ್ಕೆ ಪ್ರತಿಯಾಗಿ ಇಂದ್ರನ ಐರಾವತವನ್ನೇ ಭೂಮಿಗಿಳಿಸಿ ಕುಂತಿಯ ಕೈಯಿಂದ ಪ್ರತ್ಯಕ್ಷ ಗಜನೋಹಿಯನ್ನು ಮಾಡಿಸುವೆನೆಂದು ಪ್ರತಿಜ್ಞೆಮಾಡುವುದಲ್ಲದೆ, ಕಾಮಧೇನು ಕಲ್ಪವೃಕ್ಷ ಸಮೇತವಾಗಿ ಸುರಗಜವನ್ನು ಕಳುಹಿಸಿಕೊಡಬೇಕೆಂದೂ, ತಪ್ಪಿದರೆ ದೇವಲೋಕವನ್ನೇ ತಾನು ಉಳಿಯಗೊಡೆನೆಂದೂ ತಂದೆಯಾದ ದೇವೇಂದ್ರನಿಗೆ ಬಾಣಮುಖೇನ ಪತ್ರಲೇಖವನ್ನು ಕಳುಹಿಸುವನು.

ಅರ್ಜುನನು ಗರ್ವದಿಂದ ಬರೆದ ಈ ಪತ್ರವನ್ನು ನೋಡಿ ದೇವೇಂದ್ರನು ಪ್ರಥಮತಃ ಕುಪಿತನಾದರೂ, ನಾರದಮುನಿ ಬಂದು ಬೋಧಿಸಿದ ಮೇಲೆ ಶಾಂತನಾಗಿ ಪರಿವಾರಸಹಿತ ಗಜೇಂದ್ರನನ್ನು ಕಳುಹಿಸಲು ಸಮ್ಮತಿಸುತ್ತಾನೆ. ಮತ್ತು ಆನೆಯು ಇಳಿದುಬರಲು ಸ್ವರ್ಗದಿಂದ ಭೂಮಿಗೆ ದಾರಿಮಾಡಿಕೊಡುವಂತೆ ಅರ್ಜುನನಿಗೆ ಮಾರುತ್ತರವನ್ನು ಬರೆದುಕಳುಹಿಸುತ್ತಾನೆ. ಆ ಪ್ರಕಾರ ದಾರಿಮಾಡುವುದಕ್ಕೆ ಉಪಾಯ ಕಾಣದ ಅರ್ಜುನನು ದ್ವಾರಾವತಿಗೆ ಹೋಗಿ ಶ್ರೀಕೃಷ್ಣನನ್ನು ಮರೆಹೊಕ್ಕು ಬೇಡಿಕೊಳ್ಳುತ್ತಾನೆ. ಕೃಷ್ಣಪರಮಾತ್ಮನು ಅರ್ಜುನನೊಡನೆ ಇಂದ್ರಪ್ರಸ್ಥಕ್ಕೆ ದಯಮಾಡಿಸಿ, ಶರಸಂಧಾನದ ಮೂಲಕ ಆಕಾಶದಲ್ಲಿ ಸೋಪಾನಮಾರ್ಗವನ್ನು ರಚಿಸುವ ಉಪಾಯವನ್ನು ಅನುಗ್ರಹಿಸುತ್ತಾನೆ. ಅದರಂತೆ ಅರ್ಜುನನು ರಚಿಸಿದ 'ಅಂಬರಪಥ'ದಲ್ಲಿ, ದೇವಲೋಕದ ಸಕಲ ವಸ್ತುವೈಭವಗಳೊಂದಿಗೆ ರಂಭೆ ಊರ್ವಶ್ಯಾದಿ ಸುರಸುಂದರಿಯರೇರಿದ ದೇವೇಂದ್ರನ ಮದ್ದಾನೆಯು ಇಂದ್ರಪ್ರಸ್ಥಕ್ಕೆ ಇಳಿದುಬರುವುದು.

ಹೀಗೆ ಅರ್ಜುನನು ಪಂಥಪೌರುಷದಿಂದ ಧರೆಗಿಳಿಸಿದ ದಿವ್ಯಗಜದ ಪೂಜಾ ಸಮಾರಂಭಕ್ಕೆ ಕೌರವರನ್ನೂ ಕರೆಯಬೇಕೆಂದು ಪಿತಾಮಹನಾದ ಭೀಷ್ಮನು ಹೇಳಿದ ಹಿತೋಕ್ತಿಯಂತೆ ಧರ್ಮರಾಯನು ಧೃತರಾಷ್ಟ್ರಭೂಪತಿಯನ್ನೂ, ಭೀಮನು ಕೌರವನನ್ನೂ ಕರೆದುಬರಲು ತೆರಳುತ್ತಾರೆ. ಕೌರವನು ಭೀಮನನ್ನು ಜರೆದಾಡಿ ಹಿಂದೆ ಕಳುಹಿಸುತ್ತಾನೆ. ಗಾಂಧಾರಿಯನ್ನು ಕರೆಯಲು ಕುಂತಿ ಹೋದಾಗ ಅವರಿಬ್ಬರೊಳಗೆ ಮತ್ಸರದ ಕಿಡಿ ಮಸಗಿ, ಮಾತಿನ ಖಾಡಾಖಾಡಿಯಾಗುವುದು. ಗಾಂಧಾರಿಯು ಕರೆಯನ್ನು ತಿರಸ್ಕರಿಸಲು ಕುಂತಿಯು ಸೇಡಿನಿಂದ ಹಿಂತಿರುಗಿಬಂದು ಅತ್ಯಂತ ವೈಭವದಿಂದ ಗಜಪೂಜೆಯನ್ನು ಮಾಡುತ್ತಾಳೆ. ಅದಾಗಲಾ ನಾನಾ ದೇಶದಿಂದ ಬಂದ ಭೂಸುರರು ಹೇರಾಳ ದಾನ ದಕ್ಷಿಣೆಗಳನ್ನು ಪಡೆದು ಪಾಂಡವರನ್ನು ಕೊಂಡಾಡುತ್ತಿರಲು, ಸುರನರ್ತಕಿಯರ ನಾಟ್ಯದೊಂದಿಗೆ ಬಹಳ ಸಂಭ್ರಮದಿಂದ ಗಜರಾಜನ ಮೆರವಣಿಗೆಯಾಗುವುದು. ತದನಂತರ ಪಾಂಡವರು, ಇದಕ್ಕೆಲ್ಲ ಕಾರಣಕರ್ತೃವಾದ ಶ್ರೀಕೃಷ್ಣಪರಮಾತ್ಮನನ್ನು ಪೂಜಿಸಿ ಸನ್ಮಾನಿಸುವುದರೊಂದಿಗೆ, 'ಗಜನೋಹಿ' ಎಂದೂ ಕರೆಯಲ್ಪಡುವ ಈ 'ಐರಾವತ ಪ್ರಸಂಗ'ಕ್ಕೆ ಮಂಗಳವಾಗುವುದು.

## ಮುಖ್ಯ ಪ್ರಕರಣಗಳು

ಗಾಂಧಾರಿಯ ಗಜನೋಹಿ
ಕುಂತಿಯ ಸಂತಾಪ
ಅರ್ಜುನನ ಪಂಥ
ಇಂದ್ರನ ಅನುಗ್ರಹ
ಗಜಪೂಜೆಯ ಸನ್ನಾಹ
ಶ್ರೀಕೃಷ್ಣನ ಸಮಾಗಮನ
ಐರಾವತದ ಅವತರಣ
ಕುಂತೀಗಾಂಧಾರೀಸಂವಾದ
ಕುಂತಿಯ ಗಜಗೌರೀಪೂಜೆ

## ಭೂಮಿಕೆಗಳು

ಧೃತರಾಷ್ಟ್ರ
ಕೌರವಾದಿಗಳು
ವ್ಯಾಸ
ಪಂಚಪಾಂಡವರು
ದೇವೇಂದ್ರ
ನಾರದಮುನಿ
ಇಂದ್ರನ ಗಜಪಾಲಕ
ಖಚರ (ದೇವದೂತ)
ಬ್ರಾಹ್ಮಣರು
ಶ್ರೀಕೃಷ್ಣ
ಸಾತ್ಯಕಿ
ಚಾರಕರು
ಗಾಂಧಾರಿ
ಕುಂತಿ
ದೇವಸ್ತ್ರೀಯರು
ಅಷ್ಟಮಸ್ತ್ರೀಯರು

ಐರಾವತ

## ಗಾಂಧಾರಿಯ ಗಜನೋಂಪಿ

೧ ರಾಗ ನಾಟಿ—ತ್ರಿವುಡೆ ತಾಳ ೧

ಶರಣು ಶರಣು ಸ । ದಾ,ಶಿವಸುತ । ಶರಣು ಸುರಗಣ । ಸೇವಿತ— ।
ಶರಣು ಸಕಲಾ । ಭೀಷ್ಟದಾಯಕ । ಶರಣು ಶ್ರೀ ಗಣ । ನಾಯಕ— ॥
ಶರಣು ಶರಣು ॥ ೧ ॥

ಕರಿವರದ ಕನು । ನೀಯರೂಪನೆ । ಕರುಣನಿಧಿ ಸುಪ್ರ । ತಾಪನೆ— ।
ಪರಮಪಾವನ । ಪಂಕಜೇಕ್ಷಣ । ನಿರತ ಭಕ್ತಾ್ಯ । ಪೇಕ್ಷಣ— ।
ಶರಣು ಶರಣು ॥ ೨ ॥

ಹೇಮಖಚಿತ ಕಿ । ರೀಟ ಕುಂಡಲ । ಕಾಮಿತ,ಫಲ । ದಾಯಕ— ।
ಭೀಮಬಲ ಹೇ । ರಂಬ ಪುಣ್ಯಾಸು । ನಾಮ ವಿದ್ಯಾ । ಶರನಿಧಿ— ।
ಶರಣು ಶರಣು ॥ ೩ ॥

ಪಾಶ ಮೋದಕ । ಪರಶುಧರ ಫಣಿ । ಭೂಷ ಪಾರ್ವತಿ । ನಂದನ— ।
ವಾಸವಾರ್ಚಿತ । ವರದ ಮಧುಪುರ । ವಾಸ ಶ್ರೀ ಗಣ । ನಾಯಕ— ।
ಶರಣು ಶರಣು ॥ ೪ ॥

೨ ವಾರ್ಧಿಕಷಟ್ಪದಿ

ಈ ರೀತಿಯಿಂದಿಷ್ಟದೇವತೆಗೆ ನಮಿಸಿನಿಂ
ದೋರಂತೆ ಸಕಲ ಸುರರಿಂಗೆ ತಲೆವಾಗಿ ಸಿರಿ
ಶಾರದೆಯ ಕೊಂಡಾಡಿ ಹಿರಿಯರಿಂಗೆರಗಿ ಗಂಧರ್ವರಿಗೆ ಕಯ್ಯಮುಗಿದು ।
ಭಾರತಾಮೃತಶರಧಿಯೆಂಬ ಕಥೆಯೊಳಗೆ ವಿ
ಸ್ತಾರವಾಗಿರುವ ಐರಾವತಪ್ರಸಂಗವನು
ಧಾರಿಣಿಯೊಳರಿವಂತೆ ವರ್ಣಿಸುವೆ ಕಣ್ವಪುರಕೃಷ್ಣನ ಕಟಾಕ್ಷದಿಂದ ॥ ೫ ॥

೩ ರಾಗ ಸೌರಾಷ್ಟ—ತ್ರಿವುಡೆ ತಾಳ ೨

ಪ್ರೀಯದಲಿ ವ । ರ್ಣಿಸಿದ ವೈಶಂ ।
ಪಾಯಮುನಿ ಭಾ । ರತದ ಕಥೆಯನು ।
ರಾಯ ಜನಮೇ । ಜಯಗೆ ಚತುರೋ । ಪಾಯದಿಂದ ॥ ೬ ॥

ಒಂದು ದಿನ ಭೂ । ಪಾಲ ಮುನಿಪಗೆ ।
ವಂದಿಸುತ ಬೆಸ । ಗೊಂಡನರ್ಜುನ ।
ಇಂದ್ರನಾನೆಯ । ಮಾತೆಗೋಸುಗ । ತಂದನೆಂಬ ॥ ೭ ॥

ಅಂದಿನಾಗಮ । ವೇನೆನುವದೆನ ।
ಗಿಂದು ವರ್ಣಿಸ । ಬೇಕೆನಲು ಮುನಿ ।
ಮಂದಹಾಸದಿ । ನೃಪನ ಪೊಗಳು । ತ್ತೆಂದನಾಗ ॥ ೮ ॥

ಕೇಳು ಜನಮೇ । ಜಯ ಧರಿತ್ರೀ ।
ಪಾಲ ಪಾಂಡವ । ಕೌರವಾದ್ಯರು ।
ಬಾಲಕೇಳಿಯೊ । ಳಾಡುತಿರ್ದರು । ಲೀಲೆಯಿಂದ ॥ ೯ ॥

ಹಸ್ತಿನಾಪುರ । ದರಸ ಕೌರವ ।
ರಿತ್ತ ಪಾಂಡುಕು । ಮಾರರಿಂದ್ರ ।
ಪ್ರಸ್ಥಪುರದೊಳ । ಗಿರಲು ದಿನದಿನ । ಉತ್ಸವದೊಳು ॥ ೧೦ ॥

ನಿತ್ಯದೊಳು ಗಾಂ । ಧಾರಿ ಕುಂತಿಗೆ ।
ಮತ್ಸರದ ಬೆಳೆ । [1]ಬಿತ್ತಿ[1] ಬೆಳೆದುದು ।
ಚಿತ್ತದಲಿ ದಾ । ಯಾದ್ಯ ಪಾಲಿನ । ಕೃತ್ಯದಿಂದ ॥ ೧೧ ॥

ಒಂದು ದಿನ ಧೃತ । ರಾಷ್ಟ್ರನರಮನೆ ।
ಗೆಂದು ವೇದ । ವ್ಯಾಸಮುನಿ ನಡೆ ।
ತಂದನೆಂಬುದ । ಕೇಳ್ದು ನೃಪನಾ । ಸಂದದಿಂದ ॥ ೧೨ ॥

(ಧೃತರಾಷ್ಟ್ರನ ಒಡ್ಡೋಲಗ, ವೇದವ್ಯಾಸನ ಪ್ರವೇಶ)

೪ ಸಾಂಗತ್ಯ ; ರಾಗ ಪಂತುವರಾಳಿ—ರೂಪಕತಾಳ ೧

ಧೃತರಾಷ್ಟ್ರ—
ಬಂದ ಮು । ನಿಯನಿದಿ । ರ್ಗೊಂಡು ಕ । ರೆದು ತನ್ನ ।
ಮಂದಿರ । ಕೊಯ್ದು ಪ । ಚರಿಸಿ ॥
ಗಾಂಧಾರಿ । ಸಹಿತಂದು । ನೃಪ ತಲೆ । ವಾಗುತ್ತಿಂ ।
ತ್ತೆಂದು ಪೇ । ಳಿದ ಮುನಿ । ಯೊಡನೆ ॥ ೧೩ ॥

---

1 ಪುತ್ತೆ (ಕಾ)

ಮುನಿ ನಿಮ್ಮ | ಪಾದದ | ರ್ಶನವಾದ | ರಿಂದ ಪಾ |
ವನರಾದ | ರೆಮ್ಮ ಪೂ | ರ್ವಜರು ||
ಘನಭಾಗ್ಯ | ನಾನಾದೆ | ನೆಂದು ಪೂ | ಜಿಸಿ ಪಾದ |
ವನಜತೀ | ರ್ಥವ ಧರಿ | ಸಿದನು || ೧೪ ||

ಯೋಗೀಂದ್ರ | ನೀವಿತ್ತ | ಲಾಗಿ ಚಿ | ತ್ತೈಸಿದ |
ಆಗಮವ | ರುಹಬೇ | ಕೆಂದು ||
ರಾಗದಿಂ | ದಲಿ ಸತಿ | ಸಹಿತ ವಂ | ದಿಸೆ ದಯಾ |
ಸಾಗರ | ನೊಲಿದು ವ | ರ್ಣಿಸಿದ || ೧೫ ||

೫ ರಾಗ ಕಾಂಭೋಜಿ—ಏಕತಾಳ ೪, ತಿಶ್ರತ್ರೈ

ವ್ಯಾಸ—

ಸೋಮಕುಲೋ | ದ್ಭವನೆ ಬಹುನಿ | ಸ್ಸೀಮ ಜಯ | ವಂತ ನಿನ್ನ |
ನಾಮದುಚ್ಚಾ | ರಣೆಯ ಕೇಳಿ | ಕಾಮಿಸಿ ಬಂ | ದೆ— ||
ಭೂಮಿಪಾಲ | ವರ್ಗಕ್ಕೆಲ್ಲ | ಕ್ಷೇಮವಾಗಿ | ರುವದೊಂದು |
ನೇಮವುಂಟು | ಪೇಳ್ವೆ ನಿನ್ನ | ಕಾಮಿನಿಯೊ | ಳು— || ೧೬ ||

ಇತ್ತ ಕೇಳ | ವ್ವ ಗಾಂಧಾರಿ | ಮೃತ್ತಿಕೆಯಾ | ನೆಯ ಮಾಡಿ |
ಉತ್ತಮ ಗ | ಜನೋಹಿಯ | ಅರ್ತಿಯಿಂ ಮಾ | ಡು— ||
ಮತ್ತೆ ದೇವ | ರ್ಕಳಿಗೆಲ್ಲ | ತೃಪ್ತಿಕರ | ವೆನ್ನ ಸೊಲ್ಲ |
ಸತ್ಯವೆಂದು | ನಂಬು ಬಾಲೆ | ಉತ್ತಮಶೀ | ಲೆ— || ೧೭ ||

(ವ್ಯಾಸನ ನಿಷ್ಕ್ರಮಣ)

೬ ರಾಗ ಘಂಟಾರವ—ಜಂಪೆತಾಳ ೨

ಎಂದು ವೇ | ದವ್ಯಾಸ | ಮಂದಿರವ | ಬೀಳ್ಕೊಂಡು |
ಬಂದನಾ | ಶ್ರಮಕಾಗಿ | ಬಾದರಾ | ಯಣನು || ೧೮ ||

ಪೋಗಲಾ | ಮುನಿಯತ್ತ | ಲಾಗಿ ಗಾಂ | ಧಾರಿ ಅತಿ |
ಬೇಗದಲಿ | ಕರೆಸಿದಳು | ತನ್ನ ಬಾ | ಲಕರ || ೧೯ ||

(ಕೌರವಾದಿಗಳ ಪ್ರವೇಶ)

ಗಾಂಧಾರಿ—

ಪುತ್ರರಿರ | ಕೇಳಿರೈ | ಪುಣ್ಯಋಷಿ | ವಚನವಿದು |
ಮೃತ್ತಿಕೆಯ | ಗಜನೋಹಿ | ಮಾಡಬೇ | ಕೆನಗೆ || ೨೦ ||

ಅದಕೆ ಬೇ । ಕಾದಂಥ । ಅನುಕೂಲ । ಮಾಡಿರೆಂ ।
ಬುದ ಕೇಳ್ದು । ಪೌರೋಹಿ । ತರನೆಲ್ಲ । ಕರೆಸಿ ॥ ೨೧ ॥
ಶಾಸ್ತ್ರವಿಧಿ । ಗಳ ತಿಳಿದು । ಚಿತ್ರಿಕರ । ಕೈಯಿಂದ ।
ಹಸ್ತಿಯನು । ಮಾಡಿಸಿದ । ರುತ್ಸಾಹ । ದಿಂದ ॥ ೨೨ ॥

೭ ರಾಗ ದೇಶಿ (ಕಾಪಿ)—ಅಷ್ಟತಾಳ ೧

ಅಗೆದು ತಂ । ದರು ಮಣ್ಣ । ನೋಡಿ— ।—ಬಹು ।
[1]ಲಗು[1]ಬಗೆ । ಯಿಂದ ಕೌ । ರವರೊ[2]ಂದು[2] । ಗೂಡಿ— ॥ ಪಲ್ಲವಿ ॥
ಬಂಡಿ ಬಂ । ಡಿಯ ಮೇಲೆ । ಹೇರಿ— । — ತಮ್ಮ ।
ಮಂಡೆಯ । ಮೇಲೆ [3]ಬ[3] । ಟ್ಟೆಯೊಳ್ತುಂಬಿ । ತೂರಿ— ॥
ತಂಡ ತಂ । ಡದಿ ಭಾರ । ಭಾರಿ— । —ಮೇಘ ।
ಮಂಡಲ । ಪರ್ಯಂತ । ಬೆಳೆದುದು । ಬ್ಬೇರಿ ॥ ೨೩ ॥
ಹಿಂದೆ ನಿಂ । ದವರ ಜೆ । ನ್ನಟ್ಟಿ— । —ಹಿಡಿ ।
ತಂದು ಮೃ । ತ್ತಿಕೆ ಮುದ್ದೆ । ಗಳ ತುಂಬಿ । ಬಟ್ಟ— ॥
ಚಂದದಿ । ಹೊರಿಸಿ ತಂ । ದೊಟ್ಟ— । —ಜನ ।
ಸಂದಣಿ । ನಲಿದಾಡಿ । ಮಾಡಿ[4]ದರ್[4] । ಬಿಟ್ಟ— ॥ ೨೪ ॥
ತರಿಸಿ ಮ । ಣ್ಣಿನ ಆನೆ । ಮಾಡಿ— ।.—ಸಮ ।
ಸ್ಮರಿಸಿ 'ಗಾಂ । ಧಾರಿ' ಯೆ । ನ್ನುತ ಮಾತ । ನಾಡಿ— ॥
ಸುರಪನಾ । ನೆಗೆ ಸರಿ । ಮಾಡಿ— । —ಈ ।
ಪರಿ ಗಜ । ವಿರಚಿಸಿ । ದವರ ಕೊಂ । ಡಾಡಿ ॥ ೨೫ ॥

೮ ದ್ವಿಪದಿ

ಕೌರವ—

ಕಡುಚೆಲುವಿನಾನೆಯನು ಕೌರವನು ನೋಡಿ ।
ಉಡುಗೊರೆಯ ಕೊಡಿಸಿದನು ಉಚಿತಗಳ ಮಾಡಿ ॥ ೨೬ ॥
ಪಟ್ಟೆಪೀತಾಂಬರವ ಪರಮ ವಿಧವಿಧದ ।
ಪಟ್ಟಣದೊಳೆಲ್ಲ ಮೇಲ್ಗಟ್ಟು ಕಟ್ಟಿಸಿದ ॥ ೨೭ ॥

---

1 ಬಗೆ (ಕಾ) 2 ಟ್ಟು (ಕಾ, ಅ) 3 ಬು (ಕಾ, ಅ) 4 'ತು' (ಓ, ಕಾ)

ಬಣ್ಣಗಳ ಮನೆಮನೆಗೆ ಬರೆಸಿ ಪೌಳಿಗಳ ।
ಚಿನ್ನದಲಿ ರಚಿಸಿದರು ಚಿತ್ರಬೊಂಬೆಗಳ ॥ ೨೮ ॥

ಮುತ್ತುಗಳ ಸುರಿಸುರಿದು ಮುಂದೆ ಬೀದಿಯಲಿ ।
ನೆತ್ತಿಸಿದ ಕೋ[1]ಣ[1]ಗಳ ನಡೆವ ಹಾದಿಯಲಿ ॥ ೨೯ ॥

ಕೋಟಿ ರಥಗಳ ನಿಲಿಸಿ ಸಾಲುಸಾಲಿನಲಿ ।
ಮೀಟೆನಿಪ ಗಜತುರಗವೆರಡು ಪಾಲಿನಲಿ ॥ ೩೦ ॥

ಕೇರಿಕೇರಿಯೊಳೆಸೆಯೆ ಕುರುಜು ಮೇರ್ವೆಗಳು ।
ಚಾರುತರ ತಳಿರುತೋರಣಗಳೊಪ್ಪಿದವು ॥ ೩೧ ॥

ಈ ರೀತಿಯಿಂದ ಪಟ್ಟಣವ ಶೃಂಗರಿಸಿ ।
ಧಾರಿಣೀಪತಿಗಳಿಗೆ ಲೇಖನವ ಬರೆಸಿ ॥ ೩೨ ॥

ಚಾರಕರು ಕೊಂಡೊಯ್ಯಲಂದು ಚಂದದಲಿ ।
ಭೇರಿಗಳು ಮೊಳಗಿದವು ಬಲು ರಾಜ್ಯಗಳಲಿ ॥ ೩೩ ॥

೬ ರಾಗ ಗೌಳಮಲಹರಿ—ಅಷ್ಟತಾಳ ೨

ಒಸಗೆ ರಂ । ಜಿಸಿತು ರಾ । ಜ್ಯದೊಳೆಲ್ಲ ।—ಸುದ್ದಿ ।
ಪಸರೆ ಗಾಂ । ಧಾರಿ ಪೂ । ಜಿಸುವಳು । ಗಜವೆಂಬ ॥ ಪಲ್ಲವಿ ॥

ಛಪ್ಪನ್ನ । ದೇಶದ । ದೊರೆಗಳು ।—ನಡೆ ।
ತಪ್ಪಸಂ । ದಣಿಯೇನ । ನೆಂಬೆ ಸಂ । ಭ್ರಮದೊಳು ॥
ಒಪ್ಪುವ । ಕುದುರೆ ದಂ । ಡಿಗೆಯೊಳು ।—ಸಾಲಾ ।
ಗಿಪ್ಪ ಪ । ಲ್ಲಂಕಿಯೊ । ಳವರ ಭೋ । ಗಗಳೆಂಬ ॥ ೩೪ ॥

(ಬೇರೆ ಬೇರೆ ರಾಜರ ಹಾಗೂ ಪುರಜನರ ಪ್ರವೇಶ)

ಬಂದ ಬಂ । ದರಸುಗ । ಳಿದಿರ್ಗೊಂಡು ।—ಕರೆ ।
ತಂದು ಮ । ನ್ನಿಸಿ ಬಿಡಾ । ರಗಳಿತ್ತು । ನಡೆಗೊಂಡು ॥
ಮುಂದು ಮುಂ । ದಾಗಿ ಭೂ । ಸುರ ಹಿಂಡು ।—ಬರ ।
ಲಂದು ಗಾಂ । ಧಾರಿ ಮಂ । ಟಪಕೆ ಬಂ । ದಳು ಯೆಂಬ ॥ ೩೫ ॥

1 ಜೆ (ಕಾ)

೧೦ ವಾರ್ಧಿಕಷಟ್ಪದಿ

ಭೂಪಾಲ ಕೇಳಿಂತು ಕೌರವೇಶ್ವರನ ಪ್ರ
ತಾಪವಂ ಪೊಗಳಿ ತುದಿಗಾಣೆನಾ ಸಮಯದಲಿ
ಚಾಪಲಾಂಬಕಿ ಸಭಾಮಂಟಪಕೆ ಮಾರಮದಕರಿಯಂತೆ ನಡೆತಂದಳು ।
ಧೂಪ ಗುಗ್ಗುಳಕಲಶ ಕನ್ನಡಿ ಸುನೈವೇದ್ಯ
ದೀಪ ಶ್ರೀಗಂಧ ಮಂಗಲ ಕುಂಕುಮಾಕ್ಷತೆಯೊ
ಳಾ ಪುರವು ಘೇಯೆನಲು ವಾದ್ಯಸಂದಣಿಯಿಂದ ಗಜವ
ಪೂಜಿಸುತಿರ್ದಳು ॥ ೩೬ ॥

೧೧ ಡವಳಾರ ; ರಾಗ ಆಂದೋಳಿ—ತ್ರಿವುಡೆತಾಳ ೧

ಮಡದಿಯರ ಶಿ । ರೋಮಣಿ । ಮಂಟಪ ।
ನಡುವಿಲಿ ಗಜ । ರೂಪವ । ನಿಲ್ಲಿಸಿ ।
ಪೊಡವಿಪರರ । ಸಿ,ಯ, । ರ— ॥ ಸೊ, ಡ— । ಗೊಂ— । ಡು— ॥
ಒಡಗೊಂಡೇ । ಶೋಭನ । ಪಾಡುತ ।
ಒಡೆಯನ ಶ್ರೀ । ಪಾ— । ದ— ॥ ನೆ,ನೆ— । ದ— । ಳು— ॥ ೩೭ ॥

ಬಾಲೆಯರ ಶಿ । ರೋಮಣಿ । ನಡೆಯಲು ।
ಕಾಲಂದುಗೆ । ಝಣ ಝಣ । ರೆನ್ನಲು ।
ಮೇಲು, ದೀ । ವಿ,ಗೆ,ಯ— ॥ ಬೆ,ಳ— । ಕಿ— । ಲಿ— ॥
ಬೆಳಕಿನೊಳಾ । ಕುಂಜರ । ದೇವನ ।
ಕಾಲಿ,ಗ, । ಕ್ಷ,ತೆ, । ಯ— ॥ ತ,ಳಿ— । ದ— । ಳು— ॥ ೩೮ ॥

ಗಂಧಾಕ್ಷತೆ । ಗಜರಾ । ಜನಿಗೆ, ।
ಚಂದದಿ ಪು । ಷ್ಪಾಂಜಲಿ । ಯಿಂದ, ।
ನಿಂದು, ಪ್ರಾ । ರ್ಥಿ,ಸು, । ತ— ॥ ನೈವೇ— । ದ್ಯ— । ವ— ॥
ನೈವೇದ್ಯ ಸ । ಮರ್ಪಣೆ । ಗೆಯ್ಯಲು ।
ಮಂಗ,ಳಾ । ರ,ತಿ, । ಯ— ॥ ಬೆ,ಳ— । ಗ್ಯಾ—ಳು— ॥ ೩೯ ॥

ಗಜಗೌರಿಯ । ಪಾದಕೆ । ನಮಿಸುತ ।
ನಿಜಭಕ್ಷ್ಯಂ । ಗಳನೆ ಸ । ಮರ್ಪಿಸಿ ।
ಭುಜಗ,ಭೂ । ಷ,ಣ, । ನೆ— ॥ ಸ,ಲ— । ಹೆಂ— । ದು— ॥
ಸಲಹೆಂದಾ । ರತಿಗಳ । ನೆತ್ತಲು ।
ದ್ವಿಜರು, ದ । ಕ್ಷಿ,ಣೆ, । ಗೆ— ॥ ಕು,ಳಿ— । ತ— । ರು ॥ ೪೦ ॥

ಸಾಲಿಲಿ ಕುಳಿ । ತಿಹ ದಂ । ಪತಿಗಳ ।
ಕಾಲು ಮೋರೆ । ಕರಗಳ । ತೊಳೆದು, ।
ಮೇಲು, ವ, । ಸ್ತ್ರ, ಗ, । ಳ— ॥ ನು,ಡಿ— । ಸು— । ತ್ತ— ॥
ಉಡಿಸುತ ಬಹು । ಚಿನ್ನಪ । ತೊಡಿಸುತ ।
ಸಾಲು, ಬಾ । ಯ,ನ, । ವ— ॥ ಕೊ,ಡಿ— । ಸ್ಯಾ— । ಳು— ॥ ೪೧ ॥

ಮಂಗಳ ಗಜ । ಗೌರಿಗೆ । ಜಯ ಜಯ ।
ಮಂಗಳ ಶುಭ । ಕಾರಿಗೆ । ಜಯ ಜಯ ।
ಮಂಗಳ ಮೂ । ರು,ತಿ, । ಗೆ— ॥ ಜ,ಯ— । ಜ— । ಯ— ॥
ಜಯ ಜಯವೆಂ । ದಾಡುತ । ಪಾಡುತ ।
ಮಂಗ,ಳಾ । ರ,ತಿ, । ಯ— ॥ ಬೆ,ಳ— । ಗಿ— । ರೆ— ॥
ಸೋ— । ಬಾ— । ನೆ— ॥ ೪೨ ॥

(ಎಲ್ಲರ ನಿಷ್ಕ್ರಮಣ)

೧೨ ವಾರ್ಧಿಕಷಟ್ಪದಿ

ಧಾರಿಣೀಪತಿ ಕೇಳು ದಾನಗಳ ಕೊಟ್ಟು ಹದಿ
ನಾರು ಸಾವಿರ ಗೋವುಗಳನು ವಿಪ್ರರಿಗೆ ಮು
ನ್ನೂರ ನಾಲ್ವತ್ತೈದು ಭಾರ ಕನಕವನಿತ್ತವಸ್ತ್ರಗಳಿಗೆಣಿಕೆಯಿಲ್ಲ ।
ಬೇರೆ ಬೇರೊಲಿದುಣಿಸಿ ಭಕ್ಷ್ಯ ಭೋಜನಗಳಂ
ಭೂರಿದಕ್ಷಿಣೆ ಕೊಟ್ಟುದಕ್ಕೆ ಗಡಿಮಿತಿಯಿಲ್ಲ
ಈ ರೀತಿಯಿಂದ ನೋಹಿಯ ಸಮರ್ಪಣೆಗೆಯ್ಯೆ ಕುಂತಿ
ಭಾವಿಸುತಿರ್ದಳು ॥ ೪೩ ॥

(ಕುಂತಿಯ ಪ್ರವೇಶ, ಆಮೇಲೆ ಬ್ರಾಹ್ಮಣರು ಬರುತ್ತಿರುತ್ತಾರೆ)

ವಚನ ॥ ಇಂತು ಈ ಪ್ರಕಾರವಾಗಿ ಗಾಂಧಾರಿ ಗಜನೋಹಿಯಂ ಮಾಡಿ ಧೃತರಾಷ್ಟ್ರನು ನೂರೊಂದು ಮಕ್ಕಳು ಸಹ ಸುಖಸಂತೋಷವಂ ಮಾಡುತ್ತಿರಲಾಗಿ, ಇತ್ತಲಾ ಇಂದ್ರ ಪ್ರಸ್ಥದಲ್ಲಿ ಕುಂತೀದೇವಿಯು ತನ್ನ ಅಕ್ಕ ಕರೆಸ್ಯಾಳು, ತಾನು ಹೋಗ ಬೇಕು ಯೆಂದು ಸರ್ವಾಂಗಶೃಂಗಾರವಾಗಿ ಹೊರಗಣ ಗೋಪುರದ ಬಾಗಿಲೊಳ್ ಕುಳಿತಿರಲು, ಹಸ್ತಿನಾಪುರದಿಂದ ದಕ್ಷಿಣೆಯಂ ತೆಗೆದುಕೊಂಡು ಹೋಹಂಥ ಬ್ರಾಹ್ಮರ ಸಮೂಹವಂ ಕಂಡು, ಅದರೊಳೊರ್ವ ಹಿರಿಯ ಭೂಸುರೋ ತ್ತಮನಂ ಕರೆದು ಏನೆಂದು ಬೆಸಗೊಂಡಳು ಎಂದರೆ—

## ಕುಂತಿಯ ಸಂತಾಪ

೧೩ ರಾಗ ಕೇದಾರಗೌಳ—ಅಷ್ಟತಾಳ ೧

ಕುಂತಿ—

ಬಾರಯ್ಯ । ಭೂದೇವ । ಬಳಲುತ್ತ । ನೀವಾವ ।
ಊರಿಂದ । ಬಂದಿರ । ಯ್ಯ— ॥
ಭೂರಿಭೋ । ಜನವೆಲ್ಲಿ । ಯಾಯಿತು । ದಕ್ಷಿಣೆ ।
ಯಾರ್‍ಯಾರು । ಕೊಟ್ಟರ । ಯ್ಯ— ॥ ೪೪ ॥
ಮೋರೆಯ । ಮೇಲೆಲ್ಲ । ಮಂಗ[1]ಳಾ । ಕ್ಷತೆ [2]ಕಾ[2]ಳು ।
ಯಾ[1]ರದ । ನಿಟ್ಟರ । ಯ್ಯ— ॥
ನೂರು ಇ । ನ್ನೂರ್ಮಂದ್ಯ । ರೊಟ್ಟಾಗಿ । ತೆರಳಿದ ।
ಕಾರಣ । ವೇನಿರ । ಯ್ಯ— ॥ ೪೫ ॥
ಹಸ್ತಿನಾ । ಪುರದೊಳ । [3]ಗೀಹೊತ್ತು[3] । ಪೂಜೆಯ ।
[4]ವರ್ತಮಾ । ನಗಳೇ[4]ನ । ಯ್ಯ— ॥
ಹೊತ್ತುಕೊಂ । ,ಡು ಹೋಗ । ಲಾರದ । [5]ಪರಿ[5]ಯಲ್ಲಿ ।
ಕಟ್ಟಿದ । ಗಂಟೇನ । ಯ್ಯ— ॥ ೪೬ ॥
ಸುತ್ತಣ । ದೊರೆಗಳು । ತೆರಳಿಬಂ । ದವರೆಲ್ಲ ।
ಮತ್ತೆಲ್ಲಿ । ಪೋದರ । ಯ್ಯ— ॥
ಪುತ್ರರು । ಬರಲಿಲ್ಲ । ದಾರಿಯೊಳ್ । ಕಂಡಿರೆ ।
ಎತ್ತಲೇ । ನಾದರ । ಯ್ಯ— ॥ ೪೭ ॥

ವಚನ ॥ ಇಂತೆಂದು ವಿಸ್ತರದಿಂದ ಕೇಳುವಂಥ ದೇವಿಯ ಮೊಗವಂ ನೋಡಿ ಮಂದಹಾಸದಿಂದಾ ವಿಪ್ರೋತ್ತಮನು ಏನೆಂದನು ಎಂದರೆ—

೧೪ ರಾಗ ವರಾಳಿ—ಏಕತಾಳ ೩

ವೃದ್ಧ ಬ್ರಾಹ್ಮಣ—

ಹಸ್ತಿನಾಪುರ । ದಿಂದ ನಾವು । ಬಂದೆವ । ಮ್ಮ—ಅಲ್ಲಿ ।
ಹಸ್ತಿಪೂಜೆ । ಯ ಕಣ್ಣಾರೆ । ಕಂಡೆವ । ಮ್ಮ— ॥
ವಸ್ತು ದಾನ । ಗಳ ಬೇಡಿ । ಕೊಂಡೆವ । ಮ್ಮ—ಒಳ್ಳೆ ।
ಪ್ರಸ್ತದ, । ಊಟಗಳ । ಉಂಡೆವ । ಮ್ಮ— ॥ ೪೮ ॥

1 ಳ ಬರಹಗಳಾ (ಕಾ) 2 ಗ (ಕಾ) 3 ಗಾಗುವ (ಕಾ) 4 ವಾರ್ತೆಗಳುಂಟೇ(ಅ)
5 ತಲೆ (ಅ)

ಧರಣಿಪಾಲ | ರೆಲ್ಲ ಬಂದು | ನೆರೆದರ | ಮ್ಮ—ಅಲ್ಲಿ |
ತರುಣಿಯರೆ | ಲ್ಲರು ಕೂಡಿ | ಮೆರೆದರ | ಮ್ಮ— ||
ಗಿರಿಯ ಹಾಳಿ | ತಕ್ಕೆ ಹಣ | ಸುರಿದರ | ಮ್ಮ—ಧರಣೀ |
ಸುರರೆಲ್ಲ ತೆ | ಕ್ಕೊಳ್ಳಿರೆಂದು | ಒರೆದರ | ಮ್ಮ— || ೪೯ ||

ಕಣ್ಣ ಪಾಪ | ವೆಲ್ಲ ತೀರಿ | ಹೋಯಿತ | ಮ್ಮ—ನಮ್ಮ |
ಪುಣ್ಯದಿಂದುಂ | ಬಷ್ಟು ಭಾಗ್ಯ | ವಾಯಿತ | ಮ್ಮ— ||
ಚಿಣ್ಣರು ಗಾಂ | ಧಾರಿ ಸಹಿತ | ಬಾಳಲ | ಮ್ಮ— ಅವರ |
ಬಣ್ಣದ ವಿ | ಸ್ತಾರವೇನ | ಹೇಳಲ | ಮ್ಮ— || ೫೦ ||

೧೫ ರಾಗ ಘಂಟಾರವ—ಜಂಪೆತಾಳ ೧

ಹೀಗೆಂದು | ವಾರ್ತೆಯನು | ಹೇಳಿ ಭೂ | ಸುರ ಕಡೆಗೆ |
ಆಗಲೇ | ಕೈಮುಗಿದು | ಸಾಗಿದನು | ಮನೆಗೆ || ೫೧ ||

(ಬ್ರಾಹ್ಮಣರ ನಿಷ್ಕ್ರಮಣ)

ಕುಂತಿ—

ಇಂದುಧರ | ನೇ ಬಲ್ಲ | ನೆಂದು ಮರು | ಗುತ ಮನದಿ |
ನೊಂದುಕೊಂ | ಡಳು ಕುಂತಿ | ನಂದನರ |ನೆನೆದು || ೫೨ ||

೧೬ ಸಾಂಗತ್ಯ (ಚರಿತೆ) ; ರಾಗ ತೋಡಿ—ರೂಪಕತಾಳ ೧

ಅಕ್ಕನ | ವರಿಗೆ ನಾ | ನೇನ ಮಾ | ಡಿದೆನೊ ಶ್ರೀ |
ಮುಕ್ಕಣ್ಣ | ಶಿವನೊಬ್ಬ | ಬಲ್ಲ— ||
ಮಕ್ಕಳು | ಕುಡಿವಂಥ | ಹಾಲೊಳು | ವಿಷವ ತಂ |
ದಿಕ್ಕಿದಂ | ತಾಯ್ತೆನ್ನ | ಬದುಕು— || ೫೩ ||

ವಾಸಿಪಂ | ಥಗಳೆಮ್ಮ | ಮೇಲಿದ್ದ | ರೇನಾಯ್ತು |
ಲೇಸುಕ | ಟ್ಟಗೆ ನಮ್ಮ | ಹೊರತೆ— ||
ಏಸು ದ | ರಿದ್ರೆಯಾ | ದರು ತಂಗಿ | ಯೆಂಬಂಥ |
ಪಾಶವಿ | ಲ್ಲದೆ ಹೋಯಿ | ತಲ್ಲ— || ೫೪ ||

ಅನ್ಯಾಯ | ಗಾರ್ತಿ ನಾ | ನಾದರೆ | ಬಿಡಲೆನ್ನ |
ಚಿಣ್ಣರಿಂ | ದೇನ ಮಾ | ಡಿದರು— ||
ಭಿನ್ನಗ | ಳುಂಟು ಪಾ | ಯಾದ್ಯವು | ತ್ಸರವೆಂಬು |
ದಿನ್ನೆಂಥ | ಪಾಪಿಯೊ | ಶಿವನೆ— || ೫೫ ||

ದೊರೆತನ | ವವರಲ್ಲಿ | ರಾಜ್ಯ ಕೋ | ಶಗಳಲ್ಲಿ |
ಸಿರಿ ಸೆರೆ | ಸಿಕ್ಕಿಹ | ಳಲ್ಲಿ— ||
ಪರದೇಶಿಗ | ಳಾದರು | ಪಾಂಡು ಭೂ | ಪತಿ ಹೋದ |
ಮರುದಿನ | ಎನ್ನ ಬಾ | ಲಕರು— || ೫೬ ||

ಭಾವನ | ವರಿಗಂತೂ | ತಮ್ಮನ | ಸುತರೆಂಬ |
ಭಾವವಿ | ಲ್ಲದೆ ಹೋಯಿ | ತಲ್ಲ— ||
ಯಾವ ಪ | ರಿಯಲಿ ಮ | ಕ್ಕಳ ರಕ್ಷಿ | ಸುವೆನೆಂದು |
ದೇವಿ ಚಿಂ | ತಿಸುತಿರ್ದ | ಳಾಗ— || ೫೭ ||

೧೭ ರಾಗ ಸೌರಾಷ್ಟ—ಅಷ್ಟತಾಳ ೧

ನಳಿನಲೋ | ಚನೆ ಬಲು | ಬಳಲುತ್ತ | ಬಾಡಿದಳ್ |
, ಕುಂತಿ | ದೇ— | ವಿ— | —ಮುಡಿ |
ಯೊಳಗಿದ್ದ | ಪೂಸರ | ಹರಿದು ಬಿ | ಸಾಡಿದಳ್ |
, ಕುಂತಿ | ದೇ— | ವಿ— || ೫೮ ||

ಹಣೆಯ ಮೇ | ಲಿಟ್ಟ ಕುಂ | ಕುಮನಾಮ | ಒರಸಿದಳ್ |
, ಕುಂತಿ | ದೇ— | ವಿ— | — ಸೊಂಟ |
ಕೆಣೆಯಾದ | ಡಾಬು ಪೈ | ಜಣಿಗಳ | ಕಳಚಿದಳ್ |
,ಕುಂತಿ | ದೇ— | ವಿ— || ೫೯ ||

ಕೊರಳ ಮು | ತ್ತಿನ ಹಾರ | ಹರಿದು ಬೀ | ಸಾಡಿದಳ್ |
,ಕುಂತಿ | ದೇ— | ವಿ— | —ಎದೆ |
ಗೆರಕವಾ | ಗಿರುವ ಕು | ಪ್ಪಸ ತೆಗೆ | ದೊಗೆದಳು |
,ಕುಂತಿ | ದೇ— | ವಿ— || ೬೦ ||

ವಜ್ರದ | ಅರಳೋ, | ಲೆಯ ಸಂದು | ಬಿಡಿಸಿದಳ್ |
,ಕುಂತಿ | ದೇ— | ವಿ— | —ಕೈಯೊ |
ಳುಜ್ವಲಿ | ಸುವ ಹತ್ತ | ಕಡಗವ | ಬಿಸುಡಿದಳ್ |
,ಕುಂತಿ | ದೇ— | ವಿ— || ೬೧ ||

ಕಜ್ಜಳ | ಕಣ್ಣನೀ | ರಲಿ ಕೆಸ | ರಾದಳು |
,ಕುಂತಿ | ದೇ— | ವಿ— | —ಬಂದು |
ಸೆಜ್ಜೆಯ | ಮನೆಯ ಮಂ | ಚದ ಮೇಲೆ | ಹೊರಳಿದಳ್ |
,ಕುಂತಿ | ದೇ— | ವಿ— || ೬೨ ||

(ಪಾಂಡವರ ಪ್ರವೇಶ)

೧೮ ಸಾಂಗತ್ಯ ; ರಾಗ ಪಂತುವರಾಳಿ—ರೂಪಕತಾಳ ೧

ಪಾಂಡವರು—

ಎಂದು ಚಿಂ । ತಿಸುತಿಪ್ಪ । ಸಮಯದೊ । ಳಯ್ವರು ।
ನಂದನ । ರೈತಂದ । ರಾಗ— ॥
ಮಂದಿರ । ದೊಳಗಿರ್ಪ । ಮಾತೆ ಯೆ । ಲ್ಲಿಗೆ ಪೋದ ।
ಳೆಂದು ಚಿಂ । ತಿಸುತಿರ್ದ । ರವರು— ॥ ೬೩ ॥

ಎಂದೂ ನಾವ್ । ಬರುವಾಗ । ಮಿಂದು ಮ । ಡಿಯನುಟ್ಟು ।
ಚಂದದೊ । ಳಡಿಗೆಯ । ಮಾಡಿ— ॥
ಕಂದರು । ಣಲು ಬರ । ಲಿಲ್ಲನೆಂ । ದಿದಿರ್ನೋಳ್ಪ ।
ಳಿಂದೇತ । ಕಿಲ್ಲ ಈ । ಗೃಹದಿ— ॥ ೬೪ ॥

ಹಿತ್ತಲ । ಕಡೆಯೊಳ । ಗಿಹಳೊ ಯೆಂ । ಬುದಕಾಗಿ ।
ಮತ್ತೆ ಬಂ । ದನು ಭೀಮ । ನೋಡಿ— ॥
ಸುತ್ತಣ । ಮನೆಯೊಳ । ಗರಸಿದ । ರಿಲ್ಲ ಇ ।
ನ್ನೆತ್ತ ಪೋ । ದಳೊ ಎಮ್ಮ । ಜನನಿ— ॥ ೬೫ ॥

ಅಮ್ಮಾ ಅ । ಮ್ಮಾಯೆಂದು । ಕೇರಿಕೇ । ರಿಯೊಳಿರ್ದ ।
ಹೆಮ್ಮಕ್ಕ । ಳೊಳು ಕೇಳ್ದ । ರಾಗ— ॥
ಧರ್ಮಜ । ಭೀಮಾರ್ಜು । ನರು ಮನೆ । ಯೊಳ ಹೊಕ್ಕು ।
ಸುಮ್ಮನೆ । ಕುಳಿತಿರ್ದ । ರೆಲ್ಲ— ॥ ೬೬ ॥

ಸೆಜ್ಜೆಯ । ಮನೆಯಲ್ಲಿ । ನಿದ್ರೆಗೆ । ಯ್ವಳೊ ಯೆಂದು ।
ಅರ್ಜುನ । ನಡೆದು ಮ । ತ್ತೊ[1]ಡನೆ[1]— ॥
ದುರ್ಜನ । ರಿಂದ ದುಃ । ಖಿಸುವ ತಾ । ಯನು ಕಂಡು ।
ಸಜ್ಜನ । ರೆಲ್ಲ ಕೇ । ಳಿದರು— ॥ ೬೭ ॥

೧೯ ರಾಗ ಆನಂದ ಭೈರವಿ—ಆದಿತಾಳ (ವಿಲಂಬಿತ)

ಧರ್ಮರಾಯ—

,ಏನಾಯ್ತು ತಾಯೆ ನಿಮ । ಗೆ—ಪೇ । ಳಿರಿ ಯಿಂದು ।
, ಏನಮಾಡಬೇಕಮ್ಮ ನಾ । ವು— । — ॥

1 ಳಗೆ (ಕಾ)

ನೀನೇಕೆ ಚಿಂತಿಸುತಿರು । ವೆ—ಪೇ । ಳದಕನು ।
,ಮಾನವ ಮಾ,ಡಬೇ । ಡ— । — ॥ ೬೮ ॥

,ಹಸಿದು ಬಂದೆವು ನಾವೆ । ಲ್ಲ—ಮ । ಧ್ಯಾಹ್ನದ ।
,ಬಿಸಿಲೊಳು । ದಣಿದೆವ । ಮ್ಮ — । — ॥
,ಬಿಸಿನೀರ । ನೆರೆ ನಮು । ಗೆ—ಬ । ಟ್ಟಲನಿಟ್ಟು ।
,ಮೊಸರನ್ನ । ಬಡಿಸು ತಾ । ಯೆ— । — ॥ ೬೯ ॥

,ನಾಡಿನ ಭೂ,ತಗ । ಳು—ನಿ । ಮ್ಮನು ಸೋಂಕಿ ।
,ಪೀಡಿಸು ತೈದವೇನ । ಮ್ಮ — । — ॥
,[1]ಮೂ[1]ಡ ಬೊಮ್ಮ ರಕ್ಕಸ । ಗೆ— ಹರ । ಕೆಯ ಕೊಡದೆ ।
,[2]ಕಾಡುತ್ತಲಿಹುದೇನ । ಮ್ಮ[2]— ।— ॥ ೭೦॥

,ದಾಯಾದ್ಯರ್ನಮ್ಮ ಕಂ । ಡು— ಸ್ಟೈ । ರಿಸದತಿ ।
,ಮಾಯಮಂತ್ರ ಮಾಡಿದ । ರೊ— । — ॥
,ಪ್ರೀಯದ ಮನೆದೇವ । ರು— ಮ । ನಸು ನೊಂದು ।
,ಕಾಯುವ ದಣಿಸುವ । ರೊ— । — ॥ ೭೧ ॥

೨೦ ರಾಗ ಘಂಟಾರವ—ಜಂಪೆತಾಳ ೧

ಕುಂತಿ—

ಅಣುಗರಾ । ಡಿದ ನುಡಿಯ । ವನಜಮುಖಿ । ಕೇಳ್ದಿಮ್ಮ ।
ಬಣಗುದೈ । ವಗಳಿಲ್ಲ । ದಣಿಸಲಾ । ದಪವೇ— ॥ ೭೨ ॥

ಭೂತಗಳ । ಎಡರಿಲ್ಲ । ಪ್ರೇತಗಳ । ತೊಡರಿಲ್ಲ ।
ಸೀತಿತ । ಪ್ಪಿದ ಜನರೆ । ನಡೆವ ಭೂ । ತಗಳು— ॥ ೭೩ ॥

ಬಾಲಕರು । ನಿಮ್ಮೊಡನೆ । ಹೇಳ ಮಾ । ಡುವದೇನು ।
ಭಾಲಲೋ । ಚನನಿಟ್ಟ । ಶೂಲವಿಂ । ದೆನಗೆ— ॥ ೭೪ ॥

ಚಿಣ್ಣರಿರ । ಬಳಲಿದಿರಿ । ಚಿಂತೆ ಬೇ । ರಿಲ್ಲೆನಗೆ ।
ಉಣ್ಣರಡಿ । ಗೆಯ ಮಾಡಿ । ಇಂದಿನ । ಪ್ಪರಕೆ— ॥ ೭೫ ॥

---

1 ಮು (ಕಾ) 2 ಕಾಯುವ ಕಾಡುವದೊ (ಕಾ, ಅ)

೨೧ ದ್ವಿಪದಿ

ಪಾಂಡವರು—

ತಾಯ ಮಾತನು ಕೇಳಿ ತರಳರಂಜಿದರು ।
ನಾಯಕಗಳೇನೆಂದು ಮನದಿ ನೋಡಿದರು ॥ ೭೬ ॥

ಮಂಚದಲಿ ಮಲಗಿದ್ದ ಮಾತೆಯನು ನುಡಿಸಿ ।
ಚಂಚಲಿಸಬೇಡೆಂದು ನಿಜದೊಳೊಡಬಡಿಸಿ ॥ ೭೭ ॥

ಕಂಬನಿಯನೊರಸಿದರು ಕಣ್ಣಿನಲಿ ಸುರಿವ ।
ಹಂಬಲಿಸಬೇಡೆಂದು ತಣಿಸಿದರು ಮನವ ॥ ೭೮ ॥

ಬೊಮ್ಮ ಹರಿ ಶಿವರಿಂದ ಬಂದರೂ ಬರಲಿ ।
ಅಮ್ಮ ನೀ ಬೆದರದೆಮಗರುಹು ಗಾಢದಲಿ ॥ ೭೯ ॥

ಧರ್ಮಜಾದಿಗಳು ಕೈಮುಗಿದು ತಾಯಡಿಗೆ ।
ದಮ್ಮಯ್ಯ ಪೇಳಬೇಕೆಂದರಡಿಗಡಿಗೆ ॥ ೮೦ ॥

ಎಂದೊಡಂಬಡಿಸಿ ಕೇಳ್ದಿರುವ ಮಕ್ಕಳಿಗೆ ।
ಮಂದಗಾಮಿನಿ ಪೇಳ್ದಳೇಕಾಂತದೊಳಗೆ ॥ ೮೧ ॥

೨೨ ರಾಗ ಕಾಂಭೋಜಿ—ಏಕತಾಳ ೪

ಕುಂತಿ—

ಮಕ್ಕಳಿರ । ಕೇಳಿ ನಿನ್ನೆ । ಅಕ್ಕ ಮಾಡಿ । ದ ಕೃತ್ಯವ ।
ಸಕ್ಕರೆಯ । ಕಬ್ಬು ಕಾಸ । ರಕ್ಕ । ನಾಯಿ । ತು— ॥
ಮುಕ್ಕಣ್ಣುಳ್ಳಾ । ತ ಮಾಡಿದ । ದುಃಖವಲ್ಲಾ । ಅದರಿಂದೇನು ।
ಸೊಕ್ಕಿದಳೈ । ಶ್ವರ್ಯ ಬಂದು । ದಕ್ಕಿತು ಯೆಂ । ದು— ॥ ೮೨ ॥

ನಾಡ ಸತಿ । ಯರನೊಡ । ಗೂಡಿ ತಾ ಗಾಂ । ಧಾರಿ ನಿನ್ನೆ ।
ಮಾಡಿದಳಾ । ನೆಯ ಪೂಜೆ । ಮೃತ್ತಿಕೆಯಿಂ । ದ— ॥
ನಾಡಬಡವೆ । ಎಂದಸಡ್ಡೆ । ಮಾ[1]ಡಿದ್ದಲ್ಲ । ವೆ ಇಂದೆ[1]ನ್ನ ।
ನೋಡಿ ದಾರಿ । ದ್ರ್ಯವೆಂಬುದು । ಕಷ್ಟವೆಂದ । ಳು— ॥ ೮೩ ॥

೨೩ ರಾಗ ಶಂಕರಾಭರಣ—ತ್ರಿವುಡೆತಾಳ ೨

ಪೊಡವಿಪಾಲರ । ನೆಲ್ಲ ಕರೆಸಿದ । ಳವಳು ತನ್ನ ।—ನೋಹಿಗೆ ।
ಬಡವರಿವರೆಂ । ದೆನುತ ನಮ್ಮೊಳು । ನುಡಿಯಲಿಲ್ಲ ॥ ೮೪ ॥

---

1 ಡಲಿಲ್ಲವಂತೆ ಯೆ (ಅ)

ಬಡವರಾಗಿ । ನ್ನಿರಲು ಬಾರದು । ಪೊಡವಿಯೊಳಗೆ । —ಕೂಳಿಗೆ ।
ಒಡಲ ಹೊರುವುದ । ರಿಂದ ಪ್ರಾಣವ । ಬಿಡಲು ಲೇಸು ॥ ೮೫ ॥

ತನ್ನವರು ದಾ । ರಿದ್ರರಾದರೆ । ನೋಡರಯ್ಯ ।—ಗುಣ[1]ದಲಿ[1] ।
ಹೊನ್ನನುಳ್ಳೊಡೆ । ಹೊಲೆಯನಾದರು । ಮನ್ನಿಸುವರು ॥ ೮೬ ॥

ಹಣವನುಳ್ಳವ । ರಕುಲರಾದರು । ಕುಲಜರವರು । —ಲೋಕದಿ ।
ಬಣಗುಗಳು ನಿ । ರ್ಧನಿಕರಾದರೆ । ಹೊದ್ದದಯ್ಯ ॥ ೮೭ ॥

ಅರಸುಮಕ್ಕಳು । ನೀವು ರಾಜ್ಯಕೆ । ನಿಮ್ಮ ತಂದೆ ।—ಕಾಯವ ।
ತೊರೆದಡಂದಿಂ । ದಲೆ ದರಿದ್ರತೆ । ದೊರಕಿತೆಮಗೆ ॥ ೮೮ ॥

ಮರುಳನಾದನು । ಭಾವ ತಮ್ಮನ । ಮಕ್ಕಳೆಂದು ।—ನೋಡದೆ ।
ಹಿರಿಯ ತಾಯಿಯ । ಗುಣಗಳಿಂತಿದ । ಕಂಡಿರಲ್ಲ ॥ ೮೯ ॥

೨೪ ರಾಗ ನಾದನಾಮಕ್ರಿಯೆ—ಅಷ್ಟತಾಳ ೩

ಆಕೆ ಕೇ । ಳಿದಡೀಗ । ನಮ್ಮನು ।—ಈ ಭೂ ।
ಲೋಕದೊ । ಳಿರ[2]ಬೇಡೆಂ । ದೆಂಬಳು[2] ॥
[3]ಈ ಕೇ[3]ಳ್ದ । ಮಾತೆಡ । ಕಿವಿಯೊಳು । —ಬಿಡಿ ।
ಏಕಾಂತ । ವಾಗಿ [4]ನೀ । ವೆಲ್ಲರು[4] ॥ ॥ ೯೦ ॥

ಬಲ್ಲಿದ । ವರ ಕೂಡೆ । ಬಡವರ್ಗೆ ।—[5]ಞಾ[5]ಯ ।
ಸಲ್ಲದು । ರಾಜನೀ । ತಿಗಳಿವು ॥
ಖುಲ್ಲ[6]ರ । ವರು ಲೇಸಾ । ಗಿರ್ಪರು[6] ।—ನಾವು ।
ಒಳ್ಳಿತಾ । ಗಿರಬೇಕಿಂ । ದವರೊಳು ॥ ೯೧ ॥

ಅರಸುಗ । ಳವರೀಗ । ರಾಜ್ಯಕ್ಕೆ ।—ಜೇರೆ ।
ಸಿರಿತನ । ಉಂಟು ಸಾ । ಮ್ರಾಜ್ಯಕ್ಕೆ ॥
ಪರದೇಶಿ । ಗಳು ನಾವು । ನಮ್ಮಂತೆ ।—ಬದು ।
ಕಿರುವುದು । ಕಷ್ಟವೆಂ । ದಳು ಕಾಂತೆ ॥ ೯೨ ॥

ಸಣ್ಣವ । ರ್ನೀವು ಮಾ । ಡುವುದೇನು ।—ಎನ್ನ ।
ಪುಣ್ಯದ । ಫಲ[7]ವ ತೋ । ಡಿದ[7]ರೇನು ॥

1 ವಿದು (ಕಾ) 2 ಗೊಡಳಿನ್ನೇನು (ಅ) 3 ನಾ ಪೇ (ಕಾ) 4 ಡಿ ಮನದೊಳು (ಕಾ); ಮಕ್ಕಳಿರ (ಅ) 5 ನ್ಯಾ (ಕಾ, ಅ) 6 ರು ಲೇಸಾಗಿದ್ದೆಡೆಯೊಳು (ಅ)
7 ವೈಸೆ ತೊಡ (ಕಾ, ಅ)

ಎಣ್ಣದಿ । ರುವುದೊಳ್ಳಿ । ತೆಂದಳು ।—ಕುಂತಿ ।
ಕಣ್ಣನೀ । ರನು ಕ್ಕೈಲಿ । ತಂದಳು ॥ ೯೩ ॥

೨೫ ಭಾಮಿನಿಷಟ್ಪದಿ

ಪಾಂಡವರು—

ಇನಿತೆಂದು ಜನನಿ ಕಂಬನಿದುಂಬೆ ಸಹದೇವ
ಧನುವ ಝೇಂಕರಿಸಲಾ ನಕುಲ ಕೋಪಿಸಿಕೊಂಡ
ಮನದಿ ರೌದ್ರಾವೇಷಮಂ ತಾಳ್ದು ಭೀಮ ಗದೆಯಂ ತಿರುಹುತೊಡನೆದ್ದನು ।
[1]ಬಣಗು ಕುರು[1]ಪತಿಯ ನೂರೊಂದು ಮಕ್ಕಳನೆಲ್ಲ
ಎಣಿಕೆಯಿಂದೆಮನಿಗೊಪ್ಪಿಸಿಬರುವೆನೆಂದಾಗ
ಲಣಕದಿಂ ಧರ್ಮಸುತನಡಿಗೆರಗಿ ಪೊರಮಡಲು ಸಂತೈಸಿದಂ ಭೀಮನ ॥ ೯೪ ॥

೨೬ ರಾಗ ಕೇದಾರಗೌಳ—ಅಷ್ಟತಾಳ ೧

ಧರ್ಮರಾಯ—

ತಮ್ಮ ಕೋ । ಪಿಸಬೇಡ । ತರವೇನೊ । ನಿಜ ಕುಲ ।
ಧರ್ಮವ । ಮೀರುವ । ದು— ॥
ತಮ್ಮದೋ । ಷಕೆ ತಾವೆ । ಕೆಡಲಿರ್ಪ । ರಲ್ಲದೆ ।
ನಮ್ಮಿಂದ । ಬರ[2]ಬಹು । ದೆ[2]— ॥ ೯೫ ॥
ದಾಯವಾ । ದಿಗಳೆಂಬು । ದರಿಯೆಯು । ಮೊದಲೆ ದು ।
ರ್ಮಾಯಯಾಮೋ । ಹಿತರವ । ರು— ॥
ತಾಯ ನೋ । ಹಿಗೆ ಬಂದು । ಕರೆದಿಲ್ಲ । ಹೀಗೆಂದು ।
ಞಾಯಮಾ । ಡುವುದೊಳ್ಳಿ । ತೆ— ॥ ೯೬ ॥
ಹಿರಿಯ ಭೂ । ಪತಿ ಪಾಂಡು । ಹಾಗಾದ । ಮೇಲಿನ್ನು ।
ಕರಗಿ ಮಾ । ಡುವದೇನ । ಯ್ಯ— ॥
ಸರಸಿಜೋ । ದ್ಭವ ಫಣೆ । ಯೊಳು ಬರೆ । ದಿಟ್ಟುದ ।
ಒರಸಲಾ । ರಿಗೂ ಬಾರ । ದು— ॥ ೯೭ ॥
ಕಿರಿದಾಗಿ । ಬದಲೊಂದು । ವ್ರತ ಮಾಳ್ಪೆ । ನೆಂದರೆ ।
ಅರೆವೀಸ । ಕಯ್ಯೊಳಿ । ಲ್ಲ— ॥

1 ಬಣ ಕುರುಡು (ಕಾ) 2 ಬಾರದು (ಅ)

ಹಿರಿಯರು | ಗಳಿಸಿಟ್ಟ | ರತ್ನಭಂ | ಡಾರವ |
ವರ ಅರ | ಮನೆಯೊಳಾ | ಯ್ತು— || ೯೮ ||

೨೭ ವಾರ್ಧಿಕಷಟ್ಪದಿ

ಧೃತರಾಷ್ಟ್ರ [1]ಭೂಪ[1]ತಿಗೆ ದಯವಿಲ್ಲದಂತಾಯ್ತು
ಹಿತಶತ್ರುವಾದ ಕೌರವರಾಯ, ಸನ್ಮೊಡನೆ
ಜೊತೆಯಾಗಿ ನಡೆವ ನೂರೊಂದು ಮಕ್ಕಳ ತಾಯಿ ಗೋಮುಖದ
ಹುಲಿಯಾದಳು |
ಗತಿಯಾರು ಮುಂದೆ ಬದುಕುವದೆಂತೆನುತ್ತ ಭೂ
ಪತಿ ಧರ್ಮರಾಯ ಕಂಬನಿದುಂಬಿ ಕಣ್ಣೀರು
ಕ್ಷಿತಿಗೆ ಬೀಳಲು ಪಾರ್ಥ ಕಿಡಿಗಣ್ಣನಂತೆ ಕೋಪಿತನಾಗುತಿಂತೆಂದನು || ೯೯ ||

## ಅರ್ಜುನನ ಶಪಥ

೨೮ ರಾಗ ಸೌರಾಷ್ಟ—ತ್ರಿವುಡೆತಾಳ ೨

ಅರ್ಜುನ—

ತಾಯೆ ಬಿಡು ಬಿಡು | ಚಿಂತೆ ಕೌರವ |
ರಾಯನೆಸಗಿದ | ಮಣ್ಣಿನಾನೆಯ |
ನೋಯಿ ರಚಿಸಲು | ಇಂದ್ರನಾನೆಯ | ತಹೆನು ಧರೆಗೆ || ೧೦೦ ||

ಚಾರುತರ ವಿಭ | ವದಲಿ ಸುರಪತಿ |
ಏರುವೈರಾ | ವತವ ಧರಣಿಗೆ |
ತಾರದಿದ್ದರೆ | ತಾಯೆ ನಿನ್ನ ಕು | ಮಾರನಲ್ಲ || ೧೦೧ ||

ಮೇದಿನಿಗೆ ಸುರ | ಗಜವನಿಳುಹದೆ |
ಹೋದೆನಾದರೆ | ಧನುವ ಹಿಡಿಯೆನು |
ಮೇದಿನೀಪತಿ | ಧರ್ಮರಾಯನ | ಪಾದದಾಣೆ || ೧೦೨ ||

ಖಂಡಪರಶುವೆ | ಮುನಿದುನಿಂದರು |
ಪುಂಡರೀಕಾಂ | ಬಕನೆ ತಡೆದರು |
ಕೊಂಡುಬಾರದೆ | ಹೋದೆನಾದರೆ | ಗಂಡುಸಲ್ಲ || ೧೦೩ ||

---

1 ನೃಪ (ಅ)

೨೯ ರಾಗ ಪಂತುವರಾಳಿ—ಅಷ್ಟತಾಳ ೧

ದೇವಲೋಕ । ದಲ್ಲಿರುವ । ದೇವಕನ್ನೆ । ಯರನೆಲ್ಲ ।
ನೋಹಿಗೆಂದೋ । ಲೆಯ ಕೊಟ್ಟು । [1]ಕರೆ[1]ಸುವೆ । —ಇಲ್ಲಿ ।
[2]ತರಿ[2]ಸುವೆ ॥ ೧೦೪ ॥

ಕಾಮಧೇನು । ಕಲ್ಪವೃಕ್ಷ । ವಾ ಮಹಾಂತ । ವಜ್ರಾಯುಧವ ।
ಭೂಮಿಗೆ ತಂ । ದಿರಿಸಿ ನಿಮಗೆ । ತೋರುವೆ । —[3]ಮತ್ತೆ ।
ಸಾ[3]ರುವೆ ॥ ೧೦೫ ॥

ಪಾರಿಜಾತ । ವೃಕ್ಷ ರಂಭೆ । ಊರ್ವಶಿ ಮುಂ । ತಾದವರ ।
ಧಾರಿಣಿಗಿ । ಳಿಸುವಂತೆ । ಮಾಡುವೆ । —ಅಣಿ । ಸೋಡುವೆ ॥ ೧೦೬ ॥

ಮಾಯಕದ । ಮಾತಿದಲ್ಲ । ತಾಯೆ ಕೇಳಿಂ । ದೆನ್ನಸೊಲ್ಲ ।
ನೋಯಬೇಡ । ಕೋಪವೆಲ್ಲ । ತಾಳಮ್ಮ ।—ಬೇಗ ।ಏಳಮ್ಮ ॥ ೧೦೭ ॥

ವಚನ॥ ಇಂತೆಂದಾ ಪಾರ್ಥಂ ತಾಯ ಮುಂದೆ ಭಾಷೆಯಂ ಪೇಳ್ದ ವಾಕ್ಯಮಂ ಕೇಳಿ ಧರ್ಮರಾಯನಾಶ್ಚರ್ಯವಂ ತಾಳಿ ಅರ್ಜುನನೊಡನೆ ಏನೆಂದನು ಎಂದರೆ—

೩೦ ರಾಗ ಶಂಕರಾಭರಣ—ಅಷ್ಟತಾಳ ೨

ಧರ್ಮರಾಯ—

ತಮ್ಮ ಏ । ನೆಂಬೆ ನಾ । ನು—ಪಂ । ಥವ ಮಾಡಿ ।
ಹೆಮ್ಮೆಯಾ । ಡುವರೆ ನೀ । ನು— ॥
ನಮ್ಮ [4]ಕಾ । ರಣವೆ[4]ಲ್ಲಿ । ಸುರಪನ । ಗಜವೆಲ್ಲಿ ।
ಸುಮ್ಮನೆ । ಬರುವುದೇ । ನು—ಬ । ಲ್ಲವ ನೀನು ॥ ೧೦೮ ॥

ಸೋಮಕು । ಲಜರು ನಾ । ವು— ಆ । ಡಿದ ಮೇಲೆ ।
ಆ ಮಾತು । [5]ಕೆಡಲಾಗ । ವು[5]— ॥
ಭೂಮಿಗೆ । ಸುರಗಜ । ವಿಳಿದು ಬ । ರುವುದುಂಟೆ ।
ನೀ ಮರು । ಳಾದೆಯ । ಲ್ಲ—ಪೇ । ಳಿದೆ ಸೊಲ್ಲ ॥ ೧೦೯ ॥

ಚಾರು ಬ । ಡವನ ಮ । ನ— ದಂ । ಡಿಗೆಯ ಮೇ ।
ಲೇರ ಹೋ । ಗುವ ತೆರ । ನ— ॥

---

1 ತರಿ (ಕಾ) 2 ಮೆರೆ (ಕಾ, ಅ) 3 ಹಿತ । ಬೀ (ಅ) 4 ಧಾರಿಣಿಯೆ (ಕಾ, ಅ)
5 ತಪ್ಪಬಾರದು (ಅ); ನಡೆಸಬೇಕು (ಕಾ).

ಪಾರಿಜಾ | ,ತ ಕಲ್ಪ | ತರುವೊದ | ಲಾದವ |
ಯಾರು ತಂ | ದವರುಂಟೆ | ಯ್ಯ— ಪೇ | ಳಿದಾಶ್ಚರ್ಯ || ೧೧೦ ||

ಹಸಿದ ಕೋ | ಡಗನು ಬಂ | ದು— [1]ಮ | ಧ್ಯಾಹ್ನದ[1] |
ಶಶಿಗೆ ಬಾ | ಯೊಡ್ಡಿದಂತೆ—(?) ||
[2]ಪುಸಿಯಾಯಿ | ತಲ್ಲ ಪೇ | ಳಿದುದೆಲ್ಲ[2] | ರಂಭೆ ಊ |
ರ್ವಶಿಯರಿ | ಲ್ಲಿಗೆ ಬಹ | ರೆ— || ೧೧೧ ||

ಹಾಳುಬಾ | ವಿಗೆ ಕೋಪಿ | ಸಿ— ಹಾ | ರಿದರೆ ಮ |
ತ್ತೇಳು ತಾ | ಪಿಸಿಕೊಂಡ | ರೂ— ||
ಕೇಳು ತಾ | ದಡಹತ್ತ | ಲರಿದು ಶಾ | ಸ್ತ್ರಗಳೆಂಬ |
ಕಾಳುಪೌ | ರುಷವು ನೋ | ಡಾ—ಕೋ | ಪಿಸಬೇಡ || ೧೧೨ ||

ಹಗೆಯಾದು | ತ್ಸುಕರಿಗೆ | ಲ್ಲ—ನಿಂ | ದೆಯ ಮಾಡಿ |
ನಗುವ ಹಾ | ಗಾಯಿತ | ಲ್ಲ— ||
ಜಗದೊಳು | ಸತ್ಯವಾ | ದಿಗಳು ಪಾಂ | ಡವರೆಂಬ |
ಮಿಗೆ ಕೀರ್ತಿ | ಯಡಗಿತ | ಲ್ಲ— ರಾ | ಜ್ಯದೊಳೆಲ್ಲ || ೧೧೩ ||

೩೧ ಭಾಮಿನಿಷಟ್ಪದಿ

ಉಂಬುದಕೆ ಗತಿಯಿಲ್ಲದವರಿಗೆ
ಡಂಭಕದ ನುಡಿಯೇಕೆ ಪಾಂಡವ
ರೆಂಬವರು ಸತ್ಯಕ್ಕೆ ತಪ್ಪಿದರೆಂಬ ಪೆಸರಾಯ್ತು |
ಹಂಬಲಿಸಲಿನ್ನೇಕೆ ಶಾಸ್ತ್ರಗ
ಳೆಂಬ ದೋಷವ ಕಳೆಯೆನುತ ನಯ
ನಾಂಬುವರ್ಷದಿ ಮಿಡಿಯಲರ್ಜುನನೆಂದನಗ್ರಜಗೆ || ೧೧೪ ||

೩೨ ರಾಗ ಸೌರಾಷ್ಟ್ರ—ಮಟ್ಟೆತಾಳ

ಅರ್ಜುನ—

ಅಣ್ಣ ಧರ್ಮ | ಜಾ— | ಕೇಳು ಜನನಿ | ಯ— |
ಪುಣ್ಯವಿದ್ದ | ರೆ— | ತರಿಸದುಳಿಯೆ | ನು— ||

---

1 ಆಸೆಯೊಳಂದು (ಅ) 2 ಬಿಸಲದ ಹಣ್ಣನು ತಿಂಬ ಮರುಳಂತೆ (ಅ).

ಬಣ್ಣಗೆಡದಿ । ರು— । ಬರಿದೆ ಮಸದೊ । ಳು— ।
ಎಣ್ಣಲಾಗ । ದು— । ವ್ಯಸನ ಬಿಡುಬಿ । ಡು— ॥ ೧೧೫ ॥

ಲೋಕವೆನ್ನೊ । ಳು— । ಮುನಿದು ನಿಂದ । ರೂ— ।
ನಾಕಪಾಲ । ರು— । [1]ತಡೆಯು[1] ಬಂದ । ರೂ— ॥
ಪಾಕಶಾಸ । ನ— । [2]ಸಂಥವಿಡಿ[2]ದ । ರೂ— ಪಿ ।
ನಾಕಿಯಾಣೆ । ನಾ— । ತರಿಸದುಳಿಯೆ । ನು— ॥ ೧೧೬ ॥

ಚಿಂತೆ ಯೇಕಿ । ಷ್ಟು— । ಚಿನುಮಯಾತ್ಮ । ಕ— ।
ಕಂತು ಜನಕ । ನ— । ಕರುಣವಿಲ್ಲ । ವೇ— ॥
ಅಂತರಂಗ । ದಿ— । ಆದಿಕೇಶ । ವ— ।
ಸಂತತ ನ । ಮ್ಮ— । ಸಲಹದೆ ಬಿ । ಡ— ॥ ೧೧೭ ॥

೩೩ ರಾಗ ಮಧ್ಯಮಾವತಿ—ಏಕತಾಳ ೩

,ಎಂ,ದು । ಧೈರ್ಯವ । ,ಪೇಳಿ ಧ । ರ್ಮಜಗೆ— ।
,ವಂದಿಸಿ । ಓಲೆಕಂ । ,ಠವ ಪಿಡಿ । ದು— ॥
,ಮಂದರ । ಧರನ ಪಾ ।, ದವ ನೆನೆ । ಯುತ ತನ್ನ ।
,ತಂದೆಗೆ । ನಮೊ ನಮೋ । ,ಯೆಂದ ನಾ । ಗ— ॥ ೧೧೮ ॥

,ಜಯಜಯ । ಜಯವೆನ್ನು । ತ್ರ—ದೇ । ವೇಂದ್ರಗೆ— ॥ ಪಲ್ಲವಿ ॥

,ಚಿ,ನ್ನ । ದುಂಗುರ । ,ದಂಗುಲಿಯೊ । ಳಂದು— ।
,ಉನ್ನಂತ । ಓಲೆ ಕಂ । ,ಠವ ಪಿಡಿ । ದು— ॥
,ತನ್ನೊಳು । ತಾನೆ ಒ । ,ಕ್ಕಣೆ ಜೋ, । ಡಿಸಿಕೊಂಡು ।
,ಚೆನ್ನಾಗಿ । ಬರೆದನೆ । ,ಬಿನ್ನಪ । ವ— ॥ ೧೧೯ ॥

,ಮು,ತ್ತಿ । ನ, ಒಂಟೆ । ,ಕರ್ಣದೊ । ಳೆಸೆಯೆ— ।
,ಚಿತ್ರದ । ಓಲೆ ಕಂ । ,ಠವ ಪಿಡಿ । ದು— ॥
,ಮತ್ತೆ ಒ । ಕ್ಕಣೆಯ ಜೋ ।, ಡಿಸಿಕೊಂಡು । ಸುರಪತಿ ।
,ಗರ್ತಿಯಿಂ । ಬರೆವನೆ । ,ಪತ್ರಿಕೆ । ಯ— ॥ ೧೨೦ ॥

೩೪ ಶಾರ್ದೂಲವಿಕ್ರೀಡಿತವೃತ್ತ

ಇಂತಾನಂದದೊಳಂದು ಪಾರ್ಥನು ಮಹಾ ಸಂತೋಷದಿಂ ತಾತಗಂ ।
ಕುಂತೀದೇವಿಯ ಸುವ್ರತಂ ಸಲಿಸಬೇಕಿಂತಾಗಿ ಸದ್ಭಾವದಿಂ ।

---

1 ಅಡ್ಡ (ಕಾ) 2 ತಡೆಯ ಬಂ (ಅ)

ದಂತೀದ್ರಂ ತರು ವಜ್ರ ಸುಂದರಿಯರಂ ಮುಂತಾಗಿ ನೀವ್ [1]ಪಾಲಿಪಾ ।
ಪಂಥಂಗಳ್ ಪಲವಾಗಿ ಪೇಳಿದೆನವಂ ಸಂತೋಷದಿಂದೀವುದು[1] ॥ ೧೨೧ ॥

೩೫ ರಾಗ ಭೈರವಿ—ಜುಟ್ಟೆತಾಳ ೨

ಅರ್ಜುನ—

[2]ಮದಕರಿಯನೆ । ಪೋಲ್ವ[2]ರ್ಜುನ । ಭುಜವನದಿರಿ । ದ— ।
[3]ಮು[3]ದದಿ ಬರೆದ । ಲಿಖಿತವಂಬಿನ । ತುದಿಗೆ ಕಟ್ಟಿ । ದ— ॥
ಪದುಮಸಖನ । ಪದಕೆರಗುತ । ಮದನವೈರಿ ।ಯ— ।
ಮುದದಿ ನಮಿಸಿ । ಧನುವನಾಂತು । ಹೆದೆಯನೇರಿ । ದ— ॥ ೧೨೨ ॥

೩೬ ರಾಗ ಘಂಟಾರವ—ಅಷ್ಟತಾಳ ೧ (ವಿಲಂಬಿತ, ದ್ರುತ)

ಎಚ್ಚನೆ । —ಶರ । ವರ್ಜುನ । ನರರೆಲ್ಲ ।
ಬೆಚ್ಚಿಬೆದರಲು । ಚೋದ್ಯವೆಂದೆನು । ತಚ್ಚರಿಸೆ ಗಂ । ಧರ್ವರು— ॥ ೧೨೩ ॥
ಮಿಂಚಿನಂ । —ದದಿ । ಹೊಳೆವುದ । ರ್ಜುನನಂಬು ।
ಕಾಂಚನದ ಪರಿ । ಲಾಂಛನದಿ ಸಚ । ರಾಚರಂಗಳು । ಬೆದರಲು— ॥ ೧೨೪ ॥
ಅಂಬು ಬಂ । ,ತಾಗ । ಇಂದ್ರಸ । ಭೆಗೆ ವಜ್ರ ।
ಕಂಭಕೆರಗಿತು । ಸಿಡಿಲಿನಂದದಿ । [4]ಡಂಬರಿಸಿದರು । ದಿವಿಜರು[4]— ॥ ೧೨೫ ॥
ಏನಿದೇ । —ನೆಂದು । ಅಮರೇಂದ್ರ । ಸಭೆಯೊಳು ।
ಬಾಣತುದಿಯಲಿ । ಕಟ್ಟಿದೋಲೆಯ । ಕಾಣುತತಿ ಬೆರ । ಗಾದರು— ॥ ೧೨೬ ॥

## ಇಂದ್ರನ ಅನುಗ್ರಹ

(ದೇವೇಂದ್ರನ ಒಡ್ಡೋಲಗ)

೩೭ ರಾಗ ಘಂಟಾರವ—ಜಂಪೆತಾಳ ೧

ಕಂಭದಲಿ । ನೆಟ್ಟಿರುವ । ಅಂಬುವೊನೆ । ಯೋಲೆಯನು ।
ಕಾಂಬ ತವ । ಕದೊಳಂದು । ಸುರರು ಭಾ । ಪೆನುತ ॥ ೧೨೭ ॥
ಆವ ಪು । ಣ್ಯಾತ್ಮಕನೊ । ಇದನೆಸಗಿ । ದವನೆಂದು ।
ದೇವತೆಗ । ಳಂಜಿದರು । ಠೀವಿಯನು । ಕಂಡು ॥ ೧೨೮ ॥
ಕರಣಿಕರ । ಕರೆದಿತ್ತು । ಬರಹ ವಾ । ಚಿಸಲಂದು ।
ಸುರರೆಲ್ಲ । ಕೇಳಿದರು । ಪಾರ್ಥನೊ । ಕ್ಕಣೆಯ ॥ ೧೨೯ ॥

---

1 ಕಳುಹ ಚೇ । ಕಿಂತೆಂದೊಕ್ಕಣೆಯೋಲೆಯುದ್ರೈಯ ಶಚೀಕಾಂತಂಗೆ ಬಿನ್ನೈಸಿದಂ (ಅ) ; . . . . . ಲೇಖಿಸುತ್ತಲಮರಾಧೀಶಂಗೆ . . . . . .
2 ಪರಿಯವೋಲ್ಕೆದರುತ (ಅ) 3 ಮು (ಕಾ,ಓ) 4 ಶಂಭುಸಖ ಬೆರಗಾಗಲು (ಅ)

೩೮ ರಾಗ ಕೇದಾರಗೌಳ—ಜಂಪೆತಾಳ ೪

ಕರಣಿಕ—

ದೇವೇಂದ್ರ । ನಿಮ್ಮ ಪದ । ಕೆ— । ಶರಣೆಂದು ।
ಭಾವಶು । ದ್ಧಿಯೊಳೆರಗು । ವೆ— ॥
ದೇವತೆಗ । ಳೊಡೆಯ ನೀ । ನೆ— । ಲೋಕವನು ।
ಕಾವ ಕರು । ಣಾಳು ನೀ । ನೆ— ॥ ೧೩೦ ॥

ಮುಖಶತಾಂ । ಕಿತನು ನೀ । ನೆ— । ಸಹಸ್ರಾಕ್ಷ ।
ಮುಕುತಿಗ । ಧ್ಯಕ್ಷ ನೀ । ನೆ— ॥
ಸಕಲ ಸುಖ । ಕೊಡೆಯ ನೀ । ನೆ— । ಸರ್ವಥಾ ।
ಅಕಳಂಕ । ಚರಿತ ನೀ । ನೆ— ॥ ೧೩೧ ॥

ಶರಣು ಶರ । ಣೆಂದು ನುತಿ । ಸಿ— । ಸಾಷ್ಟಾಂಗ ।
ಬರೆದು ಭ । ಕ್ತಿಯೊಳು ನಮಿ । ಸಿ— ॥
ತರಳತನ । ದಿಂದ ನಿನ್ನ— । ಮಗ ಪಾರ್ಥ ।
ಬರೆದ ಬಿ । ನ್ನಪವಿದ । ನ್ನ— ॥ ೧೩೨ ॥

ಲಾಲಿಸು ಕ । ಟಾಕ್ಷದಿಂ । ದ— । ಸವಿನಯದ ।
ಬಾಲಕ[1]ನ । ಪೇಕ್ಷೆಯೊಂ[1] । ದ— ॥
ಈ ಲೋಕ । ಕಧಿಕವಾ । ದ— । ಗಜಪುರದ ।
ಪಾಲ ಪಾಂ । ಡುವಿನರಸಿ । ಗೆ— ॥ ೧೩೩ ॥

[2]ದೇವಿ ಕುಂ । ತಿಗೆ ನೋಹಿ । ಯ— । ಸಲಿಸುವೊಡೆ[2] ।
ನೀವು ದಯೆ । ದೋರಬೇ ।ಕು— ॥
ಸೇವೆಯನು । ಮಾ[3]ಡಬೇ । ಕು[3]— । ನಿಮ್ಮ ಐ ।
ರಾವತವ । ಕಳುಹಬೇ । ಕು— ॥ ೧೩೪ ॥

ರಂಭೆಯೂ । ರ್ವಶಿಯು ಸಹಿ । ತ— । ಕಲ್ಪತರು ।
ವೆಂಬಮರ । ಪಾರಿಜಾ । ತ— ॥
ಬೆಂಬಿಡದೆ । ಸುರಭಿ ಯಿರ । ಲಿ— । ವಜ್ರ ಸಹ ।
ಕುಂಭಿನಿಗೆ । ಕೂಡಿ ಬರ । ಲಿ— ॥ ೧೩೫ ॥

---

1 ನೊಕ್ಕಣೆಯನೊಂ (ಅ) 2 ಶೀಲೆ ಕುಂತೀದೇವಿಯ—ವ್ರತವನ್ನು (ಅ) 3 ಜುವ ದಕೆ (ಅ)

ಕಳುಹಿದರೆ । ನಾಲ್ಕುದಿನ । ಕೆ— । ಅದ ಮರಳಿ ।
ಕಳುಹುವೆನು । ನಿಮ್ಮ ಪುರ । ಕೆ— ॥
ಛಲವಿಡಿದು । ದಾಸೀನ । ವ— । ಮಾಡಿದರೆ ।
ಉಳಿಯಗೊಡೆ । ಸುರರ ಪುರ । ವ— ॥ ೧೩೬ ॥

ಕಂತುಸಂ । ಹಾರನಾ । ಣೆ— । ಇದರೊಳ ।
ಭ್ಯಂತರವ । ನೇನು ಕಾ । ಣೆ— ॥
ಅಂತರಂ । ಗದ ಲೀಲೆ । ಯ— । ಬರೆದೆ ನಾ ।
ನಿಂತು ಬಿ । ನ್ನಪದೋಲೆ । ಯ— ॥ ೧೩೭ ॥

೩೯ ವಾರ್ಧಿಕಷಟ್ಪದಿ

ಆನೆಯೂರ್ವಶಿ ರಂಭೆ ವಜ್ರಾಯುಧವು ಕಾಮ
ಧೇನು ಸುರತರು ಪಾರಿಜಾತ ನಾಕದೊಳಿಪ್ಪ
ಮಾನಿ[1]ನಿಯರನಕ ಸರ್ವಸ್ವ[1]ವೇ ಇಳಿದು ಬರಬೇಕೆಂದು ಬರೆದೋಲೆಯ ।
ತಾನೋದಿಸಿಯೆ ಕೇಳ್ದು ಕರಣಿಕರ ಮೊಗನೋಡಿ
ಏನು ಮರುಳಾದನೋ, ನರನಿಗಿಷ್ಟರ ಮದವೆ,
ತಾನೆಷ್ಟರವ ಬರೆದನೊಕ್ಕಣೆಯನೀ ತೆರದೊಳೆಂದು
ಗರ್ಜಿಸಿದ ಸುರಪ ॥ ೧೩೮ ॥

೪೦ ರಾಗ ಕಾಂಭೋಜಿ—ಜಂಪೆತಾಳ ೨

ದೇವೇಂದ್ರ—

ನರಲೋಕ । ದವರಿಗಿ । ಷ್ಟರ ಪಂಥ । ವಾದ ಮೇ ।
ಲಿರಬಹುದೆ । ಸ್ವರ್ಗದಲಿ । ನಾವು— ॥
ಸುರರೆಲ್ಲ । ಕೇಳಿದಿರೆ । ಸಮ್ಮತವೆ । ನಿಮಗೆ ಈ ।
ಪರಿಯೊಳ । ರ್ಜುನ ಬರೆದ । ಲಿಖಿತ— ॥ ೧೩೯ ॥

ಬರಿಮೂರ್ಖ । ಭೀಮ ಯಮ । ಳರು ತರಳ । ರವರೊಳಗೆ ।
ಮರುಳಾಯಿ । ತೇ ಧನಂ । ಜಯಗೆ— ॥
ನೆರೆ ಬಲ್ಲ । ಸುಜ್ಞಾನಿ । ಧರ್ಮನಂ । ದನನಿದರ ।
ಪರಿಯನರಿ । ತನೊ ಇಲ್ಲ । ವೇನೊ— ॥ ೧೪೦ ॥

ಉಳಿಯಗೊಡೆ । ಸುರಪುರವ । ನೆಂಬ ಪಂ । ಥದ ಬಗೆಯ ।
[2]ನೆಲೆಯು[2] [3]ನೀ । ಕ್ಷಿ[3]ಸಬೇಕು । ನಮಗೆ— ॥

---

1 ನೀಯರು ಸಹಿತ ಸ್ವರ್ಗ (ಕಾ)
2 ಬಲುಹ (ಕಾ) 3 ನಿಲ್ಲಿ (ಅ)

ಸುಳಿಗಾಳಿ । ಮಿಂಚು ಸಿಡಿ । ಲೆರಗಿ ಹ । ಸ್ತಿನಪುರವು ।
ಮುಳುಗಿಹೋ । ಗಲಿ ಸುರಿದ । ಮಳೆಗೆ— ॥ ೧೪೧ ॥

ಏಳು ದಿನ । ಹಗಲಿರುಳು । ಆನೆಸುಂ । ಡಿಲಗಾತ್ರ ।
ಬೀಳಹೇ । ಳಿರೊ ಮಳೆಯ । ನೀರ— ॥
ಕಾಳಮೇ । ಘಗಳ ಸಂ । ಕಲೆ ಕಡಿದು । ಭೂಲೋಕ ।
ತೇಲಿಹೋ । ಗಲಿ ಜಲಾ । ರ್ಣವದಿ— ॥ ೧೪೨ ॥

(ನಾರದಮುನಿಯ ಪ್ರವೇಶ)

ಈಪರಿಯ । ಲಿಂದ್ರ ಕೋ । ಪಿಸುತಲೂ । ಳಿಗದವರ್ಗೆ ।
ತಾ ಪೇಳ್ವ । ಸಮಯಾಂತ । ರದಲಿ— ॥
ಶ್ರೀಪತಿಯ । ನಾಮವನು । ಕೀರ್ತಿಸುತ । ಸಭೆಗೆ ಸುರ ।
ತಾಪಸೋ । ತ್ತಮ ಬಂದ । ನಾಗ— ॥ ೧೪೩ ॥

ನಾರದ ಮ । ಹಾಮುನಿಯ । ದೂರದಿಂ । ದಲೆ ಕಂಡು ।
ಏರಿದಾ । ಸನವಿಳಿದು । ಬಂದು— ॥
ಚಾರುಪೀ । ಠದಲಿ ಕು । ಳ್ಳಿರಿಸಿ ವಂ । ದನೆಗೆಯ್ಯ ।
ಲಾ [1]ಋಷಿ[1]ಪ । ಪೇಳ್ದನಿಂ । ದ್ರನಿಗೆ— ॥ ೧೪೪ ॥

೪೧ ರಾಗ ಕಾಂಭೋಜಿ—ಏಕತಾಳ ೫, ೪

ನಾರದ—

,ಏತ । ಕಯ್ಯ । ಇಷ್ಟು । ಕೋಪ । ಯಾರ । ಮೇಲೆ । ಈ ಪ್ರ । ತಾಪ ।
,ಭೂತ । ಳವ । ಮುಳುಗಿ । ಸುವ । ದೇತ । ಕೊ ಇಂ । ದ್ರ— ॥ ೧೪೫ ॥

ಇಂದ್ರ—

ಮಾತಿನಲ್ಲೇ । ನುಂಟು ಕುಂತೀ । ಜಾತ ಬರೆದೋ । ಲೆಯ ನೋಡಿ ।
ನೀತಿಯಹು । ದೇ, ನಿಮಗೆ । ಖ್ಯಾತ ಮುನಿರಾ । ಯ— ॥ ೧೪೬ ॥

ನಾರದ—

,ಮಾತೆ । ಗೆ ಪೂ । ಜಿಸಲಿ । ಕಾಗಿ ।,ಪ್ರೀತಿ । ಯಿಂದ । ಬರೆದ । ಗಜವ ।
,ಭೂತ । ಳಕ್ಕೆ । ಕಳುಹೊ । ದಿವಿಜ । ನಾಥ । ದೇವೇಂ । ದ್ರ— ॥ ೧೪೭ ॥

---

1 ಮುನಿ (ಕಾ, ಅ)

ಇಂದ್ರ—

ಕೆಟ್ಟ ನರರ್ಗೆ । ನಾವೇರುವ । ಪಟ್ಟದಾನೆ । ಯನ್ನು ಕಳುಹಿ ।
ಕೊಟ್ಟವ[1]ರುಂ । ಟೇನೊ[1] ಋಷಿ । ಶ್ರೇಷ್ಠ ಪೇಳ । ಯ್ಯ— ॥ ೧೪೮ ॥

ನಾರದ—

,ಸೃಷ್ಟಿ । ಯೊಳ । ರ್ಜುನನ । ಪೋಲ್ವ । ಧೃಷ್ಟರಿಲ್ಲ । ವವನ । ಮುನದ ।
,ಭೀಷ್ಟ । ವ ಸ । ಲಿಸದ । ಡೆ ಬಲು । ಕಷ್ಟ । ದೇವೇಂ । ದ್ರ— ॥ ೧೪೯ ॥

ಇಂದ್ರ—

ಸಿಟ್ಟುಬರುವ । ಮಾತು ಬೇಡ । ಶೀಘ್ರದಿಂದ । ತೆರಳಿ ಗಾಢ ।
ಕಷ್ಟ ಬಂದ । ರೂ ಬರಲಿ ಬಂ । ದಷ್ಟು ಮುನಿರಾ । ಯ— ॥ ೧೫೦ ॥

ನಾರದ—

,ಎಷ್ಟು । ಧೈರ್ಯ । ನಿನಗಿ । ದ್ದರೂ ।, ಕೃಷ್ಣ । ನ ಸ । ಹಾಯ । ವವಗೆ ।
,ನಿಷ್ಠು । ರ ಬೇ । ಡ ಪೇ । ಳ್ವೆ ಕಂ । ಡಷ್ಟು । ದೇವೇಂ । ದ್ರ— ॥ ೧೫೧ ॥

೪೨ ರಾಗ ವರಾಳಿ—ಏಕತಾಳ ೭

ನಿನ್ನ ಮೇಲೆ । ಅಂಬೆಸೆದರೆ । ಮಾಳ್ಪುದೇ,। ನು—ಆತ ।
ಪುಣ್ಯಕ್ಕೆ ಕಂ । ಭಕ್ಕೆ ಬಾಣ । ವೆಸೆದ ತಾ,। ನು— ॥ ೧೫೨ ॥

ಕೀಲಿಸಿದ ಪ । ಜ್ರಕಂಭದ । ಸೀಳ ನೋಡ । ಯ್ಯ—ನಿನ್ನ ।
ಬಾಲಕನ । ಲ್ಲವೆ ಕರುಣೆ । ಬಹಳ ಮಾಡ । ಯ್ಯ— ॥ ೧೫೩ ॥

ಕುಂತಿಯಾತ್ಮ । ಜನ್ನ ಕೂಡೆ । ಪಂಥವೇಕ । ಯ್ಯ—ಆತ ।
ನಂಥವರಿ । ಲ್ಲ ಬೇರಿನ್ನು । ಸಿಟ್ಟು ಸಾಕ । ಯ್ಯ— ॥ ೧೫೪ ॥

ಅಂಬು ಬಲ್ಲು । ದೇ ದೇವೇಂದ್ರ । ನೆಂಬುದ,। ನ್ನ—ಕಮ ।
ಲಾಂಬಕ ತ । ಪ್ಪಿಸಿದ ಗುರಿಯ । ಕೊಂಬ ಮು,। ನ್ನ— ॥ ೧೫೫ ॥

೪೩ ದ್ವಿಪದಿ

ಇಂದ್ರ—

ಮುನಿಪನಾಡಿದ ನುಡಿಯ ಮುದದಿ ಸುರನಾಥ ।
ಮನಸಿನಲಿ ಗ್ರಹಿಸಿ [2]ಪೇಳಿದನು ವಿಖ್ಯಾತ[2] ॥ ೧೫೬ ॥

---

1 ರಾರುಂಟೈ (ಕಾ) 2 ಮನ್ನಿಸಲು ಸುರವ್ರಾತ (ಓ, ಕಾ)

ಎಂತು ಕಳುಹುವುದಿಳೆಗೆ ಎನ್ನ ಮದಗಜವ ।
ದಂತಿ ನಡೆಗೊಳುವುದಕೆ ದಾರಿಯಾ ನಿಜವ ॥ ೧೫೭ ॥

ತೋರಿಕೊಡಿ ತನಗದನು ತೊಡರಿಲ್ಲವಿದಕೆ ।
ಭೂರಿವಸ್ತುಗಳೆಲ್ಲ ಭುವನಕಿಳಿವುದಕೆ ॥ ೧೫೮ ॥

ಎನುತ ಯೋಚನೆಗೆಯ್ದು ಯೇಕಾಂತದಿಂದ ।
ಮುನಿಪನೊಳು ಕೇಳಿದನು ಮುದದಿ ದೇವೇಂದ್ರ ॥ ೧೫೯ ॥

ನಾರದ ಮಹಾಮುನಿಪ ನಸುನಗುತಲಂದು ।
ತೋರಿದನುಪಾಯವನು ತಾ ಕಂಡುದೊಂದು ॥ ೧೬೦ ॥

೪೪ ರಾಗ ಘರಜು—ಏಕತಾಳ ೨

ನಾರದ—

ಖಚರ,ನ್ನ । ಕರೆಸೆಂದ । ಸು—ನಾ । ರದಮುನಿ ॥ ಪಲ್ಲವಿ ॥

ಖಚರ,ನ್ನ । ಬೇಗಕರೆಸು । ರಚನೆ,ಯಿಂ । ದೋಲೆ ಬರೆಸು ।
ರಚಿಸು,ದಾ । ರಿಯನೆಂ[1]ದ । ಯು[1]ಚಿಸು,ಪಾ । ರ್ಥನಿಂಗೆಂದು ॥ ೧೬೧ ॥

ಮುದ್ದಾ,ನೆ । ಬರಲೊಂದು । ಹೆದ್ದಾ,ರಿ । ಮಾಡಿಸೆಂದು ।
ಮುದ್ದು,ಕು । ಮಾರ ಪಾರ್ಥ । ನಿದ್ದ,ಲ್ಲಿ । ಗಟ್ಟು ತ್ವರಿತ ॥ ೧೬೨ ॥

ದಾರಿ,ಯ । ಮಾಡಿ ನಿನ್ನ । ಊರೊ,ಳ । ಗೆ,ಲ್ಲ ಶೃಂ ।
ಗಾರ,ವಾ । ಗಲೆಂದು ಕು । ಮಾರ,ನಿಂ । ಗೋಲೆ ಬರೆಸು । ॥ ೧೬೩ ॥

ಈ ರೀ,ತಿ । ಯಲಿ ಯುಕ್ತಿ । ದೋರಿ,ದೇ । ವೇಂದ್ರನಿಂಗೆ ।
ನಾರಾ,ಯ । ಣಾಯೆನ್ನುತ್ತ । ನಾರ,ದ । ನಡೆದನತ್ತ ॥ ೧೬೪ ॥

೪೫ ವಾರ್ಧಿಕಷಟ್ಪದಿ

ಇಂತು ಯುಕ್ತಿಯ ಪೇಳ್ದು ನಾರದಂ ತೆರಳೆ ರವಿ
ಯಂತರಿಸಲಂದು ಮರುದಿನ ಪದ್ಮಬಾಂಧವನು
ನಿಂತನುದಯಾಚಲದ ಮಕುಟದಲಿ ದೇವೇಂದ್ರನೊಡ್ಡೋಲಗಂಗೊಟ್ಟನು ।
ಕುಂತಿಯಾತ್ಮಜನಿಗಾಶೀರ್ವಾದ ಪತ್ರಿಕೆಯ
ತಾಂ ತಿಳಿದು ಬರೆಸಿ ಕರಣಿಕರ ಕೈಯಿಂದ ತದ
ನಂತರದೊಳಾದೂತನಂ ಕರೆದು ಕೊಡೆ ಖಚರ ಸಂತಸದಿ ಕೈಕೊಂಡನು ॥ ೧೬೫ ॥

---

1 ದು ವ (ಕಾ)

(ಸರ್ವರೂ ನಿಷ್ಕ್ರಮಿಸುವರು; ಆಮೇಲೆ ಪಾಂಡವರ ಪ್ರವೇಶ)

೪೬ ರಾಗ ವೃಂದಾವನಸಾರಂಗ—ಏಕತಾಳ ೮

ಖಚರ—

ಕಡುಬೇ,ಗ । ಖಚರನ್ನೈ ।,ತಂದ । ನು—ತನ್ನ ।
ಒಡೆಯ, ನ । ಪ್ಪಣೆಯಿಂದ । ಪೊಡವಿ,ಗಿ । ಳಿಪೆನೆಂದು ॥ ಪಲ್ಲವಿ ॥

ಶಕ್ತಿ,ಯಿಂ । ನಭವಿಳಿ ।,ದೋಡಿ । ದ—ಇಂದ್ರ ।
ಪ್ರಸ್ಥ,ಪ ।ಟ್ಟಣವನ್ನೆ ।,ನೋಡಿ । ದ—ಅಲ್ಲಿ ।
ಪಾರ್ಥ,ನ । ಕಂಡು ಶರಣು ।, ಮಾಡಿ । ದ—ತಂದ ।
ಪತ್ರಿ,ಕೆ । ಯನು ಕೈಗೆ ।,ನೀಡಿ । ದ— ॥ ೧೬೬ ॥

ವಚನ ॥ ಈ ರೀತಿಯಿಂದ ಖಚರನೆಂಬ ಗಂಧರ್ವನು ಬಂದು ಅರ್ಜುನಂಗೆ ನಮಸ್ಕಾರವಂ ಮಾಡಿ 'ಸ್ವಾಮಿಾ ನಾನು ಅಮರಾವತೀಪಟ್ಟಣದಿಂದ ಬಂದೆನು, ಸಾಕ್ಷಾದಿಂದ್ರದೇವರು ನಿಮಗೊಂದು ಪತ್ರಿಕೆಯಂ ಕೊಟ್ಟು ಕಳುಹಿಧಾರೆ, ನೀವೇ ಅಂತರಂಗದಿ ವಾಚಿಸಿಕೊಳ್ಳಿ' ಎಂಬಂಥಾ ಗಂಧರ್ವಂಗೆ ಹಾಲು ಸಕ್ಕರೆ ಎಳನೀರಂ ಕೊಟ್ಟು ಆಸರಂ ತಣಿಸಿ,ಆ ಲಿಖಿತವಂ ಶಿರಸಾವಹಿಸಿಕೊಂಡು ವಾಚಿಸಿದ ಒಕ್ಕಣೆಯದೆಂತೆನೆ—

೪೭ ರಾಗ ಕೇದಾರಗೌಳ—ಅಷ್ಟತಾಳ ೧

ಅರ್ಜುನ—

ಸ್ವಸ್ತಿ ಶ್ರೀ । ಮದ್ದಿವಿ । ಜೋತ್ತಮ । ಖಳ ಕುಲ ।
ಮಸ್ತಕಾಂ । ಕಿತ ಶೂಲ । ನು— ॥
ಹಸ್ತಿನಾ । ಪುರದರ । ಸಿನ ತಮ್ಮ । ಮಗಪಾರ್ಥ ।
ಗಿತ್ತ ಆ । ಶೀರ್ವಾದ । ವು— ॥ ೧೬೭ ॥

ಕ್ಷೇಮದೊ । ಳಿದೆ ನಮ್ಮ । ಪದವಿ ನಿ । ಮ್ಮವರೆಲ್ಲ ।
ಕ್ಷೇಮಿಗ । ಳಾಗಿಹ । ರೆ— ॥
ಕಾಮಿಸಿ । ನೀ ನಿನ್ನೆ । ಬರೆದ ಬಿ । ನ್ನಪದೋಲೆ ।
ನೇಮದಿ । ಬಂತಿಲ್ಲಿ । ಗೆ— ॥ ೧೬೮ ॥

ಭೂಮಿಗೆ । ಸುರಗಜ । ರಂಭೆ ಊ । ರ್ವಶಿಯರು ।
ಕಾಮಧೇ । ನುವು ಸಹಿ । ತ— ॥
ಪ್ರೇಮದಿ । ಸಕಲವ । ಸ್ತುಗಳನು । ಕಳುಹಿಸೆಂ ।
ಬಾ ಮಾತ । ಗ್ರಹಿಸಿದೆ । ವು— ॥ ೧೬೯ ॥

ಈ ರೀತಿ । ಬರೆದುದೊ । ಳ್ಳಿತು ಮದ । ಗಜ ಬಹ ।
ದಾರಿಯೆ । ಮಗೆ ತೋರಿ । ಸು— ॥
ಧಾರಿಣೀ । ಪತಿಗಳ । ಕರೆಸಿಕೊ । ನಗರ ಶೃಂ ।
ಗಾರವಾ । ಗಲಿ ಬೇಗ । ದಿ— ॥ ೧೭೦ ॥

ಮೂರು ಕೋ । ,ಟಿ ಮಂದಿ । ಬರುವರಿ । ಲ್ಲಿಂಪ ವಿ ।
ಸ್ತಾರವಾ । ಗಲಿ ಚಪ್ಪ । ರ— ॥
ನೂರು ಕೋ । ,ಟಿ ಹೆಂಗ । ಳಿರುವರ । ವರ್ಗೆ ಬಿ ।
ಡಾರವಾ । ಗಲಿ ಚೆನ್ನಾ । ಗಿ— ॥ ೧೭೧ ॥

ಎಂಟು ಯೋ । ಜನದುದ್ದ । ಕಾಮಧೇ । ನುವಿಗೊಂದು ।
ಮಂಟಪ । ವನು ರಚಿ । ಸು— ॥
ಉಂಟಾದ । ಮೇಲೆ ಈ । ಸನ್ನಾಹ । ಗಳು ನಮ್ಮ ।
ಬಂಟನಿ । ಲ್ಲಿಗೆ ಕಳು । ಹು— ॥ ೧೭೨ ॥

ಕುಂತಿಯಾ । ತ್ಮಜನೆ ಕೇ । ಳಾ ಮೇಲೆ । ನೀ ಬೇಡಿ ।
ದಂಥ ವ । ಸ್ತುಗಳಿರ್ಪ ।ದ— ॥
ದಂತೀಶ । ನನು ಕೂಡಿ । ಶೀಘ್ರದಿ । ಕಳುಹುವೆ ।
ನಿಂತೀ ಮಾ । ಳ್ಪಾಶೀರ್ವಾ । ದ— ॥ ೧೭೩ ॥

೪೮ ರಾಗ ಮಧ್ಯಮಾವತಿ—ಅಷ್ಟತಾಳ ೨

ಅರ್ಜುನ—

ತೋರಿದ । —ಓಲೆ । ತೋರಿದ— । ॥ ಪಲ್ಲವಿ ॥

ತೋರಿದ । ನೋಲೆಯ । ಧರ್ಮಜ । ಗಂದು ।
ಭಾರಿ ಸಂ । ಭ್ರಮದಿಂದ । ಭೀಮನೊ । ಳಂದು— ॥
ಚಾರುಕುಂ । ತೀದೇ, । ವಿಯ ಬಳಿ । ನಿಂದು— ।
ಸಾರಿ ನ । ಕುಲ ಸಹ । ದೇವರಿ । ಗೆಂದು— ॥ ೧೭೪ ॥

ದಯೆ ಮಾಡಿ । ದನು ನಮ್ಮ । ಮೇಲೆ ಸು । ರೇಶ— ।
ಕ್ಷಯವಾಯ್ತು । ನಮ್ಮ ಮ । ನದೊಳಿದ್ದ । ಕ್ಲೇಶ— ॥
ಭಯವಿಲ್ಲ । ಮುಂದೆಲ್ಲ । ಕಾರ್ಯ ಸಂ । ತೋಷ ।
ಜಯ[1] ಮಾಡಿ । ದನು ನಮ । ಗೆಲ್ಲ ಸು[1] । ರೇಶ— ॥ ೧೭೫ ॥

---

1 ಜಯ ಉಂಟು । ಮಾಡಿದ । ಕಣ್ಮಪು (ಕಾ)

ಧರ್ಮರಾಯ—

[1]ಜಾ[1]ಣ ಭೀ । ಷ್ಮಾಚಾರ್ಯ । [2]ರಾಕ್ಷಣ[2] । ಕರೆಸಿ ।
ಮಾಣದೆ । ಅಂತರಂ । ಗದೊಳನು । ವ[3]ರಿ[3]ಸಿ ॥
ಕಾಣೆನು । ಇದಕೇನು । ದಾರಿಯೆಂ । ದೆನುತ— ।
ಕ್ಷೋಣಿಪ । ಧರ್ಮಜ । ನುಡಿದ ಕಂ । ಗೆಡುತ ॥ ೧೭೬ ॥

(ಭೀಷ್ಮಾಚಾರ್ಯನ ಪ್ರವೇಶ)

ವಚನ ॥ ಇಂತೆಂದು ಧರ್ಮರಾಜಂ ನುಡಿಯಲಾಗಿ ಆ ಮಾತಿಗೆ ಭೀಷ್ಮಾಚಾರ್ಯರು ಏನೆಂದರು ಎಂದರೆ—

೪೯ ರಾಗ ಮಧ್ಯಮಾವತಿ—ಏಕತಾಳ ೪

,ಮತವಲ್ಲ । ನಮಗಸಂ ।,ಗತವಾದ । ಕಾರ್ಯ— ।
,ಪಥವೆಲ್ಲಿ । ಮಾಳ್ಪುದು ।, ಕ್ಷಿತಿಗಾನೆ । ಬಹಡೆ— ॥ ಪಲ್ಲವಿ ॥

,ಪರ್ವತ । ತುದಿಯಲ್ಲ ।,ಪೆರತೊಂದು । ಮನನಲ್ಲ ।
,ಊರ್ವಿಯಿಂ । ದಾಕಾಶ ।,ಕೊನೆಪರಿ । ಯಂತ— ।
,ಗರ್ವದ । ಮದಗಜ ।,ಬಹ ದಾರಿ । ಮಾಳ್ಪುದು ।
,ಸರ್ವಥಾ । ಯತ್ನವ ।,ನಾ ಕಾಣೆ । ನಿದಕೆ— ॥ ೧೭೭ ॥

,ಪೊಡವಿಪಾ । ಲಕರನ್ನೆ ।,ಕರೆಸಿದ । ರವರಿಗೆ ।
,ಉಡುಗೊರೆ । ಯುಚಿತವ ।,ಕೊಡುವಡೇ । ನುಂಟು— ।
,ಬಿಡದೆ ದ । ಕ್ಷಿಣೆ ದಾನ ।,ಧರ್ಮವ । ಮಾಳ್ಪಡೆ ।
,ಒಡನೆ ವ । ಸ್ತುಗಳಾವ । ಕಡೆಯೊಳುಂ । ಟಯ್ಯ— ॥ ೧೭೮ ॥

,ಇಳೆಯನಾ । ಳುವನು ಕೌ ।,ರವರಾಯ । ನದರಿಂದ ।
,ಹಲವು ಸಂ । ಭ್ರಮದುತ್ಸ । ಹಗಳ ಮಾ । ಡಿಸಿದ ।
,ಹುಲಿಯ ಬ । ಣ್ಣಕ್ಕಾಗಿ ।,ನರಿ ಮೆಯ್ಯ । ಸುಟ್ಟಂಥ ।
,ಪರಿಹಾಸ । ವಚನಕ್ಕೆ ।,ಗುರಿಯಾದೆ । ವಲ್ಲ— ॥ ೧೭೯ ॥

,ಮಚ್ಚರ । ಕೊಂದ ಮಾ ।,ಡಿದರೆಂದೆಂ । ಬರು ಲೋಕ ।
,ಹುಚ್ಚರೆಂ । ಬರು ಭೂಮಿ ।,ಪಾಲಕ । ರೆಲ್ಲ— ॥

---

1 ದ್ರೋ (ಕಾ, ಅ) 2 ವಿದುರರ (ಕಾ,ಅ) 3 ದಿ (ಬ)

,ಅಚ್ಯುತಾ । ನಂತನ । ,ಮೈದುನ । ರೀಪರಿ ।
,ಇಚ್ಛಿತ । ಪ್ಪಿಪರೆಂಬ । ,ಅಪಕೀರ್ತಿ । ಬಹದು ॥ ೧೮೦ ॥

## ಗಜಪ್ರೂಜೆಯ ಸನ್ನಾಹ

ವಚನ ॥ ಇಂತೆಂದು ಭೀಷ್ಮಾಚಾರ್ಯರು ನುಡಿಯಲಾಗಿ ಆ ಮಾತಿಗೆ ಅರ್ಜುನನು ಏನೆಂದು ಪರಾಕ್ರಮಿಸುತ್ತಿದ್ದನು ಎಂದರೆ—

೫೦ ರಾಗ ಘಂಟಾರವ—ಏಕತಾಳ ೮ (ವಿಲಂಬಿತ, ದ್ರುತ)

ಅರ್ಜುನ—

ಆ,ನೆ । ,—ಯ, । ಚಿಂತೆ, । ಬೇಡ, । ನಿಮಗೆ—
—ದೇ । ವೇಂದ್ರ । ನಾ ಮ । ದ್ದಾ,ನೆ । —ಯ ॥ ಪಲ್ಲವಿ ॥*

ದಾನವಾ । ,ಂತಕನ । ದಯೆಯೊಂ । ದಿದ್ದರೆ ।
ನಾನದ । ನಿರ್ವಹಿ । ಸುವೆ ಸ । ನ್ನಾಹವ ॥ ಅನುಪಲ್ಲವಿ ॥

ಧಾ,ರಿ । —ಣೀ । ಪತಿಗಳಿ । ಗೋಲೆ, । ಬರೆಸಿ — ।
ಕೇ,ರಿ ।—ಕೇ । ರಿಗಳೆ । ಲ್ಲಾ ಶೃಂ । ಗರಿಸಿ— ।
ಭೂರಿ ದ । ,ಕ್ಷಿಣೆ, । ತಿದ್ದುವು । ದಕ್ಕೆ ಕು ।
ಬೇರನ । ಕಯ್ಯ, । ಸಾಲವ । ತರಿಸಿ— ॥ ೧೮೧ ॥

ದಾ,ರಿ । —ಯ, । ಸಮತೆಯ । ಮಾಡಲಿ । ಮೊದಲು— ।
ಮೇ,ರು । —ವೆ, । ಕುರುಜುಗ । ಳಾಗಲಿ । ಬದಲು— ।
ತೋರಣ । ಗುಡಿಮೇ । ಲ್ಕಟ್ಟುಗ । ಳಿಂದ— ।
ಬೇರೆ ಬೇ । ,ರೆ ಬೀ । ಡಾರಗ । ಳಾಗಲಿ ॥ ೧೮೨ ॥

ವಚನ ॥ ಇಂತೆಂದು ಅರ್ಜುನನು ಪರಾಕ್ರಮಿಸುತ್ತಿರಲಾಗಿ ಆ ಮಾತಿಗೆ ಭೀಷ್ಮಾಚಾರ್ಯರು ಏನೆಂದು ಕೊಂಡಾಡುತ್ತಿರ್ದರದೆಂತೆನೆ—

೫೧ ರಾಗ ಶಂಕರಾಭರಣ—ಅಷ್ಟತಾಳ ೧

ಭೀಷ್ಮ—

ಧೀ—ರ । ನಹುದಹು । ದೊ—ಅ । ರ್ಜುನ ರಣ । ಧೀ—ರ ॥ ಪಲ್ಲವಿ ॥
ಮೂರು ಲೋ । ಕದಿ ನಿನ । ಗೆಣೆಯಿಲ್ಲ । ರ್ಜುನ ರಣ— ॥ ಅನುಪಲ್ಲವಿ ॥

---

* ಆನೆಯ ಚಿಂತೆಯು । ಬೇಡೈ ನಿನಗೆ । ಮಾನವೇಂದ್ರ ಕೇ । ಳರೆಕ್ಷಣದೊಳಗೆ (ಅ)

ಧರಣಿಪ । ರೊಳಗೆ ನಿ । ಶ್ಶಂಕೆ— । —ನೀ[1]ನು ।
ನಾ[1]ರ ನಮ್ಮ । ಕುಲಕೆ ಬಿರು । ದಾಂಕ— ॥
ಸರಿಯಿಲ್ಲ । ನಿನಗೆ ಸಂ । ತೋಷವಾ । ಯ್ತೆನಗೆ ನೀ ।
ನೆರೆ ಪ್ರೌಢ । ನಹುದು ಜಾ । ಣ—ಇ । ಲ್ಲಿಗೆ ಸುರ ।
ಕರಿಯ ತ । ರಿಸದೆ ಮಾ । ಣ—ಎಂ । ಬುವನು ನಾ ।
ನರಿತೆನು । ನಿನ್ನ ತ್ರಾ । ಣ—ಅ । ರ್ಜುನ ರಣ ॥ ೧೮೩ ॥

ಹಿಂದೆ ಹು । ಟ್ಟಿದರೊಳ । ಗಿಲ್ಲ— । —ಇನ್ನು ।
ಮುಂದೇನೊ । ಶಿವನೊಬ್ಬ । ಬಲ್ಲ— ॥
ಇಂದಿಗಿ । ದ್ದವರೊಳು । ಹಿರಿಯರು । ನಾವಿಂಥ ।
ದೊಂದನು । ಕೇಳ್ದುದಿ । ಲ್ಲ—ಸ್ವ । ರ್ಗದ ದೂತ ।
ಬಂದುದ । ಕಂಡೆವ । ಲ್ಲ—ನಡೆ । ಸದೆ ಬಿಡೆ ।
ಎಂದಾಣೆ । ತಾಳ್ದಿಯ । ಲ್ಲ—[2]ಅ । ರ್ಜುನ ರಣ[2] ॥ ೧೮೪ ॥

ವಚನ ॥ ಇಂತೆಂದು ಅರ್ಜುನನಂ ಪೊಗಳಿ ಭೀಷ್ಮಾಚಾರ್ಯರು ಧರ್ಮರಾಯನೊಡನೆ ಏನೆಂದರು ಎಂದರೆ—

೫೨ ರಾಗ ಘಂಟಾರವ—ಜಂಪೆತಾಳ ೧

ಕುಂತಿಯಾ । ತ್ಮಜ ಕೇಳು । ಚಿಂತೆ ಬೇ । ಡಿನ್ನಿದಕೆ ।
ಸಂತೋಷ । ಕಾರ್ಯವಿದು । ಸರ್ವರಿಗು । ನಮಗು— ॥ ೧೮೫ ॥

ವಂಶಕ್ಕೆ । ಕೀರ್ತಿಯಿದು । ವರಪ್ರಸಾ । ದಗಳಹುದು ।
ಹಂಸವಾ । ಹನನೊಲಿವ । ಸಂಸಾರ । ದೊಳಗೆ— ॥ ೧೮೬ ॥

ಇಹಪರಕೆ । ಗತಿಯುಂಟು । ಈ ವ್ರತವ । ನೆಸಗಿದಡೆ ।
ಬಹುಭಾಗ್ಯ । ಬಹುಪುಣ್ಯ । ವಹುದಗ್ರ । ಗಣ್ಯ— ॥ ೧೮೭ ॥

ಸಾಲವನು । ತರಬೇಡ । ಸಾಕು ದ್ರ । ವ್ಯಗಳುಂಟು ।
ಮೂಲ ಬ । ಚ್ಚಿಟ್ಟಿಹರು । ಮುನ್ನಿನವ । ರುಗಳು— ॥ ೧೮೮ ॥

ಕುಹಕಿ ಕೌ । ರವನೆಂದು । ಕಾಡಿದರು । ಕೊಡಲಿಲ್ಲ ।
ಬಹು ಭದ್ರ । ವಾಗಿಹುದು । ಭಂಡಾರ । ದೊಳಗೆ— ॥ ೧೮೯ ॥

ಇದಕೆ ಬೇ । ಕಾದಷ್ಟು । ಈ ಕ್ಷಣವೆ । ತರಿಸೆಂದು ।
ಮುದದಿಂದ । ಭೀಷ್ಮ ಬೀ । ಗದ ಕಯ್ಯ । ಕೊಟ್ಟ— ॥ ೧೯೦ ॥

---

1 ಸುಧಾಕ (ಅ) 2 ನಿ । ನ್ನಯ ಶೌರ್ಯ । ಕೇಶವನೊಬ್ಬ ಬಲ್ಲ (ಅ, ಕಾ)

೫೩ ವಾರ್ಧಿಕಷಟ್ಪದಿ

ಭೂಪಾಲ ಕೇಳಿಂತು ನಮ್ಮ ಸ್ವಯಾಂತರದಿ
ಈ ಪಿತಾಮಹನಂಥ ಗುಣವುಳ್ಳರಿಸ್ನುಂಟೆ
ಆ ಪುಣ್ಯಶರಧಿ ಭಂಡಾರವೇ ಒಪ್ಪಿಸಿದ ಬಡತರಳರೆಂದು ದಯದಿ ।
ಆ ಪಾಂಡುಸುತರು ಬಳಿಕಲ್ಲಿಂದ ತರಿಸಿದರು
ದೀಪದಂತುರಿವ ನವರತ್ನ ನಾನಾ ಪರಿಯೊ
ಳಾ ಪಟ್ಟೆ ಪೀತಾಂಬರಾದಿಗಳ ಹೊರಿಸಿದರು ಪರ್ವತಕೆ
ನೂರ್ಮಡಿಯಲಿ ॥ ೯೧ ॥

೫೪ ದ್ವಿಪದಿ

ಅರಸ ಕೇಳಾಮೇಲೆ ಪಾಂಡುನಂದನರು ।
ಕರೆಸಿ ಬಂದರು ನೂತನದ ಕೆಲಸದವರು ॥ ೯೨ ॥

ಮಣ್ಣಿನೊಡ್ಡರು ಗೆಯ್ವ ಮತ್ತೊಂದು ಕಡೆಯು ।
ಬಣ್ಣಗಾರರು ಬರೆವ ಚಿತ್ರವೆಡೆಯೆಡೆಯು ॥ ೯೩ ॥

ಪಂಚಾಳರಮರಿಸುವ ಬೊಂಬೆಗಳ ನಡುವೆ ।
ಕಾಂಚನದ ರೂಹುಗಳನಿಡುವದಕೆ ತಡವೆ ॥ ೯೪ ॥

ಆಣಿಮುತ್ತುಗಳದರ ಮಧ್ಯ ಮಧ್ಯದಲಿ ।
ಕೋಣ[1]ಗಳ[1] ಮಾಡಿದರು [2]ಕೋಡಿಮುಟ್ಟನ[2]ಲಿ ॥ ೯೫ ॥

ಉಪ್ಪರಿಗೆ ಮನೆಯೊಳೊಪ್ಪಿರುವ ಉಯ್ಯಾಲೆ ।
ಚಪ್ಪರದ ಮಂಚಗಳು ಚಂದ ಪೊಗಸಾಲೆ ॥ ೯೬ ॥

ಕೋಟಿ ಸೂರ್ಯರ ಜರೆವ ಚಾವಡಿಯು ಮುಂದೆ ।
ಮಾಟಾದ ವಜ್ರದ ಕವಾಟಗಳು ಹಿಂದೆ ॥ ೯೭ ॥

ಗೋಮೇದಿಕದ ಗೋಡೆ ಮೇಲೆ ಪಚ್ಚೆಗಳು ।
ನೇಮದಿಂ ಬಿಗಿದ ವೈಡೂರ್ಯ ಲೋವೆಗಳು ॥ ೯೮ ॥

ಎಂಟುಸಾವಿರ ಮನೆಗಳೆಲ್ಲ [3]ಪೈಸರಿಸಿ[3] ।
ಮಂಟಪವ ರಚಿಸೆ ನೂರೆಂಟು ಪೊಸತೆನಿಸಿ ॥ ೯೯ ॥

---

1 ವಟ್ಟಲವ (ಕಾ) 2 ಚೋದ್ಯದ (ಕಾ) 3 ಈ ರೀತಿ (ಅ)

ಕಡೆಕಡೆಯೊಳೊಂದೊಂದು ಕೆರೆ ಭಾವಿ ತೋಡಿ ।
ಅಡಿಗಡಿಗೆ ಬಚ್ಚಲುಗಳಲ್ಲಲ್ಲಿ ಮಾಡಿ ॥ ೨೦೦ ॥

ಬೀದಿಬೀದಿಯೊಳೆಸೆವ ಕುರುಜು ಮೋರ್ವೆಗಳ ।
ಹಾದಿಹಾದಿಯೊಳೆತ್ತಿದರು ತೋರಣಗಳ ॥ ೨೦೧ ॥

ಎಸೆವ ಗುಡಿ ಮೇಲ್ಕಟ್ಟು ಎಲ್ಲಿ ನೋಡಿದರು ।
ಪಸರಿಸುವ ಚಪ್ಪರದಿ ಪಂತಿ ಮಾಡಿದರು ॥ ೨೦೨ ॥

ಗಂಧ ಕಸ್ತೂರಿ ಕುಂಕುಮ ಜವಾಜಿಗಳು ।
ಸಂದಣಿಸೆ ಪರಿಮಳಗಳೆಲ್ಲ ಸಾದುಗಳು ॥ ೨೦೩ ॥

ಈ ರೀತಿಯಿಂದ ಪಟ್ಟಣವ ಶೃಂಗರಿಸಿ ।
[1]ಸೀರಾಯುಧನ[1] ಪುರಕೆ ಸೂರುಮಡಿಯೆನಿಸಿ* ॥ ೨೦೪ ॥

ನಗರವನು ಶೃಂಗರಿಸಿ ಮತ್ತೆ ಚಾಕರರು ।
ಸೊಗಸಾಯಿತೆಂದು ಧರ್ಮಜಗೆ ಪೇಳಿದರು ॥ ೨೦೫ ॥

ನಗುತ ಭೂಪಾಲನವರೆಲ್ಲರನು ಕರೆದು ।
ಬಗೆಬಗೆಯ ಉಡುಗೊರೆಗಳನು ಕೊಟ್ಟನರಿದು ॥ ೨೦೬ ॥

ಆಮೇಲೆ ನಕುಲ ಸಹದೇವರನು ಕರೆಸಿ ।
ಸೀಮೆಸೀಮೆಯೊಳೆಲ್ಲ ಡಂಗುರವ ಹೊಯ್ಸಿ ॥ ೨೦೭ ॥

ವಚನ ॥ ಇಂತು ನಕುಲ ಸಹದೇವಾದಿಗಳು ದೇಶಾಧಿಪತಿಗಳ ಕರೆಯಹೋಗಲು ಇತ್ತಲಾ ಭೀಷ್ಮಾಚಾರ್ಯರು ಧರ್ಮರಾಯನಂ ಕರೆದು ಏನೆಂದರು ಎಂದರೆ—

೫೫ ರಾಗ ಶಂಕರಾಭರಣ—ತ್ರಿವುಡೆತಾಳ ೨

ಭೀಷ್ಮ—

ಕೇಳು ಧರ್ಮಜ । ಸತ್ಯವಚನವ । ಪೇಳ್ವೆ ನಾನು । —ಲಾಲಿಸಿ ।
ಪೇಳು ಮನಸಿಗೆ । ಬಾರದಿದ್ದರೆ । ಎನಗೆ ನೀನು ॥ ೨೦೮ ॥

ಖೂಳರವದಿರು । ನಿಮ್ಮ ನೋಹಿಗೆ । ಕರೆಯಲಿಲ್ಲ । —ಆದರು ।
ಪೇಳು ನೀನವ । ರೊಡನೆ ಗುಣವಿದು । ಚಿಂತೆಯಿಲ್ಲ ॥ ೨೦೯ ॥

ಹಿರಿಯ ತಂದೆಯ । ಮೊದಲು ಮನ್ನಿಸಿ । ಕರೆಯಬೇಕು ।—ನೀತಿಗೆ ।
ಬರಲಿ ಬಾರದೆ । ಕುಳಿತನಾದರೆ । ತನ್ನ ಮನಸು ॥ ೨೧೦ ॥

---

* ಧಾರಿಣೀಪತಿಗಳಿಗೆ ಓಲೆಯನು ಬರೆಸಿ (ಅ,ಕಾ) 1 ದೇವೇಂದ್ರನಿಭ (ಅ,ಕಾ)

ಪುರಿಯಲಾಗದು | ನಾವು ನೀತಿಯ | ಮಾತ ಕೇಳು | —ಬಾಲಕ |
ಗುರುಲಘುತ್ವವ | ಮೀರಬಾರದು | ಗ್ರಹಿಸಿ ನೋಡು || ೨೧೧ ||

ಹೋಗು ನೀ ಧೃತ | ರಾಷ್ಟ್ರನಲ್ಲಿಗೆ | ಕಯ್ಯ ಮುಗಿದು | —ಹೇಳಿಕೊ |
ನಾಗನೋಹಿಯ | ನಡೆಸಿಕೊಡಿರೆಂ | ದಂಘ್ರಿಗೆರಗು || ೨೧೨ ||

ಬೇಗ ಬಾ ಮ | ತ್ತೊಮ್ಮೆ ಭೀಮನ | ಕಳುಹಬಹುದು | —ಕರೆವಡೆ |
ಹೋಗಿ ಕೌರವ | ನಲ್ಲಿಗೆಂದನು | ಗಂಗೆಯೆಣುಗ || ೨೧೩ ||

ಉಂಡು ಸೊಗಸಿಲಿ | ವೀಳ್ಯವನು ಕೈ | ಕೊಂಡು ಯಮಜ | —ಬೇಗದಿ |
ದಂಡಿಗೆಯನೇ | ರಿದನು ವಾದ್ಯದ | ಸಂದಣಿಯಲಿ || ೨೧೪ ||

(ಧೃತರಾಷ್ಟ್ರನ ಪ್ರವೇಶ, ಧರ್ಮರಾಯನು ವಂದಿಸುತ್ತಾನೆ)

ತಂಡ ತಂಡದಿ | ಪಾಠಕರು ಜಯ | ವೆಂದು ಪೊಗಳೆ | —ಜಗದು |
ದ್ದಂಡ ಧರ್ಮಜ | ನಂಧಭೂಪನ | ಕಂಡು ದೂರ || ೨೧೫ ||

ಕಾಲು ನಡೆಯಲಿ | ಬಂದು ಭೂಮಿಪ | ನೋಲಗವನು | —ಹೊಕ್ಕನು |
ಲೀಲೆಮಿಗೆ ಪಾ | ದದಲಿ ಬಿದ್ದನು | ಪಾಂಡುತನುಜ || ೨೧೬ ||

ವಚನ || ಇಂತು ವಂದನೆಗೈದ ಧರ್ಮಜನಂ ತೆಗೆದಪ್ಪಿ ದಿವ್ಯಸಿಂಹಾಸನದ ಮೇಲೇರಿಸಿ ಧೃತರಾಷ್ಟ್ರನು ಆನಂದಬಾಷ್ಪದಿಂದ ತಕ್ಕೈಸಿ ಏನೆಂದನು ಎಂದರೆ—

೫೩ ರಾಗ ಕಲ್ಯಾಣಿ—ಏಕತಾಳ ೩ (ವಿಲಂಬಿತ)

ಧೃತರಾಷ್ಟ್ರ—

,ಬಂದೆಯ | ಮಗನೆ ನೀ | ,ನಿಂದೆನ್ನ | ಮುದ್ದಿನ |
,ಕಂದಯ್ಯ | ಬಾರೊ ಬಾ | ,ಎನ್ನರ | ಗಿಣಿಯೆ || ಪಲ್ಲವಿ ||

,ಕ್ಷೇಮವೆ | ಕುಂತೀದೇ | ,ವಿಗು ಫಲು | ಗುಣನಿಗು |
,ಭೀಮ ಮುಂ | ತಾಗಿ ಮಾ | ,ದ್ರೀಕುಮಾ | ರರಿಗು— ||
,ಗ್ರಾಮ ಭೂ | ಮಿಯೊಳೆಲ್ಲ |, ಸ್ವಸ್ಥವಾ | ಗಿಹರೇನೊ |
,ಹೇ ಮುದ್ದು | ಕಂದ ಇ | ,ತ್ತಿತ್ತ ಬಾ | ರೆಂದ— || ೨೧೭ ||

,ತರಳರು | ನೀವೆನ್ನ | ,ತಮ್ಮ ಹೋ | ದಾಗ ನಿಮ್ಮ |
,ಪರಿಪರಿ | ಕಷ್ಟದಿ | ,ಪೊರೆದಳು | ಕುಂತಿ— ||
,ವರಪುಣ್ಯ | ಚರಿತೆ ಸು | ,ಶೀಲೆ ಚಂ | ಪಕ ಮಾಲೆ |
,ನೆರೆ ಸೋಮ | ಕುಲಚಿಂತಾ | ,ಮಣಿಗಳು | ನೀವು— || ೨೧೮ ||

,[1]ಗಾಂಧಾರಿ | ಪಡೆದಳು | ,ನೂರೊಂದು ಮಕ್ಕಳ |[1]
,ಒಂದಕ್ಕೂ | ಸ್ಥಿರಬುದ್ಧಿ | ಬರಲಿಲ್ಲ | ವಲ್ಲ— ||
,ಇಂದಿಗಾ | ದರು ನಿನ್ನ | ,ವಾರ್ತೆಯ | ಕೇಳುತ್ತಾ |
ನಂದವಾ | ಗಿಹೆ ಯೆನ್ನ | ,ಅಣುಗ ಕೇ | ಳೆಂದ— || ೨೧೯ ||

,ಸಣ್ಣವ | ನಾದರು | ,ಧರ್ಮದ | ಗುಣವುಂಟು |
,ಪುಣ್ಯಾತ್ಮ | ನೆನೆಸಿಕೊಂ |, ಡಿರುವೆ ಲೋ | ಕದಲಿ ||
,ಕಣ್ಣಿಲ್ಲ | [2]ವಾಯ್ತು ಕಂ | ,ಡದರಿಂದ | ಹೆಚ್ಚಿನ್ನು[2] |
,ಚಿಣ್ಣ ನೀ | ಬಂದ ಕಾ | ,ರ್ಯವದೇನು | ಪೇಳು— || ೨೨೦ ||

ವಚನ || ಇಂತೆಂದ ಧೃತರಾಷ್ಟ್ರನ ಮಾತಿಗೆ ಧರ್ಮರಾಯನು ಏನೆಂದನು ಎಂದರೆ—

೫೭ ರಾಗ ಘಂಟಾರವ—ಜಂಪೆತಾಳ ೩

ಧರ್ಮರಾಯ—

ಇಂದುಕುಲ | ತಿಲಕ ನಿ | ಮ್ಮಾಶೀರ್ವ | ಚನಕರುಣ |
ದಿಂದ ನಾ | ವೆಲ್ಲವರು | ಸುಖದೊಳಿಹೆ | ವಯ್ಯ—||
ತಂದೆ ಕೇ | ಳಾದರಿ | ನ್ನೊಂದು ಬಿ | ನ್ನಪವುಂಟು |
ಹಿಂದು ಮುಂ | ದರಿಯದಿಹ | ತರಳರೈ | ನಾವು— || ೨೨೧ ||

ಮೊನ್ನೆ ಹಿರಿ | ಯಮ್ಮ ಗಜ | ನೋಹಿಯನು | ಮಾಳಪ್ಪಗ |
ಎನ್ನ ತಾ | ಯಿಯ ಬರಲು | ಹೇಳಿಲ್ಲ | ವಂತೆ—||
ಖಿನ್ನೆಯಾ | ದಳು ಮಾತೆ | ಆ ದುಃಖ | ದಲಿ ಕರಗಿ |
ಅನ್ನೋದ | ಕವ ಬಿಟ್ಟು | ಅಳುತಿರ್ದ | ಳಯ್ಯ— || ೨೨೨ ||

ಆ ಸಮಯ | ದೊಳು ಪಾರ್ಥ | ಭಾಷೆಪಂ | ಥಗಳಿಂದ |
ಆ ಸುರೇಂ | ದ್ರನ ಗಜನ | ತರುವೆ ತಾ | ನೆಂದ—||
ಏನು ಧೈ | ರ್ಯವೂ ಕಾಣೆ | ಎನಗೆ ತಿಳಿ | ಯದಿದೊಂದು |
ವಾಸಿಪಂ | ಥಗಳು ಬಲು | ದೋಷಕರ | ವಯ್ಯ— || ೨೨೩ ||

ಓಲೆಯನು | ಬರೆದದರ | ಶರತುದಿಯೊ | ಳೆಸೆಯೆ ಸುರ |
ಪಾಲನಿಹ | ಚಾವಡಿಯೊ | ಳೆರಗಿದರೆ | ಶಕ್ರ— ||
ಭಾಳ ಕೋ | ಪಿಸಲಂದು | ನಾರದರು | ನಡೆತಂದು |
ಪೇಳಿ ಶಾಂ | ತವ ಮಾಡಿ | ತಣಿಸಿರುವ | ರಂತೆ— || ೨೨೪ ||

1 ಕಂದರ ಪಡೆದಳು ನೂರೊಂದು ಗಾಂಧಾರಿ (ಅ)
2 ದವರು ಕಂಡುದಕಿಂತ ಹೆಚ್ಚಾಯ್ತು (ಕಾ)

[1]ಮದಗಜವು[1] | ಬರುವುದಕೆ | ಮಾಡು ದಾ | ರಿಯನೆಂದು |
[2]ಸದಯದಿಂ | ದಾ ಸುರಪ | ಖೇಚರನ | ಕಳುಹೆ[2]—||
[3]ಮುದದಿಂದ | ಬಂದವನು | ಪಾರ್ಥಗರು | ಹಲು ಮುಂದೆ[3] |
[4]ಹದನವೇ | ನೆಂದು ಶುದಿ | ಗಾಣದಿಂ | ದೆಮಗೆ[4]— || ೨೨೫ ||

ನಾಡವಮಾ | ತಲ್ಲವಿದು | ನಾ ಬಂದ | ಕಾರ್ಯ ದಯೆ |
ಮಾಡಬೇ | ಕಲ್ಲಿಪರಿ | ಯಂತ ಬಂ | ದೆಮ್ಮ—||
ನೋಡಿ ಸ | ನ್ನಾಹಗಳ | ನಾವರಿಯ | ದವಲೋಕ |
ವಾಡಿಕೊಂ | ಬಾ ಕೀರ್ತಿ | ಅಪಕೀರ್ತಿ | ನಿಮಗೆ— || ೨೨೬ ||

ವಚನ || ಇಂತೆಂದು ಧರ್ಮರಾಯನು ನುಡಿಯಲಾಗಿ ಧೃತರಾಷ್ಟ್ರನು ಏನೆನ್ನುತ್ತಿದ್ದನು ಎಂದರೆ—

೫೮ ರಾಗ ತೋಡಿ—ಏಕತಾಳ ೫ ತಿತ್ತಿತ್ತೈ

ಧೃತರಾಷ್ಟ್ರ—

, ಚಂದ | ವಾಯಿ | ತಯ್ಯ | ಮಾತು | ಇಂದು | ಕುಲ | ಜಾತ |
, ಸಂದೇ | ಹವೇ | ತಕ್ಕೆ | ಈಗ | ಬಂದೆ | ವು ಸಂ | ಗಾತ |
, ಇಂದೆ | ನ್ನ ಮ | ಕ್ಕಳೂ | ನೀವೂ | ಚಂದ | ವಾಗಿ | ಪೋಗಿ |
, ಒಂದಾ | ಗಿದ್ದು | ಮಾಡಿ | ಪೂಜೆ | ಎಂದ | ನು ಭೂ | ಮಿಾಶ ||೨೨೭||

, ಅಂಗ | ಜ ಸ | ನ್ನಿಭ | ನಾನು | ಅಲ್ಲಿ | ಬಂದ | ರೇನು |
, ಕಂಗ | ಳಿಲ್ಲ | [5]ದವ | ನ[5] ಪ್ರ | ಸಂಗ | ವೇತ | ಕಿನ್ನು |
, ಸಂಗ | ಡವಿ | ದ್ದು ನೀ | ವೆಲ್ಲ | ಮಾಡಿ | ಸಂತೋ | ಷವನು |
, ಮಂಗ | ಳಾತ್ಮ | ಕನು | ದಯೆ | ಯಿಂದ | ರಕ್ಷಿ | ಸುವನು || ೨೨೮ ||

(ಧೃತರಾಷ್ಟನ ನಿಷ್ಕ್ರಮಣ)

ವಚನ || ಇಂತೆಂದು ಲೇಸಿನ ಮಾತನಾಡಿ ವೀಳ್ಯಮಂ ಕೊಟ್ಟು ಬೀಳ್ಕೊಡಲು ಧರ್ಮಜನರಮನೆಗೆಯ್ತಂದು ಭೀಮನಂ ಕರೆದು, ಕೌರವರಂ ಕರೆದುಬಾರೆನಲು ಭೀಮನು ಮತ್ತೇನೆಂದನು ಎಂದರೆ—

---

1 ಮುಂದೆಗಜ (ಅ) 2 ಬಂದನಲ್ಲಿಂದೊರ್ವಖಚರಗಂಧರ್ವ (ಅ) 3 ಹಿಂದು ಮುಂದರ್ಜುನನ ಹೋಗಗೊಡಲಿಲ್ಲವನು(ಕಾ) 4 ಒಂದೆರಡು ದಿನಕವನ ಒಡಬಡಿಸಲಾಗಿ (ಕಾ) 5 ದಾಯಿತು (ಅ)

(ಧರ್ಮರಾಯನು ಕರೆಯಲಾಗಿ ಭೀಮನು ಬಂದು ವಂದಿಸುತ್ತಾನೆ)

೫೯ ರಾಗ ಕೇದಾರಗೌಳ—ಅಷ್ಟತಾಳ ೧

ಭೀಮ—

ಅಣ್ಣ ನಿ । ನಗೆ ಕಯ್ಯ । ಮುಗಿವೆನು । ಈ ಮಾತ ।
ಎನ್ನೊಡ । ನುಸುರ ಬೇ । ಡ—॥
ಕುನ್ನಿಪಿ । ಶಾಚಿಗ । ಳವರ ಕ । ರೆವುದಕ್ಕೆ ।
ಎನ್ನಿಂದ । ಸಾಧ್ಯವ । ಲ್ಲ— ॥ ೨೨೯ ॥

ಮೊದಲೆ ಕೌ । ರವರು ಮೂ । ರ್ಖರು ಜಗ । ದೊಳಗೆ ನಾ ।
ನದರಿಂದ । ಕಡುಮೂರ್ಖ । ನು—॥
ಕದನವಾ । ಗುವದು ನ । ಮ್ಮೊಳಗೆ ಲೇ । ಸಾಗದು ।
ಬದಲೊಬ್ಬ । ನನು ಕಳು । ಹು— ॥ ೨೩೦ ॥

ಮೊನ್ನೆ ಗಾಂ । ಧಾರಿಗೆ । ನೋಹಿಯ । ಮಾಳ್ಪಾಗ ।
ನಿನ್ನನು । ಕರೆದರೇ । ನೈ— ॥
ಇನ್ನು ನಾ । ವವರ ಕ । ರೆವುದಾವ । ಬಗೆ ಇಂಥ ।
ಭಿನ್ನ ಯೋ । ಚಿಸುವವ । ರ— ॥ ೨೩೧ ॥

ಧರ್ಮರಾಯ—

ತಮ್ಮ ಈ । ಮಾತ ನೀ । ಪೇಳ್ವರೆ । ತಿಳಿದು ಸ ।
ದ್ಧರ್ಮದ । ಸಂಗತಿ । ಯ— ॥
ಹೆಮ್ಮಕ್ಕ । ಳವರವ । [1]ರುಗಳು ಭೇ । ದಿಸಿದರೂ[1] ।
ನಮ್ಮೊಳು । ಭೇದವುಂ । ಟೇ— ॥ ೨೩೨ ॥

ಮರುಳೊಬ್ಬ । ಬತ್ತಲೆ । ಕುಣಿದಾಡಿ । ದರೆ ಮಿಕ್ಕ ।
ವರು ಕುಣಿ । ಯುವರೇ, । ನೈ— ॥
ಕರೆದು ಬಾ । ರೆಂದರೆ । ನೂರೆಂಟು । ಮಾತನು ।
ತ್ತರ ಕೊಡ । ಬೇಡ ನ । ಡೆ— ॥ ೨೩೩ ॥

ಮಿಗುವರಿ । ದವರು ಮಾ । ತಾಡುತ್ತ । ಬಂದರೂ
ಜಗಳಾಡ । ಬೇಡ ನೀ । ನು— ॥

---

1 ರೊಳುಭೇದವುಂಟಾದರೆ (ಕಾ,ಅ)

ನಗುತ ಮಾ । ತಾಡಿ ವೀ । ಳ್ಯವ ಕೊಟ್ಟೆ । ಲ್ಲರನು ನೋ ।
ಹಿಗೆ ಬನ್ನಿ । ರೆನುತ ಹೇ । ಳು— ॥ ೨೩೪ ॥

ವಚನ ॥ ಇಂತೆಂದು ಅಗ್ರಜನಪ್ಪಣೆಯಂ ಕೊಡಲಾಗಿ ಆ ಮಾತ ಮಸ್ತಕದೊಳಾಂತು ಸಕಲಸನ್ನಹದಿಂದ ಪಯಣವಾಗಿ ಬಂದನದೆಂತೆನೆ—

೬೦ ರಾಗ ಗೌಳಮಲಹರಿ—ಅಷ್ಟತಾಳ ೧

ಭೀಮ—

ಭೀಮ ಬಂ । ದನು ಕೌರ । ವನ ಮನೆ । ಗೆ— ।
ತಾಮಸ । ದೊಳು ನಗುತ । ಹಲವು ಹಂ । ಬಲಿಸುತ್ತ ॥ ಪಲ್ಲವಿ ॥

ಅಣ್ಣನ । ಪ್ಪಣೆಕೊಟ್ಟ । ನದರಿಂದ । ನಾ ಬಂದೆ ।
ಎಣ್ಣಿಸೀ । ,ಗೆ ಕೌರ । ವರಿಗೂ ನಮ । ಗೂ— ॥
ಬಣ್ಣದಿಂ । ದಲೆ ಕರೆವೆ । ಬಂದರೆ । ಜಗಳಕ್ಕೆ ।
ನ್ನಣ್ಣನಾ । ಜ್ಞೆಯ ಮೀರ್ರ್ವ । ಮಣ್ಣುಗೂ । ಡಿಪೆನೆಂದು ॥ ೨೩೫ ॥

ಬಂದರೊ । ಳ್ಳಿತು ಬಾರ । ದಿದ್ದರೆ । ಲೇಸು ಮ ।
ತ್ತೊಂದೊಂದು । ಮಾತಾಡಿ । ಕೆಣಕಿದ । ರೆ— ॥
[1]ಮುಂದೊಂದೂ[1] । ನೋಡದೆ । ಗಾಂಧಾರಿ । ಪಡೆದ ನೂ ।
ರೊಂದು ಮ । ಕ್ಕಳನೆಲ್ಲ । ಕೊಂದೇ ಬ । ರುವೆನೆಂದು ॥ ೨೩೬ ॥

ಮಾರುತಾ । ತ್ಮಜನಿಂತು । ಮನದಿ ಯೋ । ಚಿಸಿಕೊಂಡು ।
ಬೇರೆ ಬೇ । ರೊಂದೊಂದೆ । ಣಿಸುತ ಬಂ । ದು— ॥
ಕೇರಿಕೇ । ರಿಯೊಳೆಲ್ಲ । ನೆರೆದು ನೋ । ಡುತ್ತಿರೆ ।
ಧಾರಿಣೀ । ಪತಿಯೆಡೆಗೆ । ಸಾರಿ ಬಂ । ದನು ಕಡೆಗೆ ॥ ೨೩೭ ॥

(ಆಸನಸ್ಥನಾದ ಕೌರವನ ಪ್ರವೇಶ—ತೆರೆಯೆತ್ತಿ)

೬೧ ಕಂದಪದ್ಯ

ಮಾರುತತನಯನ ಕಾಣುತ
ಏರಿದ್ದಾಸನವ [2]ಬಿಟ್ಟು[2] ಕುಳ್ಳಿರಿಸುತ್ತಂ ।
ಕೌರವರಾಯಂ ಪ್ರಿಯದಿಂ
ದಾರಯ್ದು ನಯೋಕ್ತಿಯಿಂದ ಬೆಸಗೊಳುತಿರ್ದಂ ॥ ೨೩೮ ॥

1 ಹಿಂದುಮುಂದು (ಅ) 2 ನಿಳಿದು (ಅ)

೬೨ ಸಾಂಗತ್ಯ ; ರಾಗ ಪಂತುವರಾಳಿ—ರೂಪಕತಾಳ ೧ ; ಅಷ್ಟತಾಳ ೧

ಕಾರವ—

ಬಂದೆಯಾ । ಭೀಮ ಧ । ರ್ಮಜ ಫಲು । ಗುಣ ಮಾದ್ರೀ ।
ನಂದನರ್ । ಸಹಿತ ಕ್ಷೇ । ಮಗಳೆ— ॥
ಮಂದಿರ । ದೊಳಗೆ ಚಿ । ಕ್ಕಮ್ಮ ನ । ಪರು ಮನ ।
ನೊಂದುಕೊಂ । ಡಿಹರಂತೆ । ಬಹಳ— ॥ ೨೩೯ ॥

ಇಂದ್ರನ । ಗಜವಂತೆ । ಇಳೆಗೆ ಬ । ರುವುದಂತೆ ।
[1]ಮುಂದಾಗಿ । ನಿಮ್ಮ ರ । ಮನೆಗೆ[1]— ॥
ಗಾಂಧಾರಿ । ಕರೆಯದ । ಬಗೆಗಾಗಿ । ಪ್ರತಿನೋಹಿ ।
ಎಂದು ಮಾ । ಡುವಿರಿ ನಿ । ಮ್ಮೊಳಗೆ— ॥ ೨೪೦ ॥

(ಅಷ್ಟತಾಳ ೧)

ತಂದೆಯಿ । ಲ್ಲದ ಮಕ್ಕ । ಳೆಂದು ನೋ । ಡಿವಡೀಗ ।
ಬಂದನ । ರ್ಜುನ ನಮ । ಗಿದಿರು— ॥
ಒಂದೊಂದು । ಪರಿಯ ಜೋ । ದ್ಯವ ಮಾಡಿ । ಕೊಂಡೆಮ್ಮ ।
ನಿಂದೆ ಮಾ । ಡುವರೆ ರಾ । ಜ್ಯದಲಿ— ॥ ೨೪೧ ॥

ಉಂಬುದ । ಕನುಕೂಲ । ವಿಲ್ಲಾದ । ರೂ ಬಾಯ ।
ಡಂಭಕ । ತನ ಬಿಡ । ಪಾರ್ಥ— ॥
ಕುಂಭಿನಿ । ಯೊಳಗರ್ಧ । ಕೊಟ್ಟ ಕಾ । ರಣದಿಂದ ।
ಸಂಭ್ರಮ । ಬಂತು ಧ । ರ್ಮಜಗೆ— ॥ ೨೪೨ ॥

ಹಿಂದುಮುಂ । ದರಿಯದ । ಹುಡುಗಮೂ । ಳರಿಗೆಲ್ಲ ।
ಇಂದು ನ । ಮ್ಮೊಡನೆ ಪಂ । ಥಗಳೇ— ॥
ಹಿಂದ[2]ಣಾ । ರಣ್ಯವೇ[2] । ಸಾಕು ಪಾಂ । ಡವರಿಗೆ ।
ಮುಂದೆ ಗ್ರಾ । ಮಗಳೆಲ್ಲ । ತಡಸಿ— ॥ ೨೪೩ ॥

ಮನೆಗೆ ಬಂ । ದವನೊಳು । ನಿಷ್ಠುರ । ವೇಕೆ ಸು ।
ಮ್ಮನೆ ನೋಡ । ಬಹುದಿನ್ನು । ನಾಳೆ— ॥
ಇನಿತು ನೀ । ಬಂದ ಕಾ । ರ್ಯವದೇನು । ಹೇಳೆಗೆಂ ।
ದೆನುತ ವೀ । ಳ್ಯವ ಕೊಟ್ಟ । ನಾಗ— ॥ ೨೪೪ ॥

---

1 ಇಂದು ನೋ । ಹಿಯು ನಾಳ್ಪ । ರಂತೆ (ಅ) 2 ಣ ರಾಜ್ಯವೆ (ಅ)

### ೬೩ ರಾಗ ಘಂಟಾರವ—ಜಂಪೆತಾಳ ೩

ಭೀಮ—

ಅಣ್ಣ ಕೇ | ಳೀಮಾತಿ | ಗುತ್ತರವ | ಕೊ[1]ಡಲು ಧ |
ರ್ಮ[1]ಣ್ಣನ | ಪ್ಪಣೆಯಿಲ್ಲ | ಆಗಲವ | ಕೇನು— || ೨೪೫ ||

ಹಿರಿಯವರು | ನೀವೊಂದು | ಹೆಚ್ಚು ಮಾ | ತಾಡಿದರೂ |
ಕಿರಿಯವರು | ಸಾವದನು | ಕೇಳ್ವುದೇ | ಸಹಜ— || ೨೪೬ ||

ಇನ್ನು ಪೇ | ಳುವುದೇನು | ಈ ಪಾರು | ಪತ್ಯವನು |
ಮುನ್ನವೇ | ಆಡಿ ಮುಗಿ | ಸಿದೆಯಲ್ಲ | ನೀನು— || ೨೪೭ ||

ಕರಿನೋಹಿ | ಯುತ್ಸವವ | ಕಾಣಬೇ | ಕೆಂದೆನುತ |
ಕರೆದುಬಾ | ರೆಂದೆನ್ನ | ಕಳುಹಿಸಿದ |ನಣ್ಣ— || ೨೪೮ ||

ತಮ್ಮಂದ್ಯ | ರೆಲ್ಲರನು | ಸಂಗಡವೆ | ಕರಕೊಂಡು |
ನಿಮ್ಮ ಬರ | ಹೇಳಿದನು | ಧರ್ಮಜನು | ನಾಳೆ— || ೨೪೯ ||

ಊಳಿಗವ | ಮಾಡುವರಿ | ಗೂರವಾ | ತುಗಳೇಕೆ |
ಹೇಳಬಂ | ದವನೊಡನೆ | [2]ಹೆಣಗಾಟ | ವೇಕೆ[2]— || ೨೫೦ ||

ಪೊಡವಿಪತಿ | ನೀ ಬಂದು | ನಡೆಸಿಕೊಡ | ಬೇಕಂತೆ |
ತಡವಾಗು | ತಿಹುದುದೆನಗೆ | ತೆರಳುವೆನು | ಮನೆಗೆ— || ೨೫೧ ||

### ೬೪ ರಾಗ ಸೌರಾಷ್ಟ್ರ—ತ್ರಿವುಡೆತಾಳ ೨

ಕೌರವ—

ಕಂಡಿರೇ ಮಂ | ತ್ರಿಗಳು ಭೀಮನ |
ಪುಂಡುತನದು | ತ್ತರವ ಲೋಕದಿ |
ಗಂಡನಿಲ್ಲದ | ಸತಿಯರೀಪ್ರತ | ಕೊಂಡುದುಂಟೇ || ೨೫೨ ||

ಹುಟ್ಟನರೆ ಮುದಿ | ಭ್ರಾಂತ ಭೀಷ್ಮನ |
ಕಟ್ಟಳೆಯ ನೆರೆ | ಕೇಳಿ ಧರ್ಮಜ |
ಕೆಟ್ಟನಲ್ಲದೆ | ಮುಂದೆ ಲೇಸಿನ | ಬಟ್ಟೆಯಿಲ್ಲ || ೨೫೩ ||

---

1 ಕೊಡುವುದಕೆ | ಆ (ಅ) 2 ನ್ಯಾಯವೇನಯ್ಯ (ಓ)

ಎಷ್ಟು ಮಾತೆಲೊ । ನಿನಗೆ ಅರಮನೆ ।
ಮೆಟ್ಟುಗಳ ಹ । ತ್ತ್ಯರಿಯೆ ಸುಮ್ಮನೆ ।
ಪೆಟ್ಟುತಿನ್ನದೆ । ಹೋಗು ನಿನ್ನಯ । ಗುಟ್ಟನುಳುಹಿ ॥ ೨೫೪ ॥

೬೫ ರಾಗ ಆಹೇರಿ—ಜಂಪೆತಾಳ ೨

ಭೀಮ—

ಲೇಸಾಯಿ । ತಯ್ಯ ಹಿರಿ । ಯಣ್ಣ ನಾ । ನಿನ್ನ ಕರೆ ।
ವಾಸೆಯಲಿ । ಬಂದುದಕು । ನೀ ಪೇಳಿ । ದುದಕೂ ॥ ಪಲ್ಲವಿ ॥

ಪುಂಡುಪ್ಪೋ । ಕರನೆಂದು । ಮೊದಲೆನಗೆ । ಪೆಸರಿಟ್ಟೆ ।
ಭಂಡನೆಂ । ದೆನುತ ನಾ । ಮಪನಿಟ್ಟೆ । ಯರ್ಜುನಗೆ ।
ಉಂಡುಸೊ । ಕ್ಕಿದನೆಂದು । ಧರ್ಮಜನ । ಜರೆದೆ ಮರು ।
ಳೆಂದು ಅ । ಜ್ಜಯ್ಯನನು । ಕರೆದೆ— । —ತಾಯ ।
ಮುಂಡೆಯೆಂ । ದೊರೆದು ಸ । ಮ್ಮಲ್ಲರನು । ಬೈದೆ— ॥ ೨೫೫ ॥

ದೊರೆಯಹುದು । ನೀನು ಕುಂ । ಬಾರರೆ । ಲ್ಲರು ನಾವು
ಅರಮನೆಯ । ಹುಟ್ಟಿದಾ । ರಭ್ಯ ಕಂ । ಡವರಲ್ಲ ।
ಮರಿಯಾದೆ । [1]ಇಲ್ಲದೀ । ನುಡಿದ[1]ಮಾ । ತುಗಳೆಲ್ಲ ।
ಮರೆಯದೇ । ಕಟ್ಟಿರಿಸು । ನೀನು— ।[2] —ಇದಕೆ ।[2]
ಕರಿನೋಹಿ । ಯನು ಮುಗಿಸಿ । ಬರುವೆನೈ । ನಾನು— ॥ ೨೫೬ ॥

(ಭೀಮನೂ ಅವನ ಹಿಂದಿನಿಂದ ಕೌರವನೂ ತೆರಳುತ್ತಾರೆ; ಧರ್ಮರಾಯನ ಸಭೆ, ವಾದ್ಯ ಘೋಷದೊಡನೆ ಬರುತ್ತಿರುವ ನಾನಾ ದೇಶದ ರಾಜರನ್ನು ಇದಿರ್ಗೊಂಡು ಸ್ವಾಗತಿಸುವ ಸಂಭ್ರಮ.)

ಖಳಶಿರೋ । ಮಣಿಯ ಜೆದ । ರಿಸಿ ಬಂದ । ನಲ್ಲಿಂದ ।
ಮೊಳಗಿದವು । ವಾದ್ಯಸಂ । ತತಿ ನಾಲ್ಕು । ದಿಕ್ಕಿಂದ ।
ಇಳೆಯ ಪಾ । ಲಕರು ನಡೆ । ತಂದರೆಂ । ದೆನುತಲ್ಲಿ ।
ಬಳಿಯ ಸಂ । ಬಳವನುಂ । ಬಪರು— । —ಬಂದು ।
ತಿಳುಹಿದರು । ಧರ್ಮಜಗೆ । ಇದಿರ್ಗೊ[3]ಳು । ತ್ತ[3]ವರು ॥ ೨೫೭ ॥

ರಥವಾಜಿ । ಪಂಕ್ತಿಗಳ । ಸತ್ತಿಗೆಯ । ಸಾಲುಗಳ ।
ಚತುರಂಗ । ಮಾರ್ಬಲ ವಿ । ಲಾಸಗಳ । ಘೋಷಗಳ ।

---

1 ಉಳಿಯದಿಂತೆಂಬ (ಅ) 2 ಕೇಳ್ವದಕೆ (ಅ) 3 ಳ್ವುವ (ಅ)

ಜೊತೆಯಾಗಿ | ನಡೆತರುವ | ದಂತಿಗಳ | ಪಂತಿಗಳ |
ಜತನದಿಂ | ದಿದಿರ್ಗೊಂಬ | ರಾಗ— | —ಕಂಡು |
ಅತಿಶಯದೊ | ಳುತ್ಸಾಹ | ವೆಸಗಿದರು | ಜೇಗ— || ೨೫೮ ||

ಒಂದುಕಡೆ | ಯಲಿ ಭೀಮ | ನಿದಿರ್ಗೊಂಬ | ನರಸುಗಳ |
ಒಂದುಕಡೆ | ಯಲಿ ಪಾರ್ಥ | ಮನ್ನಿಸುವ | ಮನ್ನೆಯರ |
ಒಂದುಕಡೆ | ಯಲಿ ನೃಪಾ | ದಿಗಳ— | — ಕರೆದು |
ಚಂದದಲಿ | ಭೀಷ್ಮ ತೋ । ರುವ ಬಿಡಾ | ರಗಳ— || ೨೫೯ ||

೬೬ ರಾಗ ಸೌರಾಷ್ಟ—ಅಷ್ಟತಾಳ ೧

ಧರ್ಮರಾಯ—

ಬಂದಿರೆ | ಮಗಧಭೂ | ಪಾಲರು | ಶೀಲರು |
,ಬಂದಿ | ರೇ— | ನೈ— | —ನಡೆ |
ತಂದಿರೆ | ಅಂಗ ಕ | ಳಿಂಗ ಕಾಂ | ಭೋಜರು |
,ಬಂದಿ | ರೇ— | ನೈ— || ೨೬೦ ||

ಗೋಟ ಮ | ರಾಟ ಕ | ರ್ಣಾಟಕ | ದರಸರು |
,ಬಂದಿ | ರೇ— | ನೈ— | —ಸರಿ |
ಮೀಟಾದ | ಪಾಂಡ್ಯ ದ್ರಾ | ವಿಡದೇಶ | ದೊಡೆಯರು |
,ಬಂದಿ | ರೇ— | ನೈ— || ೨೬೧ ||

ಚೋಳೇಂದ್ರ | ತೆಲುಗು ಕೊಂ | ಕಣದೇಶ | ದಧಿಪರು |
,ಬಂದಿ | ರೇ— | ನೈ— | —ಜೈನ |
ಮಾಳವ | ಮಲೆಯಾಳ | ಜಾಲದ | ಕ್ಷಿತಿಪರು |
,ಬಂದಿ | ರೇ— | ನೈ— || ೨೬೨ ||

ಕರ್ಮಾರ | ಕೆರ್ಮ್ಮರ | ದರಸರು | ನೀವೆಲ್ಲ |
,ಬಂದಿ | ರೇ— | ನೈ— | —ಬಲು |
ದಿರ್ಮ್ಮದ | ಗೌಳ ಸೌ | ರಾಷ್ಟ್ರದ | ರಥಿಕರು |
,ಬಂದಿ | ರೇ— | ನೈ— || ೨೬೩ ||

ಕುಂತಳ | ದೊಡೆಯ ಕಾ | ಶ್ಮೀರ ಬ | ಲ್ಲಾಳರು |
,ಬಂದಿರೇ— | ನೈ— | —ಚಂದ್ರ |
ಕಾಂತಾದ್ರಿ | ಸಿಂಹಾದ್ರಿ | ನಾಯಕ | ರೆಲ್ಲರು |
,ಬಂದಿ | ರೇ— | ನೈ— || ೨೬೪ ||

ಬರ್ಬರ । ದೇಶದ । ಸರ್ಬ ನ । ವಾಯ್ತರು ।
,ಬಂದಿ । ರೇ— । ನೈ— । —ನೀವು ।
ನಿರ್ಭಯ । ವಾದ ನಿ । ರಾಪತ್ತಿ (?) । ಸಂಶರು ।
,ಬಂದಿ । ರೇ— । ನೈ— ॥ ೨೬೫ ॥

ಅಹಿಛತ್ರ । ಭೂಪಾಲ । ಕೇಕಯ । ತುಳುವರು ।
,ಬಂದಿ । ರೇ— । ನೈ— । —ನೀವು ।
ಬಹು ಪರಾ । ಕ್ರಮಿ ಸಿಂಧು । ಮಕರ ತ್ರಿ । ಯಂಬಕರು ।
,ಬಂದಿ । ರೇ— । ನೈ— ॥ ೨೬೬ ॥

ಛಪ್ಪನ್ನ । ದೇಶದೊ । ಳಿರುವ ಭೂ । ಕಾಂತರು ।
,ಬಂದಿ । ರೇ— । ನೈ— । —ನೀವು ।
ಒಪ್ಪುಗೊ । ಳ್ಳಲು ಬೇಕು । ತಿಳಿಯದ । ವರು ನಾವು ।
,ಬಂದಿ । ರೇ— । ನೈ— ॥ ೨೬೭ ॥

ಬಡವರು । ನಾವು ನ । ಮ್ಮೊಡನೆ । ಸಂಪ್ರೀತಿಲಿ ।
,ಬಂದಿ । ರೇ— । ನೈ— । —ಹೀಗೆ ।
ನಡೆಸಿಕೊ । ಳ್ಳಿರಿ ಕಯ್ಯ । ಪಿಡಿದು ಎಂ । ದೆಂದಿಗೂ ।
,ಬಂದಿ । ರೇ— । ನೈ— ॥ ೨೬೮ ॥

### ೬೭ ವಾರ್ಧಿಕಷಟ್ಪದಿ

ಈ ರೀತಿಯಿಂದ ಬಂದರಸುಗಳ ಮನ್ನಿಸುತ
ಬೇರೆಬೇರವರಿಗೆ ಬಿಡಾರಗಳನಿತ್ತು ಎಳ
ನೀರು ಸಕ್ಕರೆ ಬೆಲ್ಲ ಹಾಲು ಹಣ್ಣುಗಳ ಕೊಟ್ಟೋರಂತೆ ತೃಪ್ತಿಪಡಿಸಿ ।
ತಾರತಮ್ಯಗಳರಿತು ಉಚಿತಗಳ ಕೊಡಿಸಿ ಪ
ನ್ನೀರು ಕಸ್ತೂರಿ ಕಸ್ತೂರಿ ಜವಾಜಿಗಳ ವಿ
ಸ್ತಾರ, ಮಲ್ಲಿಗೆ ಜಾಜಿ ಸುರಗಿಗಳೊಳುಪಚರಿಸಿ ಅರ್ಜುನಂ
ಗಿಂತೆಂದನು ॥ ೨೬೯ ॥

### ೬೮ ರಾಗ ವರಾಳಿ—ಏಕತಾಳ ೩

ಧರ್ಮರಾಯ—
ಬಂದ ಭೂಪ । ರಂಪ ನೋಡೊ । ತಮ್ಮ—ಇಂ । ದ್ರನಾನೆಯ ।
[1]ಇಂದು ತರುವ । ಪಂಥವಲ್ಲೊ[1] । ತಮ್ಮಾ ತ । ಮ್ಮ— ॥

1 ತಂದು ಪೂಜಿಸಂದವೇನೊ (ಅ)

ಮಂದ ಬುದ್ಧಿಗ । ಳಾದೆವಲ್ಲೊ । ತಮ್ಮ—ಈ ।ಕಾರ್ಯದೊಳಗೆ ।
ಮುಂದುವರಿದು । ಹೋದೆವಲ್ಲೊ । ತಮ್ಮಾ ತ । ಮ್ಮ— ॥ ೨೭೦ ॥
ಹಗೆಯವರು । ಬಹಳ ನಮಗೆ । ತಮ್ಮ— [1]ಎಂ । ದೆಂದಿಗವರು[1] ।
ನಗುವ ರೀತಿ । ಯಾಯಿತಲ್ಲೊ । ತಮ್ಮಾ ತ । ಮ್ಮ— ॥
ಹಗುರಾದೆವು । ರಾಜ್ಯಕೆಲ್ಲ । ತಮ್ಮ—ಈ । ಮಾತು ಮುಂದೆಂ ।
ದಿಗೂ ಬಿಟ್ಟು । ಹೋಗದಲ್ಲೊ । ತಮ್ಮಾ ತ । ಮ್ಮ— ॥ ೨೭೧ ॥
ಇಚ್ಚೆತಪ್ಪಿ । ನಾವೆಲ್ಲರು । ತಮ್ಮ—ಇ । ದ್ದಷ್ಟುಕಾಲ ।
[2]ರಚ್ಚೆಗೆ ಈ । ಡಾದೆವ[2]ಲ್ಲೊ । ತಮ್ಮಾ ತ । ಮ್ಮ— ॥
ಮುಚ್ಚುಮರೆ । ಏನು ಮುಂದೆ । ತಮ್ಮ—ಶ್ರೀ । ಹರಿಯಪ್ಪಣೆ ।
ಹೆಚ್ಚಿನ ಪೌ । ರುಷಕೆ ಕಾಣೊ । ತಮ್ಮಾ ತ । ಮ್ಮ— ॥ ೨೭೨ ॥

ಅರ್ಜುನ—

ಈ ಮಾತಿಗೆ । ಚಿಂತೆ ಬೇಡ । ಅಣ್ಣದೇ । ವ—ಬಂದ ।
ಭೂಮಿಪರ । ನಿದಿರುಗೊಳ್ಳೆ । ಅಣ್ಣದೇ । ವ— ॥
ತಾಮಸಗೊ । ಳದಿರಯ್ಯ । ಅಣ್ಣದೇ । ವ—ಆನೆ ।
ಭೂಮಿಗಿಳಿದು । ಬರುವುದಯ್ಯ । ಅಣ್ಣದೇ । ವ— ॥ ೨೭೩ ॥
ಚಿಂತಿಸುವು । ದಿನ್ನೇತಕೆ ನೀ । ನಣ್ಣದೇ । ವ—ಲಕ್ಷ್ಮೀ ।
ಕಾಂತನ ಕೃಪೆ । ಯಿಲ್ಲವೇನೊ । ಅಣ್ಣದೇ । ವ— ॥ ೨೭೪ ॥

## ಶ್ರೀ ಕೃಷ್ಣನ ಸಮಾಗಮನ

೬೯ ರಾಗ ಮಧ್ಯಮಾವತಿ—ಅಷ್ಟತಾಳ ೨

ಧರ್ಮರಾಯ—

ಬರಲಿ, । ಲ್ಲ,ವ । ಲ್ಲ—ಸ್ವಾ । ಮಿಯ ಕರೆ ।
ತರಲಿ, । ಲ್ಲ,ವ । ಲ್ಲ— ॥ ಪಲ್ಲವಿ ॥
ಧರಣೀ ಪಾ । ಲರು ಬಂದು । ಸೆರೆವ ಮೊ । ದಲೆ ಶ್ರೀ ।
ಹರಿಯೊಳ । ಪ್ಪಣೆ ಕೇಳ । ಮರೆತೆವು । ನಾವೆಲ್ಲ ॥ ಅನುಪಲ್ಲವಿ ॥
ಏ,ನ । ಹೇಳುವ । ನೊ—ಮು । ರಾರಿ ಮು ।
ತ್ರೇ,ನ । ಯೋಚಿಪ । ನೊ— ॥

---

1 ಭೂಪಾಲರೆಲ್ಲ (ಅ,ಕಾ) 2 ಹುಚ್ಚರೆಂದು ಜೈವರ (ಅ)

ನೀನೆ ಪೋ । ಗತಿಬೇಗ । ದಲಿ ಕಾಲ । ಕಟ್ಟಕೊ ।
ದಾನವಾಂ । ತಕಗಿಂದು । ದನ್ನುಯ್ಯ । ಶರಣೆಂದು ॥ ೨೭೫ ॥

ನಡೆ ಹೋಗು । ನಿಲ್ಲಬೇ । ಡ—ಈ । ಗಲೆ ಜಗ ।
ದೊಡೆಯನ । ನಿಲ್ಲಿ ಗಾ । ಢ— ॥
ಕಡುಬೇಗ । ದಲಿ ಕರೆ । ತಾರದಿ । ದ್ದರೆ ಬಂದ ।
ಪೊಡವಿಪಾ । ಲರು ನಿಲ್ಲ । ದಡಿಯಿಡು । ವರು ಮೆಲ್ಲ ॥ ೨೭೬ ॥

(ಅರ್ಜುನನು 'ಧೀಂಗಿಣ' ಹೊಡೆದು ತೆರಳುತ್ತಾನೆ, ಆಮೇಲೆ ಇತರರ ನಿಷ್ಕ್ರಮಣ.
ಅನಂತರ ತೆರೆಹಿಡಿದು ಶ್ರೀ ಕೃಷ್ಣನ ಒಡ್ಡೋಲಗ)

೬೦ ದ್ವಿಪದಿ

ರಥವೇರಿ ರಾಜಬೀದಿಯಲಿ ಫಲುಗುಣನು ।
ಅತಿಬೇಗ ನಡೆತಂದ ಧರ್ಮಜಾನುಜನು ॥ ೨೭೭ ॥

ವಿಸ್ತಾರವಾಗಿರುವ ಜಲಧಿಮಧ್ಯದೊಳು ।
ಅತ್ಯಂತ ಶೋಭಿಸುವ ದ್ವಾ[1]ರಾವತಿಯೊಳು[1] ॥ ೨೭೮ ॥

ಚಿನ್ನದಾ ನೆಲೆಗಟ್ಟು ಚಿತ್ರವಾಗಿರುವ ।
ರನ್ನದಾ ಗೋಡೆಗಳು ರಂಜಿಸುತ್ತಿರುವ ॥ ೨೭೯ ॥

ಕನ್ನಡಿಯ ಬಾಗಿಲೊಳು ಕಡುಪ್ರಕಾಶಗಳು ।
ಸನ್ನೆಯಿಂದಲೆ ಕರೆವ ಸೊಗಸುಬೊಂಬೆಗಳು ॥ ೨೮೦ ॥

ವಜ್ರದ ಕವಾಟಗಳು [2]ವಳವಿ[2] ಮಧ್ಯದಲಿ ।
ಸಜ್ಜುಗೊಂಡಿರುತಿರಲು ಸಕಲ ಚೋದ್ಯದಲಿ ॥ ೨೮೧ ॥

ಕಾಲುದೀವಿಗೆಗಳಾ ಕಂಭಗಳ ನಡುವೆ ।
ಸಾಲಾಗಿ ನಿರ್ಮಿಸಿದ ಸೌಂದರ್ಯದೊಡವೆ ॥ ೨೮೨ ॥

ಹೊಂಬಣ್ಣದುಪ್ಪರಿಗೆಯೊಳಗೆ ಉಯ್ಯಾಲೆ ।
ಸಂಭ್ರಮದ ಚಪ್ಪರ, ಮಂಚಗಳು ಮೇಲೆ ॥ ೨೮೩ ॥

ಪಚ್ಚೆಯಾ ಹರಳುಗ[3]ಳ ಪತ್ತಿಗೆಗಳಿಂ[3]ದ ।
ಅಚ್ಯುತನ ಪುರ[4]ದ ಭಿತ್ತಿಗಳೆಲ್ಲ ಚಂದ[4] ॥ ೨೮೪ ॥

---

1 ರಕಾ ನಗರ (ಅ) 2 ಮಧ್ಯ (ಅ); ವಳವಿ (ತೃ) = ಗೋಡೆ (ಸಂ. ವಲಭಿ)
3 ಳು ಪಂತಿಯಲಿ ಬಿಗಿ (ಓ, ಕಾ) 4 ದೊಳಗೆ ಅರ್ತಿಯಿಂದಿರುವ (ಓ, ಕಾ)

ನೀಲದಾ ತೊಲೆಗಳಲಿ ನೀಳ್ದಿರುವ ಝಲ್ಲಿ ।
ಸಾಲು ಮುತ್ತಿನೊಳೆಸೆವ ಸರಪಣಿಗಳಲ್ಲಿ ॥ ೨೮೫ ॥

ಸಿಂಹಾಸನವನೇರಿ ಶ್ರೀಕೃಷ್ಣನಿರಲು ।
ಬ್ರಹ್ಮಾದಿಸುರರೆಲ್ಲ ಬಂದು ಜಯವೆನಲು ॥ ೨೮೬ ॥

ಎಡಬಲದಿ ರಾಧೆ ಕಾಳಿಂದಿ [1]ಕುಳಿತಿರಲು[1] ।
ಅಡಿಗಡಿಗೆ ರುಕ್ಮಿಣಿಯು ಮಡಿದೆಲೆಯ ಕೊಡಲು ॥ ೨೮೭ ॥

ಜಾಂಬವತಿ ಬೀಸುವಳು ಚಾಮರಿಗೆಯಿಂದ ।
ಸಂಭ್ರಮದಿ ಭದ್ರೆ ಕಾಲೊತ್ತುತಿರಲಂದ ॥ ೨೮೮ ॥

ಸತ್ಯಭಾಮೆಯು ತೊಡೆಯ ತಲೆದಿಂಬ ಮಾಡಿ ।
ಅತ್ಯಂತ ಹರುಷದಲಿ ಹರಿಯಿರಲು ನೋಡಿ ॥ ೨೮೯ ॥

ಬಾಗಿಲವರೈತಂದು ಬಂದ ಫಲುಗುಣನ ।
ಆಗಮನ ಹೇಳಿದರು ನಾಗಶಯನನಿಗೆ ॥ ೨೯೦ ॥

(ಅರ್ಜುನನ ಪ್ರವೇಶ)

ಒಳಗೆ ಬಂದನು ಪಾರ್ಥ ಉತ್ಸಾಹಗೊಂಡ ।
ನಳಿನನಾಭನ ಪಾದ ನಲವಿಂದ ಕಂಡ ॥ ೨೯೧ ॥

೬೧ ರಾಗ ಪಂತುವರಾಳಿ—ಏಕತಾಳ ೫

ಅರ್ಜುನ—

ಜಯ ಜ,ಯ । ಪಾಹಿ ಗೋವಿಂ । ದ – ಗೋ । ಪಾಲಕೃಷ್ಣ ॥ ಪಲ್ಲವಿ ॥
ಅಂಗಜ । ಪಿತಭವ । ಭಂಗಸು । ರಾರ್ಚಿತ ।
ಸಂಗರ । ಜಿತ ಖಳ । ಪುಂಗವ । ಸನ್ನುತ ॥ ೨೯೨ ॥

ಸರ್ವಲೋ । ,ಕಧಾ । ತಾರ ಸ । ರ್ವೇಶ್ವರ ।
ಸರ್ವವಂ । ,ದ್ಯ ಸ । ಜ್ಜನ ಪರಿ । ಪಾಲಕ ॥ ೨೯೩ ॥

ಮತ್ಸ್ಯಕೂ । ,ರ್ಮ ವಾ । ರಾಹ ನ । ರಸಿಂಹ ।
ನಿತ್ಯವಾ । ,ಮನಾ । ಕಾರ ಮ । ಹಾತುಮ ॥ ೨೯೪ ॥

---

1 ರುಕ್ಮಿಣಿಯು (ಅ)

ಪರಶುರಾ | ,ಮ ರಘು | ರಾಮ ಪ | ರಾತ್ಪರ |
ಭರಿತಮೂ | ,ರ್ತಿ ಭಕು | ತರ ಪೊರೆ | ವ ಕೀರ್ತಿ || ೨೫ ||

ಕಮಲನಾ | ,ಭ ಕಮ | ಲಾಕ್ಷ ಜ | ನಾರ್ದನ |
ಕಮಲಜ | ಪಿತ ಹೃ | ತ್ಕಮಲನಿ | ವಾ,ಸ || ೨೬ ||

ವಚನ || ಇಂತೆಂದು ಸ್ತುತಿಯಂ ಮಾಡಿ ಸಾಷ್ಟಾಂಗ ವಂದಿಸಿದ ಅರ್ಜುನನಂ ತೆಗೆದಪ್ಪಿ ಸಿಂಹಾಸನದಲ್ಲಿ ಕುಳ್ಳಿರಿಸಿ ಶ್ರೀಕೃಷ್ಣನು ಏನೆಂದನು ಎಂದರೆ—

೭೨ ರಾಗ ಮಧ್ಯಮಾವತಿ—ಏಕತಾಳ ೪

ಕೃಷ್ಣ—

,ಬಂದೆ ಏ | ತಕೆ ಬಲು | ,ಬಳಲುತ್ತ | ಬಹುದೂರ |
,ಇಂದ್ರನಂ | ದನ ಹೇಳು | ,ಹೇಳಯ್ಯ | ಬೇಗ—||
,ಕಂದಿತೇ | ತಕೆ ಕಡು | ,ಮುದ್ದಾದ | ವದನಾರ |
,ವಿಂದ ಬಾ | ಡಿದ ಮೆಯ್ಯೊ | ,ಳತಿ ದಣಿ | ಕೆಗಳಿಂದ || ೨೭ ||

,ಕ್ಷೇಮವೆ | ಕುಂತಿ[1]ದೇ | ,ವಿಗೆ ಧರ್ಮ | ಜಗೆ ಮುಖ್ಯ |[1]
[2],ಭೀಮ ನ | ಕುಲ ಸಹ | ,ದೇವರಿ | ಗೆಲ್ಲ[2]—||
,ಭೂಮಿಪಾ | ಲಕ ಮತ್ತಿ | ,ನ್ನೇನು ಕಾ | ರಣದಿಂದ |
,ನೇಮವಿ | ತ್ತಿಲ್ಲಿಗೆ | ,ಕಳುಹಿದ | ನಿನ್ನ— || ೨೮ ||

,ಮಾತನಾ | ಡದ ಮುನ್ನ | ,ಕಣ್ಣೀರ | ಡರೊಳಶ್ರು |
,[3]ಶ್ವೇ[3]ತ ಬಿಂ | ದುಗಳೇನು | ,[4]ಹೇಳಯ್ಯ | ಬೇಗ[4]—||
,ಏತಕೀ | ಸರ ಕಂ | ,ಗೆಡಿಕೆ ನಿ | ನ್ನೊಡಲೊಳು
,ಕಾತರಿ | ಸದೆ ಪೇಳು | ,ಬೆದರದೆ | ನ್ನೊ,ಳು— || ೨೯ ||

೭೩ ರಾಗ ಕಾಂಭೋಜಿ—ಏಕತಾಳ ೪

ಅರ್ಜುನ—

ಲಾಲಿಸಿ ಕೇ | ಳು ಬಿನ್ನಪ | ಶ್ರೀಲೋಲ ಬ | ಹು ಗುಣಶೀಲ ||ಪಲ್ಲವಿ||

ಮೊನ್ನೆ ನಮ್ಮ | ಹಿರಿಯ ತಾಯಿ | ಮಣ್ಣಿನಾನೆ | ನೋಹಿಯ ಸಂ |
ಪನ್ನೆ ಮಾಡು | ವಾಗ ನಮ್ಮ | ಮ್ಮನ್ನ ಕರೆಯ | ಲಿಲ್ಲವೆಂದು |

---

1 ಧರ್ಮಜಭೀಮಯಮಳರ್ಗೆ (ಅ) 2 ನೇಮದಿಂದಿಲ್ಲಿಗೆ ಬಂದ ಕಾರಣವೇನು (ಅ)
3 ಸ್ಫೋ: (ಕಾ) 4 ಕಾತರಿಸದೆ ಪೇಳು (ಕಾ)

ಖಿನ್ನೆಯಾದ । ಳಿನ್ನಮಾತೆ । ತನ್ನ ದುಃಖ । ದಿಂದಲಾಗ ।
ನಿನ್ನ ಧೈರ್ಯ । ದಿಂದ ಪೇಳ್ದೆ । ಎನ್ನದೊಂದು । ಮಾತನೀಗ ॥ ೩೦೦ ॥

ಇಂದ್ರನಾನೆ । ಇಳೆಗೆ ತರುವೆ । ನೆಂದು ಭಾಷೆ । ಕೊಟ್ಟೆ ಮೇಲೆ ।
ತಂದೆಗೋಲೆ । ಬರೆದು ಶರಕೆ । ಸಂದಿಸಿ ನಾ । ಬಿಟ್ಟಮೇಲೆ ।
ಬಂದ ಖಚರ । ನಿನ್ನೆ ಸ್ವರ್ಗ । ದಿಂದ ಓಲೆ । ಮುಟ್ಟೆ ಶ್ರೀ ಗೋ ।
ವಿಂದ ಬಂದು । ಪಾತಿಗಾಗಿ । ಮುಂದೆ ನಾಕಂ । ಗೆಟ್ಟೆನಯ್ಯ ॥ ೩೦೧ ॥

ದಾರಿಯ ಮಾ । ಡೆಂದು ಖಚರ । ಹೇಳುತಾನೆ । ಮುನ್ನ ಭಂ ।
ಡಾರವನ್ನೆ । ಕೊಟ್ಟ ಭೀಷ್ಮ । ಬೈಯುತಾನೆ । ಎನ್ನ ಬಂದ ।
ಧಾರಿಣೀ ಪಾ । ಲಕರ ಕಂಡು । ಬೆದರುತಾನೆ । ಅಣ್ಣ ನೀ ಮು ।
ರಾರಿ ದಯೆ । ಮಾಡಿ ಬಂದು । ಸಲಹೆನ್ನ ಸಂ । ಪನ್ನ ಚೆನ್ನ ॥ ೩೦೨ ॥

೭೪ ರಾಗ ಶಂಕರಾಭರಣ—ಅಷ್ಟತಾಳ ೧

ಕೃಷ್ಣ—

ಮರುಳಾದೆ । ಯೇನೊಪಾ । ರ್ಥ—ಲೋ । ಕದೊಳೆಲ್ಲ ।
ಪರಿಹಾಸ । ವಾಯ್ತು ವ್ಯ । ರ್ಥ—॥
ಬರಿಗುಲ್ಲು । ನಿದ್ದೆಗೇ । ಡೆಂಬ ಗಾ । ದೆಯನು ವಿ ।
ಸ್ತರವ ಮಾ । ಡಿದೆ ನಿನ್ನ । ಸರಿಯಾರು । ಮುಂದಿನ್ನು ॥ ೩೦೩ ॥

ಧರಣೀಶ । ರ್ಬಂದುದ । ಕೂ — ಪೂ । ರ್ವಜರ ಭಂ ।
ಡರವೆಲ್ಲ । ತಂದುದ । ಕೂ—॥
ಸುರಪನ । ಗಜವಿಂದು । ಧರಣೆಗಿ । ಳಿವುದಕ್ಕೊ ।
ನೆರೆ ನಿನ್ನ । ತಾಯಿಯು । ದರ ಪೂಜಿ । ಸುವುದಕ್ಕೊ ॥ ೩೦೪ ॥

ಏನನೆ । ನೆದನೊ ಭೀ । ಷ್ಮ — ಆ । ಚಾರ್ಯನು ।
ಜ್ಞಾನಗೆ । ಟ್ಟನೊ ಧರ್ಮ । ಜ—॥
ಮಾನಿನಿ । ಯರೊಳತಿ । ಜ್ಞಾನಿ ಕುಂ । ತೀದೇವಿ ।
ತಾನೇನೋ । ಮತಿಗೆಟ್ಟು । ನುಡಿದುದ । ಕಿವಿಗೊಟ್ಟು ॥ ೩೦೫ ॥

ಲೇಸಾಯಿ । ತಯ್ಯ ಪಾ । ರ್ಥ — ಚಿ । ತ್ರದೊಳಿನ್ನು ।
ಬೇಸರ । ಬೇಡ ವ್ಯ । ರ್ಥ—॥
ಆ ಸುರೇಂ । ದ್ರನ ಗಜ । ಬಂತು ಎಂ । ಬುದ ಕೇಳಿ ।
ಲೇಶ ತ । ಡವ ಮಾ, । ಡದೆ ಯೆದ್ದು । ಬಹೆ ತಾಳಿ ॥ ೩೦೬ ॥

ವಚನ॥ ಈ ರೀತಿಯಿಂದ ಪರಸ್ಪರವಾಗಿ ನುಡಿಯಲು ಅರ್ಜುನನು ಮರನೇರಿ ಕೈಬಿಟ್ಟ ಮಾನವರಂತೆ ಬೆರಗಾಗುತ್ತ ಏನೆಂದನು ಎಂದರೆ—

೭೫ ರಾಗ ಭೈರವಿ—ಜಂಪೆತಾಳ ೧

ಅರ್ಜುನ—

ಅಪ್ರಯೋ । ಜಿಗನಾದೆ । ಹುಡುಗಬು । ದ್ಧಿಯೊಳಿನ್ನ ।
ಕ್ಷಿಪ್ರದಲಿ । ಸಲಹಿಕೋ । ಕ್ಷೀರಾಬ್ಧಿ । ವಾಸ— ॥ ೩೦೭ ॥

ಭಕ್ತವ । ತ್ಸಲನೆಂಬೊ । ಬಿರುದುಳ್ಳ । ಪರಮಾತ್ಮ ।
ಭಕ್ತನಪ । ರಾಧವನು । ನೋಡುವರೆ । ನೀನು ॥ ೩೦೮ ॥

ಅರಿಯದ । ಜ್ಞಾನದಲಿ । ಆಡಿದೆನು । ನಾನೊಂದ ।
ತರಹರಿಸಿ । ಕೊಡಬೇಕು । ಪಾಪನಾ । ಶನನೆ— ॥ ೩೦೯ ॥

ಕಂಸಾರಿ । ನೀ ಬಂದು । ಕರುಣದಲಿ । ದಯೆದೋರಿ ।
ವಂಶದಪ । ಕೀರ್ತಿಯನು । [1]ಪರಿಹರಿಸೊ । ದೇವ[1]— ॥ ೩೧೦ ॥

ವಚನ॥ ಈ ರೀತಿಯಿಂದ ಅರ್ಜುನನು ಹೇಳಿಕೊಳ್ಳಲು ಮುರಾಂತಕನು ಏನೆಂದು ನಿರೂಪಿಸಿದನು ಎಂದರೆ—

೭೬ ರಾಗ ಶಂಕರಾಭರಣ—ತ್ರಿವುಡೆತಾಳ ೩

ಕೃಷ್ಣ—

ಏಳು ಸಾತ್ಯಕಿ । ಒಡನೆ ಹೂಡಲಿ । ಹೇಳು ಬೇಗ । —ರಥವನು ।
ಪಾಳೆಯದಿ ಡಂ । ಗುರವ ಹೊಯ್ಸಲಿ । ಪಯಣವೆಂದು ॥ ೩೧೧ ॥

ಬಾಲಿಯರು ಹೊರ । ವಡಲಿ ಸಂಗಡ । ಬರಲಿ ಆನೆ । —ಕುದುರೆಯು ।
ಸಾಲಿನಲಿ ನಡೆ । ತರಲಿ ಪಾಂಡವ । ರಿಪ್ಪ ಪುರಕೆ ॥ ೩೧೨ ॥

ಅತ್ತೆ ಮನದಲಿ । ನೊಂದುಕೊಂಬಳು । ಹೋಗದಿರಲು । —ಧರ್ಮಜ ।
ಚಿತ್ತದಲಿ ಚಿಂ । ತಿಸುವ ಖೇದವ । ಹೊತ್ತುಕೊಂಡು ॥ ೩೧೩ ॥

ನೋಡಬಹುದ । ರ್ಜುನನ ಶಕ್ತಿಯ । ನಾವು ಪೋಗಿ । —ಸುರಗಜ ।
ರೂಢಿಗೆಂತಿಳಿ । ತರುವುದೆಂಬುದ । ಗಾಢದಿಂದ ॥ ೩೧೪ ॥

---

1 ತರಹರಿಸಬೇಕಯ್ಯ (ಅ)

ನರ ಮುರಾಂತಕ । ರೇರಿದರು ಸುರು । ಚಿರದ ರಥವ ।—ಸ್ವಾಮಿಯ ।
ತರುಣಿಯರು ದಂ । ಡಿಗೆಯನೇರ್ದರು । ಹರುಷದಿಂದ ॥ ೨೧೫ ॥

ಆನೆಯಲಿ ಕೆಳಿ । ತನು ಹಲಾಯುಧ । ಅರ್ತಿಯಿಂದ । —ಮಿಕ್ಕಾ ।
ಮಾನನಿಧಿಗಳು । ಕುಳಿತರಾ ಬಿಳಿ । ತೇಜಿಗಳಲಿ ॥ ೨೧೬ ॥

(ಅಷ್ಟಮಸ್ತ್ರೀಯರು ಒಬ್ಬೊಬ್ಬರಾಗಿ ನಾಟ್ಯದಿಂದ ಹೊರಟು ಬರುವ ಪದ್ಯಗಳು)

೬೬ ರಾಗ ಮಧುಮಾಧವಿ—ಅಷ್ಟತಾಳ ೧

ರುಕ್ಮಿಣಿ—

ರುಕ್ಮಿಣಿ । ಹೊರಟಳು । ಅತಿವೇಗ । ದಿ—ಘನ ।
ವೃಕ್ಷ ಪ । ರ್ಣದ ಪಟ (?) । ವಿಕ್ಕಿದ । ರಥದಿ— ॥ ಪಲ್ಲವಿ ॥

ಕಮಲೋದ್ಭ । ವೆಯುತಾ, । ನೆನಿಸಿ ಕೃ । ಷ್ಣನ ಕರ ।
ಕಮಲವ । ಕಡು ಪ್ರೀತಿ । ಯಿಂದಲೆ । ಪಿಡಿದು·
. . . . . . . . . . . . . . . . . . . .
. . . . . . . . . . . . . . . . . . . . ॥ ೨೧೭ ॥

ಉಟ್ಟ ಪೀ । ತಾಂಬರ । ಬಂಧದಿ । —ಹಣೆ ।
ಗಿಟ್ಟ ಕ । ಸ್ತೂರಿ ತಿಲಕ । ದಂದದಿ । —ಅಳ ।
ವಟ್ಟ ಕಂ । ಚುಕ ಬಲು । ಚಂದದಿ । —ತಂ ।
ದಿಟ್ಟ ಕ । ಸ್ನಡಿಗಳ । ದಿಟ್ಟಿಸಿ । ನೋಡುತ್ತ ॥ ೨೧೮ ॥

೬೭ ರಾಗ ಸೌರಾಷ್ಟ—ಮಟ್ಟೆತಾಳ ೩

ಸತ್ಯಭಾಮೆ—

ಸತ್ಯಭಾಮೆ । ಯು—। ಸಾಗಿ ಬಂದ । ಳು —।
ಸತ್ಯಜಿತುವಿ । ನ — । ಪುತ್ರಿ ಬಂದ । ಳು—॥
ಚಿತ್ರಜಾಗ । ಮ — । ಮೂರ್ತಿ ಬಂದ । ಳು — ।
ಚಿತ್ರವಲ್ಲ । ಭ —। ಕೃಷ್ಣನೊತ್ತಿ । ಲಿ — ॥ ೨೧೯ ॥

ಇಟ್ಟ ಬೊಟ್ಟ । ನ — । ಚಂದ್ರತಿಲಕ । ದಿ —।
ತೊಟ್ಟ ಮುತ್ತಿ । ನ — । ಹಾರದಿಂದ । ಲಿ —॥
ಉಟ್ಟನೆರಿವಿ । ಯ — । ಬಂಧದಿಂದ । ಲಿ —।
ಸೃಷ್ಟಿಮೋಹ । ನ —। ಮೂರ್ತಿ ಬಂದ । ಳು — ॥ ೨೨೦ ॥

ಕರಿಯ ನಡೆಯ । ಲಿ —। ಗಿಳಿಯ ನುಡಿಯ । ಲಿ —।
ಅಳಿಗಳುಲಿಯ । ಲಿ — । ಪಿಕದ ಸ್ವರದ । ಲಿ — ॥
ಮೆರವಿನಿಂದ । ಲಿ — । . . . . . . . . . . . .
. . . . . . . . . . . . . ಗಜವ । ನೇರಿ ಬಂದ । ಳು — ॥ ೩೨೧ ॥

೭೯ ಅಷ್ಟತಾಳ

ಕಾಳಿಂದಿ—

ಬಂದಳು । ಕಾಳಿಂದಿ । ಕೃಷ್ಣನೊ । ತ್ತಿನಲಿ ಗೋ ।
ವಿಂದನಾ । ನಂದ . . . . . . . . . . ವಂದ್ಯಗೆ ।
. . . . . . . . . . . . . . . . . . . . . .
. . . . . . . . . . . . . . . . . . . . . . ॥ ೩೨೨ ॥

೮೦ ರಾಗ ಘಂಟಾರವ—ಅಷ್ಟತಾಳ ೧

ಮಿತ್ರವಿಂದೆ—

ಮಿತ್ರವಿಂ । ,ದೆಯು । ಬಂದಳಾ । ಕ್ಷಣದಿಂದ ।
ವೃತ್ತಕುಚ ಬಾ । ಲೆಯರ ಸಂಗಡ । ನಿತ್ಯ ಪೊಗಳಿಸಿ । ಕೊಳ್ಳುತ ॥
ಚಿತ್ರವ । ,ಲ್ಲಭ । ಕೃಷ್ಣನ । ಪಾಡುತ್ತ ।
ಅತ್ಯಧಿಕ ಹ । ರ್ಷದೊಳು ಮೋಹನ । ಮೂರ್ತಿ ತಾನೆನಿ । ಸುತ್ತಲಿ—
॥ ೩೨೩ ॥

ಮಂಗಳಾ । ,ಂಗಿ ಗೋ । ಪಾಂಗನೆ । ಯರ ಶೃಂಗಾ ।
ರಂಗಳ ,ಡವ । ಳಂಗಳ, ಗಾ । ನಂಗಳನ್ನಾ । ಲಿಸುತಲಿ—॥
ಅಂಗಜಾಂ । ,ಗ ಭ । ಸ್ಮಾಂಗ ಕೃ । ಪಾಂಗ ಶ್ರೀ ।
ರಂಗ ಕೃಷ್ಣನ । ಸಂಗಕಂಗೋ । ಪಾಂಗ ಹೊಸ ಪರಿ । ಯಾಗಿರೆ ॥೩೨೪॥

೮೧ ರಾಗ ಮಧ್ಯಮಾವತಿ—ಅಷ್ಟತಾಳ ೨

ಜಾಂಬವತಿ—

ಜಾಂಬವ । ತಿಯು ಬಹ । ಜಾಣ್ಮೆಯ । ನೋಡಿ—।
ಸಂಭ್ರಮ । ದಿಂದ ಪು । ತ್ರರನೊಡ । ಗೂಡಿ—।
ಜಾಂಬೂ, । ನದ ಕಾಳೆ (?) । ಕೃಷ್ಣನ । ಬಳಿಗೆ ।
. . . . . . . . . . . . . . . . . . . . . ॥ ೩೨೫ ॥

ನೀತಿ ಶಾ | ಸ್ತ್ರಗಳೊಳು | ತನಗೆಣೆ | ಕಾಣೆ— |
ಜಾತಹ | ರುಷವುಳ್ಳ | ಸೊಬಗಿನ | ಸೋನೆ—|
. . . . . . . . . . . . . . . . . . . . . . . .
ಪ್ರೀತಿಯಿಂ | ಬಂದಳು | ಸಾರಸ | ಗಮನೆ— || ೩೨೬ ||

ಕಡು ಮೋಹ | ದಿಂದ ಶ್ರೀ | ಕೃಷ್ಣನ | ನೋಡಿ—|
ಬೆಡಗ ಬೀ | ರುತ ಬಹು | ಬಾಹುಬಿಂ | ಕದಲಿ—|
ಜಡಿಯುವಾ | ಭರಣದ | ಝೇಂಕಾರ | ದಿಂದ—|
ಎಡಬಲ | ಗಳ ನೋಳ್ಪ | ಕಡೆಗಣ್ಣಿ | ನಿಂದ— || ೩೨೭ ||

ಏಕತಾಳ

ಭದ್ರೆ—

ಭದ್ರೆ, ಬಂ | ದಳು ಶ್ರೀ, | ಕೃಷ್ಣನೆಡೆ | ಗೆ—
ವಿಷ್ಣು, ಕು | ಲದೊಳು | ದ್ಭವಿಸಿ ಘನ | ಹರ್ಷದಿಂದ |
ವಿಷ್ಣು,ವೆ | ನುತ . . . . . . . . . .
ಉಷ್ಣ, ಕಿ | ರಣ . . . . . . . . . . .
ಸೃಷ್ಟಿ,ಯ | ಸಲಹಿದ | ಕೃಷ್ಣ,ನ | ಬಳಿಗೆ —||

ರಾಗ ಮಧ್ಯಮಾವತಿ—ಆದಿತಾಳ

ನೀಲಾದೇವಿ—

ನೀಲಾದೇ | ವಿಯು ತನ್ನ | ಆಲಯ | ದಿಂದ ಪೊರಟು
ನೀಲವ | ರ್ಣನ ಬಳಿ | ಗೆ— . . . . . . . . . .

ಲವಿ ಅಷ್ಟತಾಳ ೧

ಲಕ್ಷಣೆ—

ಲಕ್ಷಣೆ | ನಡೆತಂದ | ಳು — ಅ | ಕ್ಷಯನ ಬಳಿಗೆ || ಪಲ್ಲವಿ ||

ನಾಗಶ | ಯನ ರಾಣಿ | ಆಗ ಮಂ | ದಿರ ಬಿಟ್ಟು |
ನಾಗಗ | ಮನೆ ತಾನು | ಬೇಗದಿ | ಬಂದಳು ||
ಥಳಥಳ | ತಾಟಂಕ | ಗಂಡಮಂ | ಡಿತದಿಂದ |
ಹೊಳೆ ಹೊಳೆವ | ಮಕುಟಾ, | ಭರಣದಿಂ | ದ — |
ನಳನಳಿ | ಸುವ ನಾಸಾ | ಭರಣ ಒ | ಪ್ಪಿರುವಂಥ |
ಚೆಲುವ | ಕೃಷ್ಣನ ಬಳಿ | ಸತಿ ನಡೆ | ತಂದಳು || ೩೨೮ ||

೮೩ ರಾಗ ಕಲ್ಯಾಣಿ—ಅಷ್ಟತಾಳ ೧*

ಚಾರಕರು—

ಬಂದನು । ದೇವರ । ದೇವ ಭ । ಕ್ತರ ಕಾವ ।
ಚಂದ್ರಕೋ । ಟಿ ಪ್ರಕಾ, । ಶ—॥
ಚಂದ್ರಕೋ । ಟಿ ಪ್ರಕಾಶ । ಚಾರುತ । ರ ವಿಲಾಸ ।
ಇಂದ್ರನಂ । ದನಭಾವ । ಕರುಣ ಸಂ । ಜೀವ ॥ ೩೨೯ ॥

ನೀಲಮೇ । ಘನಿಭಾಂಗ । ನಿರುತ ಸ । ಜ್ಜನಸಂಗ ।
ಶೂಲಪಾ । ಣಿಯ ಮಿ, । ತ್ರ —॥
ಶೂಲಪಾ । ಣಿಯ ಮಿತ್ರ । ಸುಗುಣ ಶೋ । ಭನಗಾತ್ರ ।
ಕಾಲಕ । ರ್ಮವಿದೂರ । ಕಂಸಸಂ । ಹಾರ — ॥ ೩೩೦ ॥

ವೇದಾಂತ । ವೇದ್ಯಶೀ । ಲ — ಸ । ಜ್ಜನಪಾಲ ।
ಯಾದವ । ಕುಲಜಾ, । ತ—॥
ಯಾದವ । ಕುಲಜಾತ । ಎಸೆವ ಕೀ । ರ್ತಿವಿಖ್ಯಾತ ।
ಮಾಧವ । ಮಧುಸೂದ । ನ — ಮ । ಹಾ ಪ್ರತಾಪ ॥ ೩೩೧ ॥

ನಿರಾಮಯ । ಸ್ತೋತ್ರಬಂದ । ನಿರ್ಜರ । ರಕ್ಷಬಂದ ।
ಕರುಣಸಂ । ಜೀವ ಬಂ । ದ — ॥
ಕರುಣಸಂ । ಜೀವ ಬಂದ । ಕಾರುಣ್ಯ । ಮೂರ್ತಿ ಬಂದ ।
ವರವಿತ್ತ । ಚಲ ಬಂದ । ವ್ಯಾಳೀಂದ್ರ । ಶಯ ಬಂದ ॥ ೩೩೨ ॥

ನಂದಕು । ಮಾರ ಬಂದ । ಶೃಂಗಾರ । ರಸ ಬಂದ ।
ಪಾಲ್ಗಡಲ । ಶಯನ ಬಂ । ದ — ॥
ಪಾಲ್ಗಡಲ । ಶಯನ ಬಂದ । ಪದ್ಮದಳ । ನಯನ ಬಂದ ।
ಫಲ್ಗುಣ ಉ । ದ್ಧಾರಿ ಬಂದ । ಪದ್ಮಕಂ । ದರ್ಪ ಬಂದ ॥ ೩೩೩ ॥

ರವಿಕೋಟಿ । ಕಿರಣ ಬಂದ । ರಾಜೀವ । ಚರಣ ಬಂದ ।
ದಿವಿಜರ । ಕರುಣ ಬಂ । ದ — ॥
ದಿವಿಜರ । ಕರುಣ ಬಂದ । ದಿವ್ಯಶ್ರೀ । ಚರಣ ಬಂದ ।
. . . . . . . . . . . . . . . . . . . . . . ॥ ೩೩೪ ॥

---

*ಈ ಪದ್ಯವನ್ನು ಕೃಷ್ಣನ ಒಡ್ಡೋಲಗ ಸಂದರ್ಭಗಳಲ್ಲಿ ಅನ್ಯತ್ರ ಪ್ರಸಂಗಗಳಲ್ಲಿಯೂ ಹಾಡುವ ರೂಢಿ ನಡೆದಿದ್ದಿತೆಂದು ತಿಳಿಯುವುದು.

ಉದಧಿಶ । ಯನ ಬಂದ । ಉಮೆಯರಸ । ಪ್ರಿಯ ಬಂದ ।
ಬುಧಜನಾ । ಶ್ರಯ ಬಂ, । ದ — ॥
ಬುಧಜನಾ । ಶ್ರಯ ಬಂದ । ಬ್ರಹ್ಮನ । ಪಿತ ಬಂದ ।
ಯದುಕುಲ । ಸೂರ್ಯ ಬಂದ । ವೇಣುನಾದಾ । ಚಾರ್ಯ ಬಂದ ॥೩೩೫॥

ಅನಸೂಯಾ । ಬಲ ಬಂದ । ಅಸುರ ಸಂ । ಹಾರಿ ಬಂದ ।
ನೆನೆವರ ಪಾ । ಲಿಪ ಬಂ, । ದ — ॥
ನೆನೆವರ ಪಾ । ಲಿಪ ಬಂದ । ನುತಿಪರ ರ । ಕ್ಷಕ ಬಂದ ।
ಮಣಿಖಚಿತ । ನಿಲಯ ಬಂದ । ಮಕರಕುಂ । ಡಲ ಬಂದ । ॥ ೩೩೬ ॥

೮೪ ರಾಗ ನಾದನಾಮಕ್ರಿಯೆ—ಅಷ್ಟತಾಳ ೧

ಬರುತಾನೆ । — ರಂಗ । ಬರುತಾನೆ । — ಕೃಷ್ಣ ।
ಬರುತಾನೆ । ತಾ ಪಾಂಡ । ವರ ಮನೆ । ಗೆ— ॥ ಪಲ್ಲವಿ ॥

ಗೀತಗ । ಳ ಧ್ವನಿ । ಕೇಳುತ್ತ । — ಅಲ್ಲಿ ।
ಪಾತ್ರದ । ಜೊಂಜೆಗ । ಳಾಡುತ್ತ ॥
ಪ್ರೀತಿಯಿಂ । ಗೊಲ್ಲರ । ನೋಡುತ್ತ । — ಜಗ ।
ದಾತುಮು ನಾಗಿ । ಕಾ । ಪಾಡುತ್ತ ॥ ೩೩೭ ॥

ಇಂದುಭಾ । ಸ್ಕರರಂತೆ । ಹೊಳೆಯುತ್ತ । —ತನ್ನ ।
ಮುಂದಗ । ಮನೇರೊಡ । ನಾಡುತ್ತ ॥
ವಂದಿಸಿ । ದವರ ಕಾ । ಪಾಡುತ್ತ । —ಮುನಿ ।
ವೃಂದವ । ತನ್ನೊಡ । ಗೂಡುತ್ತ ॥ ೩೩೮ ॥

ನಾರದ । ಮೋಕ್ಷದ । ಸ್ತುತಿಗಳು । —ಅಲ್ಲಿ ।
ಸೇರಿ ಓ । ಲೈಸುತ್ತ । ಯತಿಗಳು ॥
ಭೋರೆಂಧು । ನೊರೆವ ದುಂ । ದುಭಿಗಳು । —ಸೇರಿ ।
ವೀರಪಾ । ರ್ಥನ ಕೂಡೆ । ಮುದದೊಳು ॥ ೩೩೯ ॥

೮೫ ರಾಗ ದೇಶಿಕಾಪಿ—ಅಷ್ಟತಾಳ ೨

ಇಗೊ ಬಂದ । ಈಗ ಬಂದ । ನು — । — ಇಲ್ಲಿ ।
ಖಗವಾ, । ಹನ ಯದು । ಕುಲದುಗ್ಧಾಂ । ಬುಧಿಸೋಮ ॥ ಪಲ್ಲವಿ ॥

ಬಂದನು । ಭವರೋಗ । ಹರ ಭಕ್ತ । ಸಂಜೀವ ।
ಸಿಂಧುಶ । ಯನ ಸ । ರ್ವೇಶ ಸ । ದಾನಂದ ।
ಕಂದರ್ಪ । ಕೋಟಿ ಕೌ । ಸ್ತುಭಹಾರ । ಕಮಲಾಕ್ಷ ।
ಸಂದ್ಯ ವಾ । ಸುಕಿಶಯು । [1]ಸು[1]— ಪುರು । ಷೋತ್ತಮ ಮು ।
ಕುಂದ ಮಾ । ಧನ ಬಲ । ಸು—ಯಾ । ದವ ಬ (ಬಾ?)ಲ ।
ವೃಂದದೊ । ಳರ್ಚಿ(ಚ್ಯು?)ತ । ಸು— ಭೋ । ರಿಡುತಲೆ ।
ಸಂದೇಹ । ಬೇಡ ಬ । ಲ್ಲಿದ ಬಂದ । ಕೃಷ್ಣನು ॥ ೩೪೦ ॥

ಭೋರಿಡು । ತಿದೆ ಪಟ । ರವ ಶಂಖ । ಘೋಷವು ।
ಭೂರಿ ವಾ । ದ್ಯಗಳು ಉ । ಗ್ಗಡಿಪ ಮಾ । ಗಧಿಗಳು ।
ನಾರದ । ಗೀತ ಪಾ । ಠಕರ ಸಂ । ಸ್ತುತಿಗಳು ।
ಶ್ರೀರಮ । ಣೇಶ ಬಂ । ದ— ಖ । ಗೇಶನ ।
ಏರಿದ । ಹರಿಯು ಬಂ । ದ— ಕಾ । ರಣದಿಂದ ।
ಕೌರವಾ । ದಿಗಳ ಕೊಂ । ದ— ಸಾ । ಟಕಸೂತ್ರ ।
ಧಾರಿ ಮು । ರಾರಿ ಶ್ರೀ । ಹರಿಬಂದ । ಗೋವಿಂದ ॥ ೩೪೧ ॥

ದೇವರ । ದೇವ ಶ್ರೀ । ಧಾರಿಣೀ । ಪತಿ ಬಂದ ।
ಸಾವಿರ । ಬಾಯ ಶೇ । ಷನ ಪಡೆ । ದವ ಬಂದ ।
ದೇವಕಿ । ವಸುದೇವಾ । ದಿಗಳಿಲ್ಲ । ಬರುತಾರೆ ।
ನೀವ್ಯೆನ । ಲೇಳಿರ । ಯ್ಯ— ಭ । ಕ್ತರ ಮನೋ ।
ಭಾವದೊ । ಳಿರುವನ । ಯ್ಯ— ಸೋ । ಜಿಗವಿದು ।
ನಾವೋಡಿ । ಬಂದೆನ । ಯ್ಯ— ಭೂ । ತಳಕಿಂದು ।
ಜೀವರ । ಕ್ಷಕನಾದ । ದ್ವಾರಕಾ । ಪುರವಾಸ ॥ ೩೪೨ ॥

ವಚನ ॥ ಆಗಲಾ ಅರ್ಜುನನು ಒಬ್ಬ ದೂತನಂ ಕರೆದು ಧರ್ಮರಾಯನೆಡೆಗೆ ಕಳುಹಲಾಗಿ ಆಚಾರಕನು ಬೇಗದಿಂ ಬಂದು ಧರ್ಮರಾಯ ಭೀಷ್ಮಾಚಾರ್ಯರೊಡನೆ ಏನೆಂದನು ಎಂದರೆ—

(ಶ್ರೀ ಕೃಷ್ಣನ ಪ್ರವೇಶ)

೮೩ ರಾಗ ಕಲ್ಯಾಣಿ—ಏಕತಾಳ ೩

ದೂತ—

,ಬಂದನು । ದ್ವಾರಾ ।, ವತಿಯಿಂದ । ಹರಿ ತನ್ನ ।
,ಮುಂದಿ ಕು । ದುರೆ ವಾದ್ಯ ।, ಸಂದಣಿ । ಯಿಂದ— ॥ ಪಲ್ಲವಿ ॥

---

1 ಸ (ಕಾ)

, ಇತ್ತ್ರಂಡ । ದಲಿ ಪಾಠ ।, ಕರು ಪೂಗ । ಳುತ್ತಿರೆ ।
,ಚಿತ್ತಜ । ಪಿತನಿಂದ್ರ । ,ಪ್ರಸ್ತಕೆ । ಬಂ,ದ— ‖ ಅನುಪಲ್ಲವಿ ‖

,ನಾರಾ, । ಯಣ ಬಂದ ।, ನೆಂದು ಚ । ರರು ಪೇಳೆ ।
,ಧಾರಿಣೀ । ಶ್ವರರೆಲ್ಲ । ,ಧರ್ಮಜ । ಸಹಿತ— ‖
,ಬೇರೆ ಬೇ । ರಿದಿಗ್ರೊಂಡು । ,ಭೂರಿ ವೈ । ಭವದಿಂದ ।
,ದೂರದಿ । ನಮಿಸಿ ಪ । ,ದಾರವಿಂ । ದಗಳ— ‖ ೩೪೩ ‖

೮೭ ರಾಗ ಪುನ್ನಾಗವರಾಳಿ—ಏಕತಾಳ ೨

ಬಂದಾ । ನೇ ಕೃಷ್ಣ । ಬಂದಾ । ನೇ ಮುದ ।
ದಿಂದ ರಥ । ವಿಳಿದು ಪಾಂಡು । ನಂದನರ । ಸಮ್ಮುಖಕ್ಕೆ ‖ ಪಲ್ಲವಿ ‖

ಕೇರಿ ಕೇರಿ । ಯಲ್ಲಿ ಹೆಂಗ । ಳೋರಂತೆ ಪಾ । ಡುತ್ತ ಮಂಗ ।
ಳಾರತಿಯ । ತಂದು ಶ್ರೀ ಮು । ರಾರಿಗೆತ್ತು । ತ್ತ— ‖
ಧಾರಿಣೀ ಪಾ । ಲಕರ ನಡುವೆ । ಧರ್ಮಜನ । ಕರವ ಪಿಡಿದು ।
ಮಾರಜನಕ । ನತಿ ಸಂಭ್ರಮದಿ । ಸೂರ್ಯಕೋಟಿ ।
ತೇಜದಿಂದ । ‖ ೩೪೪ ‖

ವಾಸುದೇವ । ನ ರತ್ನಸಿಂ । ಹಾಸನದಿ । ಕುಳ್ಳಿರಿಸಿ ।
ಕೇಶವನ । ಪಾದತೀರ್ಥ । ವೆಲ್ಲ ಸಾರಿ । ಸಿ— ‖
ಆ ಸಮಯ । ದೊಳಗೆ ಕುಂತಿ । ಅಷ್ಟಹೆಂಗ । ಳ ಮನ್ನಿಸಿ ।
ಶೇಷಶಯನ । ನೊಡನೆ ತನ್ನ । ಕ್ಲೇಶವನ್ನು । ಪೇಳ್ದಳಾಗ ‖ ೩೪೫ ‖

(ಕುಂತಿಯ ಪ್ರವೇಶ)

೮೮ ರಾಗ ವರಾಳಿ—ಏಕತಾಳ ೨

ಕುಂತಿ—

ಪಾಹಿ ಮಾಂ । ಪಾಹಿ ಮಾಂ । ಕೃಷ್ಣ ಕೃ । ಷ್ಣ—ಖಗ ।
ವಾಹನ ಕಂ । [1]ಸಾಸುರಾ[1]ರಿ । ಕೃಷ್ಣ ಕೃ । ಷ್ಣ— ‖ ಪಲ್ಲವಿ ‖

ನಂದಗೋಪ । ಕಂದನೇ ಶ್ರೀ । ಕೃಷ್ಣ ಕೃ । ಷ್ಣ—ಸುರ ।
ವೃಂದವಂದ್ಯ । ನಾದಿದೇವ । ಕೃಷ್ಣ ಕೃ । ಷ್ಣ— ‖
ಚಂದ್ರ ಸೂರ್ಯ । ಕೋಟಿತೇಜ । ಕೃಷ್ಣ ಕೃ । ಷ್ಣ—ಭಕ್ತ ।
ವೃಂದರಕ್ಷ । ಕ ಮುರಾರಿ । ಕೃಷ್ಣ ಕೃ । ಷ್ಣ— ‖ ೩೪೬ ‖

---

1 ಸಸಂಹಾ (ಕಾ)

ಶ್ರೀ ವರದ । ಕಣ್ವಪುರ । ಕೃಷ್ಣ ಕೃ । ಷ್ಣ—ಜಗ ।
ತ್ಪಾವನ ಸ । ದ್ಭಕ್ತವೃಂದ । ಕೃಷ್ಣ ಕೃ । ಷ್ಣ— ॥
ದೇವ ದೇವ । ಸುಜನಪಾಲ । ಕೃಷ್ಣ ಕೃ । ಷ್ಣ— ದುಷ್ಟ ।
ಜೀವಸಂಹಾ । ರ ಶ್ರೀ ಲೋಲ । ಕೃಷ್ಣ ಕೃ । ಷ್ಣ— ॥ ೨೪೭ ॥

೮೯ ಚರಿತೆ (ಸಾಂಗತ್ಯ) ; ರಾಗ ತೋಡಿ—ರೂಪಕತಾಳ ೧

ಅಕ್ಕನ । ವರಸಂಗ । ಡಿರುವೆನೆಂ । ದರೆ ಯೆನ್ನ ।
ಮಕ್ಕಳ । ಕಂಡು ಸೈ । ರಿಸಳು— ॥
ಮಿಕ್ಕಾದ । ಭಾವನ । ವರ ಒಡ । ಲೊಳು ವಿಷ ।
ಉಕ್ಕುತ । ಲಿದೆ ಹಗೆ । ಯಿಂದ— ॥ ೨೪೮ ॥

ಪಾಂಡು ಭೂ । ಪತಿ ಹೋದ । ಮರುದಿನ । ತಿರಿಕೊಳ ।
ಸುಂಡು ಸಾ । ಕಿದೆ ಮಕ್ಕ । ಳನ್ನು— ॥
ಪುಂಡರೀ । ಕಾಕ್ಷನೆ । ಹಿರಿಯರಾ । ಮೇಲೆನ್ನ ।
ಕಂಡು ಗ್ರಾ । ಮಸ ಕೊಡಿ । ಸಿದರು— ॥ ೨೪೯ ॥

ಪೊಡವಿಪಾ । ಲಸು ನಿನ್ನೆ । ಮತ್ತೆ ಭೀ । ಮನಕೂಡೆ ।
ತೊಡರು ಹೇ । ಳಿದನಂತೆ । ಅದಕೂ ॥
ಕಡೆಗೆ ಈ । ರೀತಿಯಾ । ಯಿತು ಭೀಷ್ಮ । ನವರಿಂದ ।
ಒಡೆಯ ತಾ । ಕಂಡ ಹಾ । ಗಾಯ್ತು— ॥ ೨೫೦ ॥

ಇನಿತು ದಿ । ನವು ನಿನ್ನ । ಕರುಣಾಕ । ಟಾಕ್ಷದಿ ।
ತಸಿಯುರ । ಸಲಹಿ ಸಾ । ಕಿದೆನು— ॥
ವನಜಾಕ್ಷ । ನಿನ್ನ ನೋ । ಡಿದ ಮೇಲೆ । ಪೇಳ್ದೆನೀ ।
ಮನಸಿದ್ದ । ಹಾಗೆ ಮಾ । ಡಿನ್ನು— ॥ ೨೫೧ ॥

ಎಂಬ ಮಾ । ತನು ಪೇಳಿ । ಶ್ರೀ ಕೃಷ್ಣ । ನಿದಿರಲಿ ।
ಕಂಬನಿ । ದುಂಬಿದಳ್ । ಕುಂತಿ— ॥
ಅಂಬುಜ । ನಾಭ ಕಂ । ಡವಳಿಗ । ಭಯವಿತ್ತು ।
ಕಂಬನಿ । ಯೊರಸುತಿಂ । ತೆಂದ— ॥ ೨೫೩ ॥

---

1 ಗುಣ ಭಾವ (ಕಾ)

೮೦ ರಾಗ ಘಂಟಾರವ—ಜಂಪೆತಾಳ ೧

ಕೃಷ್ಣ—

ಅತ್ರೆಯವ । ರೇ ಕೇಳಿ । ಮತ್ತಾವು । ದಕು ನೀವು ।
ಚಿತ್ರದಲಿ । ನೊಂದು ಬೇ । ಸತ್ತುಕೊಳ । ಲೇಕೆ ॥ ೩೫೩ ॥

ಅನ್ಯಾಯ । ಮಾಡಿದರೆ । ಆ ದೋಷ । ಗತಿ ಅವರ ।
ಮಣ್ಣುಕೂ ।ಡಿಸದಿರದು । ಕಣ್ಣಾರೆ । ನೋಡಿ ॥ ೩೫೪ ॥

ಧರ್ಮರಾ । ಯನು ಮಾಳ್ಪ । ಸತ್ಯದಿಂ । ದಿನಿತುದಿನ ।
ನಿಮ್ಮ ಕಡೆ । ಹಾಯ್ಸಿದರು । ಬ್ರಹ್ಮಾದಿ । ಸುರರು ॥ ೩೫೫ ॥

ಈ ತೆರದಿ । ನೀತಿಯನು । ಇಂದುಪದ । ನಿಗೆ ಪೇಳಿ ।
ಶ್ವೇತವಾ । ಹನನೊಡನೆ । ಮಾತಾಡು । ತಿರ್ದ ॥ ೩೫೬ ॥

## ಐರಾವತದ ಅವತರಣ

೮೧ ರಾಗ ಎರುಕಲಕಾಂಭೋಜಿ—ಏಕತಾಳ ೪

ಏಕೆ ನೋಡು । ವೆ, ಅರ್ಜುನ । ಏಕೆ ನೋಡು । ವೆ— ॥ ಪಲ್ಲವಿ ॥

ಏಕೆ ನೋಳ್ಪೆ । ನಮ್ಮೆಲ್ಲರ । ನೀ ಕರೆಮು । ತಂದೆಯಾ ।
ಭೂಕಾಂತರು । ಕುಳಿತಿರುವುದ । ಶ್ರೀಕರದಿ । ಕಂಡೆಯಾ ॥
ಬೇಕಾದಂಥ । ವಸ್ತುಗಳ । ನೀ ತರಿಸಿ । ಕೊಂಡೆಯಾ ।
ಈ ಕಡೆಯೊಳ್ । ಬಂದು ನಿಲ್ಲು । ಏಕೆ ಮನದ । ಸಂಶಯ ॥ ೩೫೭ ॥

ಮಿಂದು ಮಡಿಯ । ನುಟ್ಟುಕೊಂಡು । ಬಂದು ಧನುವ । ತೆಗೆಯಯ್ಯ ।
ತಂದೆ ತಾಯಿ । ಮುಂದೆ ಗುರುವಿ । ಗೆಂದು ಕರವ । ಮುಗಿಯಯ್ಯ ॥
ಮುಂದೆ ಸರಿದು । ನಿಂದು ತೆಬ್ಬ । ಚಂದದಿಂದ । ಬಿಗಿಯಯ್ಯ ।
ಒಂದೇ ಮನಸಿ । ನಿಂದ ಸ್ವರ್ಗ । ಕೆಂದು ಶರವ । ನುಗಿಯಯ್ಯ ॥ ೩೫೮ ॥

೮೨ ರಾಗ ಮಧ್ಯಮಾವತಿ—ತ್ರಿವುಡೆತಾಳ ೧

ಅರ್ಜುನ—

ಹರಿನಿರೂಪವ । ಕೇಳಿ ಫಲುಗುಣ । ಹರಿವ ನದಿಗೆ । ಯ್ತಂದನು— ।
ತರಣಿಗರ್ಘ್ಯವ । ನಿತ್ತು ಮಂತ್ರದಿ । ಪರನು ಗಂಗೆಯ ।
ಮಿಂದನು —। ಚಂದದಿಂದ ॥ ೩೫೯ ॥
ನವದುಕೂಲವ । ನುಟ್ಟು ಮಡಿಯಲಿ । ಯವನಪರಿಮಳ । ಲೇಪಿಸಿ— ।

ತವಕದಿಂದಾ । ಧರಣ ತೊಟ್ಟನು । [1]ನವ[1] ವಿಧದ [2]ಶೃಂ ।
ಗಾರದಿ[2]— । ತೋಷದಿಂದ ॥ ೩೬೦ ॥
ಗುರುವಿನಂಘ್ರಿಗೆ । ನಮಿಸಿ ಗಜಮುಖ । ಗೆರಗಿ ಬ್ರಹ್ಮಗೆ । ವಂದಿಸಿ— ।
ಗಿರಿಜೆಯನು ಪೂ । ಜಿಸುತ ಶ್ರೀ ಶಂ । ಕರನ ಧ್ಯಾನವ ।
ಮಾಡುತ— । ವಿನಯದಿಂದ ॥ ೩೬೧ ॥

೯೩ ರಾಗ ಶಂಕರಾಭರಣ—ಅಷ್ಟತಾಳ ೧

ಬಂದನ । ರ್ಜುನ ಮುದ । ದಿಂದ ಮಾ । ತೆಯ ಪಾದ ।
ದ್ವಂದ್ವಕೆ । ರಗಿ ಭಕ್ತಿ । ಯಿಂದ— ॥
ಮಂದರ । ಧರನ ಪಾ । ದವ ಮುಟ್ಟಿ । ದಾ ಮೇಲೆ ।
ಕುಂದದೆ । ಧರ್ಮಜ । ನಂಘ್ರಿಗೆ । ರಗಿ ಭೀಮ ।
ಗೊಂದು ನ । ಮಿಸಿ ಸುರ । ವೃಂದವ । ನುತಿಸುತ್ತ ।
ಚಂದ್ರ ಸೂ । ರ್ಯಾದಿ ದೇ । ವೇಂದ್ರಗೆ । ಮಣಿದು ॥ ೩೬೨ ॥
ಕಂಡು ಸ । ಭೆಗೆ ಕಯ್ಯ । ಮುಗಿದು ಹ । ಸ್ತದಲಿ ಬಿಲ್ ।
ಗೊಂಡು ತೆ । ಬ್ಬೇರಿಸಿ । ಶರವ— ॥
ಪುಂಡರೀ । ಕಾಕ್ಷನ । ಕರುಣಾರ । ಸವ ತನ್ನ ।
ಮಂಡೆಯೊ । ಳಿರಿಸಿ ಪ್ರ । ಚಂಡಸಾ । ಹಸದಿಂದ ।
ತಂಡ ತಂ । ಡದ ನೃಪ । ವಿಂಡು ಬೆ । ದರೆ ನಭೋ ।
ಮಂಡಲಕಾಗಿ । ಉದ್ದಂಡ[3] ತಾ । ನೆಸೆದ[3]— ॥ ೩೬೩ ॥

೯೪ ರಾಗ ಮಧುಮಾಧವಿ—ಅಷ್ಟತಾಳ ೨

ಎಂತು ಬ । ಣ್ಣಿಸುವೆ ನ । ರ್ಜುನನ ಸಾ । ಹಸವ ಶ್ರೀ ।
ಕಾಂತನ । ಮೊಗನೋಡಿ । ಶರವೊಂದ । ನೆಚ್ಚಡೆ ।
ತಿಂಥಿಣಿ । ಯೊಳು ಲಕ್ಷಾಂ । ತರ ಕೋಟಿ । ಬಾಣವ ।
ನಂತಾರ್ಬು । ದಾಗಿ ನ । ಭೋಂತರ । ಮುಸುಕಿತು ॥ ೩೬೪ ॥*

---

1 ನವ ಪರಿಮಳವ (ಕಾ,ಓ) (ಅ) 2 ಸಿಂಗರದಲಿ (ಕಾ) 3 ಸಾಹಸನು (ಕಾ)

* ಭೀಮಂಗೆ । ರಗಿ ಸುರ । ವೃಂದಕೆ । ಮಣಿಯುತ್ತ ।
ಸೋಮ ಸೂ । ರ್ಯಾದಿ ದೇ । ವೇಂದ್ರಗೆ । ನಮಿಸಿ ॥
ಆ ಮಹಾ । ಗಜರಾಜ । ನಿಳಿದು ಬ । ಪ್ಪಂತೆ ಸು ।
ತ್ರಾಮನ । ಪುರದಿಂದ ॥ ಭೂಮಿಗಿ । ಳಿದನು ಸಂಪ ॥

ಬಿಡುವಾಗ । ಶರವೊಂದು । ಬಿಡಲದ । ರಿಂ ಕವ ।
ಲೊಡೆದು ಸಾ । ವಿರ ಚಿಮ್ಮಿ । ತೆಡೆಯೆಡೆ । ಯೊಳು ಹತ್ತಿ ।
ತಡಿಗಡಿ । ಗೊಗೆದಗ । ಣಿತ ಶರ । ಸಂಪಣಿ ।
ಪೊಡವಿಯಿಂ । ದಾಕಾಶ । ಗಡಿಮಿತಿ । ಯಾಯಿತು ॥ ೩೬೫ ॥

[1]ಸಂಗಡಿ । ಸಿದ ಬಾಣ । ಗಳು ಕ್ಷೋಣಿ । ಯಿಂದ ಸ್ವ ।
ರ್ಗಾಂಗಣ । ಪರಿಯಂತ । ಸೇತುವೆ । ಯಾಯಿತು ।
ತುಂಗವಿ । ಕ್ರಮ ಪಾರ್ಥ । ಭಳಿರೆಸು । ಕಲೆ ದಿವಿ ।
ಜಾಂಗನೆ । ಯರು ಸುಮ । ಮಳೆಗಳ । ಕರೆದರು[1] ॥ ೩೬೬ ॥

೯೫ ವಾರ್ಧಿಕಷಟ್ಪದಿ

ಜನಪ ಕೇಳರ್ಜುನಗೆ ಜೋಡಾದ ಸಹಸಿಗಳು
ಎಣಿಸಿ ನೋಡಿದರು ನಿಮ್ಮನ್ವಯಾಂಶದೊಳಿಲ್ಲ
ಗುಣಕೆ ಹುರುಡಿಲ್ಲ ಶರಪಂಜರವ ಕಟ್ಟಿದನು ಭೂಮಿಯಿಂದಮರಪುರಕೆ ।
ವನಜಾಕ್ಷ ಕಂಡು ಪಾರ್ಥನ ಕೂಡೆ ಸಾಕಿನ್ನು
ಧನುವ ತೆಗೆ ಶರವನೆಸೆಯಲು ಬೇಡ ಮಾರ್ಗವಾ
ಯ್ತೆನಲು ಅಮರೇಂದ್ರ ಕಳುಹಿದ ಖಚರನೊಡನರ್ಜುನಂ
ಪೇಳ್ದನೇನೆಂದರೆ— ॥ ೩೬೭ ॥

೯೬ ರಾಗ ವೃಂದಾವನ ಸಾರಂಗ—ಏಕತಾಳ ೮

ಅರ್ಜುನ—

ಬಾರ,ಯ್ಯ । ಖಚರ ಕೇ । ,ಳೆಂದ । ನು—ಇಕ್ಕೊ ।
ದಾರಿ,ಯಾ । ಯಿತು ಇನ್ನು । ನೀನಿಲ್ಲಿ । ನಿಲಬೇಡ ॥ ಪಲ್ಲವಿ ॥

ನಿನ್ನ, ಮ । ನಕೆ ಸೊಗ । ,ಸಾಯಿ । ತೆ— ಸರ್ವ ।
ಸನ್ನಾಹ । ಗಳು ಸಮ ।, ನಾಯಿ । ತೆ—ಹೋಗು ।
ಇನ್ನಿಲ್ಲಿ । ನಿಲಬೇಡ । ಚೆನ್ನಾಗಿ । ನಡೆಯೊ ಗಾಢ ॥ ೩೬೮ ॥
ದರಣೀ, ಪಾ । ಲರನೀಗ । ,ನೋಡ । ಯ್ಯ—ಇಂತು ।
ಸುರಪ,ಗೆ । ಬಿನ್ನಹ । ,ಮಾಡ । ಯ್ಯ—ವೊನ್ನೆ ।
ಬರೆದು,ಕ । ಳುಹಿದ್ದೆಲ್ಲ । ಬರಿಸಿ,ಕ । ಳುಹಬೇಕಲ್ಲ ॥ ೩೬೯ ॥

---

1 ಕ್ಷೋಣಿ ವಿ । ಡಿದು ಆ, । ಕಾಶದ । ಪರಿಯಂತ ।
ಬಾಣಸೇ । ತುವೆಯಾಯ್ತು ॥ ನಿಮಿಷಪಾ । ಕ್ರಿದಲಿ— ॥
ಪ್ರಾಣಿಯ । ಹುದು ಭಳಿ । ಭಳಿರೆ ಯೆ । ನ್ನುತ ಗೀ ।
ರ್ವಾಣರೆ । ಲ್ಲರು ನೋಡಿ । ತಳಮಳಿಸಿದರು— ॥ (೬)

ಎನುತ, ವೀ । ಳ್ಯವ ತರಿಸಿ । , ಕೊಟ್ಟ । ನು—ಖಚರ ।
ಘನಬೇಗ । ದಲಿ ನಡೆ । ,ಗೊಟ್ಟ । ನು—ಬಂದೀ ।
ಕ್ಷಣಕೆ, ಸ್ವ । ರ್ಗಕ್ಕೆ ಬಂದ । ಸುರಪ, ನೊ । ಳಿಂತೆಂದ ॥ ೩೭೦ ॥

(ಎಲ್ಲರೂ ನಿರ್ಗಮಿಸಿದ ಮೇಲೆ ಇಂದ್ರನ ಪ್ರವೇಶ, ಖಚರನು ಬಂದು ವಂದಿಸುತ್ತಾನೆ)

೯೭ ರಾಗ ದೇಶಿತೋಡಿ—ಏಕತಾಳ ೧ (ತಿತ್ತಿತ್ತೈ ೬)

ಖಚರ—

,ವಂದ । ನವ । ಯ್ಯ ಬಿ । ನ್ನಪ । ವೊಂದ । ಲಾಲಿ । ಸಯ್ಯ ।
,ಕಂದ । ಪಾರ್ಥಂ । ಗೋಲೆ । ಕೊಟ್ಟು । ಬಂದಿ । ರುವೆ । ನಯ್ಯ ॥ಪಲ್ಲವಿ॥

,ಅಂದು । ನಿಮ್ಮ । ಓಲೆ । ಯನ್ನು । ಕಾಣು । ತ್ತ ಧ । ರ್ಮಜಗೆ ।
,ಚಂದ । ದಿಂದ । ಪೇಳಿ । ದ ಆ । ಮೇಲೆ । ಕುಂತಿ । ಯಡಿಗೆ ।
.ಮುಂಬೆ । ವರ್ಣ । ಸಿದ । ಭೀಷ್ಮ । ಭೀಮ । ಯಮಳ । ರಿಂಗೆ ॥ ೩೭೧ ॥

,ಧರಣಿ । ಪಾಲ । ರಿಂಗೋ । ಲೆಯ । ಬರೆದೆ । ಲ್ಲರ ಕ । ರೆಸಿದ ।
ಪರಿಪ । ರಿ ವಿ । ಧಾನ । ದಿಂದ । ಪುರವ । ಶೃಂಗ । ರಿಸಿದ ।
,ಕರಿನೋ । ಹಿಗಾ । ಗುವ । ಸೋಪ । ಸ್ಕರಗ । ಳತ । ರಿಸಿದ ।
,ಹಿರಿಯ । ರ ಕಾ । ಲದೊಳಿ । ದ್ದ ಐ । ಶ್ವರಿಯ ।
ಗಳ ಹೋ । ರಿಸಿದ ॥ ೩೭೨ ॥

,ದ್ವಾರಾ । ವತಿ । ಯಿಂದ । ಕೃಷ್ಣ । ದೇವ । ತೆರಳಿ । ಬಂದ ।
,ವಾರ । ಣಾವತಿ । ಯಲ್ಲಿ । ಬಳಿಕ । ಹೋಗಿ । ಪಾರ್ಥ । ಮಿಂದ ।
, ಬೇರೆ । ಬೇರೆ । ಎಲ್ಲ । ರಡಿಗೆ । ವಂದಿ । ಸುತ್ತ । ನಿಂದ ।
,ವಾರಿ । ಜನೇ । ತ್ರನ । ಪದವ । ನೋಡು । ತ್ತ ಬಿ । ಲ್ಗೊಂಡ ॥ ೩೭೩ ॥

,ಮಂತ್ರ । ಬಾಣ । ವನ್ನೆ । ಪಿಡಿದು । ಚಾಪ । ಕೊಡ್ತಿ । ಬಲಿದ ।
,ನಿಂತು । ಕೊಂಡು । ಶಕ್ತಿ । ಯಿಂದ । ಕರ್ಣ । ಪರ್ಯಂ । ತೆಳೆದ ।
.ಕಂತು । ಪಿತನ । ಮನದಿ । ನೆನೆಯು । ತ್ತ್ರಸೆದು । ಹರ್ಷ । ತಳೆದ ।
,ಕುಂತೀ । ಸುತರ । ಮನದೊ । ಳಿದ್ದ । ಭ್ರಾಂತಿ । ಯೆಲ್ಲ । ಕಳೆದ ॥೩೭೪॥

.ಇಲ್ಲಿ । ಪರ್ಯಂ । ತಂಬ । ನೆಸೆದು । ಹೊಸೆದು । ದಾರಿ । ಮಾಡಿ ।
.ಚಲ್ಲಿ । ಸದ । ಹಾಗೆ । ಪಾಶ । ದಲ್ಲಿ । ಬಿಗಿದು । ನೋಡಿ ।
,ಮೆಲ್ಲ । ನೆ ಆ । ಮೇಲೆ । ಎನ್ನ । ಕರೆದು । ವೀಳ್ಯ । ನೀಡಿ ।
,ಸೊಲ್ಲಿ । ಸುತ್ತ । ಬರೆದು । ದೆಲ್ಲ । ಬೇಡಿ । ದ ಮಾ । ತಾಡಿ ॥ ೩೭೫ ॥

೯೫ ವಾರ್ಧಿಕಷಟ್ಪದಿ

ಓಲಗವ ಕೊಟ್ಟಿಲ್ಲರರಮನೆಯೊಳಗೆ ನಮ್ಮ
ದಾರಿಯಂ ನೋಡುತ್ತ ಧರಣಿಪಾಲಕರಿಹರು
ಆಲಸ್ಯವಾಗದಂದದಿ ಕಳುಹಬೇಕಲ್ಲಿ ಸಕಲವಸ್ತುಗಳನೆಂದು ।
ಹೇಳಿ ಬಿನ್ನೈಸಿದರೆ ಖಚರನಾಕ್ಷಣಕೆ ಸುರ
ಪಾಲ ಮಾವುತರೊಡನೆ ಗಜವ ಶೃಂಗರಿಸಲ್ಕೆ
ಪೇಳಿದಾಗಳೆ ಮಹಾ ವಿಭವದಿಂ ಸುರಗಜವ ತಂದಿದಿರು ನಿಲ್ಲಿಸಿದರು ॥ ೩೭೭ ॥

೯೬ ರಾಗ ಶಂಕರಾಭರಣ—ತ್ರಿವುಡೆತಾಳ ೨

ಇಂದ್ರ—

ಇಂದ್ರನೈರಾ । ವತವ ಪನ್ನೀ । ರಿಂದ ಮೀಸಿ । —ಕೊರಳಿಗೆ ।
ಗಂಧ ಲೇಪಿಸಿ । ಪೂಸಿದರು ಕ । ಮ್ಮೆಣ್ಣೆಯಿಂದ ॥ ೩೭೭ ॥

ಚಂದ್ರ ಸೂರ್ಯರ । ಜರೆಯುತಿಹ ಮೊಗ । ರಂಬ ಬಿಗಿದು । —ಬೆನ್ನಿಗೆ
ಕುಂದಣದ । ಅಂಬರಿಯ ಹಾಯ್ಕಿದ । ರಂದು ಮೊದಲು ॥ ೩೭೮ ॥

ಕೋಟಿ ನವರ । ತ್ನಗಳ ಹಾರವು । ಕರದೊಳೆಸೆಯೆ । —ಗೊಂಚಲು ।
ಮೀಟುಮುತ್ತಿನ । ಓಲೆ ಕಿವಿಯೊಳು । ರಂಜಿಸಿದವು ॥ ೩೭೯ ॥

ಹೊನ್ನ ಗಂಟೆಗ । ಳೈದುಸಾವಿರ । ವನ್ನೆ ಕಟ್ಟಿ । —ಕಾಲಿಗೆ ।
ಚಿನ್ನದಾ ಸರ । ಪಣಿಯ ಗಗ್ಗರ । ವನ್ನು ಬಿಗಿದು ॥ ೩೮೦ ॥

ಲಕ್ಷ ಬಿಡುಮು । ತ್ತುಗಳು ಸಲೆ ನ । ಕ್ಷತ್ರದಂತೆ । —ಹೊಳೆಯಲು ।
ಅಕ್ಷಿಗಳು ಕೋ । ರವಿಸಲಾ ಗಜ । ವೀಕ್ಷಿಸಿದರು ॥ ೩೮೧ ॥

ಮೇಲೆ ನವರ । ತ್ನಗಳು ಹೊಳೆವ ಚೌ । ಡಾಳ ಕಟ್ಟಿ । —ಇಂದ್ರನ ।
ಓಲಗದಿ ತಂ । ದಿದಿರು ನಿಲಿಸಿದ । ರಾನೆಯನ್ನು ॥ ೩೮೨ ॥

೯೭ ರಾಗ ಮಧ್ಯಮಾವತಿ—ಏಕತಾಳ ೪

,ಇಂತೀ ಪ । ರಿಯಲಿ ಸಿಂ । ,ಗರವ ಮಾ । ಡಿದರು— ।
,ದಂತೀಶ । ನಿಂದ್ರನಿ । ,ದಿರು ನಿಲಿ । ಸಿದರು— ॥
,ಕುಂತಿಯಾ । ತ್ಮಜನೂರಿ । ,ಗೈದಿ ಬಾ । ರೆನುತ— ।
,ಸಂತೋಷ । ದಿಂದಪ್ಪ । ,ಣೆಯನಿತ್ತ । ನಗುತ— ॥ ೩೮೩ ॥

,ಕಾಮಧೇ । ನುವ ಕಲ್ಪ । ,ವೃಕ್ಷವ । [1]ತರಿ[1]ಸಿ— ।
.ಭೂಮಿಗಿ । ಳಿದು ಬರ । ಲೆಂದಲಂ । ಕರಿಸಿ— ॥
.ಆ ಮಹಾ । ರಂಭೆ ಊ । ,ರ್ವಶಿಯರ । ಕರೆಸಿ— ।
,ನೇಮ[2]ದಿಂ । ದೆ[2]ಲ್ಲರ್ಗೆ । .ವೀಳೆಯ । ಕೊಡಿಸಿ— ॥ ೩೮೪ ॥

,ಪಾರಿಜಾ । ತವ ಸುರ । , ನಾರಿಯರ । ಕರೆದು— ।
,ಧಾರಿಣಿ । [3]ಗಿಳಿದು ಬನ್ನಿ । ,ರೆನುತವ । ರ್ಗೊರೆದು[3]— ॥
,[4]ಸೀರಾಯು । ಧವ ಸಹ । ,ಅರ್ಜುನ । ನೆಡೆಗೆ— ।
,ಭೂರಿ ಸಂ । ಭ್ರಮದಿಂದ । ,ಕಳುಹಿದ । ಕಡೆಗೆ— ॥ ೩೮೫ ॥

೯೮ ವಾರ್ಧಿಕಷಟ್ಪದಿ

ಸುತ್ತ ಬೀಸುವ ಚಾಮರಗಳು ಸತ್ತಿಗೆಗಳರು
ವತ್ತುಸಾವಿರ ಪತಾಕೆಗಳು ಸಿಂಧಗಳು ಮೂ
ವತ್ತುಸಾವಿರ ದೇವಕನ್ನೆಯರು ವಾದ್ಯದುಂದುಭಿ ಭೇರಿ ಕಹಳೆಗಳಲಿ ।
ಇತ್ತಂಡ ಪಾಠಕರು ಜಯಜಯಾಯೆಂದು ಪೊಗ
ಳುತ್ತ ನಾಟ್ಯವನಾಡುತಿಹ ರಂಭೆ ಊರ್ವಶಿಯ
ರೆತ್ತ ನೋಡಿದರೆ ಗಂಧರ್ವ ಕಿನ್ನರರುಗಳ ಮೊತ್ತದಿಂ ಪೊರಮಟ್ಟರು ॥೩೮೬॥

೯೯ ರಾಗ ಭೈರವಿ—ತ್ರಿವುಡೆತಾಳ ೨ (ದ್ರುತ)

ಮಾತಲಿ—

ಬಂದಿತಾಗ, । —ಸುರಗಜ । ಬಂದಿತಾಗ— ।
ಮಂದರ, ಗಿರಿ । ಯಿಂದ ಸೂರ್ಸುಡಿ । ಯುಂದದಿಂಪಸು ।
ರೇಂದ್ರನಾ ಗಜ ॥ ಪಲ್ಲವಿ ॥

ಎಡಬಲದ ಪರಿ । ಪರಿಯ ಸೇವಕ । ರೊಡನೆ ಚಾಮರ । ಬೀಸುತ— ।
ಮಡದಿಯೂರ್ವಶಿ । ರಂಭೆಯರು ಅಡಿ । ಗಡಿಗೆ ನಾಟ್ಯವ । ನಾಡುತ— ॥
ಹೊಡೆವ ಭೇರಿ ನೃ । ದಂಗ ವಾದ್ಯದ । ಗಡಣೆ ನೆಲನು । ಗ್ಗಡಿಸುತ— ।
ಒಡೆಯನಪ್ಪಣೆ । ಯಿಂದ ಪೊಡವಿಗೆ । ನಡೆವ ಸಂಭ್ರಮ ।
ದಿಂದ ಮದಗಜ । ಬಂದಿತಾಗ—॥ ೩೮೭ ॥

1 ಕರೆ (ಕಾ) 2 ವಿತ್ತೆ (ಓ) 3 ಪರ್ಯಂತ ಹೋಗಿ ನೀವೆಲ್ಲಾ (ಅ, ಕಾ)
4 ವಜ್ರಾಯು । ಧವಕಂಡು । ಭೂಮಿಗಿಳಿ । ಯೆಂದು ।
ಅರ್ಜುನನ । ಪುರಕ್ಕೈದಿ । ಬನ್ನಿರೆಂ । ದೆನುತ ॥ (ಕಾ, ಅ)

ಒಸರೆ ಕಹಳೆಗ | ಳೆಂಟು ದಿಕ್ಕಿನೊ | ಳಸುರರೆದೆ ತ | ಲ್ಲಣಿಸುತ— |
ಪಸರಿಸುತ್ತಲೆ | ಬಿರುದುಗಳ ಸುಮ | ನಸರಗಣ ಸಂ | ದಣಿಸುತ— ||
ದೆಸೆದೆಸೆಯನೀ | ಕ್ಷಿಸುತಲಂದಣ | ಕುಶಲಗತಿಯಲಿ | ಕುಣಿಸುತ— |
ಬಿಸಜಸಂಭವ | ರುದ್ರ ಹರಿ ಸಹಿ | ತೊಸೆದು ಮನದೊಳ |
ಗೆಣಿಸುವಾಗಳೆ | ಬಂದಿತಾಗ— || ೩೮೮ ||

ಏನನೆಂಬೆನು | ಸುರಗಜವು ಸು | ಮ್ಮಾನದಿಂದಲೆ | ಬರುವುದ— |
ಭಾನುಕೋಟಿ ಪ್ರ | ಕಾಶ[1]ದಂದದಿ | ಕಾಣಿಸುತ[1] ನಡೆ | ತರುವುದ— ||
ಧೇನುವಿನ ಬೆಂ | ಬಿಡದೆ ಬಹ ಸುರ | ಮಾನಿನಿಯರೊ | ಪ್ಪಿರುವುದ— |
ನೀನು ನಡೆ ತಾ | ನು ನಡೆಯೆಂದಾ | ಬಾಣನೆಡೆಗೈ | ತಂದರಾಗಲೆ |
ಬಂದರಾಗ, | —ಸುರರೈ | ತಂದರಾಗ || ೩೮೯ ||

೧೦೦ ರಾಗ ನೀಲಾಂಬರಿ—ಅಷ್ಟತಾಳ ೧

ಮೆಲ್ಲ ಮೆ | ಲ್ಲನೆ ನಡೆದು | ಮಲ್ಲಗಜ | ಪಾರ್ಥನಂಬಿ |
ನಲ್ಲಿಯೊಂದು | ಕಾಲನಿಟ್ಟು | ನೋಡಿತು | —ಅ | ಲ್ಲಾಡಿತು || ೩೯೦ ||

ಬಾಣಪಂಜ | ರಕ್ಕೆ ಹೊರುವ | ತ್ರಾಣ ಸಾಲ | ದೆಂದು ಕೃಷ್ಣ |
ಕಾಣುತ ಸಂ | ತೋಷದಿ ಬೆ | ನ್ನಿತ್ತನೆ | —ಅದ | ಹೊತ್ತನೇ || ೩೯೧ ||

ಇಂದಿರಾಪ | ತಿಗಿನ್ನೆಂಥ | ಕರುಣೆಯೋ ಭ | ಕ್ತನ ಮೇಲೆ |
ಮಂದರಾದ್ರಿ | ಎತ್ತಿದಂತೆ | ಧರಿಸಿದ | —ಶಕ್ತಿ | ಯಿರಿಸಿದ || ೩೯೨ ||

ಶ್ರೀಧರನ್ನ | [2]ಮಹಿಮೆ[2]ಯಿಂದ | ಹಾದಿಹಿಡಿದ | ಆನೆಯಂದು |
ಮೇದಿನಿಗಿ | ಳಿದು ಬಹ | ಚಂದವ | — ಆ ಆ | ನಂದವ || ೩೯೩ ||

ವಚನ || ಅಂತಾ ಸುರಕರಿಯು ಭಾನುಮಾರ್ಗದಿ ನಡೆತರುತ್ತಿರಲು ಕಂಡು ಭೂಲೋಕದ ಜನರು ಏನೆನ್ನುತ್ತಿದ್ದರು ಎಂದರೆ—

೧೦೧ ರಾಗ ಪುನ್ನಾಗವರಾಳಿ—ಅಷ್ಟತಾಳ ೧

ಆ—ನೆ | ಬಂತು ನೋ | ಡುವ ಬ | ನ್ನಿ—ಇಂದ್ರ ||
ನಾ—ನೆ | ಬಂತು— || ಪಲ್ಲವಿ ||

ಅರ್ಜುನ | ನೆಸಗಿದ | ಅಂಬಿನ | ಪಥದಲ್ಲಿ || ಆ—ನೆ | ಬಂತು— || ೩೯೪ ||

1 ವಾಗುತ ಕಾಣುತಲೆ (ಕಾ, ಅ) 2 ಕರುಣೆ (ಕಾ)

ಕಾಮಧೇ | ,ನು ಕಲ್ಪ | ವೃಕ್ಷವು | ಮೊದಲಾಗಿ || ಆ—ನೆ | ಬಂತು— || ೩೯೫
ಪಾರಿಜಾ | ತವು ಕುಲಿ | ಶಾಯುಧ | ಸಹಿತಾಗಿ || ಆ—ನೆ | ಬಂತು—|| ೩೯೬
ಸೊಂಡಿಲ | ತೂಗಾಡಿ | ಹಿಂದು ಮುಂ | ದೋಲಾಡಿ || ಆ—ನೆ | ಬಂತು—|| ೩೯೭
ಸ್ವರ್ಗವೆ | ಇಳಿತಪ್ಪ | ಸಂಭ್ರಮ | ದೊಡಗೂಡಿ || ಆ—ನೆ | ಬಂತು— || ೩೯೮
[ಪಶ್ಚಿಮ | ದೇಶಕ್ಕೆ | ಸೂರ್ಯ ತಾ | ನಿಳಿವಂತೆ ||] ಆ—ನೆ | ಬಂತು— || ೩೯೯

೧೦೨ ರಾಗ ಸೌರಾಷ್ಟ—ತ್ರಿವುಡೆತಾಳ ೨

ಪುರಜನರು—

ಗಗನಮಾರ್ಗದೊ | ಳಿಳಿವ ಆನೆಯ |
ಬಗೆಯನೀಕ್ಷಿಸಿ | ಕುಂತಿದೇವಿಯು |
ಮಗನ ಪಡೆದಾ | ಪುಣ್ಯವೆಂದೇ | ಪೊಗಳುತಿಹರು || ೪೦೦

ನಾಕವೇ ನಡೆ | ದಿಂದು ಈ ಭೂ |
ಲೋಕಕಿಳಿದುದೊ | ಎಂಬ ತೆರದಲಿ |
ಪಾಕಶಾಸನ | ನಾನೆ ಬಂತು ವಿ | ವೇಕದಿಂದ || ೪೦೧

ನೋಡಿ ಹರ್ಷಿತ | ನಾದ ಪಾರ್ಥನು |
ಮಾಡಿದಳು ನಗೆ | ಮೊಗನ ಕುಂತಿಯು |
[1]ಏ[1]ಡಿಸಿದುದಾ | ಕೌರವಾದಿಗೆ | [2]ಸೇ[2]ಡಿನಿಂದ || ೪೦೨

ಅಂಧನೃಪತಿಯ | ಸತಿಗೆ ಮತ್ಸರ |
ಬಿಂದುಗಳು ಹೊರ | ಸುರಿಯ ತೊಡಗಿದು |
ಮಂದನಾದ ಸು | ಯೋಧನನು ಮನ | ಕುಂದಿಹೋಗಿ || ೪೦೩

ಬೇಗ ಬಂದಾ | ಪಟ್ಟಣದ ಹೊರ |
ಬಾಹೆಯಲಿ ನಿಲಿ | ಸಿದರು ಆ ದಿನ |
ತಾವರೆಯ ಸಖ | ನಸ್ತಮಿಸಿದನು | ಜಾವದಲ್ಲಿ || ೪೦೪

ವಚನ || ಅಂತಾದಿನ ಅಸ್ತಮಾನವಾಗಲು ಎಂದಿನಂತೆಲ್ಲರೂ ಸುಖನಿದ್ರೆಯಂ ಗೆಯ್ಯಲ
ನುರುದಿನ ಅರುಣೋದಯದೊಳೆದ್ದು ಸಕಲರೂ ಮಜ್ಜನವಂ ಮಾಡಿ ಅಲಂ
ರಿಸಿಕೊಂಡು ಸಕಲ ಸನ್ನಾಹದಿಂದ ರಾಯರಾಯರು ಶ್ರೀ ಕೃಷ್ಣದೇವ

---

1 ವೇ; ಚಾ; ಸೇ; ಹೇ (ಕಾ) 2 ಕೇ (ಅ)

ಒಡ್ಡೋಲಗಕಂ ಬರಲಾಗಿ ಆ ವೇಳ್ಯದಲ್ಲಿ .ಭೀಷ್ಮಾಚಾರ್ಯರು ಕುಂತೀದೇವಿ ಯೊಡನೆ ಏನೆಂದರು ಎಂದರೆ—

## ಕುಂತೀ—ಗಾಂಧಾರೀಸಂವಾದ

೧೦೩ ರಾಗ ತೋಡಿ—ತಾಳ ತಿಶ್ರಿತ್ರ

,ವಾರಿ । ಜನೇ । ತ್ರೆ ನೀ । ನಿತ್ತ । ಬಾರೆ । ಕುಂತೀ । ದೇವಿ ।
,ಧಾರಿ । ಣಿಗೆ । ಬಂತು । ಇಂದ್ರ । ನಾನೆ । ಬಹಳ । ಠೀವಿ ॥
,ಮೂರು । ಲೋಕ । ಕ್ಕೊ ನಿ । ನ್ನ ಕು । ಮಾರ । ಖ್ಯಾತ । ನಾದ ।
,ಶೌರ । ವರಿ । ಗಾಯಿ । ತೀಗ । ಮನದೊ । ಳತಿ । ಕ್ರೋಧ ॥ ೪೦೫ ॥

,ಕರೆಯ । ಲಿಲ್ಲ । ನಿನ್ನ । ನೆಂದು । ಜರೆವ । ಲೋಗ । ರಿಂದು ।
,ಕರೆಯ । ದಿದ್ದ । ರೆ ನಿ । ನ್ನನೂ । ಒರೆವ । ರು ಹೀ । ಗೆಂದು ॥
,ಹಿರಿಯ । ವಳು ನಿ । ನ್ನಿಂದ । ಲಾಕೆ । ಹಲವು । ವರ್ಷ । ಕಕ್ಕ ।
,ಕರಿಯ । ನೋಹಿ । ಗಿಲ್ಲಿ । ಗವಳು । ಬಂದ । ರೆ ಬಲು । ಚೊಕ್ಕ ॥ ೪೦೬ ॥

,ಅಳುಕ । ದಲ್ಲಿ । ಹೋಗು । ಬೇಗ । ಕರೆವು । ದಕ್ಕೆ । ಕುಂತಿ ।
,ತಳುವ ।ಮಾಡ । ಬೇಡ । ಪೂಜೆ । ಮಾಡ । ಬೇಕು । ದಂತಿ ॥ ೪೦೭ ॥

,ಹೇಳಿ । ಬಾರ । ದಿದ್ದ । ರೇನೂ । ಚಿಂತೆ । ಯಿಲ್ಲ । ಮುಂದೆ ।
,ಹೇಳ । ಲಿಲ್ಲ । ವೆಂಬ । ಮಾತ । ಕಳೆಯ । ಬೇಕು । ಇಂದೇ ॥ ೪೦೮ ॥

ವಚನ ॥ ಇಂತೆಂದು ಭೀಷ್ಮಾಚಾರ್ಯರು ಹೇಳಲಾಗಿ ಆ ಮಾತಿಗೆ ಎಲ್ಲರೂ ಒಡಂಬಡ ಲಾಗಿ ಕುಂತಿಯು ಶೃಂಗಾರವಾದಳದೆಂತೆನೆ—

೧೦೪ ರಾಗ ದ್ವಿಜಾವಂತಿ—ಅಷ್ಟತಾಳ ೨

ಕುಂತಿ—

ಮುಖಮಜ್ಜ । ನವ ಮಾಡಿ । ಮೋರೆಗರ । ಸಿನ ಹಚ್ಚಿ ।
ಮುಕುರಕ । ಪೋಲೆ ಚಂ । ಪಕಮಾ, । ಲೆ— ॥
ಸಕಲ ಶಾ । ಸ್ತ್ರವಿಚಾರೆ । ಕರ್ಣಕೊ । ಪ್ಪುವ ಮಾ ।
ಣಿಕದೋಲೆ । ಇಟ್ಟಳಂ । ಬುಜಗಂ, । ಧಿ— ॥ ೪೦೯ ॥

ಬಣ್ಣದು । ಟಿಯ ಬಾಲೆ । ಬೈತಲೆ । ಯನು । ತಿದ್ದಿ ।
ಸಣ್ಣಮ । ಲ್ಲಿಗೆಯನ್ನೆ । ಮುಡಿದ, । ಳು— ॥
ಕಣ್ಣಿಗಂ । ಜನವಿಟ್ಟು । ಚಂದದಿಂ । ದಳವಟ್ಟು ।
ಎಣ್ಣೆಕ । ಸ್ತೂರಿ ಲೇ । ಪಿಸಿದ, । ಳು— ॥ ೪೧೦ ॥

ಚಂದ್ರಸಂ । ವದ ಜೊಟ್ಟು । ಚಂದದಿಂ । ದಳವಟ್ಟು ।
ಮುಂದಲೆ । ಬೊಟ್ಟು ಮಾ । ಗಾಯಿಗ । ಳ— ॥
ಕುಂದಣ । ದೊಡ್ಯಾಣ । ಡಾಬು ಸರ । ಪಣಿ ಕಾ, ।
ಲಂದುಗೆ । ಇಟ್ಟಳಂ । ಬುಜಪಾ, । ಣಿ— ॥ ೪೧೧ ॥

[1]ಏಕಾಪ । ಳಿಯ ಸರ । ಹವಳ ಬಾ । ಲ್ಸ[1]ರಗಳ ।
ನಾಕೆಂಟು । ಮುತ್ತಿನ । ಕೊರಳಾ, । ರ— ॥
ಶ್ರೀಕಾರ । ಕುಂಡಲ । ಕಾಯಿಸ್ತಾ । ಳಿಯ [2]ಹಾ[2]ರ ।
ಹಾಕಿಕೊಂ । ಡಾಯಿತ । ವಾದ, । ಳೆ— ॥ ೪೧೨ ॥

ಕನ್ನಡಿ । ಯನು ನೋಡಿ । ವೀಳ್ಯ ಕ । ಯ್ಯೊ[3]ಳ[3]ಮಾಡಿ ।
ಸನ್ನಾಹ । ದಿಂದ ದಂ । ಡಿಗೆಯೇ, । ರಿ— ॥
ಪನ್ನಂಗ । ನಿಭವೇಣಿ । ಸೊಬಗಿನ । ಸಾಂಬ್ರಾಣಿ ।
ತನ್ನರ । ಮನೆಯಿಂದ । ಹೊರಟ, । ಳೆ— ॥ ೪೧೩ ॥

೧೦೫ ರಾಗ ಕುರಂಜಿ—ಅಷ್ಟತಾಳ ೧

ಬಂದಳು । ಹಸ್ತಿನ । ಪುರಕೆ, । —ಕುಂತಿ ।
ಗಾಂಧಾರಿ । ಯನು ಕರೆ । ವುದಕೆ— ॥
ಅಂದಣ । ವೇರಿದ । ಬ್ಬರಕೆ, । —ಇಂತು ।
ಕುಂದದಾ । ನಂದದಿ । ಚಂದಿರ । ವೊಗದರ ।
ವಿಂದಲೋ । ಚನೆ ಸೊಗ । ಸಿಂದ ಸಿಂ । ಗರವಾಗಿ ॥ ೪೧೪ ॥

ಅಂಗಜಾ । ತನ ಮದ । ದಾನೆ, । —ಮಿಗೆ ।
ಶೃಂಗಾರ । ಸೊಬಗಿನ । ಸೋನೆ ॥
ಹಿಂಗದೆ । ಕೋಕಿಲ । ಗಾನೆ, । —ಚತು ।
ರಂಗವೇ । ದಗಳ ನಿ । ದಾನೆ, । —ಬಂದ ।
ಹೆಂಗಳ । ಮಧ್ಯದಿ । ಕಂಗೊಳಿ । ಸುತ ನೆರೆ ।
ದಂಗನೆ । ಬಂದಳು । ಮಂಗಳ । ಗೌರಾಂಗಿ ॥ ೪೧೫ ॥

ಈ ರೀತಿ । ಯಲಿ ಕುಂತಿ । ಬಂದು, । —ಆ ಗಾಂ ।
ಧಾರಿಯ । ಅರಮನೆ । ಗೆಂದು ॥
ನಾರಿಯರ್ । ತಿಳಿಪಲಿಂ । ತೆಂದು, । —ಆಕೆ ।

1 ಎಕ್ಕಮಾ । ಲೆಯ ಸರ । ಜಿಲ್ಲೆಯ । ಸ (ಕಾ) 2 ಭಾ (ಕ,ಅ) 3 ಳು (ಕಾ)

ಮೋರೆಯ । ದುಗುಡದಿ । ಬಂದು, । —ತಂಗಿ ।
ಬಾರೆ ವ । ಯ್ಯಾರೆ ಗಂ । ಭೀರೆ ಮೋ । ಹನ ಶೃಂ ।
ಗಾರೆ ನೀ । ನೆಸುತ ಕ್ರೈ । ಯಾರೆ ಕ । ರೆಯಲಾಗಿ ॥ ೪೧೬ ॥

(ಗಾಂಧಾರಿಯ ಪ್ರವೇಶ ; ಕುಂತೀ ಗಾಂಧಾರೀ ಸಂವಾದ)

೧೦೬ ರಾಗ ಕಾಂಭೋಜಿ—ಏಕತಾಳ ೪, ತಿತ್ತಿತ್ತೈ

ಗಾಂಧಾರಿ—
ಬಂದೆಯಾ ಕು । ಳ್ಳಿರು ಕಮಲ । ಗಂಧಿ ನಿನ್ನ । [1]ಮುದ್ದು ಮೊಗದ[1] ।
ಚಂದ್ರನ [2]ಪ್ರ । ಕಾಶ[2] ಹೆಚ್ಚಿ । ತಿಂದೇಕೆ ಕುಂ । ತಿ— ॥ ೪೧೭ ॥

ಕುಂತಿ—
ಮಂದಗಮನೆ । ಅಕ್ಕ ನಿನ್ನ । ಅಂದ ನೋಡಿ । ಹರುಷವಾಯ್ತು ।
ಕಂದಿದೇಕೆ । ನಿನ್ನ ಮುಖವು । ಇಂದು ಗಾಂಧಾ । ರಿ— ॥ ೪೧೮ ॥

ಗಾಂಧಾರಿ—
ಎಂದೂ ಇಲ್ಲ । ದ ಸಂತೋಷ । ಇಂದೇಕೆ ಬಂ । ತೆನ್ನ ನೋಡಿ ।
ಒಂದು ಮನಸಿ । ಲೊಂದು ಮಾತಿ । ಲಿಂದೇನು ಕುಂ । ತಿ— ॥ ೪೧೯ ॥

ಕುಂತಿ—
ಅಂದಿನಾರ । ಭ್ಯ ನಾನಿಂಥ । ದೊಂದನೂ ಕ । ಲ್ತವಳಲ್ಲ ।
ನೊಂದು ನೀನೇ । ತಕೀ ಮಾತ । ನೆಂದೆ ಗಾಂಧಾ । ರಿ— ॥ ೪೨೦ ॥

ಗಾಂಧಾರಿ—
ಸಿಟ್ಟೇನೇ ವೈ । ಯುರಿವ ನುಡಿಗೆ । ಇಷ್ಟು ನೀನಾ । ಡಿದಮೇಲೆ ।
ಎಷ್ಟುದಿನಕೆ । ನಿನ್ನ ಭಾಗ್ಯ । [3]ಗುಟ್ಟೇನು[3] ಕುಂ । ತಿ— ॥ ೪೨೧ ॥

ಕುಂತಿ—
,ನಿಷ್ಠುರ ಬೇ । ಡ ಕಾಣಕ್ಕ । ,ಹುಟ್ಟುಬಡವೆ । ನಿನ್ನ ಕೂಡೆ ।
ಕಷ್ಟಕ್ಕೆ ಬಂ । ದವಳಲ್ಲ । [4]ದೃಷ್ಟ[4] ಗಾಂಧಾ । ರಿ— ॥ ೪೨೨ ॥

ಗಾಂಧಾರಿ—
ಹುಟ್ಟುಬಡವೆ । ಯಾದರೆ ನೀ । ಸೃಷ್ಟಿಪಾಲ । [5]ರೆಲ್ಲ[5] ಕರೆಸಿ ।
[6]ಇ[6]ಷ್ಟು ಸಂಭ್ರ । ಮಗ[7]ಳೆ[7] ಮುಂದಿ । ನ್ನೆಷ್ಟುಂಟೇ ಕುಂ । ತಿ— ॥ ೪೨೩ ॥

---

1 ಮುಖದ ಮೇಲೆ (ಅ) 2 ಕಾಂತಿ (ಅ) 3 ಬಿಟ್ಟೇನೆ (ಕಾ) 4 ಧೃಷ್ಟ; ದುಷ್ಟೆ(ಕಾ)
5 ಕರಸು (ಕಾ) 6 ಎ (ಕಾ) 7 ಳೊ (ಓ. ಕಾ)

ಕುಂತಿ—

ಸೃಷ್ಟಿಪಾಲ | ರ ಕರೆಸಿದ್ದು | ಕೃಷ್ಣನ ಸ | ಹಾಯ ನೋಡೆ |
ಲೊಟ್ಟೆಯೊ ದಿಟವೊ | ಬಂದು ನೋಡು | ಕುಟಿಲೆ ಗಾಂಧಾ | ರಿ— || ೪೨೪ ||

ಗಾಂಧಾರಿ—

ಮಾನಿನಿ ಹಾ | ಗಾದರಿಂದ್ರ | ನಾನೆ ಯೇಕೆ | ಬಂತು ಧರೆಗೆ |
ನೀನಿಂಥ [1]ನಂ | ಜಾಡುತಿರುವು | ದೇನೇನೆ[1] ಕುಂ | ತಿ— || ೪೨೫ ||

ಕುಂತಿ—

ನಾನೇನ ಮಾ | ಡಲಿ ಪಾರ್ಥ | ತಾನೆ ತರಿಸಿ | ದ್ದೋಲೆ ಕಳುಹಿ |
ಆನೆಪೂಜೆ | ನೀನೇ ಮಾಡು | ಹಿರಿಯೆ ಗಾಂಧಾ | ರಿ— || ೪೨೬ ||

ಗಾಂಧಾರಿ—

ಎನ್ನ ಮೇಲೆ | ಪಂಥದಿಂಧ | ನಿನ್ನ ಮಗ | ತರಿಸಿದ್ದಾನೆ |
ಇನ್ನು ಪೂಜೆ | ಮಾಳ್ಪುದಾನು | ಸನ್ಮತವೆ ಕುಂ | ತಿ— || ೪೨೭ ||

ಕುಂತಿ—

,ಎನ್ನ ನಿನ್ನ | ಮಕ್ಕಳೆಂಬ | ಭಿನ್ನ ಭೇದ | ಗಳುಂಟೇನೆ |
ಇನ್ನಿಂಥ ಮಾ | ತಾಡಲೇಕೆ | ಎನ್ನೊಳ್ ಗಾಂಧಾ | ರಿ— || ೪೨೮ ||

ಗಾಂಧಾರಿ—

ಎರಡುಭೇದ | ವಿಲ್ಲದವಳು | ಕರೆಯದಿದ್ದ | ರೇನು ನಿನಗೆ |
ಬರಲುಬಾರ | ದೇನೆ ಬರದ | ಪರಿಯೇನೆ ಕುಂ | ತಿ— || ೪೨೯ ||

ಕುಂತಿ—

,ತರಳರೊಬ್ಬ | ರಾದರೂ ಅಂ | ದಿರದರಿಂದ | ಮನೆಯ ಕಾವ |
,ಹೊರೆಯೊಳಾದೆ | ಬಾರದಿರ್ದ | ಪರಿಯ ಕಾಣ | ಕ್ಕ— || ೪೩೦ ||

ಗಾಂಧಾರಿ—

ಮಾತ ಕಲಿತ | ಜಾಣೆ ಸುಮ್ಮ | ನೇತಕೆ ನಿ | ಷ್ಠುರವನ್ನು |
ನೀತಿಯಿದ್ದ | ಹಾಗಾಗಲಿ | ನೀ ತೆರಳು ತಂ | ಗಿ— || ೪೩೧ ||

ಕುಂತಿ—

,ನೀನು ತೆರಳಿ | ಬಾರದನಕ | ನಾನು ಹೋಹ | ಳಲ್ಲವಿನ್ನು |
ಊನವಿರಲು | ಕಾಲ ಹಿಡಿವೆ | ಬಾರೆ ಗಾಂಧಾ | ರಿ— || ೪೩೨ ||

---

1 ಮಾತಾಡಬೇಡ ಏನೆಲೆ (ಕಾ,ಅ)

ಗಾಂಧಾರಿ—

ಕಾಲ ಹಿಡಿ[1]ವ । ದಹುದು ನಿನ್ನ । ಬಾಲಕರಿಗೆ । ಸಂತೋಷದ[1] ।
ಕಾಲ ಬಂ[2]ತಾ । ದ್ದರಿಂದ ನೀ । ಪೇಳಿದೆ[2] ಕುಂ । ತಿ— ॥ ೪೩೩ ॥

ಕುಂತಿ—

ಜಾಲಮಾತಿ । ದಲ್ಲ ಶ್ರೀ ಗೋ । ಪಾಲ ಸಹಿತ । ಬರಬೇಕೆಂದು ।
ಹೇಳಿಕಳುಹಿ । ದ ದಮ್ಮಯ್ಯ । ಕೇಳೆ ಗಾಂಧಾ । ರಿ— ॥ ೪೩೪ ॥

ಗಾಂಧಾರಿ—

ದಮ್ಮಯ್ಯ ದ । ಕ್ಕಯ್ಯ ಯೆಂದು । ಹೆಮ್ಮೆಯ ಮಾ । ತಾಡಬೇಡ ।
ಸುಮ್ಮನೆ[3]ನ್ನ । ಕೆಣಕಬೇಡ । ಒಮ್ಮೆಗೂ[3] ಕುಂ । ತಿ— ॥ ೪೩೫ ॥

ಕುಂತಿ—

ನಿಮ್ಮ ನಾ ಬಿ । ಟ್ಟು ಹೋದರೆ । ಧರ್ಮಜ ಭೀ । ಮಾರ್ಜುನರು ।
ಒಮ್ಮತದಿ । ಬೈವರೆನ್ನ । ಕ್ಕಮ್ಮ ಗಾಂಧಾ । ರಿ— ॥ ೪೩೬ ॥

ಗಾಂಧಾರಿ—

ಸೆಡವುಗ[4]ಳೆ । ನ್ನೊಡನೆ[4] ಬೇಡ । ಸಾಕು ಮನೆಗೆ । ನಡೆಯೆ ಗಾಢ ।
ಬಡವರು ನಾ । ವೆಮ್ಮಗೊಡವೆ । ಏಕಿನ್ನು ಕುಂ । ತಿ— ॥ ೪೩೭ ॥

ಕುಂತಿ—

ಬಡವರಾದ । ರೇನು ನಿಮ್ಮ । ಒಡವೆ ವಸ್ತು । ಗಳ[5]ನು ನಮಗೆ ।
ಕೊಡಲುಬೇಡ । ಕೇಳಬಂದ । ಳಲ್ಲ[5] ಗಾಂಧಾ । ರಿ— ॥ ೪೩೮ ॥

ಗಾಂಧಾರಿ—

ಕರೆಯ ಬಂದ । ವಳೊ ನೀಯೆನ್ನ । ಜರೆಯ ಬಂದ । ವಳೊ ಮೂದಲಿಸಿ ।
ಮರಿಯಾದೆಯ । ನುಳುಹಿಕೊಂಡು । ತೆರಳವ್ವ ಕುಂ । ತಿ— ॥ ೪೩೯ ॥

ಕುಂತಿ—

ಸರಿಯೆ ನಿನಗಿ । ದಿಂಥ ಮಾತು । ಗರುವದಿಂದ । ನಿಷ್ಠುರಕ್ಕೆ ।
ಗುರಿಯಾಗಬೇ । ಡಕ್ಕ ನೀನು । ಹಿರಿಯೆ ಗಾಂಧಾ । ರಿ— ॥ ೪೪೦ ॥

ಗಾಂಧಾರಿ—

ಹೊತ್ತು ಹೋಗ । ದೇನೆ ಮೂಳಿ । ಸುಮ್ಮನೆ ಹೋ । ಗೆ ನಿವಾಳಿ ।
ಸತ್ತ[6] ಕಾಗೆ । ಮನೆಗೆ ನಡೆ ನೀ । ನತ್ತತ್ತ[6] ಕುಂ । ತಿ— ॥ ೪೪೧ ॥

---

1 ವೆ ಇಂದು ನಿನ್ನ । ಬಾಲರಸಂ ತೋಷಕಾಗಿ । (ಕಾ,ಅ) 2 ತು ನಿನಗೆ ಇನ್ನು ಮೇಲೆ ಕೇಳ್ (ಕಾ) 3 ನೀ ನಡೆಯೆ ಮನೆಗೆ ದಮ್ಮಯ್ಯ (ಅ) 4 ಳಸ್ನೊಸೆಯ (ಅ,ಕಾ) 5 ನಲ್ಲಿ । ಕೊಡಬೇಡಲ್ಲ । ಯಾರಿಗೂ ಮಡದಿ (ಅ) 6 ವರ ಹಾಗೆ ನಡೆಯತ್ತಲೇ (ಅ)

ಕುಂತಿ—

ಸತ್ತವರು । ಬರುವರೇನೆ । ಕರೆಯಲಿಕ್ಕೆ । ಬಂದೆ ನಿನ್ನ ।
ಪಿತ್ತ[1]ವೇರಿ । ದಂತೆ ಗಳಹ । ಬೇಡ[1] ಗಾಂಧಾ । ರಿ— ॥ ೪೪೨ ॥

ಗಾಂಧಾರಿ—

ಗಂಡ ಹೋದ । [2]ಮೇಲೆ ಸತಿಯ[2] । [3]ರುಂ[3]ಡು ಜಗಳ । [4]ವಾಡುತಿಹು[4]ದು ।
ಕಂಡ ಮಾತು । ಹೊಸದೇನಲ್ಲ । ಗುಂಡಾಳಿ ಕುಂ । ತಿ— ॥ ೪೪೩ ॥

ಕುಂತಿ—

,ಹೆಂಡತಿ ಸೊ । ಕ್ಕುವಳು [5]ತನ್ನ[5] ।, ಗಂಡ ಕುರುಡ । ನಾದ ಮೇಲೆ ।
ತುಂಡುಸೂಳೆ । ಯರಿಗೆ ಜೋಡು । ದಿಂಡೆ ಗಾಂಧಾ । ರಿ— ॥ ೪೪೪ ॥

ಗಾಂಧಾರಿ—

ಗಳಿಗೆಗೊಬ್ಬೊ । ಬ್ಬರನೆ ಕರೆದು । [6]ಪೆಲೆಗೆ[6] ಮಕ್ಕ । ಳನ್ನೆ ಪಡೆದು ।
ಇಳೆಗೆ ಇಂದ್ರ । ನಾನೆ ತರಿಸ । ದುಳಿವೆಯಾ ಕುಂ । ತಿ— ॥ ೪೪೫ ॥

ಕುಂತಿ—

ಮೂರು ಮಂತ್ರ । ದಿಂದಲೆನ್ನ । ಸೇರಿದರ । ಯ್ವರು ಸುತರು ।
ಕ್ರೂರಮಾತ । ನಾಡಬೇಡ । ನೀರೆ ಗಾಂಧಾ । ರಿ— ॥ ೪೪೬ ॥

ನಳಿನನೇತ್ರ[7]ನ । ಪಾದದಾಣೆ । ಕಳೆ[7]ಯಬೇಡ । ಮಾತಿದೊಂದ ।
ತಳುವದೆ ನಿ । ಲ್ಲಿಂದಲ್ಲಿಂದ । ಹೊರಟಳು ಕುಂ । ತಿ— ॥ ೪೪೭ ॥

(ಇಬ್ಬರೂ ಹೊರಟು ಹೋಗುವರು)

## ಕುಂತಿಯ ಗಜಪೂಜೆ

೧೦೭ ವಾರ್ಧಿಕಷಟ್ಪದಿ

ಗಾಂಧಾರಿ ಪೇಳ್ದ ನಿಷ್ಠುರವಾಕ್ಯಮಂಕೇಳಿ
ಬಂದು ಭೀಷ್ಮ ದ್ರೋಣರಿಗೆ ಪೇಳ್ದು ನಮಿಸಿ ಮ
ತ್ತಿಂದ್ರನೈರಾವತವ ಪೂಜಿಸುವ ಬಗೆಗಾಗಿ ಮಂದಗಾಮಿನಿ ನಡೆದಳು ।

---

1 ಮರುಳರ ಮಾತೇಕೆ ಮತ್ತೆ (ಅ) 2 ಗರತಿಯರು (ಕಾ,ಅ) 3 ಉಂ (ಕಾ,ಅ)
4 ಮಾಡುವ (ಕಾ) 5 ಸಹಜ (ಅ) 6 ಹಲವು (ಅ,ಕಾ) 7 ನಾಣೆ ನಿನಗೆ ಮರೆ (ಕಾ)

ಗಂಧ ಕಸ್ತೂರಿ ಕುಂಕುಮ ಧೂಪ ಗುಗ್ಗುಳರ
ವಿಂದ ಮಲ್ಲಿಗೆ ಜಾಜಿ ಮೊದಲಾದ ಪುಷ್ಪಗಳ
ತಂದು ಹೇಮದ ಕಲಶ ಕನ್ನಡಿಗಳಕ್ಷತೆಗಳಿಂದ ಸನ್ನಾಹವಾಗಿ || ೪೪೮ ||

೧೦೮ ರಾಗ ಮಧ್ಯಮಾವತಿ—ಅಷ್ಟತಾಳ ೨

ಬಂದಳು | ಕುಂತೀದೇ | ವಿ—ನೋ | ,ಹಿಗೆಂದು || ಪಲ್ಲವಿ ||

ಎಡಬಲ | ದಲಿ ಪೊಗ | ಳುವ ಪಾಠ | ಕರು ನಟ್ಟ |
ನಡುವೆ ಆ | ಡುತ್ತ ಬ | ರುವ ಸಾ, | ಟಕರು ||
ಹೊಡೆವ ಭೇ | ರಿಡ ಮಾಮಿ | ವಾದ್ಯಗ | ಳ್ಮೊರೆಯುತ್ತ |
ಪಿಡಿವ ಸ | ತ್ತಿಗೆ ಸಾಲು | ಗಡಣದಿ | ಮೆರೆಯುತ್ತ || ೪೪೯ ||

ಎತ್ತ ನೋ | ಡಿದರು ಕೂ | ಗುವ ಕಹ | ಳೆಗಳು ಹೊ |
ಯ್ಯುತ್ತನ | ಗಾರಿ ಆ | ನೆಯ ಮೇ, | ಲೆ— ||
ಮುತ್ತು ಮಾ | ಣಿಕ ನವ | ರತ್ನ ಝ | ಲ್ಲಿಗಳಿಂದ |
ವಿಸ್ತರ | ವಾದ ಪ | ಲ್ಲಕಿಯ ವೈ | ಭವದಿಂದ || ೪೫೦ ||

(ಆನೆಯ ಸಮೇತ ಪಾಂಡವಾದಿಗಳ ಪ್ರವೇಶ)

ವಚನ || ಈ ರೀತಿಯಿಂದ ಸಕಲ ಸನ್ನಾಹವಾಗಿರುಪಂಥ ಕುಂತೀದೇವಿಯಂ ಕಂಡು ಅರ್ಜುನನು ಜನನಿಯ ಕರವಂ ಪಿಡಿದು ದೇವಲೋಕದ ದಿವ್ಯವಸ್ತುಗಳನ್ನು ತೋರಿಸುತ್ತಿದ್ದನದೆಂತೆನೆ—

೧೦೯ ರಾಗ ಸೌರಾಷ್ಟ—ಅಷ್ಟತಾಳ ೧

ಅರ್ಜುನ—

ತಂದೆಯು | ವರ ಲೋಕ | ದಿಂದ ಬಂ | ದಾನೆಯು |
,ನೋಡೆ |ಯು— | ಮ್ಮ— | —ಇಕ್ಕೊ |
ಚಂದದಿ | ನಿಂದಿಹ | ಸುಮನಸ | ಸೇನೆಯ |
,ನೋಡೆ | ಯು— | ಮ್ಮ— || || ೪೫೧ ||
ಕಾಮಧೇ | ನುವು ನಿಂತ | ಕಡೆಯೊ[1]ಳ | ಗಡಿಯಿಟ್ಟು[1] |
,ನೋಡೆ | ಯು— | ಮ್ಮ— | —ಒಳ್ಳೆ |
ಕಾಮಿತ | ಗಳ ಬೇಡಿ | ದವರಿಗೆ | ಕೊಡುವಂಥ |
,ನೋಡೆ | ಯು— | ಮ್ಮ— || ೪೫೨ ||

---

1 ಳು ಕಣ್ಣಾರೆ (ಕಾ)

ಕಲ್ಪವೃ । ಕ್ಷವ ಕ, । ಣ್ಣೆತ್ತಿ ಸಂ । ತೋಷದಿ ।
,ನೋಡೆ । ಯ— । ಮ್ಮ—।—ಬ್ರಹ್ಮ ।
ಕಲ್ಪಪ । ರ್ಯಂತ ಸ್ವ । ರ್ಗದೊಳಿದ್ದು । ಮೆರೆವುದು ।
,ನೋಡೆ । ಯ— । ಮ್ಮ— ॥ ೬೫೩ ॥

ಪಾರಿಜಾ । ತದ ಸುಮ । ಪರಿಮಳ । ಘಮಘಮ ।
,ನೋಡೆ । ಯ— । ಮ್ಮ— । —ದೇವ ।
ನಾರಿಯ । ರೆಲ್ಲರು । [1]ನಗುತ ಕು ।ಳ್ಳಿರುವು[1]ದ ।
,ನೋಡೆ । ಯ— । ಮ್ಮ— ॥ ೬೫೪ ॥

ಊರ್ವಶಿ । ರಂಭೆ ಮೇ । ನಕೆ ತಿಲೋ । ತ್ತಮೆಯರ ।
,ನೋಡೆ । ಯ— । ಮ್ಮ— । —ದೊಡ್ಡ ।
ಪರ್ವತ । ಗಳ ಖಂಡಿ । ಸಿರುವಂಥ । ಕುಲಿಶವ ।
,ನೋಡೆ । ಯ— । ಮ್ಮ— ॥ ೬೫೫ ॥

ದೇವಲೋ । ಕದ ಭೇರಿ । ವಾದ್ಯ ದುಂ । ದುಭಿಗಳ ।
,ನೋಡೆ । ಯ— । ಮ್ಮ—।—ಮಹಾ ।
ದೇವೇಂದ್ರ । ನವರಿಗೆ । ಸೇವೆ[2]ಗಾ । ಗಿರುವಂಥ[2] ।
,ನೋಡೆ । ಯ— । ಮ್ಮ— ॥ ೬೫೬ ॥

ಗಾನವ । ಮಾಳ್ಪ ಗಂ । ಧರ್ವರ । ಪಂಕ್ತಿಯ ।
,ನೋಡೆ । ಯ— । ಮ್ಮ— । —ಅಲ್ಲಿ ।
ನಾನಾ ವಾ । ದ್ಯಗಳ ನು । ಡಿಸುವ ಕಿ । ನ್ನರರ ನೀ ।
,ನೋಡೆ । ಯ— । ಮ್ಮ— ॥ ೬೫೭ ॥

ತೀರಿತೆ । ನಾಕೊಟ್ಟ । ಭಾಷೆ ಸು । ಳ್ಳಾಯಿತೆ ।
,ನೋಡೆ । ಯ— । ಮ್ಮ— । —ಈಗ ।
ಬೇರೆ ಬೇ । ರವರ ಪೂ । ಜಿಸು [3]ಶಾಸ್ತ್ರ । ವಿಧಿಯಿಂದ[3] ।
,ನೋಡೆ । ಯ— । ಮ್ಮ— ॥ ೬೫೮ ॥

೧೧೦ ರಾಗ ಕಲ್ಯಾಣಿ—ಏಕತಾಳ ೩

ಕುಂತಿ—
,ಮಗನ ಮಾ । ತನು ಕೇಳಿ । ,ಬಳಿಕ ಮು । ದದಿ ಕುಂತಿ ।
,ನಗುತ ಬಂ । ದಳು ಎಲ್ಲ । ,ರಿಗೆ ಕಯ್ಯ । ಮುಗಿದು— ॥

1 ನೆಲ ಜಿಟ್ಟು ನಿಂತು (ಕಾ,ಓ) 2 ಯ ಮಾಳ್ಪುದ (ಅ,ಕಾ)
3 ವಂಥ ಬಗೆಯನ್ನು (ಕಾ)

,ಜಗದೀಶ್ವ । ರನ ತಂತ್ರ ।,ವೆಂದು ಸಂ । ತೋಷದಿ ।
,ಮೊಗವ ನೋ । ಡುತ ಕೃಷ್ಣ ।,ನಿಗೆ ಮೊದ । ಲೆರಗಿ— ॥ ೪೫೫ ॥
,ಬದಲೆರ । ಗಿದಳು ಭೂ । ಪರ ಹೆಂಡ್ಯ । ರೊಡನೆದ್ದು ।
,ಮುದದಿಂದ । ಗಜರಾಜ ।,ನಿದಿರಲ್ಲಿ । ಬಾ, ಗಿ— ॥
. . . . . . . . . . . . . . . . . . . .
. . . . . . . . . . . . . . . . . . . .
. . . . . . . . . . . . . . . . . . . .
. . . . . . . . . . . . . . . . . . . .
,ಭೂಮಿದೇ । ವಿಗೆಕಯ್ಯ ।,ಮುಗಿದು ಪ್ರಾ । ರ್ಥಿಸಿ ಮತ್ತೆ ।
,ಶ್ರೀ ಮಹಾ । ಲಕ್ಷ್ಮಿಗೆ ।,ಶರಣೆಂದ । ಳಾ,ಗ— ॥ ೪೬೦ ॥
,ಗಿರಿಜೆಯ । ಮನದಲ್ಲಿ ।,ಸ್ಮರಿಸಿ ವಿ । ಘ್ನೇಶನ ।
,ಚರಣ[1]ಧ್ಯಾ । ನವ ಮಾಡಿ ।,ಗುರುಗೆ ವಂ । ದಿಸುತ[1]— ॥
,ಧರಣಿಪಾ । ಲರಿಗೆಲ್ಲ ।,ಪರಿಪರಿ । ವಂದಿಸಿ ।
,ಕರಿಯ । ಪೂಜಿಸುವಡ ।,ಪ್ಪಣೆಯ ಕೇ । ಳಿದಳು— ॥ ೪೬೧ ॥

ವಚನ ॥ ಈ ರೀತಿಯಿಂದ ಗಜಲಕ್ಷ್ಮಿಯ ಪ್ರಾರ್ಥನೆಯಂ ಮಾಡಿಕೊಂಡು ಗಜಪೂಜೆಗೆ ಅಗಿಲುಗಂಧ ಕುಂಕುಮ ಮರುಗ ಮಲ್ಲಿಗೆ ಜಾಜಿ ಇರವಂತಿಗೆ . . . ಮಂಗಳಾಕ್ಷತೆ ಕರ್ಪೂರ ಗುಗ್ಗುಳ ಸಾಂಬ್ರಾಣಿ ಕಾಲುದೀವಟಿಗೆಗಳಿಂದ . . . . ಮಳಲ ಗೌರಿಯ ತೆಗೆದಳದೆಂತೆನೆ—

೧೧೧ ರಾಗ ಮಧ್ಯಮಾವತಿ—ಅಷ್ಟತಾಳ ೨

ಲಲನೆಯ । ರೊಡನೆ ಅಂ । ದಣವೇರಿ । ಕುಂತಿ ತಾ ।
ಸುರನದಿ । ಯಲ್ಲಿ ಸ್ನಾ । ನವ ಮಾಡು । ತ್ತ— ॥
ಪರಿಪರಿ । ವಿಧದ ಆ । ಭರಣವ । ನಿಟ್ಟು ಆ ।
ಮಳಲ ಗೌ । ರಿಯ ತೆಗೆ । ದಳು ವಿಧು । ವದನೆ— ॥ ೪೬೨ ॥
ಭಕ್ತವ । ತ್ಸಲನ ಮು । ಖವ ನೋಡಿ । ಕುಂತಿ ತಾ ।
ಮತ್ತೆ ಗೌ । ರಿಯ ಪೂಜೆ । ಗಪ್ಪಣೆ । ಕೇಳೆ— ॥
ಅತ್ತೆ ನೀವ್ । ನಿಮ್ಮಯ । ಪುತ್ರರ್ಕೈ । ವರು ಸಹ ।
ಅರ್ತಿಯಿಂ । ದಲಿ ಪೂಜೆ । ಮಾಡುವು । ದೆನಲು— ॥ ೪೬೩ ॥

---

1 ಕೆ ಪೂಜೆಯ । ಮಾಡಿದಳಾಗ (ಅ)

ಹರಿಯ ನಿ । ರೂಪವಾ । ಕ್ಯವ ಕೇಳಿ । ಕುಂತಿ ತಾ ।
ಪರಿಪರಿ । ಫಲವಸ್ತು । ಗಳನೆಲ್ಲ । ತರಿಸಿ— ॥
ಸರಿಸದಿ । ನಿಂದು ಪಾಂ । ಡವರು ಚಾ। ಮರವಿಕ್ಕೆ ।
ಪರಮುಭ । ಕ್ತಿಯಲಿ ಪೂ । ಜಿಸಿದಳು । ಗಜನ— ॥ ೪೭೪ ॥*

೧೧೨ ವಾರ್ಧಿಕಷಟ್ಪದಿ

ವರಗಂಧಪುಷ್ಪ ಮಲ್ಲಿಗೆ ಜಾಜಿ ತುಳಸಿಯಂ
ಪರಮಾನ್ನ ಷಡ್ರಸದ ನೈವೇದ್ಯ ವರ ಖಾದ್ಯ
ಹುರಿಗಡಲೆ ಕಬ್ಬು ತೆಂಗಿನಕಾಯಿ ದಾಳಿಂಬ ದ್ರಾಕ್ಷೆ ಖರ್ಜೂರ ಚೂತ ।

---

* ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ಲಿಖಿತ ಗ್ರಂಥಭಂಡಾರದಲ್ಲಿರುವ ಕೆ. ೨೯೫ನೇ ಓಲೆ ಪ್ರತಿಯಲ್ಲಿ ಗಜಗೌರೀ ವ್ರತದ ಸಂಕಲ್ಪ ಮಂತ್ರ ಹೀಗಿದೆ :

"ಗಜಗೌರೀವ್ರತ ಸಂಕಲ್ಪ ಪೂಜಾವಿಧಾನಾ । ಓಂ ಶುಭತಿಥೌ । ಶೋಭನೇ ಮುಹೂರ್ತೇ । ಆದ್ಯಬ್ರಹ್ಮಣ । ದ್ವಿತೀಯ ಪರಾರ್ಧೇ । ಶ್ವೇತವರಾಹ ಕಲ್ಪೇ । ವೈವಸ್ವತ ಮನ್ವಂತರೇ । ಕಲಿಯುಗೇ । ಪ್ರಥಮ ಪಾದೇ । ಜಂಬೂದ್ವೀಪೇ । ಭಾರತವರ್ಷೇ । ಭರತ ಖಂಡೆ । ಅಸ್ಮಿನ್ ವರ್ತಮಾನವ್ಯಾವಹಾರಿಕೇ । ಚಾಂದ್ರಮಾನೇನ । ಪ್ರಭವಾದಿ ಷಷ್ಠಿ ಸಂವತ್ಸರಾಣಾಂ ಮಧ್ಯೇ । ಪೈಂಗಳ ನಾಮಸಂವತ್ಸರೇ । ದಕ್ಷಿಣಾಯನೇ । ವರ್ಷಋತೌ । ಭಾದ್ರಪದ ಮಾಸೆ । ಶುಕ್ಲಪಕ್ಷೇ । ತದಿಗೆಮಂ ಶುಭತಿಥೌ । ವಾಸರ । ಭಾನುವಾಸರಯುಕ್ತಾಯಾಂ ಶುಭ ನಕ್ಷತ್ರ ಶುಭಯೋಗ ಶುಭಕರಣ ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭತಿಥೌ । ಮಮ ಸಮಸ್ತಪಾಪಕ್ಷಯಾರ್ಥಂ । ಮಮ ಸಂತಾನ ಸೌಭಾಗ್ಯ ಸಿಧ್ಯರ್ಥಂ । ಧರ್ಮಾರ್ಥಸಿದ್ಧ್ಯರ್ಥಂ ಕಾಮ್ಯಮೋಕ್ಷ ಚತುರ್ವಿಧ ಫಲ ಪುರುಷಾರ್ಥ ಸಿಧ್ಯರ್ಥಂ ಮಮ ಮನಸಾಭೀಷ್ಟಫಲಸಿಧ್ಯರ್ಥಂ ಮಯಾಚರಿತ ಗೌರೀದೇವತಾಭ್ಯೋ ನಮಃ ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ ಪಾದಯೋಃ ಪಾದ್ಯಂಸಮರ್ಪಯಾಮಿ ಆಚಮನಂ . . . . ವಸ್ತ್ರಂಸಮರ್ಪಯಾಮಿ . . . ರಾಜೋಪಚಾರ ನಿತ್ಯೋಪಚಾರ ಪೂಜಾಂ ಸಮರ್ಪಯಾಮಿ . . . . ಮಂಗಳಾರತಿ ಶೋಭಾನೆ"

** ಇದೇ ಗ್ರಂಥ ಪು. ೫೬೨ ರಲ್ಲಿರುವ ವಚನದ ಪಾಠಾಂತರ —

ಅರ್ಜುನನು ಮಾಡುವ ಶ್ರೀಕೃಷ್ಣಸ್ತುತಿವಾಕ್ಯಗಳು : "ಇಂತೆಂದು ಸ್ತುತಿ ಮಾಡುತ್ತಾ ಸಾಷ್ಟಾಂಗ ವಂದನೆಯಂ ಮಾಡಿ ಜಯ ಜಯಾ ಶ್ರೀಮನ್ನಾರಾಯಣ । ಅಖಿಳಾಂಡಕೋಟಿ ಬ್ರಹ್ಮಾಂಡನಾಯಕ । ಶಂಕುಚಕ್ರಗದಾವತಾರ (? ಧರ) । ಶ್ರೀಮತ್ತು ದ್ವಾರಾವತೀನಿಲಯ । ಕುಂಕುಮಾಂಕಿತ । ಗೋಪಿಕಾಜನವಲ್ಲಭ । ಗೋವರ್ಧನೋದ್ಧಾರ । ಹಾ ಕೃಷ್ಣ । ಹೇ ಕೃಷ್ಣ । ಶರಣು ಶರಣು ಸ್ವಾಮಿ । ಕೃಷ್ಣಮೂರ್ತಿ ನರಹರಿನಾರಾಯಣ । ಕರುಣಾಕರ । ಮುದ್ದುರಂಗ । ಗರುಡತುರಂಗ । ಸ್ವಾಮಿ ಕೃಷ್ಣಮೂರ್ತಿ । ಅಚ್ಯುತಃ ಕಲ್ಪವೃಕ್ಷಶ್ಚ ಅನಂತಃ ಕಾಮಧೇನವಃ । ಚಿಂತಾಮಣಿಸ್ತು ಗೋವಿಂದೋ . . . . ನಿವಾರಣಂ । ಸ್ವಾಮಿಕೃಷ್ಣ । ಕಪಟನಾಟಕಸೂತ್ರಧಾರ । ಅಗಣಿತಮಹಿಮಾವತಾರ । ಸಕಲ ಕಲ್ಯಾಣ ಗುಣನಿಧೇ ಶ್ರೀಮತ್ತು ದ್ವಾರಕಾಪುರಿಸಾರ್ವಭೌಮ । ದೇವವಸುದೇವನಂದನಾ । ಆಃ ಸ್ವಾಮಿ ಕೃಷ್ಣಮೂರ್ತಿ । ಅಯೋಧ್ಯಾ ಪುರಿನಿವಾಸ। ಕೌಸಲ್ಯಾಗರ್ಭರತ್ನಾಕರ । ತಾಟಕ ಪ್ರಾಣಾಪಹಾರ । ವಿಶ್ವಾಮಿತ್ರಯಜ್ಞಸಂರಕ್ಷಕ । ಅಹಲ್ಯಾ ಶಾಪವಿಮೋಚನ . . . . ಪರಶುರಾಮ ಪರಶುಖಂಡನ . . . . ದಶಾವತಾರ ಸರ್ವಭೂತಾಂತರ್ಯಾಮಿ."

ತರಗು ಚಕ್ಕುಲಿ ಬೆಲ್ಲ ಕಜ್ಜಾಯ ಮೊದಲಾದ
ತರತರದ ಭಕ್ಷ್ಯಭೋಜ್ಯ ಧೂಪ ದೀಪಗಳಿಂದ
ಸುರಗಜಕೆ ಮಂಗಳಾರ್ಚನೆಯಪ್ಪ ವೇಳ್ಯದಲಿ ಭೂಸುರರು ನಡೆತಂದರು
|| ೪೬೫ ||

(ನಾನಾ ದೇಶದ ಬ್ರಾಹ್ಮಣರು ತಂಡತಂಡವಾಗಿ ಪ್ರವೇಶಿಸುತ್ತಾರೆ)

ಬ್ರಾಹ್ಮಣರು—

೧೧೩ ರಾಗ ಘರಜು—ಅಷ್ಟತಾಳ ೨

ವಿಪ್ರರು | ಬರುತಿರ್ದ | ರಾಗ — | —ಅತಿ |
ಕ್ಷಿಪ್ರದಿಂ | ದೋಡುತ್ತ | ದಕ್ಷಿಣೆ | ಗೆನುತಲಿ || ಪಲ್ಲವಿ ||

ಶಿರದೊಳು | ಸಕಲಾತಿ | [1]ಸುತ್ತಿ[1] ಕಂ | ಕುಳೊಳ್[2]ಟ್ಟ[2] |
ವರವ್ಯಾಘ್ರ | ಚರ್ಮ ದೇ | ವರ ಪೂಜೆ | ಯ— ||
ಹರಿವಾಣ | ಪೆಟ್ಟಗೆ | ಜಂಬು ಕೌ | ಳಿಗೆ ಕೋ[3]ವೆ |
ಕೊರಳೊಳು | ರುದ್ರಾಕ್ಷೆ[3] | ಮಾಲೆಯ | ಧರಿಸಿದ || ೪೬೬ ||

ಅಡ್ಡಗಂ | ಧವನಿಟ್ಟು | ದೊಡ್ಡ ಧೋ | ತ್ರವನುಟ್ಟು |
ಒಡ್ಯಾರ | ದಿಂದ ಜೋಲ್ | ಕಚ್ಚೆಯ | ಲಿ— ||
[4]ಸೊಡ್ಡುಮೂ | ಗಿನ ಗಿಡ್ಡ | ಕೈಕಾಲ | ಹೊಕ್ಕುಳ |
ಗ[4]ಡ್ಡದು | ಪಾಧ್ಯರೆ | ತ್ತಿದರು ಮುಂ | ದೊತ್ತುತ್ತ || ೪೬೭ ||

ಎಲ್ಲಿ ಮ | ದುವೆಯೂಟ | ಎಲ್ಲಿ ಶೋ | ಭನಕೂಟ |
ಎಲ್ಲಿ ದೇ | ವ[5]ರ ಕಾರ್ಯ | ದುತ್ಸಹ | ವೋ— ||
ಅಲ್ಲಿಂದ | ಇಲ್ಲಿ ಇ | ಲ್ಲಿಂದಲ್ಲಿ | ಗೈತಪ್ಪ |
ಅಳ್ಳಿಗಾ | ಲಿನ ವಿಪ್ರ | ರೊಟ್ಟಾಗಿ | ನಡೆಯುತ್ತ[5] || ೪೬೮ ||

ಒಡೆ ಪರ | ಮಾನ್ನ ಚ | ಕ್ಕುಲಿ ತೊವೆ | ತುಪ್ಪಗ |
ಳಿಡೆಮಾಡಿ | ಬಡಿಸಿದ | ರುಂಬ ಮ | ತ್ತೆ— ||
ಒಡವೆ ವ | ಸ್ತ್ರಗಳ ಕೊ | ಟ್ಟರೆ ತೆಕ್ಕೊಂ | ಬದಕಾಗಿ |
ಮಡದಿ ಮ | ಕ್ಕಳು ಪುಳ್ಳಿ | ಚಿಳ್ಳಿಗಳ್ | ಸಹಿತಾಗಿ || ೪೬೯ ||

---

1 ಮುಕುಟ (ಅ) 2 ಟ್ಟು (ಅ) 3 ದ | ಕರದರು | ದ್ರಾಕ್ಷೆಯ | (ಅ) 4 ಗಡ್ಡವ ನಾಭಿಯೊಳಗಗಿಸಿಕೊಂಡಂಥ | ಗಿ (ಅ) 5 ರಿಗಿಷ್ಟ ಶುಭಕಾರ್ಯವು | ಅಲ್ಲಿಗೈತಂದು | ಮೆಲ್ಲ ಮೆಲ್ಲನೆ ಬ್ರಾಹ್ಮ

ಉಂಬಲ್ಲೋ । ಪಪ್ಪಯ್ಯ । ಬೆಲ್ಲಪಾ । ಚಿದ್ದಡೊ ।
[1]ಬೆಳಕೆಣ್ಣೆ[1] । ದಕ್ಷಿಣೆ । ಕೊಡುತವ । ಡೊ— ॥
ಚೆಂಬು ತ್ರಿ ।,ಕ್ರೊ ಬ್ಬೈ । ರಾಸ ಹಿ । ಡುಕ್ರೊಪ್ಪ ।
ಎಂಬ ಹ । ವೀಕರು । ಮುಂಬರಿ । ದೊದಗುತ್ತ ॥ ೪೭೦ ॥

ಎಪ್ಪುಡು । ರಾವುಂದಿ । ಗಜನೋಹಿ । ಪ್ರೂಜಲು ।
ಧರ್ಮರಾ । ಯುಡು ಆಹಾ । ಮುಂಚಿವಾ । ಡು— ॥
ಒಪ್ಪುಗುಂ ।,ದಿ ರಾ, । ವಚ್ಚಿನು । ಓಹ್ಯೋ ಯೆಂ ।
[2]ಜೆಪ್ಪುತ್ತ । ಚೆಪ್ಪುತ್ತ । ತೆಲುಗವ । ಧಾನಿಕ[2] ॥ ೪೭೧ ॥

ಪಾಂಡವಾಂ ।,ಛೆ ಮಾಯಿ । ಖರಿನೋಯಿ । ಖರ್ ತಾಯಿ ।
ತ್ಯಾಂತ್ ಸು । ಬ್ಬಾಭಟ್ಟು । ಕೋಕೇಂ ಗೇ । ಲೇಂ ॥
ತೊಂಡಲಿ । ಬಾಕಿ ಬಿ । ತರಿ ತೊಂಹಿ । ರಾಗವೆ ।
ಮುಂಡಲ ನ್ನೈ । ಯೆಂಬ ।,ಮಾರಾಠ । ದೇಶದ ॥ ೪೭೨ ॥

ಜೋತ್ರೊ ಗೆ । ತೊಣು ಮಾಣಿ । ದೇಹರೊಂ । ಕುಳೆ ಮಾಂತ ।
ಪಾತ್ರೊಂಟೇ । ನಿಂಜೋಲ । ಶುದ್ಧೊಂಟು । ಲ— ॥
ಶಾಸ್ತ್ರೊ ಜಾ । ಯೆಗಿನಿಂಕ್ । ವ್ಯೆಲೆ ಪ । ತ್ರಡ ಏನ್ ಮ ।
ಕ್ಕಿತ್ತಾಯೆ । ಎಂಬಂಥ । ತುಳುವ ದೇ । ಶದ ಶುದ್ಧ ॥ ೪೭೩ ॥

ಅಪ್ಪೊದುಂ ।,ಡಿನ ವ್ಯೆ,। ಕಪ್ಪ ವೊರೊ । ಡೆಯುಂಡು (?) ।
ದಟ್ಟಿಣ್ಣೆ । ಯುಂ ಕೊಂಡು । ಪೋಡಡ . . . .
ಅಪ್ಪಾದು । ದರಿಚುನ . . . . ರುವ ಮುನ್ನೈ । . . .
ದಕ್ಷಿಣ । ದೇಶದ । ತಿಗಳರು । ಭರದಿಂದ ॥ ೪೭೪ ॥

ಎವಿಡೆಯಾನ್ನ್ । ತರವಾಡ್ । ಎಂಙಾ ಪೋ ।,ಯಿ ಪೇಷಿ ।
ನೋಹಿಂಡ್ । ಇನ್ನೊರ್ । ಘೋಷತ್ತು । ಡೆ—॥
ಕುಂಞಾಯೊ । ಕೆಲ್ಲಂ ಕೂ । ಡಾ ಸರ್ವಾ । ಣಿಕ್ಕೊಡು ।
ಕ್ಕುಂನಡಾ । — ಎಂಬ । ಮಲೆಯಾಳ । ದೇಶದ ॥ ೪೭೫ ॥

ಯೋಗೋ ನರ । ಸಿಂಭಟ್ಟು । ಖ್ಯೆಂಗೆಲೊ । ರಾಂಭಟ್ಟು ।
ಖೊಂತಿ ದೇ ।,ವ್ವಿ ನೋಹಿ । ಕರ್ ತ್ ಕ । ಹೀಂ— ॥

---

1 ಸರ್ವಾಣಿ (ಕಾ) 2 ಜ್ಜೆಚ್ಚುತ್ತ ಬಚ್ಚುತ್ತ । ತೆಲುಗಿನ ವಿಪ್ರರು(ಕಾ), ರೆಲ್ಲರೊ । ಟ್ಯಾಗಿ ತಾ। ವಳ್ಳೆಗಾಲಿಕ್ಕುತ್ತ (ಕಾ)

ಉಡುದಚಿ । ಪೊಳಿ ಆಶ (?) । ವಚ್ ಪಾ । ವಣ್ ಏಕ್ ।
ದೋನ್ ದಾವಮ್ । ದಿತ್ತಾ ವೈ । ಎಂಡೆಂಬ । ಕೊಂಕಣ ॥ ೪೭೬ ॥

೧೧೪ ದೇಶಿ (ಕಾಪಿ)—ಅಷ್ಟತಾಳ ೧

ಕುಂತಿ—

ಏನ ಬ । ಣ್ಣಿಸಲಿ ಪೂ । ಜಿಸುವಲ್ಲಿ । ಗಾಗ—।
ನಾನಾದೇ । ಶದ ಭೂಸು । ರರು ನಡೆ । ತರುವುದ ॥ ಪಲ್ಲವಿ ॥

ಬಂದ ಭೂ । ಸುರಜನ । ವೃಂದವ । ನಿದಿರ್ಗೊಂಡು ।
ಕುಂದಣ । ಪೀಠದ । ಮೇಲೆ ಕು । ಳ್ಳಿರಿಸಿ ಸು ।
ಗಂಧ ಕ । ಸ್ತುರಿಯನಿ । ತ್ತು—ಆ । ಭರಣಗ ।
ಳೊಂದೊಂದ । ತೊಡಿಸಿ ಮು । ತ್ತು—ದಂ । ಪತಿಗಳ ।
ಚಂದದಿಂ । ದರ್ಚಿಸಿ । ಬಾಯನ । ವಿತ್ತು ॥ ೪೭೭ ॥

ಅಜ ನಾರಾ । ಯಣ ಸದಾ । ಶಿವರಿಗೆ । ಪೊಡಮಟ್ಟು ।
ಗಜರಾಜ । ನಿದಿರು ನಿಂ । ತಳೆ ಕುಂತಿ । ತಲೆವಾಗಿ ।
ಭಜಿಸಿ ಅ । ಕ್ಷತೆಯನಿ । ಟ್ಟು—ಶಾ । ಸ್ತ್ರೋಕ್ತದ ।
ವಿಧಿಯನು । ತಿಳಿದು ಗು । ಟ್ಟು—ಕೌ । ಮಾರಿಯೆ ।
ತ್ರಿಜಗವಂ । ದಿತೆ ಸಲ । ಹೆನ್ನುತ್ತ । ಪೊಡಮಟ್ಟು ॥ ೪೭೮ ॥

ಆಮೇಲೆ । ನಡೆತಂದು । ಕಾಮಧೇ । ನುವ ಕಂಡು ।
ಕಾಮಿತ । ಫಲವೀಯು । ವ—ಕ । ಲ್ಪವೃಕ್ಷವ ।
ನೇಮದಿಂ । ದಲೆ ನೋಡು । ವ — ಸ್ವ । ರ್ಗದೊಳಿದ್ದ ।
ಆ ಮಹಾ । ದಿವ್ಯವ । ಸ್ತುಗಳ ಪೂ । ಜಿಸುವದ ॥ ೪೭೯ ॥

೧೧೫ ವಾರ್ಧಿಕಷಟ್ಪದಿ*

ಏಸು ನಾ ಬಣ್ಣಿಸುವೆ ಕುಂತಿದೇವಿಯ ಮಹೋ
ಲ್ಲಾಸ ಸೌಭಾಗ್ಯವತಿ ಸಂಭ್ರಮದ ಸಂತೋಷ
ಆ ಸಮಯದೊಳಗೆ ಬ್ರಹ್ಮಾಂಡ ಒಡೆವಂತೆ ಬಹು ವಾದ್ಯಘೋಷಗಳಾಗಲು ।

* ಈ ಷಟ್ಪದಿಯ ಬದಲು ವಚನ ॥—ಈ ರೀತಿಯಿಂದ ಇಂದ್ರನೈರಾವತವ ಪೂಜಿಸುವಾಗ ಬಹುರಭಸವಾದ್ಯಧ್ವನಿಗೆ ಶೇಷನ ಹೆಡೆ ನಡುಗಿತ್ತು, ಕೂರುಮನೆದೆ ಅದಿರಿತ್ತು, ಅಷ್ಟದಿಗ್ಗಜ ಸರಳಿಸಿತ್ತು, ಮಹಾಮೇರುವಲ್ಲಾಡಿತ್ತು, ಪಾಂಡವರರಮನೆಯ ಮೇಲೆ ಪುಷ್ಪವೃಷ್ಟಿಯ ಸುರಿದರು ನಾಕದಲ್ಲಿಹ ದೇವತೆಗಳು— (ಓ)

ಶೇಷ ಬಳುಕಿದ ಕೂರ್ಮನೆದೆಗೆಟ್ಟ ಸಪ್ತಗಜ
ವಾಸರಿಸಿದುವು ಮಹಾಮೇರುವಲ್ಲಾಡೆ ಕೈ
ಲಾಸವದಿರಿದು ಕುಸಿಯೆ ಕುಂತೀಕುಮಾರರಿಗೆ
ಸುರರು ಪೂಮಳೆಯ ಕರೆಯೆ ‖ ೪೮೦ ‖

೧೧೬ ಡವಳಾರ ; ರಾಗ ಆಂದೋಳಿ (ಕ)—ಏಕತಾಳ ೪ ; ತ್ರಿವುಡೆ ೧

ನೂತನ । ವಾದಾ । ಮಂಟಪ । ದಿ— ।
ಶ್ವೇತಗ । ಜೇಶ, । ನಿಂದಿರ । ಲು— ।
ಭೂತಳಾ । ಧಿಪರಂ । ಗನೆಯರು । ಕೂಡಿ— ।
ಪ್ರೀತಿಯಿ ।, ಂದ ಶೋ । ಭಾನವ । ಪಾಡಿ— ।
ಜಾತಿಮಾ । ಣಿಕದೋಲೆ । ಕರ್ಣದೊ । ಳೆಸೆಯಲು ।
ನೂತನದಾ । ರ,ತಿ, । ಯ— ‖ ಜೈ,ಳ— । ಗಿ— । ರೆ— ‖ ೪೮೧ ‖

ಶ್ರೀಕರ । ವಾದ, । ಮಂಟಪ । ದಿ— ।
ಮಾಕಾ । ಮಧೇನು । ನಿಂದಿರ । ಲು— ।
ಭೂಕಾಂ । ತರ ತರು । ಣಿಯರೆಲ್ಲ । ಕೂಡಿ— ।
ಲೋಕಾಂ । ತದಿ ಶೋ । ಭಾನವ । ಪಾಡಿ— ।
ಏಕಾ । ವಳಿಸರ । ಕೊರಳೊಳ । ಗೆಸೆಯಲು ।
ಶ್ರೀಕರದಾ । ರ,ತಿ, । ಯ— ‖ ಜೈ,ಳ— । ಗಿ— । ರೆ— ‖ ೪೮೨ ‖

ದೇವೇ । ,ಂದ್ರ ನೀಲ । ಮಂಟಪ । ದಿ— ।
ದೇವತಾ । ,ವೃಕ್ಷ । ನೆರೆದಿರ । ಲು— ।
ಭೂವರ । ರುಗಳ, । ಸತಿಯರು । ಕೂಡಿ— ।
ಭಾವದಿಂ । ,ದ ಶೋ । ಭಾನವ । ಪಾಡಿ— ।
ನೇವಳ । ಬಡನಡು । ವಿನೊಳೆಸೆ । ಯಲು ಇಂ ।
ದೀವರದಾ । ರ, ತಿ, । ಯ— ‖ ಜೈ,ಳ— ಗಿ— । ರೆ— ‖ ೪೮೩ ‖

ಚಾರು ಮಾ । ,ಣಿಕದ । ಮಂಟಪ । ದಿ— ।
ಪಾರಿಜಾ । ,ತವು, । ನಿಂದಿರ । ಲು— ।
ಧಾರಿಣಿ । ಪತಿಸತಿ । ಯರನೊಡ । ಗೂಡಿ— ।
ಬೇರೆ ಬೇ । ,ರೆ ಶೋ । ಭಾನವ । ಪಾಡಿ— ।
ಹಾರಗ । ಳನು ಮೇ । ಗಲದೆಡೆ । ಮಾಡುತ ।
ಮೇರುವೆಯಾ, । ರ,ತಿ, । ಯ— ‖ ಜೈ,ಳ— । ಗಿ— । ರೆ— ‖ ೪೮೪ ‖

೧೧೭ ವಾರ್ಧಿಕಷಟ್ಪದಿ*

ಅರಸ ಕೇಳಾಮೇಲೆ ಕಾಮಧೇನುವ ಸ್ತುತಿಸಿ
ಪರಿಪರಿಯ ಭಕ್ಷ್ಯಭೋಜ್ಯಗಳ ಕೊಡೆ, ಸುರಭಿ ಭೂ
ಸುರನಿವಹವಂ ತೃಪ್ತಿಪಡಿಸಿ ಸುರಪುರದಿಂದ ಬಂದಪರಿಗೌತಣಪನು ।
ಹರಿಗೆ ನೈವೇದ್ಯ ಪಂಚಾಮೃತದ ರಚನೆ ಗಂ
ಧರುವರಿಗೆ, ಸಿದ್ಧಚಾರಣರಿಗೆ ಫಲಾಹಾರ
ಪರಮಾಮೃತವ ಸಕಲ ಜನರುಂಡು ದಣಿಯೆ ಮೇಲರಿದು
ದಕ್ಷಿಣೆ ಕೊಟ್ಟರು ॥ ೪೮೫ ॥

೧೧೮ ರಾಗ ಸೌರಾಷ್ಟ—ತ್ರಿವುಡೆತಾಳ ೨

ಕೇಳಿದೈ ರಾ । ಜೇಂದ್ರ ಭೀಷ್ಮರು ।
ಹೇಳಿ ಧರ್ಮಜ । ದ್ರೋಣ ವಿದುರರು ।
ಸಾಲಿನಲಿ ಹೊರಿ । ಸಿದರು ಹಣ ಭಂ । ಡಾರದಿಂದ ॥ ೪೮೬ ॥

ಭಂಡಿಗಳ [1]ಗಾ । ಲಿ[1]ಗಳು ಕಳಚಿತು ।
ಹಿಂಡು ಒಂಟೆಯ । ಬೆನ್ನು ಹಳಚಿತು ।
ಸಿಂಡಿವಸ್ತ್ರಗ । ಳನ್ನು [2]ದಾನಕೆ[2] । ಕೊಂಡು ಹೋಗಿ ॥ ೪೮೭ ॥

ದಂತಿರಾಜನ । ಮುಂದೆ ಭೂಸುರ ।
ತಿಂಥಿಣಿಯ । ಕರೆಕರೆದು । ಪೂಜಿಸಿ ।
ನಿಂತುಕೊಂಡೇ । ದಾನಕೊಟ್ಟಳು । ಕುಂತಿದೇವಿ ॥ ೪೮೮ ॥

ಅರ್ಥಗಳ ಕೊಡು । ವುದಕೆ ಭೀಷ್ಮನು ।
ವಸ್ತ್ರಗಳ ಬಹು । ವಿದುರ ಕೊಡುವನು ।
ದತ್ತಮಾಡುವ । ಭೂಮಿದಾನವ । ಧರ್ಮರಾಯು ॥ ೪೮೯ ॥

ಮಾಣಿಕದ ಹರ । ಳುಗಳ ಬುಧರಿಗೆ ।
ಕಾಣಿಕೆಯ ಮಾ । ಡಿದ ಧನಂಜಯ ।
[3]ದ್ರೋಣ ನೀಲ[3]ವ । ನಿತ್ತ ವಿಬುಧ । ಶ್ರೇಣಿಗೊಲಿದು ॥ ೪೯೦ ॥

---

* ಈ ವಾರ್ಧಿಕಷಟ್ಪದಿಯ ಬದಲು ವಚನ॥—ಹರಿಗೆ ಪಂಚಾಮೃತವನ್ನು ನೈವೇದ್ಯವಂ ಮಾಡಿ ಸರ್ವರೂ ಉಂಡು ದಣಿದು ಭೂರಿದಕ್ಷಿಣೆಯಂ ಕೊಟ್ಟರದೆಂತೆನೆ—(ಓ)

1 ಕೀಲು (ಓ,ಕಾ) 2 ನೋಹಿಗೆ (ಕಾ) 3 ಕ್ಷೋಣಿಕನಕ (ಕಾ)

ಮುತ್ತುಗಳ ಸಹ । ದೇವ ವಿಪ್ರರಿ ।
ಗೆತ್ತಿಕೊಡುವನು । ಸಕುಲ [1]ವಜ್ರ[1]ವ ।
ಮತ್ತೆ ಮಾರುತಿ । ಗೋವ್ರಜನ ಹೊಡೆ । ದಿತ್ತನಾಗ ॥ ೪೯೧ ॥

ಇತ್ತು ದಣಿದರು । ಪಾಂಡವರು ಧನ ।
ಹೊತ್ತು ದಣಿದರು । ಭೂಸುರರು ಬಲು ।
ಅರ್ತಿಯಾಯಿತು । ಗಜದ ನೋಹಿಯು । ವರ್ತಮಾನ ॥ ೪೯೨ ॥

೧೧೯ ವಾರ್ಧಿಕಷಟ್ಪದಿ

ದಣಿದರಾ ಭೂಸುರರು ದಾನಗಳ ಹೊತ್ತು ಸಾ
ಕೆನಿಸಿದರು ವಜ್ರವೈಡೂರ್ಯ ನವರತ್ನಗಳ
ಉಣಿಸಿದರು ಮೃಷ್ಟಾನ್ನ ಭಕ್ಷ್ಯಪರಮಾನ್ನದಿಂದೆಲ್ಲರಂ ತೃಪ್ತಿಪಡಿಸಿ ।
ಕುಣಿಸಿದರು ಹರ್ಷಾಮೃತದ ಕಡಲೊಳೋಲಾಡಿ
ತಣಿಸಿದರು ಸಕಲರಾಯರನವರಿಗುಡುಗೊರೆಯು
[2]ಕ[2]ಣಿಸಿದರು ಇಂತಪ್ಪನೋಹಿಯಂ ಗೋಪಾಲಕೃಷ್ಣಗೆ ಸಮರ್ಪಿಸಿದರು ॥ ೪೯೩ ॥

ವಚನ ॥ ಈ ರೀತಿಯಿಂದ ದಕ್ಷಿಣೆಯಂ ಕೊಟ್ಟು ನೋಹಿಯಂ ಸಮರ್ಪಿಸಿ ಆನೆಯ ಮೆರವಣಿಗೆಯಂ ಮಾಡಿದರದೆಂತೆನೆ—

೧೨೦ ರಾಗ ಸೌರಾಷ್ಟ್ರ—ತ್ರಿವುಡೆತಾಳ ೨

ದೇವಗಜನೋ । ಹಿಯನು ಕುಂತಿಯು ।
ದೇವರನುಮತ । ದಿಂದ ಪೂಜಿಸಿ ।
ದೇವತೆಗಳಂ । ಬರದಿ ಪೊಗಳಲು । ಠೀವಿಯಿಂದ ॥ ೪೯೪ ॥

ದೇವಸತಿಯರ । ಗಜವನೇರಿಸಿ ।
ಸಾವಧಾನದಿ । ಮುಂದೆ ಕುಂತೀ ।
ದೇವಿಯನು ಗಜ । ವೇರಿಸಿದರತಿ । ಭಾವದಿಂದ ॥ ೪೯೫ ॥

ಮುತ್ತು ಮಾಣಿಕ । ವಜ್ರಕೆತ್ತಿದ ।
ವಿಸ್ತರದ ಮಂ । ಚದಲಿ ಕುಳಿತಿರೆ ।
ಮತ್ತಗಜ ಮೆ । ಲ್ಲಡಿಯನಿಡುತಲಿ । ಅರ್ತಿಯಿಂದ ॥ ೪೯೬ ॥

---

1 ನೀಲ (ಓ) 2 ಗು (ಕಾ)

ಉತ್ತಮೋತ್ತಮ । ವಾದ್ಯರವದಲಿ ।
ವಿಸ್ತರದಿ ಪೊಗಳುತ್ತ । ಬರುತತಿ ।
ಭಕ್ತಿಯಿಂದಲಿ । ಸಾಲುಮೇರ್ವೆಗೆ । ಬಂದರಾಗ ॥ ೪೯೭ ॥

೧೨೧ ರಾಗ ಘಂಟಾರವ—ಜಂಪೆತಾಳ ೨

ಗಜದ ಮುಂ । ಭಾಗದಲಿ । ಅಜಸುತನು । ಬರುತಿರಲು ।
ಅಜನ ಪಿತ । ಬಲದ ಭಾ । ಗದಲಿ ಬರು । ತಿರಲು ॥ ೪೯೮ ॥

ನಾರದರು । ಧರ್ಮಜನು । ಸೇರಿ ರು । ಕ್ಮಿಣಿಸಹಿತ ।
ಸಾರಿ ಶ್ರೀ । ಹರಿಯ ಪೊಗ । ಳುತ್ತ ಬರು । ತಿರಲು ॥ ೪೯೯ ॥

ಅಂಗ ವಂ । ಗ ಕಳಿಂಗ । ತುಂಗ ಕುಂ । ತೀಭೋಜ ।
ಶಿಂಗರಾ । ಯರು ಸಹಿತ । ಮುಂಗಡೆಯೊ । ಳಿರಲು ॥ ೫೦೦ ॥

ಶಂಖ ಭೇ । ರಿ ಮೃದಂಗ । ಅಂಕೆಯಿ । ಲ್ಲದ ವಾದ್ಯ ।
ಶಂಕರನ । ಪುರವರಕೆ । ಸಾರೆ ಕೇ । ಳಿಸಿತು ॥ ೫೦೧ ॥

ಮಕ್ಕಳನು । ಪಡೆದುದಕೆ । ದಕ್ಕಿತೀ ಭಾಗ್ಯ ನಿಮ ।
ಗಕ್ಕರವ । ತೋರ್ದ ಹರಿ । ಯೆಂದರಾ । ಜನರು ॥ ೫೦೨ ॥

೧೨೨ ರಾಗ [1]ಕುರಂಜಿ[1]—ಅಷ್ಟತಾಳ ೧

ಪುರಜನರು—

ಆನೆ ಬಂ । ದುದು ರಾಜ । ಬೀದಿಲಿ । — ಇಂದ್ರ ।
ನಾನೆ ಬಂ । ತೈ ರಾಜ । ಬೀದಿಲಿ ॥ ಪಲ್ಲವಿ ॥

ಪಟ್ಟಣ । ಶೃಂಗಾರ । ವಾದುದು । — ಹೊಸ ।
ಪಟ್ಟೆಮೇ । ಲ್ಗಟ್ಟುಗ । ಳಾದುದು । — ಕಳೆ ।
ಗೊಟ್ಟು ಭೂ । ಮಿಯು ತಂ । ಪಾದುದು । — ನಾಗ ।
ಪಟ್ಟಣ । ವೆಂದೆಂಬ । ಪೆಸರು ಘ । ಟ್ಯಾದುದು ॥ ೫೦೩ ॥

ರಂಭಾ ಕ್ರ । ಮುಕ ಭೂ,। ಜಂಗಳು । — ಘೃತ ।
ಕುಂಭೇಕ್ಷು । ನಾರಿಕೇ । ಳಂಗಳು । — ಮನೆ ।
ಮುಂಭಾಗ । ದಲಿ ತೋರ । ಣಂಗಳು । — ಕಟ್ಟಿ ।
ಕುಂಭಿನೀ । ಜನ ಬಹು । ಗಾಂಭೀರ್ಯ । ದಿಂದಲಿ ॥ ೫೦೪ ॥

---

1 ಸೌರಾಷ್ಟ್ರ (ಕಾ)

ಜಂಭಾರಿ । ವರ ಪಟ್ಟ । ದಾನೆಯು । — ವಜ್ರ ।
ವೆಂಬಾಯು । ಧವು ಕಾಪು । ಧೇನುವು । — ಸುರ ।
ರಂಭೆ ಊ । ರ್ವಶಿ ನಾಟ್ಯ । ವಾಡಲು । — ವರ ।
ತುಂಬುರು । ನಾರದ । ಸಂಗೀತ । ಮಾಡಲು ॥ ೫೦೫ ॥

ಸುರಪು ಪೂ । ಮಳೆಯನ್ನು । ಸುರಿಸಲು ।— ಆ ಕಿ ।
ನ್ನರರು ಸಾ । ಲಾಗಿ ತಾವ್ । ನಿಲ್ಲಲು । — ಭೂ ।
ಸುರರಾಶೀ । ರ್ವಾದವ । ಮಾಡಲು । —ಈ ಐ ।
ಸಿರಿಯನು । ಕಂಡು ಶ್ರೀ । ಧರ ತೋಷ । ಮಾಡಲು ॥ ೫೦೬ ॥

ವಾರನಾ । ರಿಯರೀ,। ತೆರದಲಿ ।— ನಾಟ್ಯ ।
ದೋರಿ ಸಂ । ದಣಿಯ ಸಂ । ಭ್ರಮದಲಿ । . . . . ।
. . . . . . . . . . . . . . . . . . . . . . । — ಗಜ ।
. . . . . . . . . . . . . . . . . . . . . . । — ಮುದ ।
ವೇರಿ ಕುಂ । ತೀದೇವಿ । ಸ್ವಾರಿ ನಡೆ । ದಳು ಠೀವಿ ॥ ೫೦೭ ॥

ಸನ್ಮಾನ । ಸರ್ವರಿಂ । ಗಾದುದು । — ಮನ ।
ದುಮ್ಮಾನ । ಕೌರವ । ರ್ಗಾದುದು । — [1]ಒಣ[1] ।
ಹೆಮ್ಮೆ ಗಾಂ । ಧಾರಿಯ । ದಾದುದು ।— ಪರ ।
ಬೊಮ್ಮ ಕೃ । ಷ್ಣರು ಸಹ । ಸುಮ್ಮಾನ । ದಿರ್ದರು ॥ ೫೦೮ ॥

೧೭೩ ರಾಗ ಮಧ್ಯಮಾವತಿ—ಏಕತಾಳ ೩

ಅರ್ಜುನ—

,ಈ ರೀತಿ । ಯಿಂದ ನೋ ।,ಹಿಯ ಮಾಡಿ । ಕಡೆಗೆ ।
,ಕೇರಿ ಕೇ । ರಿಯೊಳೆಲ್ಲ । ಮೆರೆಸಿದ । ರ್ನಡೆಗೆ ।
,ಸಾರಿ ಪಾ । ರ್ಥನು ಕುಂತೀ ।,ದೇವಿಗೆ । ನಮಿಸಿ ।
,ತೀರಿತು । ತಾ ಕೊಟ್ಟ ।,ಭಾಷೆಯೆಂ । ದೆನಿಸಿ ॥ ೫೦೯ ॥

ರಾಜರು—

,ಧಾರಿಣೀ । ಪತಿಗಳು ।,ಪಾರ್ಥನ । ಕರೆದು ।
,ಮೂರುಲೋ । ಕದ ಗಂಡ । ಇದು ನಿನ್ನ । ಬಿರುದು ॥

---

1 ಬರಿ (ಕಾ)

,ಭಾರಿಭಾ । ರಿಗೆ ಧೀರ ।,ಸಹುದೆಂದು । ಕರೆದು
,ಕೌರವಾ । ದ್ಯರನು ತು ।,ಚ್ಛಕರೆಂದು । ಜರೆದು ॥ ೫೧೦ ॥

,ಆ ಮಹಾ । ಸುರಲೋಕ ।,ದಿಂದ ಬಂ । ದವರು ।
,ಭೂಮಿಯೊ । ಳಿದ್ದ ಸ ।,ಕಲ ಭೂಪಾ । ಲಕರು ॥
,ಕ್ಷೇಮದೊ । ಳಿರಿಯೆಂದು ।,ಎಲ್ಲರ । ಹರಸಿ ।
,ಕಾಮಜ । ನಕನ ಅ ।,ಪ್ಪಣೆಯಿಂದ । ಗಮಿಸಿ ॥ ೫೧೧ ॥

,ಹೋದವರೋ । ಲಿತ್ತಲಾ ।,ಕ್ಷಣದಿ ಪಾಂ । ಡವರು ।
,ಶ್ರೀಧರ । ಸಹಿತರ ।,ಮನೆಗೆ ನ । ಡೆದರು ॥
,ಮಾಧವ । ಶರಣೆಂದು ।,ಮಾಡಿ ಸಂ । ಸ್ತುತಿಯ ।
,ಪಾದಕೆ । ತ್ರಿದರಾಗ ।,ಮಂಗಳಾ । ರತಿಯ ॥ ೫೧೨ ॥

೧೨೪ ರಾಗ ರೇಗುಪ್ತಿ — ಜಂಪೆತಾಳ ೨

**ಪಾಂಡವರು—**

ಮಂಗಳಂ । ಮುರಹರಗೆ । ಮಂಗಳಂ । ಮಧುಹರಗೆ ।
ಮಂಗಳಂ । ಮದನಕೋ । ಟಿವಿಲಾಸ । ಗೆ — ।
ಮಂಗಳಂ । ವಾಣೀಶ । ಕರಕಂಜ । ಪೂಜ್ಯನಿಗೆ ।
ಮಂಗಳಂ । ವೃಂದಾವ । ನಾಂತಚರ । ಗೆ ॥ ೫೧೩ ॥

ನೀಲಮೇ । ಘಾಂಗನಿಗೆ । ನಿಜಶರಣ । ಸಂಗನಿಗೆ ।
ಕಾಲಭಯ । ನಾಶನಿಗೆ । ಕಮಲಾಕ್ಷ । ಗೆ — ।
ಬಾಲಾರ್ಕ । ಚಂದ್ರಾಗ್ನಿ । ಬಲುಕೋಟಿ । ತೇಜನಿಗೆ ।
ಮೂಲೋಕ । ವಂದ್ಯನಿಗೆ । ಮುರವೈರಿ । ಗೆ — ॥ ೫೧೪ ॥

ಕಾಮಪಿತ । ನಾದವಗೆ । ಕಡುಚೆಲ್ವ । ಮಾಧವಗೆ ।
ಸಾಮಗಾ । ನವಿಲೋಲ । ಗೋಪಾಲ । ಗೆ — ।
ವ್ಯೋಮಕೇ । ಶನ ಮಿತ್ರ । ವಸುದೇವ । ಪುತ್ರನಿಗೆ ।
ಶ್ರೀ ಮಹಾ । ಗೋವಿಂದ । ಗುಣವೃಂದ । ಗೆ — ॥ ೫೧೫ ॥

ವರಹಾವ । ತಾರನಿಗೆ । ದುರಿತಸಂ । ಹಾರನಿಗೆ ।
ಪರಮಪಾ । ವನ ಮೂರ್ತಿ । ಶುಭಕೀರ್ತಿ । ಗೆ — ।
ಧರೆಯೊಳ । ತ್ಯಧಿಕವೆಂ । ದೆನಿಸಿರ್ಪ । ವರ ಕಣ್ವ ।
ಪುರದೊಳಗೆ । ನೆಲಸಿರ್ಪ । ಶ್ರೀ ಕೃಷ್ಣ । ಗೆ ॥ ೫೧೬ ॥

ಕರುಣಾಸ । ಮುದ್ರನಿಗೆ । ಕಂಜದಳ । ನೇತ್ರನಿಗೆ ।
ಕಾಮನನು । ಪೆತ್ತವಗೆ । ಕಮಲಾಕ್ಷ । ಗೆ — ।
ಶ್ರೀ ಮಹಾ । ಗೋಪಾಲ । ಆಶ್ರಿತಜ । ನೋದ್ಧಾರ ।
ಬೇಡಿದೊರ । ಗಳನೀವ । ಕಣ್ವಪುರಿ । ಕೃಷ್ಣನಿಗೆ ।
ಜಯಮಂಗ । ಳಂ ನಿತ್ಯ । ಶುಭಮಂಗ । ಲಂ— ॥ ೫೧೭ ॥

೧೨೫ ವಾರ್ಧಿಕಷಟ್ಪದಿ

ಹರಿಯು ಕಳುಹಿಸಿ ದ್ವಾರಕಾಪುರಕೆ ಪಾಂಡವರು
ಅರಮನೆಯೊಳನೇಕ ಸಂಭ್ರಮದಿ ಸಲೆ ಸಾಮ್ರಾಜ್ಯ
ಕರವಾಗಿ ಸುಖಶರಧಿಯೊಳ್ಮುಳುಗುತನುಗಾಲ ದೀಪ್ತಿಚಂದ್ರಮರಂದದಿ ।
ನೆರೆ ಜಾಣ ಜನಮೇಜಯ ಕ್ಷಿತಿಪ ಕೇಳು ಈ
ಪರಿಯೊಳೈರಾವತಕಥಾಮೃತವಿದೀಗಲೆಂ
ದೊರೆದ ವೈಶಂಪಾಯಮುನಿ ಯಿದರ ಕೇಳ್ವರಿಗೆ ಕಣ್ವಪುರಿಕೃಷ್ಣನೊಲಿವ ॥ ೫೧೮ ॥

ಅರಿಯೆ ಲಕ್ಷಣ[1]ವೊಂದ ಪದ್ಯ[1]ವಡಿ ಪ್ರಾಸವ
ಕ್ಷರಗಣಂಗಳು ರಾಗ ತಾಳ ಮುಂತಾಗಿ ಗೋ
ಚರವಿಲ್ಲ ಶಾಸ್ತ್ರಗಳ ಕಂಡರಿಯೆ ಕವಿತೆಯೊಳಗೇನೊಂದೆನಗೆ ತಿಳಿಯದು ।
ಜರೆಯಲಾಗದು ಬಲ್ಲವರು ತಪ್ಪುಗಳ ಕಳೆದು
ನೆರೆ ತಿದ್ದಿಕೊಂಡಿದರ ಹೇಳಿ ಕೇಳಿದರೆ ಗುರು
ವರ ಕಣ್ವಪುರದೊಡೆಯ ಗೋಪಾಲಕೃಷ್ಣ ತಾ ಪೊರೆವನನುಗಾಲ ಬಿಡದೆ ॥ ೫೧೯ ॥

ಶ್ರೀಮನ್ಮಹಾಭಾರತದೊಳಗಣ ಐರಾವತ ಸಂಧಿ ಕಥಾ
ಪ್ರಸಂಗ ಸಂಪೂರ್ಣಂ ಮಂಗಲಮಹಾ
ಶ್ರೀ ಗೋಪಾಲಕೃಷ್ಣನೇ ಗತಿ

---

1 ಕಂದಪದ್ಯ (ಅ)

# ಸಭಾಲಕ್ಷಣ

## ಪ್ರಯೋಗದ ಸಾರಾಂಶ

ಈ ಪೂರ್ವರಂಗ ವಿಧಿಯಲ್ಲಿ ಮೊದಲಾಗಿ ಚೆಂಡೆ, ಮದ್ದಳೆ, ಶ್ರುತಿ ತಾಳಗಳನ್ನು ರಂಗಸ್ಥಳದ ಮಧ್ಯಕ್ಕೆ ತಂದು, ಪದ್ಯ ಹಾಡದೆ ಸ್ವಲ್ಪ ಹೊತ್ತು ಆದಿತಾಳದಲ್ಲಿ ಬಾರಿಸುವುದು. ಅನಂತರ ಚೌಕಿಯಲ್ಲಿ ಮೇಳದ ದೇವರಿಗೆ ಪೂಜೆ ಪ್ರಾರಂಭವಾದೊಡನೆಯೇ ಸಂಗೀತಗಾರನು—ಸಭಾಲಕ್ಷಣ ಪದ್ಯಗಳನ್ನು ಹಾಡುವ ಭಾಗವತನು ಸಂಗೀತಗಾರನೆಂದೇ ಕರೆಯಲ್ಪಡುತ್ತಾನೆ—ರಂಗಕ್ಕೆ ಬಂದು ಮೃದಂಗವಾದ್ಯಸಮೇತ ಆರಂಭದ ಮಂಗಲಾಚರಣೆಯ ಸ್ತುತಿಪದ್ಯಗಳನ್ನು ಹಾಡುತ್ತಿರುತ್ತಾನೆ. ಆಗ ಇಬ್ಬರು 'ಕೋಡಂಗಿ'ಗಳು (ಸ್ತುತಿ ಪಾಠಕರು) ಸಾಂಪ್ರದಾಯಿಕ ವೇಷಗಳನ್ನು ಧರಿಸಿ, ವಿಧಿಪ್ರಕಾರ ದೇವರ ಮುಂದೆ ಗೆಜ್ಜೆ ಕಟ್ಟಿ ರಂಗಕ್ಕೆ ಬಂದು ಮದವೂರ ವಿಘ್ನೇಶ್ವರನ ಸ್ತುತಿಪೂರ್ವಕವಾಗಿ ಸಭಾವಂದನೆ ಮಾಡುತ್ತಾರೆ. ಅನಂತರ ಆ ಭಾಗವತ ಮತ್ತು ಇವರಿಬ್ಬರೊಳಗೆ ಪ್ರಶ್ನೋತ್ತರ ಸಂಭಾಷಣೆಯ ರೂಪದಲ್ಲಿ ಸಭಾಲಕ್ಷಣದ ಶ್ಲೋಕಗಳೂ ಅವುಗಳ ಅರ್ಥವಿವರಣೆಯೂ ವಿಸ್ತರಿಸಲ್ಪಡುತ್ತವೆ. ಆಮೇಲೆ ಎರಡು 'ನಿತ್ಯವೇಷ' (ಬಾಲಗೋಪಾಲರು)ಗಳು ಬಂದು 'ಗಣಪತಿಕೌತಕ'ವೆಂಬ ಶಾಸ್ತ್ರೋಕ್ತ ವಿಘ್ನೇಶ್ವರಸ್ತುತಿನೃತ್ಯವನ್ನು ಮಾಡುತ್ತಾರೆ. ಅನಂತರ ಷಣ್ಮುಖನ ವೇಷದ ಸ್ತುತಿ ನೃತ್ಯವಾಗುವುದು. ಇದಾದ ಮೇಲೆ ಪಾರ್ವತಿಯ ವಿರಹದಲ್ಲಿದ್ದ ಶಿವನ ಹಾಗೂ ಶಿವನ ವಿರಹಸಂತಾಪದಲ್ಲಿರುವ ಪಾರ್ವತಿಯ ವೇಷಗಳು ಪ್ರವೇಶಿಸಿ, ಅವರ ಗೀತಗಳೂ ನಾಟ್ಯಾಭಿನಯಗಳೂ ಪ್ರತ್ಯೇಕ ನಡೆಯುತ್ತವೆ. ಇದಾಯಿತೆಂದರೆ ಶ್ರೀ ಕೃಷ್ಣನ ವಿರಹಾವಸ್ಥೆಯಲ್ಲಿರುವ ಗೋಪಸ್ತ್ರೀಯರ ವಿಪ್ರಲಂಭ ಶೃಂಗಾರವನ್ನು ನಿರೂಪಿಸುವ ಸ್ತ್ರೀವೇಷಗಳ ನಾಟ್ಯವೂ 'ಗೊಲ್ಲಮಾಧವ'ನೊಡನೆ ಅವರ ಸಂಭಾಷಣೆಯೂ ರಸವತ್ತಾಗಿ ನಡೆಯುತ್ತವೆ. ಈ ಸ್ತ್ರೀವೇಷಗಳು ಹೊರಟುಹೋದ ಮೇಲೆ ಸಾಂಪ್ರದಾಯಿಕವಾಗಿ ಶ್ರೀರಾಮನ ವೇಷ ಬಂದು ಒಮ್ಮೆ ಒಡ್ಡೋಲಗವಾಗಬೇಕು. ಅದಾದ ಮೇಲೆ ಸಮಯಾವಕಾಶಕ್ಕೆ ತಕ್ಕಂತೆ, ಕೆಲವೊಂದು 'ಕಟ್ಟುಹಾಸ್ಯ'ಗಳು ಪ್ರಯೋಗಿಸಲ್ಪಟ್ಟು ಕೊನೆಯದಾಗಿ ಶ್ರೀ ಮಧುಪುರವಿಘ್ನೇಶನಿಗೆ ಮಂಗಲ ಹಾಡಿ ಈ ಪೂರ್ವರಂಗ ಮುಕ್ತಾಯಗೊಳ್ಳುವುದು.

**ಮುಖ್ಯ ಸಂಗತಿಗಳು**

ಮಂಗಲಾಚಾರ
ಸಭಾಲಕ್ಷಣ
ಗಣಪತಿಕೌತಕ
ಷಣ್ಮುಖ ನಾಟ್ಯ
ಶಿವನಾಟ್ಯ
ಅರ್ಧನಾರೀಶ್ವರ
ಸ್ತ್ರೀವೇಷನಾಟ್ಯ
ರಾಮನ ಒಡ್ಡೋಲಗ
ಕಟ್ಟುಹಾಸ್ಯಗಳು

**ಪಾತ್ರಗಳು**

ಇಬ್ಬರು ಕೋಡಂಗಿಗಳು
ನಿತ್ಯವೇಷಗಳು ೨
ಷಣ್ಮುಖ
ಈಶ್ವರ
ಅರ್ಧನಾರಿ
ಮುಖ್ಯಸ್ತ್ರೀವೇಷ
ಸಖೀಸ್ತ್ರೀವೇಷಗಳು ೭
ಗೊಲ್ಲಮಾಧವ
ಹಾಸ್ಯದ ಪಾತ್ರಗಳು

# ಸಭಾಲಕ್ಷಣ

## ಮೊದಲ ಮಂಗಲಾಚಾರ

೧ ಮಧೂರ ಮದನೇಶ — ವಿಘ್ನೇಶ್ವರ ಸ್ತುತಿ ; ಜಂಪೆತಾಳ ೨

ಜಯಮಂಗ । ಳಂ ನಿತ್ಯ । ಶುಭಮಂಗ । ಳಂ— ।
ಭಯವಿನಾ । ಶಕಗೆ ಶ್ರೀ । ಮದನೇಶ । ಗೆ— ‖ ಪಲ್ಲವಿ ‖

ಕರಿಮುಖನ । ತಾತನಿಗೆ । ಗರಳಕಂ । ಧರದವಗೆ ।
ಕರಿಚರ್ಮ । ವನು ಧರಿಸಿ । ಮೆರೆವಾತ । ಗೆ— ‖
ಕರಿದಾನ । ವಾಂತಕಗೆ । ಸುರವರೋ । ದ್ಧಾರನಿಗೆ ।
ಉರಗಭೂ । ಷಣಗೆ ಗೌ । ರೀರಮಣ । ಗೆ— ‖ ೧ ‖

ಧೂರ್ತಕುಲ । ಕಾಲನಿಗೆ । ಭಕ್ತಕುಲ । ಪಾಲನಿಗೆ ।
ಮುಕ್ತಿದಾ । ಯಕಗೆ ಮೂ । ಲೋಕೇಶ । ಗೆ— ‖
ಮಾರ್ತಂಡ । ತೇಜದ । ತ್ಯಂತ ಶೋ । ಭಿಸುವನಿಗೆ ।
ಕಾತ್ಯಾಯ । ನೀಶಗೆ ಮ । ಹೇಶ್ವರನಿ । ಗೆ— ‖ ೨ ‖

ಪದುಮನಾ । ಭನ ಸಖಗೆ । ಮದಮುಖವಿ । ನಾಶಕಗೆ ।
ಬುಧನ ಪಿತ । ನನು ಧರಿಸಿ । ಮೆರೆವಾತ । ಗೆ— ‖
ವದನಪಂ । ಚಕದವಗೆ । ಗಜಮುಖಗೆ । ಶೋಭಿಸುವ ।
ಮಧುಪುರದಿ । ನೆಲಸಿರುವ । ಮದನೇಶ । ಗೆ— ‖ ೩ ‖

(ಕಾಸರಗೋಡು ತಾಲ್ಲೂಕಿನ ಈ ಮಧೂರ ವಿಘ್ನೇಶ್ವರನ ದೇವಸ್ಥಾನದಲ್ಲೇ ಮದನೇಶ್ವರನ ಉದ್ಭವಲಿಂಗವೂ ಇರುವಂಥಾದ್ದು. ಇವರಿಬ್ಬರಿಗೂ ಏಕಸಮಯದಲ್ಲೇ ಪೂಜಾದಿಗಳು ನಡೆಯುತ್ತವೆ.)

೨ (ಕಣಿಪುರಗೋಪಾಲಕೃಷ್ಣನ ಸ್ತುತಿ) ; ತ್ರಿವುಡೆತಾಳ (ವಿಲಂಬಿತ, ದ್ರುತ)

ಮಾಮವ । ಯದುವೀರ । ಮಾಮನೋ । ಹರ ಪರ ।
ಮಾಮಲ । ಪೂರ್ಣಗು । ಣ—ಪು । ರಾಣಪುರುಷ ।
ಸ್ವಾಮಿ ಶ್ರೀ । ನಾರಾಯ । ಣ—ಹ । ರೇ ರಂಗ ‖
ಧಾಮ ರವಿ ಶಿಖಿ । ಸೋಮನಿಭ ಶುಭ । ಹೇಮಮಕುಟ ಪ್ರ ।
ಭಾಮಯಾಂಗ । ಶ್ಯಾಮ ಕೋಮಲ । ಕಾಮಲಾವ । ಣ್ಯ—ಕವಿ ।
ಜನಶರಣ್ಯ ‖ ೪ ‖

ದುಶ್ಶಾಸ । ನಾಧೀನ । ದ್ರುಪದಜೆ । ಯಭಿಮಾನ ।
ಶಶ್ವತ್ತ । ವಾನುಗ್ರ । ಹ—ಪಾಂ । ಡವಭಕ್ತಿ ।
ವಿಶ್ವಾಸ । ವಶ್ಯದೇ । ವ—ಶಾ । ರದೆ ಸಹ ॥
ಜಾಹ್ನವೀಯ ಖ । ಗಾಶ್ವ ಪಾಲಿತ । ವಿಶ್ವ ಮನುಮುನಿ । ಸುರನರೋರಗ ।
ವಿಶ್ವಹರಿ ಹರಿ । ದಶ್ವಭಾಸ ವಿ । ದಿಶ್ವರೇಶ್ವರ । ಭೋ—ಸಚ ।
ರಾಚರವಿಭೋ ॥ ೫ ॥

ಅಕ್ರೂರ । ವಂದಿತ । ಪಾದಾಂಬು । ಜಾತ ತ್ರಿ ।
ವಿಕ್ರಮ । ಮಹಾಮಹಿ । ಮ—ಸಾ । ತ್ವಿಕ ಸಗು ।
ಣಾಕ್ರಾಂತ । ಸರ್ವೋತ್ತ । ಮಾ—ಭಯ । ವರ ಶಂಖ ॥
ಚಕ್ರಪಾಣಿ ತ್ರಿ । ವಿಕ್ರಮ ಭುಜಪ । ರಾಕ್ರಮಾನ್ವಿತ । ಸಜ್ಜ ಜನ ಪಿತ ।
ಶಕ್ರಮದಹರ । ವಿಕ್ರಮಾದ್ಭುತ । ಶುಕ್ರಶಿಷ್ಯಾರಿ । ಪೋ—ಸುಪ ।
ರಿಮಳಿತವಪೋ ॥ ೬ ॥

ಮೀನ ಕ । ಚ್ಛಪ ಕೋಲ । ನರಮೃಗ । ವಟು ಜನ ।
ಪಾಲ ಕ । ಲ್ಕ್ಯಾದಿ ವೇ । ಷ—ಕ । ಣ್ವಪುರ ಪ್ರ ।
ಧಾನಮೂ । ರುತಿ ದೇವೇ । ಶ—ಶ್ರೀ । ಕೃಷ್ಣ ಶೇಷ (ವೇಷ) ॥
ಮಾನವಾಕೃತಿ । ಗೋಪಕನ್ಯಾ । ಮಾನಹರ ಪವ । ಮಾನಸುತಸುತ ।
ದೀನಜನಕ । ಲ್ಯಾಣಗುಣಗಣ । ಗಾನಪರಿಪೂ । ರ್ಣ—ಆ ।
ಶ್ರಿತವರೇಣ್ಯ ॥ ೭ ॥

೩ (ಸುಬ್ರಹ್ಮಣ್ಯಸ್ತುತಿ) ರಾಗ ಕಾಂಭೋಜಿ—ಏಕತಾಳ ೧

ಮನ್ಮಥ । ಸುಂದರ । ಮಹಿತವಿ । ಲಾಸ— ।
ಮಾನಿತ । ಬುಧಜನ । ಹೃದಯನಿ । ವಾಸ— ।
ಚಿನ್ಮಯ । ಕಾಯ— । ಭಕ್ತಸ । ಹಾಯ— ।
ಶಕ್ತಿಸ । ಖಾಯ— । ಶ್ರೀ ಸುಬ್ಬ । ರಾಯ— ॥ ೮ ॥

ಭರಿತಗು । ಣೋದಯ । ಪಾರ್ವತಿ । ಪುತ್ರ— ।
ಸುರನುತ । ನಿರ್ಮಲ । ಶೋಭಿತ । ಗಾತ್ರ— ।
ದುರಿತನಿ । ವಾರಣ । ತೋಯಜ । ನೇತ್ರ— ।
ವರ ಮಣಿ । ಭೂಷಣ । ವಾಸುಕಿ । ಮಿತ್ರ— ॥ ೯ ॥

ಕನಕ ಕುಂ | ಡಲಮಣಿ | ಕಮನೀಯ | ಭೂಷ— |
ಮುನಿಜನ | ಸನ್ನುತ | ಮೋಹನ | ವೇಷ— |
ವನಜಭ | ವಾಪುರ | ವಾಸವ | ತೋಷ— |
ದಿನಮಣಿ | ಶತಕೋಟಿ | ದಿವ್ಯಪ್ರ | ಕಾಶ— || ೧೦ ||

ಪುರಹರ | ನಂದನ | ಭೋಗಿಶ | ರೀರ— |
ಕರುಣಾ | ಸಾಗರ | ಕಲಿಭಯ | ದೂರ— |
ನಿರುಪಮ | ಶಾಶ್ವತ | ನಿಗಮವಿ | ಚಾರ— |
ನರಹರಿ | ಸಖ ಕುಕ್ಕೆ | ನಗರವಿ | ಹಾರ— || ೧೧ ||

೪ (ಕಿದೂರು ಮಹಾಲಿಂಗೇಶ್ವರನ ಸ್ತುತಿ) ರಾಗ ಶಂಕರಾಭರಣ—ತ್ರಿವುಡೆತಾಳ ೧

ನೋಡು ದೇ | ವರ ದೇವ | ನ—ಪಾ | ರ್ವತಿಯೊಡ |
ಗೂಡಿದ | ಮೃಗಧರ | ನ— ||
ಬೇಡು ಬೇ | ಕಾದಂಥ | ಅಭಯದಿ | ಷ್ಟಾರ್ಥವ |
ಗಾಢದಿಂ | ದಲಿ ದಯೆ | ಮಾಡಿ ರ | ಕ್ಷಿಸುವ— || ೧೨ ||

ಗಂಗಾಧ | ರೇಂದ್ರ ಸಾಂ | ಬ—ಕಿ | ದೂರ ಮಾ |
ಲಿಂಗದೇ | ವರ ಕಾಂ, | ಬ— ||
ಶೃಂಗಾರ | ರವಿಬಿಂಬ | ದಿಂದ ಸೂ | ರ್ಮಡಿ ಚಂದ |
ತುಂಗವಿ | ಕ್ರಮಸ್ವಾಮಿ | ಪಾದಾರ | ವಿಂದ— || ೧೩ ||

ನಂದಿಯ | ನೇರಿಕೊಂ | ಡು—ಐ | ನೂರು ಲಕ್ಷ |
ಮಂದಿಯ | ನೆರಹಿ ಕೊಂ | ಡು— ||
ಚಂದ್ರಶೇ | ಖರ ಗಿರಿ | ಯಿಂದ ಬ | ರಲು ಕಂಡು |
ಇಂದ್ರಾದಿ | ಸುರರು ದುಂ | ದುಭಿ ಭೇರಿ | ಕೈಕೊಂಡು || ೧೪ ||

ಪೊಡವಿಪಾ | ಲಕರೆಲ್ಲ | ರು—ಕ | ಪ್ಪವ ಕೊಂಡು |
ಪಿಡಿದು ನಿಂ | ದಿಹರು ಬಂ | ದು— ||
ಮಡದಿ ಮ | ಕ್ಕಳು ಜಗ | ದೊಡೆಯನ | ಡಿಗೆ ತಂದು |
ಕೆಡಹೆ ಕಾ | ಣಿಕೆಗೊಂಡು | ಕೊಡುವ ಪ್ರ | ಸಾದವ || ೧೫ ||

ಮಂಡಲ | ದೊಳಗಿರು | ವ—ಸ | ಜ್ಜನರನು |
ಕೊಂಡು ಸೇ | ರಿದನು ಜೀ | ಯ— ||

ಖಂಡಪ | ರಶುವಿನೊಳ್ | ಗಂಡುಸಂ | ತತಿ ಬೇಡಿ |
ಮುಂಡೆಯ | ನೆರಗಿ ತೂ | ಗಿಸೆ ತುಲಾ | ಭಾರವ || ೧೬ ||

ಅಮರಾದಿ | ಸುರರೆಲ್ಲ | ರು — ಮುನಿ | ಶಾಪಕ್ಕೆ |
ಭ್ರಮೆಗೊಂಡು | ಬಳಲಿ ಬಂ | ದು — ||
ಕಮಲಜ | ನಕನೊಡ | ಗೂಡಿ ಕ್ಷೀ | ರಾಬ್ಧಿಯೊ |
ಳಮೃತವ | ಮಥಿಸೆ ಹಾ | ಲಾಹಲ | ವನು ಕೊಂಡ || ೧೭ ||

ಲೋಕದ | ಜನರೊಡೆ | ಯ — ಪಾ | ವಕನೇತ್ರ |
ಪಾಕಭೂ | ಷಣ ಮೃಡ | ಯ — ||
ನಾಲ್ಕು ವೇ | ದಗಳನು | ಮುಕ್ಕಿದ | ತ್ರಿಪುರರ |
ಸೊಕ್ಕ ಮು | ರಿದ ಸ್ವಾಮಿ | ಮುಕ್ಕ, | ಣ್ಣೇಶನ || ೧೮ ||

ಮಂಗಳಂ | ಪುರಹರ | ಗೆ — ಫಾ | ಲಾಕ್ಷಗೆ |
ಮಂಗಳಂ | ಗಿರಿವರ | ಗೆ — ||
ಮಂಗಳಂ | ಸುರಮುನಿ | ನಮಿತ | ವಿಲಾಸಗೆ |
ಮಂಗಳಂ | ಕಿದು ಊರ | ಮಾಲಿಂಗ | ಭಾಸಗೆ || ೧೯ ||

೫ (ರಾಮದೇವರ ಸ್ತುತಿ) ರಾಗ ಮೋಹನ—ತ್ರಿವುಡೆತಾಳ ೧, ೨

ರಾ,ಮ | ಪಾಲಯ | ಮಾಂ —ಶ್ರೀ | ಹರೇ ರಘು |
ರಾಮ ರವಿಕುಲ | ಸೋಮ ಜಗದಭಿ | ರಾಮ ನೀರದ | ಶ್ಯಾಮ
ಜಯ ಜಯ || ಪಲ್ಲವಿ ||

ಸಾರದ | ಯಾಪರ | ವೀಕ್ಷಣ | — ಸಾಧು |
ಸಾರ್ವಜ | ನರ ಸಂ, | ರಕ್ಷಣ | — ಸುರ |
ವಾರವಂ | ದಿತ ಶುಭ | ಲಕ್ಷಣ | — ಧೂರ್ತ |
ಘೋರ ದು | ರ್ಮದದೈತ್ಯ | ಶಿಕ್ಷಣ — ಹರೇ ||
ಧೀರಜನಮಂ | ದಾರ ದುರಿತವಿ | ದೂರ ವರಗುಣ | ಹಾರ ಶ್ರೀರಘು || ೨೦ ||

ಅನುಪಮ | ನಿಜ ಸತ್ಯ | ಭಾಷಣ | — ಮಾಯಾ |
ದನುಜಮಾ | ರೀಚಾದಿ | ಭೀಷಣ | — ಘೋರ |
ವನನಿಧಿ | ಘನಮದ | ಶೋಷಣ | — ಶ್ರೀ ಮೋ |
ಹನರಾಗ | ಭಜನ ಸಂ | ತೋಷಣ | — ಹರೇ ||
ಇನತನೂಭವ | ಭಣಿತವೈಭವ | ಜನಿತಕೋಸಲ | ವಿನತಶರಬಲ || ೨೧ ||

೬ (ಹನುಮಂತ ಸ್ತುತಿ) ರಾಗ ಮಧ್ಯಮಾವತಿ—ಏಕತಾಳ ೩

ಕರುಣದಿ । ಸಲಹೆ । ನ್ನ — । ಹನುಮಾ ।
ಮರೆ ಹೊ । ಕ್ಕೆನು ನಿ । ನ್ನ— ॥
ಶರಣಶ । ರಣನೆಂ । ದೆನುತ ಕ । ಟಾಕ್ಷದಿ ।
ಪೊರೆಯೈ । ಮಾರುತ । ತನಯ ದ । ಯಾಕರ ॥ ೧೧ ॥

ಅಂಜನೆ । ಸುಕುಮಾ । ರ — । ಭವಭಯ ।
ಭಂಜನ । ರಣಶೂ । ರ — ॥
ಕಂಜದ । ಳಾಯತಾ । ಕ್ಷನ ಪದ । ಸೇವಕ ।
ಕಂಜಮಿ । ತ್ರ ಸಂ । ಕಾಶ ದೀ । ನಪೋಷ ॥ ೧೨ ॥

ಖಳ ದಶ । ಶಿರ ಬಂ । ದು — । ಸೀತೆಯು ।
ಕಳವಿಲೊ ।,ಯ್ಯಲಂ । ದು — ॥
ಲಲನೆಯ । ಸುದ್ದಿಯ । ತಿಳಿಯಲೋ । ಸುಗವಾಗಿ ।
ಜಲಧಿಯ । ದಾಂಟ ಲಂ । ಕಿಣಿಯ ಸಂ । ಹರಿಸಿದೆ ॥ ೧೩ ॥

ಎರಗಿ ಜಾ । ನಕಿಗಾ । ಗ — । ರಾಮನುಂ ।
ಗುರವನಿ ।,ತ್ತು ಬೇ । ಗ — ॥
ದುರುಳರ । ವನವನು । ಮುರಿದು ತ । ತ್ಪುರವ ।
ನ್ನುರುಹಿ ಬಾ ।,ಲವನು । ಶರಧಿಯೊ । ಳ್ಳೆನಿಸಿದೆ ॥ ೧೪ ॥

ಒಡೆಯಗೆ । ರಗಿ ಚೂ । ಡಾ — । ಮಣಿಯನು ।
ಕೊಡಲು ಕಾ । ಣುತಾ । ಗ — ॥
ಕಡು ಮೆ । ಚ್ಚಿದೆ ಬೇ । ಡಿದನೀವೆ । ನೆಂಬುದ ।
ಕೊಡೆಯನ । ಪದವಿಯ । ಪಡೆದ ಮೋ । ಹನಕಾಯ ॥ ೧೫ ॥

ಧರೆಯೊಳ । ಧಿಕವಾ । ದ — । ಛತ್ರ,।
ಪುರದೊಳು । ಸ್ಥಿರವಾ । ದ — ॥
ವರ ಮುಖ್ಯ । ಪ್ರಾಣ ದ । ಯಾಘನ । ಸುರವರ ।
ಪರಮೋ । ಷ್ಠಿಗೆ ಸರಿ । ದೊರೆ ಸಲ । ಹೆನ್ನನು ॥ ೧೬ ॥

೭ (ಧರ್ಮಸ್ಥಳ ಮಂಜುನಾಥನ ಸ್ತುತಿ) ರಾಗ ಸುರುಟಿ—ಏಕತಾಳ ೩

ಕರುಣಿಸು । ಪರಮೇ । ಶ — । ಪುರಹರ ।
ವರದ ಸು । ಜನಪೋ । ಷ — ॥

ಶರಣಾ | ಗತಪರಿ | ಪಾಲಕ | ಸುಲಲಿತ |
ಚರಣಾಂ | ಬುರುಹವ | ಸ್ಮರಿಸುವೆ | ನನುದಿನ || ಪಲ್ಲವಿ ||

ಪಂಚವ | ದನದೇ | ವ — | ಸುರಪ ವಿ
ರಿಂಚಿಮು | ಖ್ಯರ ಕಾ | ವ — ||
ಪಂಚಹೃ | ದಯವನು | ಪಡೆದ ಸ | ದಾಶಿವ |
ಕಾಂಚನಾ |, ದ್ರಿರಜ | ತಾಚಲ | ವಾಸ — || ೨೮ ||

ಪಾಲಿತಾ | ಮರನಿಕ | ರ — | ಪಶುಪತಿ |
ಪಾಲ ಹ | ರಶರೀ | ರ — ||
ನೀಲಕಂ |, ಠ ನಿಗ | ಮಾಗಮ | ಪೂಜಿತ | '
ಶೈಲರಾ |,ಜತನ | ಯೇಶ ಮ | ಹೇಶ— || ೨೯ ||

ಶೇಷಾ | ಭರಣಧ | ರ — | ಶಶಿಸಂ |
ಕಾಶ ಮ | ಹೇಶ ಸು | ರ — ||
ಈಶ ಕು | ಡುಮಪುರ | ವಾಸ ತ್ರಿ | ಪುರಹರ |
ಪಾಶವಿ | ಧೃತಕರ | ಶ್ರೀಶ ಮುಂ |,ಜುನಾಥ || ೩೦ ||

(ಕೋಡಂಗಿಗಳ ಪ್ರವೇಶ)

'ಶಿವಶಕ್ತಿಸಮುದ್ಭೂತಂ ಸರ್ವಂ ಬ್ರಹ್ಮಾಂಡಮುಚ್ಯತೇ' ಅಂತ ಹೇಳಿ ಶಿವನಿಂದ ಶಕ್ತಿ ಉಂಟಾಯ್ತು, ಶಕ್ತಿಯಿಂದ ಈರೇಳು ಲೋಕ ಉಂಟಾಯ್ತು, ಆದ್ರಿಂದ ಅಯ್ಯನವರಿದ್ದಲ್ಲಿ ಅಮ್ಮನವರು, ಅಮ್ಮನವರಿದ್ದಲ್ಲಿ ಅಯ್ಯನವರು, ಅಮ್ಮನವ್ರು ಅಯ್ಯನವ್ರು ಇಬ್ಬರೂ ಇದ್ದಲ್ಲಿ ನಮ್ಮ ಸಿದ್ಧಿವಿನಾಯಕ ದೇವರಯ್ಯ.

ಇಬ್ಬರೂ ಕೋಡಂಗಿಗಳು :—ಆಹೋ–ಹೋ, ಸರೇ ಸರಿ, ಆಟ ಆಡಿಸುವಂಥಾ ಮಹಾನುಭಾವರಿಗೂ, ನೋಡುವಂಥಾ ಮಹಾಜನರಿಗೂ, ಕೇಳುವಂಥಾ ಪುಣ್ಯವಂತರಿಗೂ, ಕೇಳಿಸುವಂಥಾ ಭಾಗವತರಿಗೂ ಇಷ್ಟಾರ್ಥ ವರಂಗಳನ್ನು ಕೊಡುವಂಥವರಾದ ಆ ಸಿದ್ಧಿವಿನಾಯಕ ದೇವರನ್ನೇ ಮುದದಿಂದ ಕೊಂಡಾಡಿ, ನಮ್ಮ ಆಟ ಚಂದಾಗಿ ನಡ್ಸಿಕೊಡಪ್ಪಾ ಇಗ್ನೇಸರಾಂತ ಇಚ್ಛಾವರಂಗಳಂ ಬೇಡಿಕೊಳ್ಳುವಂಥವರಾಗಿ, ಸಭಾಸಪ್ತಾಂಗವಂದನೆ ಮಾಡಬೇಕಲ್ಲಯ್ಯಾ ಭಾಗೋತ್ರೇ.

(ಅನಂತರ ಭಾಗವತರು ಕೆಳಗಿನ ಪದ್ಯಗಳನ್ನು ಹಾಡುವುದು. ಆಗ ಕೋಡಂಗಿಗಳಿಬ್ಬರೂ ಕುಣಿಯುತ್ತಿರುತ್ತಾರೆ)

೮ ರಾಗ ನಾಟಿ—ಜಂಪೆತಾಳ ೧

ಮುದದಿಂದ । ನಿನ್ನ ಕೊಂ । ಡಾಡುವೆನು । ಅನವರತ ।
ಮುದಪೂರ । ವಿಘ್ನೇಶ । ಪಾಹಿ ಜಗ । ದೀಶ ॥ ಪಲ್ಲವಿ ॥

ಪರಬ್ರಹ್ಮ । ರೂಪ ವೇ । ದಾಂತಸಾ । ರಪ್ರಿಯ, ।
ಪುರುಹೂತ । ನಮಿತ ದಿ । ವ್ಯಾಂಘ್ರಿ ಕನು । ಲ— ॥
ಗಿರಿಜಾತೆ । ಯಣುಗನಾ । ದಿತ್ಯಕೋ । ಟಿಪ್ರಕಾಶ ।
ಕರಿವದನ । ಕರುಣಾಸ । ಮುದ್ರ ಭವ । ಛಿದ್ರ— ॥ ೩೧ ॥

ಭರದಿಂದ । ರಕ್ಕಸರ । ಪುರವಸಾ । ಧ್ಯವ ಮಾಡೆ ।
ಹರ ಮೊದಲು । ನಿನ್ನನ । ರ್ಚಿಸಿ ಮೆಚ್ಚಿ । ಸಿ— ॥
ಹರಿ ವಿರಿಂ । ಚಿಗಳೆಲ್ಲ । ಜಯ ಜಯಾ । ಜಯವೆನಲು ।
ವರವಿತ್ತು । ಮೆರೆದೆ ಗಣ । ನಾಥ ಪ್ರ । ಖ್ಯಾತ— ॥ ೩೨ ॥

ಅರರೆ ನಿ । ನ್ನಯ ಮಹಿಮೆ । ಯನು ಪೊಗಳ । ಲಳವಲ್ಲ ।
ಧರಣಿಯನು । ಪೊತ್ತಿರ್ದ । ಶೇಷಗರಿ । ದು— ॥
ಹರನ ಸುಕು । ಮಾರ ಸಕ । ಲಾಗಮಕೆ । ಸಾಕಾರ ।
ಧರೆಯೊಳು ವಿ । ಶೇಷ ಮುದ । ಪೂರ ವಿ । ಘ್ನೇಶ— ॥ ೩೩ ॥

೯ ಶಾರ್ದೂಲವಿಕ್ರೀಡಿತವೃತ್ತ

ವಿಘ್ನಧ್ವಾಂತನಿವಾರಣೈಕತರಣಿರ್ವಿಘ್ನಾಟವೀಹವ್ಯವಾಕ್
ವಿಘ್ನವ್ಯಾಳಕುಲಪ್ರಮತ್ತಗರುಡೋ ವಿಘ್ನೇಭಪಂಚಾನನಃ
ವಿಘ್ನೋತ್ತುಂಗಗಿರಿಪ್ರಭೇದನಪವಿರ್ವಿಘ್ನಾಬ್ಧಿಕುಂಭೋದ್ಭವೋ
ವಿಘ್ನೋಘೌಘಘನಪ್ರಚಂಡಪವನೋ ವಿಘ್ನೇಶ್ವರಃ ಪಾತುಮಾಂ ॥ ೩೪ ॥

೧೦ ರಾಗ ಕಾಂಭೋಜಿ—ತ್ರಿವುಡೆ ತಾಳ ೧

ಶರಣು ತಿರುವಗ್ರ । ಶಾಲಿವಾಹಿನಿ । ಶರಣು ಶ್ಯಾಮಳ । ರೂಪಿಣಿ— ।
ಶರಣು ಶಂಕರಿ । ಗೌರಿ ಪಾರ್ವತಿ । ಶರಣು ಭಳಿರನ್ನ । ಪೂರಿಣಿ— ।
,ಶರಣು ಶರಣು ॥ ೩೫ ॥

ಚಂದ್ರವದನೇ । ಸುಂದರಿ ಪರಾ । ಶಕ್ತಿದೇಹಿ ಸು । ಮಂಗಲೇ— ।
ಮಂತ್ರರೂಪಿಣಿ । ಕನಕಭೂಷಿಣಿ । ನಾರಾಯಣಿ ಪದ್ಮ । ಧಾರಿಣಿ— ।
,ಶರಣು ಶರಣು— ॥ ೩೬ ॥

ಸಿಂಹವಾಹಿನಿ । ಮಹಿಷಮರ್ದಿನಿ । ದೇವರಡಿ ಪಣಿ । ಕಾರಿಣೆ— ।
ಪಂಕಜಾಕ್ಷೀ । ಅಖಿಲಜನಪರಿ । ಪಾಲಿನೀ ಗುಣ । ಶಾಲಿನಿ— ।
,ಶರಣು ಶರಣು— ॥ ೩೭ ॥

ಲೋಕನಾಯಕಿ । ಏಕರೂಪಿಣೆ । ಓದುವೋಂಕಾರ । ವಾಯಿನಿ— ।
ನಾಗರಾಜಕು । ಮಾರಿ ಭೈರವಿ । ನಾರಯಿಣೀ ಅನ್ನ । ಪೂರಿಣೆ— ॥
,ಶರಣು ಶರಣು— ॥ ೩೮ ॥

೧೧ ಶಾರ್ದೂಲವಿಕ್ರೀಡಿತವೃತ್ತ

ಸರ್ವಾಶಾಪರಿಪೂರಣಕ್ಷಮಪರಂ ಸರ್ವೋಪಕಾರೋದಯಂ
ಸನ್ಮಾರ್ಗಾಭಿರತಂ ಸಮಸ್ತತಮಸಃ ಪ್ರಧ್ವಂಸಿ ಸತ್ಯಾಸ್ಪದಂ
ಬ್ರಹ್ಮಾವಾಸಮಶೇಷವೇದನಿಲಯಂ ವಿದ್ಯಾಧರಾರಾಧಿತಂ
ಪ್ರತ್ಯಕ್ಷಂ ಭುವಿ ಭಾನುಬಿಂಬಸದೃಶಂ ವಂದೇ ಸಭಾಮಂಡಲಂ ॥ ೩೯ ॥

೧೨ ಶ್ಲೋಕ

ಮುಖತೋ ಪೂರ್ಣಚಂದ್ರಶ್ಚ ನೇತ್ರೇ ಪದ್ಮದಳಾಕೃತೀ ।
ಕೋಟಿಸೂರ್ಯಪ್ರಕಾಶೇಣ ಸಭಾ ಸರ್ವಾಂಗಸುಂದರಂ ॥ ೪೦ ॥

ಚರಾಚರಚರಾ ದೇವಾ ಚಚ್ಚದ್ರೂಪೇ ಹಿಮಾಚಲೇ ।
ಪಂಚಾಶತ್ ಕ್ರೋಶವಿಸ್ತೀರ್ಣಂ ಯೋಜನಂ ಘಟತೇ ಕ್ರಮಾತ್ ॥ ೪೧ ॥

ವಿಘ್ನೇಶಂ ಧರಣೀಂ ವಾಣೀಂ ಬ್ರಹ್ಮವಿಷ್ಣು ಮಹೇಶ್ವರಾನ್ ।
ಅಷ್ಟದಿಕ್ಪಾಲಕಾನ್ ವಂದೇ ಭಜೇಹಂ ರಂಗಭೂಷಣಂ. ॥ ೪೨ ॥

ಆಧಾರಶಕ್ತ್ಯುಪರಿಷ್ಟಾತ್ ಕೂರ್ಮಪೃಷ್ಠೇ ಸುಸಂಸ್ಥಿತೇ ।
ಅನಂತಪೀಠಸಂರೂಢೇ ಭೂಮಿದೇವಿ ನಮೋಸ್ತುತೇ ॥ ೪೩ ॥

೧೩ ರಾಗ ಮೋಹನ—ಏಕತಾಳ ೪

,ನಿಗಮಗೋ । ಚರ ನಿತ್ಯ । ,ನೀರಜ । ಲೋಚನ ।
,ಖಗವಾಹ । ನ ಗಂಧರ್ವ । ,ಗಾನವಿ । ಲೋ,ಲ— ॥
,ಭೃಗುವಸಿ । ಷ್ಠ ವಾಲ್ಮೀಕಿ । ,ಭೂಸುರ । ಸೇವಿತ ।
,ಅಗಣಿತ । ಗುಣಗಣ । ,ಶ್ರೀರಘು । ರಾ,ಮ— ॥ ೪೪ ॥

,ದಶರಥ | ನಂದನ | ದನುಜಸಂ | ಹಾರಣ |
,ಕುಶಿಕಸು | ತವಿನುತ | ಜಾನಕೀ | ನಾ,ಥ— ||
. . . . . . . . . . . . . . || ೪೫ ||
. . . . . . . . . . . . . .

,ಖರದೂಷ | ಣತ್ರಿಶಿರ | ಕಳೇವರ | ಖಂಡನ |
,ನರಮುನಿ | ಸ್ತುತ ಪ್ರಿಯಾ | ,ವರಣ ಶ್ರೀ | ರಾ,ಮ— ||
,ಶರಣಾಗ | ತಾಹಲ್ಯಾ | ,ಶಾಪವಿ | ಮೋಚನ |
,ತರಣಿಕೋ | ಟಿಸಂಕಾಶ | ,ಶರಣು ಶ್ರೀ | ರಾ,ಮ— || ೪೬ ||

,ವಿಬುಧವಂ | ದಿತಪಾದ | ,ವಿನತಪಾ | ಪವಿದೂರ |
,ಕದನವಿ | ಜಿತದೈತ್ಯ | , ಕಾಕುತ್‌ಸ್ಥ | ತಿಲಕ— ||
,ಸದಮಲ | ಸಮರಪ್ರ | ,ಸಂಗ ಸಂ | ಗರಶೂರ |
,ಮದನಜ | ನಕ ಕೇವ | ಲಾತ್ಮ ಶ್ರೀ | ರಾ,ಮ— || ೪೭ ||

೧೪ ಆರೆಸವ್ವಾ (ಸವೈಯಾ)

ಜಗವೆಲ್ಲವು ನಿ | ನ್ನುದರದೊಳಿರುತಿರೆ |
ಸಿರಿಯೆಂಬಳು ನಿನ್ನ | ಚರಣದೊಳಿರುತಿರೆ |
ಶರಣಾಗತರ | ಕ್ಷಾಮಣಿ | ನರಹರಿ
ಗಗನವೆಲ್ಲವು ನಿನ್ನ | ನಾಭಿ— || ೪೮ ||

ನೀಲಮೇಘನಿಭ | ರುಕ್ಮಿಣಿವಿಠಲಾ |
ಬಾಲತನದಿ ಗೋ | ವಳರೊಡನಾಡಿದೆ |
ಗಗನವೆಲ್ಲವು ನಿನ್ನ | ನಾಭಿ— || ೪೯ ||

ಅನುಪಮಗುಣನಿಧಿ | ಅನಂತಮೂರುತಿ |
ಗರುಡಗಮನ ಗದು | ಗಿನ ನಾರಾಯಣ |
ಗಗನವೆಲ್ಲವು ನಿನ್ನ | ನಾಭಿ — || ೫೦ ||

ಕೋಡಂಗಿ—

ಕೇಳಿದೆಯಾ ಭಾಗವತ, ಕೂತಿರುವಂಥಾ ಸಭೆಗೆ ವಂದನೆ ಮಾಡಬೇಕಾದರೆ ದೇವರೋ ಮುನ್ನ—ರಾಯರೋ ಮುನ್ನ ?

ಭಾಗವತ—

ದೇವರೇ ಮುನ್ನ—ಭೂದೇವರೇ ಮುನ್ನ । ಇಂತೀ ಸಭಾ
ಭೂದೇವತಸಭಾ । ಸತ್ಯವಿಚಾರಸಭಾ । ಸದ್ಧರ್ಮಕೀರ್ತಿಸಭಾ ।
ವಿಖ್ಯಾತ ವೀರಸಭಾ । ರಾಜರಾಜಕುಮಾರಶೋಭಿತಸಭಾ ।
ರಾಜ ಪ್ರಕಾಂಡಸಭಾ । ಸಂಗೀತಪ್ರಕಾಶನಸಭಾ । ಕವಿಸಭಾ ।
ಗುರುಸಭಾ । ವೇದಾದ್ಯಾಗಮ ಶಾಸ್ತ್ರಪುರಾಣಸಭಾ । ಸಾಮಂತ
ಮಂತ್ರಿಸಭಾ । ಸಕಲಸಾಮ್ರಾಜ್ಯಲಕ್ಷ್ಮೀ ಸಭಾ । ವಂದೇ ಸಭಾಮಂಡಲಂ ॥

೧೫ ಶ್ಲೋಕ

ಸಭಾಕಲ್ಪತರುಂ ವಂದೇ ಋಗ್ಯಜುಸ್ಸಾಮಶಾಖಿನಂ ।
ಷಡಂಗಕುಸುಮೋದ್ಭೂತಂ ತತ್ವಜ್ಞಾನಫಲೋದಯಂ ॥ ೫೧ ॥

ಕೋಡಂಗಿ—

ಇಂತೊಪ್ಪುವಂಥಾ ಸಭೆಯಲ್ಲಿ ಸಭಾನಾಯಕನ ಲಕ್ಷಣ ಹ್ಯಾಗಿರಬೇಕಯ್ಯಾ ಎಂದರೆ—

೧೬ ಮ । ಸ್ರಗ್ಧರಾವೃತ್ತ

ಭಾಗವತ—

ವರಭಾವಜ್ಞಂ ರಸಜ್ಞಂ ರಸಿಕಜನನುತಂ ಸರ್ವಭಾಷಾಪ್ರವೀಣಂ ।
ಸ್ಥಿರಧೈರ್ಯಂ ಖ್ಯಾತಶೌರ್ಯಂ ನಿಯಮಿತವಚನಂ ಕೀರ್ತಿಕಾಂತಸಮೇತಂ ।
ಸ್ಮರರೂಪಂ ಮುಕ್ತಕೋಪಂ ವಿಮಲಗುಣಯುತಂ ಸತ್ಯಧರ್ಮಂ ಸುಶೀಲಂ ।
ವರಕಾರುಣ್ಯಂ ಶರಣ್ಯಂ ಬುಧಜನಕುಮುದಾನಂದಚಂದ್ರಂ
ಸಭೇಂದ್ರಂ ॥ ೫೨ ॥

ಕೋಡಂಗಿ—

ಇಂತೊಪ್ಪುವ ಸಭಾಪತಿಯು ಮಂಡಿಸಿರುವಂಥಾ ಸಭಾಮಧ್ಯದಲ್ಲಿ ಮಂತ್ರಿ ಪರಿವಾರಾದಿ ಚತುರಂಗವೈಭವ ಹ್ಯಾಗಿರಬೇಕಯ್ಯಾ ಎಂದರೆ—

೧೭ ಶ್ಲೋಕ

ಭಾಗವತ—

ರಾಜಾನಃ ಪೃಥ್ವೀರೂಪೇಣ ಪ್ರಧಾನಃ ಕಲ್ಪರೂಪತಃ ।
ಪರೀವಾರೋ ಕಾಮಧೇನುರ್ಯಥಾ ರಾಜಾ ತಥಾ ಪ್ರಜಾಃ ॥ ೫೩ ॥

ಕೋಡಂಗಿ—

ಇಂಥಾ ರಾಜಸಭೆಯಲ್ಲಿ ಯಾವ ಯಾವ ವಿದ್ವಾಂಸರಿರಬೇಕಯ್ಯಾ ಎಂದರೆ—

೧೮ ಶ್ಲೋಕ

ಭಾಗವತ—

ವಿದ್ವಾಂಸಃ ಕವಯೋ ಭಟ್ಟಾ ಗಾಯಕಃ ಪರಿಹಾಸಕಃ ।
ಇತಿಹಾಸ ಪುರಾಣಜ್ಞಾ ಸಭಾಸಪ್ತಾಂಗಲಕ್ಷಣಂ ॥ ೫೮ ॥

ಕೋಡಂಗಿ—

ಇಂತೊಪ್ಪುವಂಥಾ ವಿದ್ವತ್‌ಸಭಾಸಪ್ತಾಂಗದೊಳಗಾದ ಸಾಮಾಜಿಕಲಕ್ಷಣಂಗಳು ಹ್ಯಾಗಿರಬೇಕಯ್ಯಾ ಎಂದರೆ—

ಭಾಗವತ—

ಬ್ರಹ್ಮನ ವೋಲು ಆಯುಃ ಸಂಪನ್ನರೂ, ದೇವೇಂದ್ರನೋಲು ಭಾಗ್ಯಸಂಪನ್ನರೂ, ಸೂರ್ಯನವೋಲು ತೇಜಃ ಸಂಪನ್ನರೂ, ಯಜ್ಞೇಶ್ವರನವೋಲು ಶುಚಿರ್ಮೇಧಾ ಸಂಪನ್ನರೂ, ಹರಿಶ್ಚಂದ್ರನವೋಲು ಸತ್ಯಸಂಪನ್ನರೂ, ಕಂದರ್ಪನವೋಲು ರೂಪ ಸಂಪನ್ನರೂ, ಕರ್ಣನವೋಲು ತ್ಯಾಗಸಂಪನ್ನರೂ, ಅಂಬರೀಶನವೋಲು ವ್ರತ ಸಂಪನ್ನರೂ, ಕಾಳಿದಾಸನವೋಲು ಕವಿತ್ವಸಂಪನ್ನರೂ, ಭೀಮಸೇನನವೋಲು ಸತ್ವಸಂಪನ್ನರೂ, ಧರ್ಮರಾಯನವೋಲು ಧರ್ಮಪ್ರತಿಪಾಲಕರೆಂದಿರುವಂಥಾ ನೀವು ಮೆಟ್ಟದಂಥ ಕ್ಷೇತ್ರಂಗಳಿಲ್ಲ, ನೀವು ಮಿಾಯದಂಥಾ ತೀರ್ಥಂಗಳಿಲ್ಲ, ನೀವು ಕೇಳದಂಥಾ ವೇದಶಾಸ್ತ್ರ ಪುರಾಣಂಗಳಿಲ್ಲ, ನೀವು ನೋಡದಂಥ ದೇವತಾವಿಗ್ರಹಂಗಳಿಲ್ಲ, ನೀವು ನಡೆವುದೇ ತಾಳ, ನುಡಿವುದೇ ಸ್ವರಕರಣಂಗಳಲ್ಲದೆ ಬೇರೆ ಮತ್ತೊಂದಿಲ್ಲವಯ್ಯಾ ಎಂದರೆ—

೧೯ ಶ್ಲೋಕ

ವಾಚಾತೀತಂ ಮನೋತೀತಂ ಭಾವಾತೀತಂ ನಿರಂಜನಂ ।
ಸರ್ವಶೂನ್ಯಂ ನಿರಾಕಾರಂ ನಿಶ್ಶಬ್ದಂ ಬ್ರಹ್ಮ ಉಚ್ಯತೇ ॥ ೫೯ ॥

ಇಂಥ ಏಕಮೇವಾದ್ವಿತೀಯವಾದಂಥಾ ಪರವಸ್ತುವಿನಲ್ಲಿ ನಿರ್ಮಿತವಾದಂಥಾದ್ದು ಪಂಚಪ್ರಾಣೇಂದ್ರಿಯ, ಪಂಚಕರಣೇಂದ್ರಿಯ, ಪಂಚಭೂತೇಂದ್ರಿಯ, ಪಂಚ ತತ್ವೇಂದ್ರಿಯ—ಇಂತೊಪ್ಪುವಂಥ ಇಂದ್ರಿಯಂಗಳೊಳಗಾದ ಕಾರಣ ನಾಲ್ಕು, ತತ್ವ ಇಪ್ಪತ್ತನಾಲ್ಕರೊಡನಾದ ಶ್ರೀಮನ್ನಾರಾಯಣದೇವರ ನಾಭಿಕಮಲದಲ್ಲಿ ಬ್ರಹ್ಮ ಒಂದು ರೂಪಾದ, ಶಿವ ಒಂದು ರೂಪಾದ, ವಿಷ್ಣು ಬಹುರೂಪಾದ; ಬಾಲತ್ವ ಒಂದು ಬಹುರೂಪು, ಯವ್ವನವೊಂದು ಬಹುರೂಪು . . . . . . .

ಕೋಡಂಗಿ—

ಇಂತೀ ಓಂಕಾರಾಭ್ಯಾಸಯುಕ್ತವಾದಂಥಾ ಸಭೆಯಲ್ಲಿ ಮೇಳವೆಂಬುದು ಹ್ಯಾಗಿರಬೇಕಯ್ಯಾ ಎಂದರೆ—

೨೦ ಶ್ಲೋಕ

ಭಾಗವತ—

ನರ್ತಕೋ ನಾಟ್ಯಕಾರಶ್ಚ ಸಾಂಗೀತಿಸ್ತಾಳಧಾರಿಣೌ ।
ಮರ್ದಳ ಶ್ರುತಿ ಹಾಸ್ಯಕಾರಾಶ್ಚೈತನ್ಮೇಳಲಕ್ಷಣಂ ॥ ೫೬ ॥

ಕೋಡಂಗಿ—

ಇಂತೊಪ್ಪುವಂಥಾ ಸಪ್ತಾಂಗಮೇಳದವರು ನಿಲ್ಲುವಂಥಾ ಸ್ಥಳಭಾಗ ಹೇಗಿರಬೇಕಯ್ಯಾ ಎಂದರೆ—

೨೧ ಶ್ಲೋಕ

ಭಾಗವತ—

ವಾಮಭಾಗೇ ಮಾರ್ದಲಿಕೋ ದಕ್ಷಿಣೇ ತಾಳಧಾರಿಣೌ ।
ತನ್ಮಧ್ಯೇ ಚ ಪ್ರಸಂಗಜ್ಞಃ ತತ್ಪಾರ್ಶ್ವೇ ಸ್ತುತಿಪಾಠಕೌ ॥ ೫೭ ॥

ತನ್ಮುಖೇ ನರ್ತಕೀ ಚೈವ ತನ್ಮಧ್ಯೇ ಹಾಸ್ಯಕಾರಕಃ ।
ನಾಟ್ಯಾಚಾರ್ಯಃ ಪೂರ್ವಮುಖಸ್ತಿಷ್ಠಂತಿ ರಂಗಮಂಟಪೇ ॥ ೫೮ ॥

ಕೋಡಂಗಿ—

ಇಂತೀ ರಂಗಸ್ಥಳದಲ್ಲಿ ನಿಲ್ಲುವಂಥ ಭಾಗವತನ ಲಕ್ಷಣ ಹ್ಯಾಗಿರಬೇಕಯ್ಯಾ ಎಂದರೆ—

೨೨ ಶ್ಲೋಕ

ಭಾಗವತ—

ಭಕಾರೋ ಭಕ್ತಿಪೂರ್ವೇಣ ಗಕಾರೋ ಗರ್ವವರ್ಜಿತಃ ।
ವಕಾರೋ ವಾಕ್ಯಪಾಠೇನ ತಕಾರಸ್ತತ್ವನಿರ್ಣಯಃ ॥ ೫೯ ॥

ಕೋಡಂಗಿ—

ಇಂತೊಪ್ಪುವಂಥ ಭಾಗವತನು ಯಾರ್ಯಾರಿಗೆಲ್ಲ ವಂದನೆಯಂ ಮಾಡಬೇಕಯ್ಯಾ ಎಂದರೆ—

೨೩ ಶ್ಲೋಕ

ಭಾಗವತ—

ವಾಣೀಂ ಗಣಪತಿಂ ಗೌರೀಂ ಬ್ರಹ್ಮವಿಷ್ಣುಮಹೇಶ್ವರಾನ್ ।
ಅಂತರಿಕ್ಷಂ ಕ್ಷಿತಿಂ ಲಕ್ಷ್ಮೀಂ ಗುರೂಂಶ್ಚೈವೇಷ್ಟದೇವತಾಃ ॥ ೬೦ ॥

ಕೋಡಂಗಿ—

ಇಂಥಾ ಭಾಗವತನು ಬಡಿವಂಥ ತಾಳಲಕ್ಷಣ ಹ್ಯಾಗೆಂದರೆ—

೨೪ ಶ್ಲೋಕ

ಭಾಗವತ—

ಚಚ್ಚತ್ಪುಟೋ ತ್ರ್ಯಶ್ರತಾಳೋ ದರ್ಪಣಃ ಕುಡುಕಸ್ತಥಾ ।
ಅಭಂಗೋ ಮುದ್ರಿತಶ್ಚೈವ ಷಡೇತೇ ಶಿವನಂದನಃ (ಸಮ್ಮತಾಃ) ॥ ೬೧ ॥
ಧ್ರುವೋ ಮಟ್ಟೋ ರೂಪಕಶ್ಚ ಜಂಪಾ ತ್ರಿಪುಡಮೇವ ಚ ।
ಅಷ್ಟತಾಳ್ಯೈಕತಾಳೌ ಚ ಸಪ್ತತಾಲಾಃ ಪ್ರಕೀರ್ತಿತಾಃ ॥ ೬೨ ॥

ಕೋಡಂಗಿ—

ಇಂತೀ ತಾಳಮೇಳಕ್ಕೊಪ್ಪುವ ಮೃದಂಗಲಕ್ಷಣ ಹೇಗಯ್ಯಾ ಎಂದರೆ—

೨೫ ಶ್ಲೋಕ

ಭಾಗವತ—

ಸೂರ್ಯಚಂದ್ರಕೃತೇ ಚರ್ಮದ್ವಿಭಾಗೇ ಕರ್ಣಮಂಡಿತೇ ।
ಮಾನುಷಾರ್ಧಪ್ರಮಾಣೇನ ಶುದ್ಧಮರ್ದಲಮುಚ್ಯತೇ ॥ ೬೩ ॥

ಕೋಡಂಗಿ—

ಇಂಥಾ ಮದ್ದಳೆ ಸಮೇತವಾಗಿ ನಿಲ್ಲುವಂಥ ಶ್ರುತಿಲಕ್ಷಣ ಹೇಗಯ್ಯಾ ಎಂದರೆ—

೨೬ ಶ್ಲೋಕ

ಭಾಗವತ—

ಶ್ರುತಿಕಾಲ ಪ್ರಮಾಣೇನ ಸ್ವರಜ್ಞಾನಂ (ಸ್ಥಾನಂ) ತಥೈವಚ ।
ನಲಕಾಶೋದ್ಭವಂ ಚೈವ ನಾಲಿಕಾ ಶ್ರುತಿರುಚ್ಯತೇ ॥ ೬೪ ॥

ಕೋಡಂಗಿ—

ಇಂತೀ ತಾಳ ಮದ್ದಳೆ ಶ್ರುತಿಸಮೇತವಾದ ರಂಗಸ್ಥಳದಲ್ಲಿ ನಿಲ್ಲುವಂಥ ಹಾಸ್ಯಗಾರನ ಲಕ್ಷಣ ಹೇಗಯ್ಯಾ ಎಂದರೆ—

೨೭ ಶ್ಲೋಕ

ಭಾಗವತ—

ಸಭಾನಾಯಕಭಾವಜ್ಞಃ ಸರ್ವಭಾಷಾವಿಶಾರದಃ ।
ಪರಿಹಾಸಕಥಾಭಿಜ್ಞೋ ವಿಶೇಷೋ ಹರಿದೇಹಿತಾ ॥ ೬೫ ॥

ಕೋಡಂಗಿ—

ಇಂತೊಪ್ಪುವಂಥ ಹಾಸ್ಯಕಾರ ತಾಳ ಮೇಳ ಸಂಗೀತಂಗಳಿಂದ ರಂಗಮಂಟಪದಲ್ಲಿ ಆಡಿಕೊಡುವಂಥ ನೃತ್ಯಲಕ್ಷಣ ಹ್ಯಾಗಿರುವುದಯ್ಯಾ ಎಂದರೆ—

೨೮ ಶ್ಲೋಕ

ಭಾಗವತ—

ಪಾದಸ್ಥಾನಕಚಾರಾಸ್ತು ಮಂಡಲಂ ಕರಣಂ ತಥಾ ।
ಅಂಗಹಾರೋ ದೃಷ್ಟಿ ಹಸ್ತ ಶಿರೋ ಬಾಹು ಸುಶಿಕ್ಷಿತಂ ॥ ೬೬ ॥

ಯತೋ ಹಸ್ತಸ್ತತೋ ದೃಷ್ಟಿರ್ಯತೋ ದೃಷ್ಟಿಸ್ತತೋ ಮನಃ ।
ಯತೋ ಮನಸ್ತತೋ ಭಾವ ಇತ್ಯೇವಂ ನೃತ್ಯಲಕ್ಷಣಂ ॥ ೬೭ ॥

(ಕೋಡಂಗಿಯೂ ಭಾಗವತರೂ ಒಟ್ಟಿಗೆ ಹೇಳುವ ಮಾತು)

ಇಂತೀ ತಾಳ ಮದ್ದಳೆ ಶ್ರುತಿ ಹಾಸ್ಯಗಳಿಂದ, ಅಂಧಕಾಸುರನ ಎದೆಯಲ್ಲಿ ಹರ ನಾಟ್ಯವಾಡಿದ; ಕಾಳಿಯಾ ಹೆಡೆಯಲ್ಲಿ ಹರಿ ನಾಟ್ಯವಾಡಿದ; ದೇವೇಂದ್ರನಾ ಒಡ್ಡೋಲಗದಲ್ಲಿ ರಂಭೆ ಊರ್ವಶಿ ಮೇನಕೆ ತಿಲೋತ್ತಮೆಯರು ಆಡಿದಂಥ ನಾಟ್ಯಂಗಳನ್ನು ತೋರ್ಪನೇ ತೋರ್ಪಡೆನ್ನಳವಲ್ಲ—ಕಬ್ಬು ಡೊಂಕಾದರೂ ರುಚಿಡೊಂಕಲ್ಲ, ಪುಷ್ಪ ಡೊಂಕಾದರೂ ಪರಿಮಳ ಡೊಂಕಲ್ಲ, ನಾವು ಸಣ್ಣವರಾದರೂ ವಾಗ್ದೇವಿ ಸಣ್ಣವಳಲ್ಲ; ಅರೆಬಾಸೆ ಎಳೆಬುದ್ಧಿ ತೊದಲುನುಡಿಯಾದಾಗ್ಯೂ ಶ್ರೀ ಲಕ್ಷ್ಮೀ ನಾರಾಯಣಸ್ಮರಣೆಯಲ್ಲದೆ ಮತ್ತೊಂದಿಲ್ಲ ಕಂಡ್ಯಾ; ತಾಯ ಮುಂದೆ ಶಿಶುಗಳು ಕುಣಿದಾಡುವೋಪಾದಿಯಲ್ಲಿ, ಗುರುಗಳ ಮುಂದೆ ಶಿಷ್ಯರು ಪದ್ಯವೊಪ್ಪಿಸುವೋ ಪಾದಿಯಲ್ಲಿ, ವಿನಾಯಕದೇವರ ಮುಂದೆ ಭಕ್ತರು ಟೊಂಕನಿಕ್ಕುವೋಪಾದಿಯಲ್ಲಿ; ಕಾಮಂಗೆರೂಪುದೋರಿದಂತೆ, ಕಮಲಕ್ಕೆ ಬೆಳಗಾದಂತೆ, ಕಾಮಧೇನು ಕಲ್ಪತರುವಿಗೆ ಸರಿಸಮಾನಯುಕ್ತವಾದಂಥಾ ಸಭೆಗೂ ಸಭಾಪತಿಗೂ ವಿಜಯೋಭವ—ದಿಗ್ವಿಜಯೋಭವ ॥

(ಕೋಡಂಗಿಗಳು ಮೃದಂಗತಾಳಕ್ಕೆ ಕುಣಿಯುತ್ತಾರೆ)

ಕಿಟತಕ ದಾಂದೀಂ–ದದಿಗಿಣ ದಾಂದ–ದ್ದ ದಿಗಿಣ ತದ್ದಿ–ಕಿಟತಕ ಧಿಕಿತಕ–ತರಿಕಿಟ
ತಾತೈ—ತತೋಂಗತರಿಕಿಟ–ತೋಂಗತೋತಾತೈ–ತಕ ತೋಂಗ, ತದಿಗಿಣತೋ॥

೨೯ ಶ್ಲೋಕ

ದುರ್ಲಭೋ ಮಾನುಷೋ ದೇಹೋ ದೇಹಶ್ಚ ಕ್ಷಣಭಂಗುರಃ ।
ತತ್ರಾಪಿ ದುರ್ಲಭಂ ಲೋಕೇ ವೈಕುಂಠಪ್ರಿಯದರ್ಶನಂ ॥ ೬೮ ॥
ವಿಷ್ಣೋರ್ಗಾನಂ ಚ ಗೀತಂ ಚ ನಟನಂ ಚ ವಿಶೇಷಿತಂ ।
ಬ್ರಹ್ಮಬ್ರಾಹ್ಮಣ್ಯಜಾತೇನ ಕರ್ತವ್ಯಂ ನಿತ್ಯಕರ್ಮಣಿ ॥ ೬೯ ॥
ಕಾಲಕ್ಷೇಪೋ ನ ಕರ್ತವ್ಯಃ ಕ್ಷೀಣಮಾಯುರ್ದಿನೇದಿನೇ ।
ಕೃತಾಂತಸ್ಯ ಕೃಪಾ ನಾಸ್ತಿ ಕರ್ತವ್ಯಂ ಹರಿಕೀರ್ತನಂ ॥ ೭೦ ॥
ರಾಮಭದ್ರಾ ಗೋವಿಂದಾ । ಹರೇ ರಮಣಾ ಗೋವಿಂದಾ ।
ಅಚ್ಯುತಾನಂತಾ ಗೋವಿಂದಾ । ರಾಮ ರಾಘವ ಗೋವಿಂದಾ ॥
ಹತ್ತವತಾರಾ ಗೋವಿಂದಾ । ಮತ್ತೂ ಮತ್ತೂ ಗೋವಿಂದಾ ॥ ೭೧ ॥

(ಬಾಲಗೋಪಾಲವೇಷಗಳ ಪ್ರವೇಶ-ಇವು ನಿತ್ಯವೇಷಗಳೆಂದೂ ಕರೆಯಲ್ಪಡುತ್ತವೆ.
ಆಗ ಭಾಗವತನು ಕೆಳಗಿನ ವೃತ್ತಗಳನ್ನು ಹಾಡುವುದು.)

೩೦ ಶಾರ್ದೂಲವಿಕ್ರೀಡಿತ ವೃತ್ತ

ಆದೌ ದೇವಕದೇವಿಗರ್ಭಜನನಂ ಗೋಪೀಕುಲೇ ವರ್ಧನಂ
ಮಾಯಾಪೂತನಿಜೀವಿತಾಪಹರಣಂ ಗೋವರ್ಧನೋದ್ಧಾರಣಂ ।
ಕಂಸಚ್ಛೇದನ ಕೌರವಾದಿಮಥನಂ ಕುಂತೀಸುತಾಪಾಲನಂ
ಏತದ್ಭಾಗವತಂ ಪುರಾಣಕಥನಂ ಶ್ರೀಕೃಷ್ಣಲೀಲಾಮೃತಂ ॥ ೭೨ ॥

೩೧ ಶ್ಲೋಕ

ನಾರಾಯಣ ಜಗನ್ನಾಥ ಶಂಕಚಕ್ರಗದಾಧರ
ಲಕ್ಷ್ಮೀಕಾಂತ ಜಗನ್ಮೋಹೀ ಮುಕುಂದೋ ಗರುಡಧ್ವಜ ॥ ೭೩ ॥

೩೨ ಪದ—ಆದಿತಾಳ

ಹರೇ, ರಮಣಾ । ಗೋವಿಂದಾ,।
ನಾರಾಯಣ ಹರಿ । ಕೇಶವ ಮಾಧವ ।
ಮುಕುಂದ ಮುರಾರೇ । ಅಚ್ಯುತ ಕೃಷ್ಣಾ ।
ಹರೇ, ರಮಣಾ । ಗೋವಿಂದ ॥ ೭೪ ॥

ತಾತ್ತೈತ ತತ್ತಾಂ । ತಕ್ಕಿಟ ದಿಮಿತಕ । ತಳಾಂಗು ತೋ– ।
ತರಿಕಿಟ ದಿಮಿತಕ । ತಳಾಂಗು ತ್ತೋ– । ತಕ್ಕಿಟದೀಂ । ತರಿಕಿಟದೀಂ ।
ತ್ತೈತಾ ತ್ತೈತತ್ತಾಂ— । ತ್ತೈತಾ ತದಿಗಿಣತೋ ॥ ೭೫ ॥

೩೩ ಶಾರ್ದೂಲವೃತ್ತ

ಹೇ ಗೋಪಾಲಕ ಹೇ ಕೃಪಾಜಲನಿಧೇ ಹೇ ಸಿಂಧುಕನ್ಯಾಪತೇ ।
ಹೇ ಕಂಸಾಂತಕ ಹೇ ಗಜೇಂದ್ರಕರುಣಾವಾರೀಣ ಹೇ ಮಾಧವ ।
ಹೇ ರಾಮಾನುಜ ಹೇ ಜಗತ್ರಯಗುರೋ ಹೇ ಪುಂಡರೀಕಾಕ್ಷಮ ।
ಹೇ ಗೋಪೀಜನನಾಥ ಪಾಲಯ ಪದಂ ಧ್ಯಾಯಾಮಿ ಚಿತ್ತೇ ಸದಾ ॥ ೭೬ ॥

೩೪ ಶ್ಲೋಕ

ವಿಷ್ಣುಶಕ್ತಿಸಮುದ್ಭೂತೇ ಶಂಖವರ್ಣೇ ಮಹೀತಲೇ ।
ಅನೇಕರತ್ನ ಸಂಭೂತೇ ಭೂಮಿದೇವಿ ನಮೋಸ್ತುತೇ ॥ ೭೭ ॥

ಮತ್ಸ್ಯ ಕೂರ್ಮ ವರಾಹಶ್ಚ ನಾರಸಿಂಹಶ್ಚ ವಾಮನಃ ।
ಭಾರ್ಗವೋ ರಾಮ ಕೃಷ್ಣೌ ಚ ಬುದ್ಧಃ ಕಲ್ಕೀತಿ ತೇ ದಶ ॥ ೭೮ ॥

ವಾಕ್ಯ ॥ ವಿಶ್ವಾಮಿತ್ರ ವಸಿಷ್ಠ ಗೌತಮ ಕಣ್ವ ಪರಾಶರ ಕಾಶ್ಯಪಾದಿ ಋಷೀನ್ ಸರ್ವಾನಭಿವಂದಯೇ ।

೩೫ ಶ್ಲೋಕ

ಇಂದ್ರಾಗ್ನೀ ಚ ಯಮಂ ಚೈವ ನೈಋತಿಂ ವರುಣಂ ತಥಾ ।
ವಾಯವ್ಯಂ ಚ ಕುಬೇರಂ ಚ ಈಶಾನ್ಯಂ ಚಾಭಿವಂದಯೇ ॥ ೭೯ ॥

೩೬ ಆದಿತಾಳ

ಕೋಡಂಗಿ—

ಹರಿನಾರಾಯಣ ಗೋವಿಂದಾ । ಕೇಶವ ಮಾಧವ ಗೋವಿಂದಾ ।
ದುರಿತನಿವಾರಣ ಗೋವಿಂದಾ । ದಶರಥನಂದನ ಗೋವಿಂದಾ ॥
ಸೀತಾವಲ್ಲಭ ಗೋವಿಂದಾ । ತಾಟಕಮರ್ದನ ಗೋವಿಂದಾ ।
ಕಬಂಧಬಂಧನ ಗೋವಿಂದಾ । ಶಬರೀಮನೋಹರ ಗೋವಿಂದಾ ॥
ವಾಲೀನಿಗ್ರಹ ಗೋವಿಂದಾ । ರಾವಣಮರ್ದನ ಗೋವಿಂದಾ ।
ಕರಿರಾಜಪ್ರಿಯ ಗೋವಿಂದಾ । ಕರುಣಾಸಾಗರ ಗೋವಿಂದಾ ॥
ಕೃಷ್ಣಾ ರಾಮಾ ಗೋವಿಂದಾ । ವೃಷ್ಣಿಕುಲೋದ್ಭವ ಗೋವಿಂದಾ ।

ಹತ್ತವತಾರಾ ಗೋವಿಂದಾ । ಮತ್ತೂ ಮತ್ತೂ ಗೋವಿಂದಾ ॥
ಇತ್ತ ಸೋಡೋ ಗೋವಿಂದಾ । ಅತ್ತೀಮಗನೇ ಗೋವಿಂದಾ ।
ಆ ಹೋ—ಹೋ, ಶ್ರೀರಮಾರಮಣ ಗೋವಿಂದಾ, ಗೋ—ವಿಂದ ॥ ೮೦ ॥

೩೭ ಮಾಲಿನೀವೃತ್ತ

ಭಾಗವತ—

ಮದಗಜವದನಂ ತಂ ವಿಘ್ನವಿಚ್ಛೇದದಕ್ಷಂ
ಸರಸಿಜಭವಜಾಯಾಂ ಭಾರತೀಂ ಸೋಮಮೀಶಂ
ನಿಶಿಚರಕುಲಕಾಲಂ ರಾಘವಂ ಜಾನಕೀಂ ಚ
ಪ್ರತಿದಿನಮತಿಭಕ್ತ್ಯಾ ನೌಮಿ ವಾಲ್ಮೀಕಿಮಾರ್ಯಂ ॥ ೮೧ ॥

(ಕಥಕಳಿ ರಾಮಾಯಣದಲ್ಲಿರುವ ವಂದನಶ್ಲೋಕ)

೩೮ ರಾಗ ಕೇದಾರಗೌಳ—ಆದಿತಾಳ

ಹರಿಹರ । ವಿಧಿಸುತ । ಅಮರಪೂ । ಜಿತು ರೇ । ವಾಮನ । ರೂಪ— ।
ಏಕದಂತ । ಚತುರಾದ್ಭುತ । ಬಲ ಹೇ । ಲಂಬೋ । ದರು ರೇ— ।
ವಾರಣಕರಣ । ನಾಗಾಭರಣ । ಕಾಮಿತಫಲದಾ । ಯಕ ಗಣನಾಥ ॥ ೮೨ ॥

(ಕಥಕಳಿ ತೋಡಯಮಂಗಲದ ಮೊದಲ ಪದ್ಯ)

೩೯ ವಂಶಸ್ಥವೃತ್ತ

ಗಜಾನನಂ ಭೂತಗಣಾದಿಸೇವಿತಂ
ಕಪಿತ್ಥ ಜಂಬೂಫಲಸಾರಭಕ್ಷಿತಂ
ಉಮಾಸುತಂ ಶೋಕವಿನಾಶಕಾರಣಂ
ನಮಾಮಿ ವಿಘ್ನೇಶ್ವರಪಾದಪಂಕಜಂ ॥ ೮೩ ॥

(ನಿತ್ಯವೇಷಗಳು ಭಾಗವತನ ಬಳಿಯ ಪೀಠದ ಮೇಲಿಟ್ಟಿರುವ ಶ್ರೀರಾಮನ ಕಿರೀಟಕ್ಕೂ ಅದರ ಪಕ್ಕದಲ್ಲಿಟ್ಟಿರುವ ಮೇಳದ ಗಣಪತಿಮೂರ್ತಿಗೂ ಆರತಿ ಎತ್ತುವುದು)

೪೦ ರಾಗ ಕಾಂಭೋಜಿ—ತ್ರಿವುಡೆತಾಳ ೨ ; ಮಟ್ಟೆ

ಗಜಮುಖ । ದವಗೆ ಗ । ಣಪಗೆ— । —ಜೆಲ್ವ ।
ತ್ರಿಜಗವಂ । ದಿತನಿಗಾ । ರತಿಯೆತ್ತಿ । ರೆ— ॥ ಪಲ್ಲವಿ ॥
ಒಳ್ಳಿತಾ । ದವಲು ತೆಂ । ಗಿನಕಾಯಿ । ಕಡಲೆಯ ।
ಎಳ್ಳುಂಡ । ಲಿಗೆ ಕಬ್ಬು । ಮೆಲುವವ । ಗೆ— ॥

ಬೆಳ್ಳಿಯ । ಹುರಿಗೆಜ್ಜೆ । ಗಳ ಕಟ್ಟಿ । ಕುಣಿವ ಕಿರು ।
ಡೊಳ್ಳಿನ । ಗಣಪಗಾ । ರತಿಯೆತ್ತಿ । ರೆ— ॥ ೮೪ ॥

ದೇವತೆ । ಗಳ ಕಯ್ಯ । ಕಪ್ಪವ । ಕೊಂಬಗೆ ।
ದಾವಾಗ್ನಿ । ಯಂದದಿ । ಮೆರೆವವ । ಗೆ— ॥
ಆವಗಂ । ಮನದಲ್ಲಿ । ನೆನೆವರಿ । ಷ್ಟಾರ್ಥವ ।
ನೀವ ಗ । ಣೇಶಗಾ । ರತಿಯೆತ್ತಿ । ರೆ— ॥ ೮೫ ॥

ಮಟ್ಟೆತಾಳ ೪ (ಪ್ರತಿ ಎರಡನೆ ಅಕ್ಷರವನ್ನು ದೀರ್ಘ ಉಚ್ಚರಿಸಬೇಕು)

ಕರ । ದೊಳು । ಪರ । ಶುಪಾ । ಶಾಂ । ಕುಶ । ಧರ । ನಿಗೆ ।
ಹರು । ಷದಿ । ಭಕು । ತರ । ಪೊರೆ । ವವ । ಗೆ— ।
ಉರ । ಗಭೂ । ಷಣ । ಸುಕು । ಮಾರ । ಗಜ । ವದ । ನನ ।
ಚರ । ಣಕ । ಮಲ । ಕಾ — । ರತಿ । ಯೆತ್ತಿ । ರೆ— ॥ ೮೬ ॥

೪೧ ಪದ—ಏಕತಾಳ ೩, ಅಷ್ಟತಾಳ ೧

ನೆನೆಯಿರೊ । ಜನರೆಲ್ಲ । ಗುಣಯುತ । ನ— ।
ಘನಮೂರ್ತಿ । ಮದಪೂರ । ಗಣನಾಥ । ನ— ॥ ಪಲ್ಲವಿ ॥

ದೇವರ । ದೇವ ಕೃ । ಪಾಕರ । ನ— ।
ಪಾವನ । ಚರಿತ ಪು । ಣ್ಯೋದಯ । ನ— ॥
ಭಾವಜ । ವಿಷಯಕೆ । ಸಿಲುಕದ । ನ— ।
ಕೋವಿದ । ಗಿರಿಜೆಯ । ವರಸುತ । ನ— ॥ ೮೭ ॥

(ಅಷ್ಟತಾಳ)

ಚಂದ್ರಂಗೆ । ಶಾಪವ । ನಿತ್ತವ । ನ— ।
ಚಂದದಿಂ । ದೊಪ್ಪುವ । ಗಜಮುಖ । ನ— ॥
ಚಂದನ । ಕುಂಕುಮ । ಲೇಪಿತ । ನ— ।
ಇಂದ್ರಾದಿ । ಭಕುತರ । ಸಲಹುವ । ನ— ॥ ೮೮ ॥

ಸುರಮುನಿ । ನಮಿತ ಸ । ರ್ವೇಶ್ವರ । ನ— ।
ಭರಿತಸಿ । ದ್ಧಿಯನೀವ । ಶುಭಕರ । ನ— ॥
ಪರಮಾತ್ಮ । ದುರಿತಭ । ಯಂಕರ । ನ— ।

(ಏಕತಾಳ)

ವರ ಮದ । ಪೂರ ವಿ । ಘ್ನೇಶ್ವರ । ನ — ॥ ನೆನೆಯಿರೊ ॥ ೮೯ ॥

೪೨ ಪದ—ಅಷ್ಟತಾಳ ೧, ಏಕತಾಳ ೪

ಗಜಮುಖ | ನಾಥಾ | ತ್ರಿಜಗವಂ | ,ದಿತ— |
ಸುಜನರ | ಧಾತಾ | ಕೀರ್ತಿವಿ | ಖ್ಯಾತ— |
ಮೂಷಿಕ | ವಾಹನ | ಮೋದಕ | ಹಸ್ತ— |
ಚಾಮರ | ಕರ್ಣ ವಿ | ಲಂಬಿತ | ಸೂತ್ರ— |
ವಾಮನ | ರೂಪ ಮ | ಹೇಶ್ವರ | ಪುತ್ರ— |
ಸಿದ್ಧಿವಿ | ನಾಯಕ | ಪಾದ ನ | ಮಸ್ತೇ || ೯೦ ||

೪೩ ಗಣಪತಿ ಕೌತಕ (ಕವುತಕಿತ) ಆದಿತಾಳ

ತಾಂ ದಿಗಿದಿಗಿತ್ತೈ ತಿತ್ತಿತ್ತೈ—ದಾಂದಿಗಿ ತತ್ತರಿ ತತ್ತತ್ತಾಂ—
ತತ್ತಾಂ ತಿರಿಕುಟ ತೋಂಗುತಕ—ತಕ್ಕಿಟ ಕಿಟತಕ ತೋಂಗುತಕ—
ತರಿಕಿಟ ಗಣಪತಿ ಕೌತಕಿತ—ಹುತ್ತಾಂಹುತಕಿಟ ತೋಂಗುತಕ— ||
ಅರಿದಿರು ಮರುದಿರು | ವಿಘ್ನವಿನಾಯಕ | ಯಿನಕುಡ (?) ಅರುಳಿಯ |
ಗಣಪತಿ ಜೇ ಜೇ | ತಕ್ಕಿಟ ಉದರಿಕಿ | ಟಂ— ಕಿಣ್ಣಾಂ |
ತದಿಕ್ಕು ತುದಿಕ್ಕು | ಅನೆವರ್ ಕತೆಯರ್ | ತಕ್ಕಿಟ ಕಿಟತಕ | ತೋಂಗುತಕ— |
ದೇವರು ತಿರುಮುಗ | ತಾಂಕಿಟ ಕಿಟತಕ | ತೋಂಗುತಕ— |
ಗಣಪತಿ ಕವುತಂ | ಕತೆಯರ್ ವಿನೆಯರ್ | ಉಗ್ರುದಾಂ ಉಗ್ರುದೀಂ |
ತಕ್ಕು ದಿಕ್ಕು ತಕ್ಕುಟ್ಟೀಂ— | ತಕ್ಕಿಟಕಿ ಟತಕತೋ— || ೯೧ ||

(ಕೆಳಗಿನ ಸಾಲು ಹಾಡುತ್ತಿರುವಾಗ ಬಾಲಗೋಪಾಲರು ರಂಗಸ್ಥಳದಲ್ಲಿ ಪ್ರದಕ್ಷಿಣೆ ಸುತ್ತಿ ಸಭೆಗೆ ನಮಸ್ಕರಿಸಿ ಹೋಗುವುದು. ಆ ಮುಂದೆ ಷಣ್ಮುಖನ ವೇಷಕ್ಕೆ ತೆರೆ ಹಿಡಿಯುವುದು)

ಓ ದೇ,ವಾ, ದೇವೋ, | ಓ ದೇವಾ, ದೇವನಲ್ಲ || ವೋ— |
ಓ ದೇ,ವಾ, ದೇ,ವಾ ದೇವಾ |,ನೇ—ತೋಂಗತೋತಕ
ತರಿಕಿಟಕಿಟತಕ | ತಾತ್ತೈತಕ ತೋಂಗುತಕ— ತೋಂಗತೋಂಗ ತೋ |
ತಕತದಿಗಿಣತೋ | ಸ,ತ್ಯಸಂಭವ | ಸುರಮುನಿವಂದಿತ | ಪಾದಾಂಬುಜನೇ |
ವಂದೇ ಶಂಕರ | ವರದ ಗಣೇಶಾ | ಗಜಮುಖನೇ— ||
ತ,ದ್ದಿಮಿತಕಿಟ ದಿಂದತ್ತೈ | ತ್ರಾದ್ದಿಮಿತಕಿಟ ತಕದಿಮಿತ್ತೈ | ತಾನಂತಾದೀಂ ದಿಮಿ
ತಕಿಟ ದಿಮಿತ || ೯೨ ||

(ಎಡೆ ಸ್ತುತಿ, ಕೋಡಂಗಿ ಒಬ್ಬ ಮಾತ್ರ ರಂಗಸ್ಥಳದಲ್ಲಿರುತ್ತಾನೆ)

೪೪ ರಾಗ ನಾಟಿ—ಜಂಪೆತಾಳ ೨

ಪರಿಪಾಹಿ |ಮಾಂ ರಾಮ | ಪರಿಪಂಥಿ | ಜನಭೀಮ |
ಪರಿಣಮಿತ | ಗುಣಧಾಮ | ಪ್ರಣತರಭಿ | ರಾಮ— || ೯೩ ||

ಸುರರಾಜ | ಸುತಜಾಲ | ಸುಮುಖಜನ | ಗುಣಶೀಲ |
ನರಕಭಯ | ಹರದೇವ | ನರಸೃಗ ಸಂ | ಜೀವ— || ೯೪ ||

ವರದ ರಘು | ಕುಲಕಾಲ | ವಾರಣ | ಧ್ವಂಸಿ ವರ |
ವಂಚಿಬಾ | ಲಕ ವೀರ | ಕೇರಳವಿ | ಭುಸ್ತುತ || ೯೫ ||

ಮಾತಂಗ | ವರಗಮನ | ಮಾನಸ ವಿ | ಮೋಚನ (?) |
ಶ್ರೀರಾಮ | ರಘುವೀರ | ಜಯಜಯಾ | ಜಯತು— || ೯೬ ||

೪೫ ರೂಪಕತಾಳ

ಪಂಪಾರ್ಬಲ | ಪಯನೂರ್ ಬಲ | ಪಂಪರ್ ಮಲ | ಯತಿಯಂ |
ಅಂಬಾರ್ಚಿತ | ಶುಭಕೇರಳ | ನಂಬಾಂಚಿತ | ಶುಭಗಂ |
ಅಂಪಡಿಗಂ | ನಾಲ್ಪ್ರೋರಿನ್ | ಪೋರಂಬಂ | ಪುರಿಯುವಲಂ |
ಅಂಬುಜದಳ | ನಯನಂ ತಾ | ನಂಚಿತ ಸುರ | ಕಾಯಂ—(?) || ೯೭ ||

ನಂದಿಯ ಬುವಿ | ಚಂದಿರನುಂ . . . . . . (?)

೪೬ ಅಷ್ಟತಾಳ

ಬಾಲರಾಜ | ವಂಶನೃಪ | ಪಾಲಿಕೇ ಶೂ | ಲೆ ಕಾಪಾಲೇ |
ಪಾಲಿನೀ | —ಸಿಂಹ | ವಾಹಿನೀ | —ಕುಲಿಶ | ಧಾರಿಣೀ | —ಶತ್ರು |
ಹಾರಿಣೀ | —ಅಂಬ |
ಅಂಬಿಕೇ | —ಜಗ | ದಂಬಿಕೇ | —ಶ್ರೀ ಮೂ | ಕಾಂಬಿಕೇ || ೯೮ ||

ಅಂಬುಜ | ನಯನೇ | ಅಮರವಿ | ನುತೆಜಗ |
ದಂಬುಜ | ನೀರಜ | ಕೋರೇ— ||
ಅಂಬ ಮಾಂ | ಪಾಹಿ— | ಪಾರ್ವತೀ | —ಜಗ |
ದಂಬ ಮಾಂ | ಪಾಹಿ ಮೂ | ಕಾಂಬಿಕೇ | ಜಗದಂಬಿಕೇ || ೯೯ ||

(ಷಣ್ಮುಖನ ವೇಷ ಕುಣಿಸುವುದು)

೪೭ ತಿರುವು

ಗಣಪತಿ ಸಭೆಗೇಳ್ತುಂದಂ । ವೇದ ನಾಯಕನ್‌ಗಾಲೇ (ಕಂಗಾಲೇ) ।
ಗುಣಮುರ್ಳ್ಳನರುಮುಗತ್ತಾಲ್ । ವಳ್ಳಿನಾಯಕನ್ ಕಣವನ್ (ಕುಣಿಯೆ) ।
ಗುಣಮುಡನ್ (ಮುಳ್ಳನ್) ಮೈಲಾನೇರಿಸಲ್ । ಚೂರಿಯನ್ ವಿಳಂ
ಗುನ್ನವನ್ । ವಿನೆಯೆ (ಯೊ) ಡುಂ ವೀರವೇಷನ್ । ಎಡಮುಡುಂ ।
ತೊಂದಿನಾಲೇ(ನೇ) ॥ ತಕ್ಕತ್ತ್ರೋದಿಂಪದಿಂದತ್ತಾಂ । ತಕ್ಕತ್ತ್ರೋದಿಕ್ಕ
ತ್ತ್ರೋದಿಂದ ದಿಂದತ್ತಾಂ । ದಿಕಿತೋ ತಕತೋ ದಿಂದ ದಿಂದ । ದಿಕತೋ
ದಿಂದ ದಿಂದ । ತದ್ದಿಕಿತಕ ತೋಂಗುತಕ ದಿಕಿ ತ । ತಾ ತೈತಾ । ತೈತಾ— ।
ತೋಂಗುತಕ ದದಿಗಿಣ । ತೋಂಗ ತೈತಾ ತೈತಾ । ತೋಂಗುತಕ
ದದಿಗಿಣತೋ ॥ ೧೦೦ ॥

೪೮ ರಾಗ ಕೇದಾರಗೌಳ—ಆದಿತಾಳ, ತಿತ್ತಿತ್ತೈ, ತ್ರಿವುಡೆ

,ಕುಂಡಲ ಮಣಿಭೂಷ । ಣ—ಹೇ । ಸುಬ್ಬರಾಯ ।
,ಮಂಡಲ ನಾ,ಯಕ । ನೇ— । — ॥
,ಕಂಡು ನಾ ವಂದಿಸುವೆ । ನು—ಹೇ । ಸುಬ್ಬರಾಯ ।
,ಕೊಂಡು ನೀ ಸಲಹೆನ್ನ । ನು— । — ॥ ೧೦೧ ॥

,ಬಾಲಾರ್ಕಕೋಟಿ ಪ್ರಕಾ । ಶ—ದೇವ । ಸುಬ್ಬರಾಯ ।
,ಲೀಲಾವಿನೋ,ದ ದೇ । ವ — । — ।

(ತಿತ್ತಿತ್ತೈ)

,ಕಾ । ಲ ಕಾ । ಲಕೂ । ನಾ ನಿ । ನ್ನ— । —ಸೇ । ವೆಯ । ಮಾಡಿ ।
,ಲೀ । ಲೆಯ । ಕೊಂಡಾ । ಡುವೆ । ನು— । —ಶ್ರೀ । ಸುಬ್ಬ । ರಾಯ ॥
,ಮೈ । ಲು ವಾ । ಹನ । ವನೇ । ರಿ— । —ಚೌ । ಲಿಯ । ಪಿಡಿದು ।
ಕುಂಡ । ಲ ವಿ । ಳಂಜು । ನ್ನ ದೇ । ವ— । —ವೇ ।
ಲಾಯುಧಾಯ ॥ ೧೦೨ ॥

(ಭೈರವಿ—ತ್ರಿವುಡೆತಾಳ)

ಪಾವನ । ನವರತ್ನ । ಹೇಮ ಮ । ಕುಟಮಾಲ ।
ಪಾರ್ವತಿ । ವರಪುತ್ರ । ನೆ—ಹೇ । ಸುಬ್ಬರಾಯ । (ಉಡಾಪಿ)
ದಿಮಿ ದಿಮಿ । ದಿಮಿಕಿಟ । ಕಿಟತಕ । ತತೋಂಗ ತೈ, । ತತೋಂಗ ದಿಮಿಕಿಟ ।
ತಕತ್ತೈತ್ತೈ, । ತಾತಿತ್ತೈತಾ ॥ ೧೦೩ ॥

(ಏಕತಾಳ ೩)

ಪಕ್ಷಿವಾ । ಹನ ದೇವ । ಪರಮಪುರುಷ । ಯೆಲ್ಲಲಾಲಿ ।
ವಂದೇ ದೇವ । ದೇವರ ದೇವ । ಸುಬ್ಬರಾ, । ಯ— ।
ವಂದನೆಯ । ಮಾಳ್ಪೆನಯ್ಯ । ಸುಬ್ಬರಾ, । ಯ— ।

(ಷಣ್ಮುಖನ ವೇಷದೊಂದಿಗೆ ಕೋಡಂಗಿಯೂ ಮುಗಿತಾಯ ಕುಣಿಯುತ್ತಾನೆ)

ತೋಂಗ ತೋ, । ತದ್ದಿಮಿತಕ ದದಿಗಿಣತೋ । ತದ್ದಿಮಿತಕ ।
ದದಿಗಿಣತೋ ತ । ದ್ದಿಮಿತಕ ದದಿಗಿಣತೋ ॥ ೧೦೪ ॥

(ಷಣ್ಮುಖನ ವೇಷ ರಂಗಸ್ಥಳದಿಂದ ಹೊರಟುಹೋಗುವುದು, ಆಗ ಕೋಡಂಗಿ ಹಾಡುವುದು)

ವಂದನೆಯ । ಮಾಡುವೆನ್ನೆ । ಸುಬ್ಬರಾ, । ಯಾ—ನೀ ।
ಬಂದ ಹಾಗೇ । —ಹೋಗಯ್ಯ । ಸುಬ್ಬರಾ, । ಯ— ॥

(ಅನಂತರ ಈಶ್ವರನ ವೇಷ ಕುಣಿಸುವುದು)

೪೯ ವಸಂತತಿಲಕವೃತ್ತ

ಗಂಗಾತರಂಗ ಕಮನೀಯ ಜಟಾಕಲಾಪಂ
ಗೌರೀನಿರಂತರ ವಿಭೂಷಿತ ವಾಮಭಾಗಂ
ನಾರಾಯಣಪ್ರಿಯಮನಂಗಮದಾಪಹಾರಂ
ವಾರಾಣಸೀಪುರಪತಿಂ ಭಜ ವಿಶ್ವನಾಥಂ ॥ ೧೦೫ ॥

(ಕೋಡಂಗಿ ಕುಣಿಯುತ್ತಾನೆ)

೫೦ ಏಕತಾಳ

ಹರನೇ ಶಿವನೇ । ಶಂಭೋ—ಭ । ವಾನೀಶಂಕರ । ಶರಣಯ್ಯಾ— ।
ಹರನೇ ಕುಣಿಯೆಂದು । —ಗಿರಿಜಾ । ವರನೇ ಕುಣಿಯೆಂದು । —ಶಿವಶಂ ।
ಕರನೇ ಕುಣಿಯೆಂ । ದು— । ನಮಃಶಿವಾಯ— । ನಮಃ ಶಿವಾಯ— ।
ಹರಹರ ಶಂಭೋ । ನಟನಾಲಂಕಾರ । ಅಗಸ್ತ್ಯ ಗೌತಮ । ಸೇವಿತಪಾದ— ।
ಅಂಧಕಭಂಜನ । ಚಂದ್ರಕಲಾಪ । ನಮಃ ಶಿವಾಯ । ನಮಃ ಶಿವಾಯ— ॥
ಥೈತಾ—ಧೀಂಕಿಟತಕದಿಮಿತಕದಿದ್ದಿನ್ನಾದಿದ್ದಿನ್ನಾದದಿಗಿಣತೋ ॥ ೧೦೬ ॥

(ಈಶ್ವರನ ವೇಷ ಬರುವುದು)

೫೧ ಪದ, ರಾಗ ಮೋಹನ—ಅಷ್ಟತಾಳ ೧

ಕಾ—ಣಿ । ರೇ ಕಮ । ಲಾಂಬಕಿ । ಯ—ಎನ್ನ ।
ಪ್ರಾ—ಣ । ನಾಯಕಿ । ಪಾರ್ವತಿ । ಯ—
ಏಣಾಂಕ । ವದನೆ ಯೆ । ನ್ನಗಲಿ ಪೋ । ದವಳ— ।
ಕಾಣದೆ । ನಿಲಲಾರೆ । ವೈ—ಪಾ । ರ್ವತಿಯ— ॥ ೧೦೭ ॥

ದಿತ್ತಾ ಕಿಟತಕ ದದಿಗಿಣದಿಂದತ್ತಾಂ—ತತ್ತತ್ತ ಧಿತ್ತತ್ತ ದದಿಗಿಣ ತೋ ।

ಕೋಡಂಗಿ—
ಹರಹರ ಶಂಭೋ ಪರಾಕು ನಂಜಿನ ಮಾಸೋಮಿ, ಗುಡ್ಡೆಬೆಟ್ಟದ ಈಸರದೇವರ ಪಾದಕ್ಕೆ—ನಮಸ್ತೇ, ಹಸ್ತೇ ಹಸ್ತೇ.

ಈಶ್ವರ—
ಸುಖಿಯಾಗಿರು ಕಂಡ್ಯಾ ಭಕ್ತನೇ.

ಕೋಡಂಗಿ—
ಬಂದವರೆಲ್ಲಾ ಹೇಳೋದು ಹಾಂಗೇ, ನಮ್ಮ ಕರ್ಮ ಧೂಳಿಲಿ ಹೊರಳಾಡೋದು ಹೀಂಗೇ. ಹರಕುಬಟ್ಟೆ ಬೂದಿಪುರ್ಸರ ಆಸೀರ್ವಾದ ಇವನ (ದೀವಟಿಗೆ ಹಿಡಿದಿರುವ ಆಳಿನ) ತಲೇಮೇಲೇ ಇರ್ಲಿ. (ಈಶ್ವರನ ಕಡೆಗೆ ತಿರುಗಿ) ಅದು ಬಿಡಿ, ಈಗ ನೀವು ಯಾರು? ನಿಮ್ಮಪ್ಪ ಯಾರು? ಇರುವಂಥಾ ಸ್ಥಳ ಯಾವುದು? ಬಂದಂಥಾ ಕಾರ್ಯ, ಕಾರಣ, ಪಗಾರ, ಊಳಿಗ ಏನೆಂಬಂಥಾದ್ದನ್ನೆಲ್ಲ ಪಟಪಟ ಒಂದೇ ಮಾತಿನಲ್ಲಿ ಉಸುರೋಣಾಗ್ಲಿ ನೋಡ್ವ.

ಈಶ್ವರ—
ಎಲಾ ಭಕ್ತನೇ, ಕೈಲಾಸ ಪರ್ವತಕ್ಕೆ ಯಾರೂಂತ ಕೇಳಿದ್ದಿ?

ಕೋಡಂಗಿ—
ಸರಾ—ಸರಿ, ಪತ್ತೆಯಾಯ್ತು—ಬೂದಿಗುಡ್ಡೆ ಪರ್‌ಮೇಸ್‌ರಾಂತ ಕೇಳಿದ್ದೆ; ಅಲ್ಲಿಗೆ ಬಂದಾಯ್ತು, ಇನ್ನೊಂದು? ಘಟ್ಟನೇ ಉಸ್ರೋಣಾಗ್ಲಿ.

ಈಶ್ವರ—
ನಮ್ಮ ಅರ್ಧಾಂಗಿ ಪಾರ್ವತಿಯನ್ನು ಕಾಣದೆ ವಿರಹದಿಂದ ಥಟ್ಟನೇ ಹೊರಟು ಬಂದಂಥವರಾಗಿರ್ತೇವೆ.

ಕೋಡಂಗಿ—
ಅಂಥಾ ವಿರಸಾಟದಿಂದ ಬಂದವರಾದ್ರೆ ಅತ್ತೆಮನೆಗೆ ಹೋಗಿ ಪರಸಾಟ ಮಾಡದೆ ಇತ್ತಲಾಗೆ ನಂಮಾಟಕ್ಕೆ ಬಂದದ್ದು ಯಾಕೆ?

ಈಶ್ವರ—

ನೀನೇನಾದರೂ ಕಂಡಿದ್ದೀಯಾ ಅಂಥಾ ನಮ್ಮ ಅರ್ಧಾಂಗಿ ಪಾರ್ವತಿಯನ್ನ ?

ಕೋಡಂಗಿ—

ಅದು ಎಂಥಾದ್ದಂಗಿಯಪ್ಪ ! ಅದಕ್ಕೂ ಕಣ್ಣು ಮೂಗು ಮೂರುಂಟೋ ?

ಈಶ್ವರ—

ಒಳ್ಳೇ ಇಂದುವದನೆ, ಸುಂದರಾಂಗಿ ಕಾಣಯ್ಯ—

೫೨ ಪದ—ರೂಪಕತಾಳ

ಇಂದುವದನೆ । ಮಂದಗಮನೆ । ಸುಂದರಾಂಗಿ । ಪಾರ್ವತಿ ।
ಕುಂದರದನೆ । ಕುಮುದಗಂಧಿ । ಎನ್ನರ್ಧಾಂಗಿ । ಪಾರ್ವತಿ ॥ ೧೦೮ ॥

ತಕೋಂಗತೋ—ಧೀಂತರಿಕಿಟತಕ ತರಿಕಿಟದಧಿಗಿಣತೋ

[ಈಶ್ವರನ ವೇಷ ಹೋಗಿ ಒಡನೆಯೆ ಪಾರ್ವತಿ (ಅರ್ಧನಾರಿ) ಬರುವುದು]

೫೩ ಶ್ಲೋಕ

ಉಮಾ ಕಾತ್ಯಾಯಿನೀ ಗೌರೀ ಕಾಳೀ ಹೈಮವತೀಶ್ವರೀ ।
ಶಿವಾ ಭವಾನೀ ರುದ್ರಾಣೀ ಶರ್ವಾಣೀ ಸರ್ವಮಂಗಳಾ ॥ ೧೦೯ ॥

(ಅರ್ಧನಾರಿ ಕುಣಿಸುವ ಪದ್ಯ)

೫೪ ರಾಗ ಶಂಕರಾಭರಣ—ಅಷ್ಟತಾಳ ೧

ಅಂಗನಾ । ಮಣಿಯೆ ಬಾ । ರೇ— । ಎನ್ನಂತ ।
ರಂಗ ಮಾ । ಲಿಂಗನ ತೋ । ರೇ— ॥ ಪಲ್ಲವಿ ॥

ಕಂಜವ । ದನೆ ಕರ । ತಾರಮ್ಮ । ಯ್ಯ—ನಮ್ಮ ।
ನಂಜನ । ಗೂಡ ಶ್ರೀ । ನಂಜುಂಡ । ಲಿಂಗನ ॥ ೧೧೦ ॥

ಹೇಗೆ ತಾ । ,ಳಲಮ್ಮ । ಯ್ಯ— । —ನಾನಿ ।
ನ್ನೇಗೆ ಬಾ । ,ಳಲಮ್ಮ । ಯ್ಯ— ॥
ವಂಚಿಸಿ । ಪೋದನ । ಕರೆದು ತಾ । ,ರೆ ನೀ ।
ಪಂಚಬಾ । ,ಣನಿಗೆ । ಮುನಿದವ । ನಲ್ಲವೆ ।
ಅಂಗನಾ । ಮಣಿ ನೀ ತೋ । ರೇ— ॥ ೧೧೧ ॥

ನೋಡು ನೋ । ಡೆಲೆ ತಂಗಿ । ನೋಟಪು । ರುಷನುಳ್ಳ ।
ಗಾಡಿಯ । ಕಾಂಬ ಶ್ರೀ । ರಾಮಯ್ಯ । ಲಿಂಗನ ॥ ೧೧೨ ॥

ನೊಸಲುರಿ | ಗಣ್ಣಿಂದ | ನೋಡಿಯೊ | ಬ್ಬನ ಕೊಂದ |
ದಶಭುಜ | ಪಂಚಮು | ಖದ ದೇವ | ನ— |
ಭಸಿತಶೂ | ಲಪ ಪಿಡಿದು | ಬಲಗೈಯ್ಯ | ಡಮರುಗ |
ಕುಶಲದಿ | ಮೆರೆಪ ಶ್ರೀ | ರಾಮಯ್ಯ | ಲಿಂಗನ || ೧೧೩ ||

ಸಖಿ—

ಬಲು ಮೋಜು | ಗಾರನಂ | ತೆ—ಅ | ಮ್ಮಯ್ಯ ಕೇಳು |
ಬಲು ಸೊಗಸು | ಗಾರನಂ | ತೆ—ಅ | ಕ್ಕಯ್ಯ ಕೇಳು |
ಜಲುವ ನಂ | ಜುಂಡನಂ | ತೇ—ಕೇ | ಳೆಲೆ ಕಾಂತೆ || ೧೧೪ ||

(ಏಕತಾಳ)

ಕನ್ನೆ, ಕೇ | ಳೆಲೆ ಗುಣ | ರನ್ನೆ, ಕೇ | ಳೆಲೆ ಮೋ, |
ಹನ್ನೆ; ಕೇ | ಳೆಲೆ ಕಾಂ, | ತೇ— ||
ಅಂಗ,ಜ | ರೂಪನಂ | ತೆ — | — ಜೆಲ್ವ |
ಮಂಗ,ಳ | ಮಹಿಮನಂ | ತೆ— ||
ಹೆಂಗ,ಳ | ಕಲೆಯು ಬಲ್ಲ | ಹೆಚ್ಚಿನ ಮೋ | ಹದ ನಲ್ಲ |
ತುಂಗ, ವಿ | ಕ್ರಮನಂತೆ | ಅಸುರ, ಸಂ | ಹಾರನಂತೆ || ೧೧೫ ||

೫೫ ಪದ—ಅಷ್ಟತಾಳ ೨

ಅರ್ಧನಾರಿ—

ಪ್ರಾಣನಾ | ಥನ ಕಾಣೆ | ನೀರೆ— | —ಪಂಚ |
ಬಾಣಬಾ | ಧೆಯ ತಾಳ | ಲಾರೆ— | — ||
ಜಾಣೆ ಬೇ | ಗನೆ ಕರ | ತಾರೆ— | —ಸರಿ |
ಗಾಣೆ ನಿ | ನ್ನಾಣೆ ಪ್ರ | ವೀಣೆ ಸು | ಗುಣನ— || ೧೧೬ ||

ಕರುಣಾಂಬು | ನಿಧಿಚಂ, | ದ್ರಮುನ— | —ಅಗ |
ಲಿರಲಾರೆ | ಪುರುಷೋ, | ತ್ತಮನ— | —ಬೇಗ |
ಕರತಾರೆ | ನಂದೀಶ | ಗಮನ— | — ||
ತರವೇ ಬೇ | ಸರವೇ ನಾ | ಬರುವೆ ಜೆ | ನ್ನಿಗನ— || ೧೧೭ ||

ಹಿಂಗಿರ | ಲಾರೆ ಮೋ | ಹನನ — | — ಮದ |
ನಾಂಗಕೇ | ಳಿಗೆ ಸುಖ | ಕರನ — | —ದೇವೋ |

ತ್ತುಂಗ ಶ್ರೀ । ಎಡವೂರೀ । ಶ್ವರನ್ನ— । — ಪಾಂಡು ।
ರಾಂಗ ಕೃ । ಪಾಂಗ ಭು । ಜಂಗಭೂ । ಷಣನ— ॥ ॥ ೧೧೮ ॥

೫೬ ರಾಗ ಪುನ್ನಾಗವರಾಳಿ—ಏಕತಾಳ ೨

ಅರ್ಧರಾತ್ರಿ । ಯಾಯಿತು ಇ । ನ್ನೇನು ಬಂದ । ನೇ—ಮತ್ತಿ ।
ನ್ನೇನು ಬಂದ । ನೇ— ಬಂದ । ನೇ—ಬಂದ । ನೇ— ।
ಮನಸಿಜ, । ಮಾನಭಂಗ । ಮಾನಿನಿ ನಂ । ಜುಂಡ ಲಿಂಗ ।
ಏನು ಬಂದ । ನೇ—ಮತ್ತಿ । ನ್ನೇನು ಬಂದ । ನೇ—।
ಹೊತ್ತು ಮೀರಿ । ಹೋಯಿತು ಇ । ನ್ನೇನು ಬಂದ । ನೇ—ಸಖಿ ।
ಏನು ಬಂದ । ನೇ—ಬಂದ । ನೇ—ಬಂದ । ನೇನೇ ॥ ೧೧೯ ॥

(ಈಶ್ವರ ಬರುತ್ತಾನೆ)

೫೭ ರಾಗ ಶಂಕರಾಭರಣ—ಅಷ್ಟತಾಳ ೧

ಈಶ್ವರ—

ಕಾಣಿರೆ ಎ । ಲ್ಲಾ ್ಯದ । ರೂ—ಎಂ । ತಾದರೂ ।
ಪ್ರಾಣನಾ । ಯಕಿ ಕಮ । ಲಾಂಬಕಿ । ಗೌರಿಯ ।
ಏಣಾಂಕ । ವದನೆ ಎ । ನ್ನಗಲಿ ಪೋ । ದಳ ಮುನ್ನ ।
ಕಾಣದೆ । ನಿಲಲಾರೆ । ವ್ಯೆ—ಪಾ । ರ್ವತಿಯ— ॥ ೧೨೦ ॥

ಕೋಡಂಗಿ—

ಮೂರುಕಣ್ಣಿದ್ರೂ ಒಂದೂ ಕಾಣೋದಿಲ್ವೋ ಮಾರಾಯ ?

(ಈಶ್ವರ, ಅರ್ಧನಾರಿ, ಕೋಡಂಗಿ ಮೂವರೂ ಕುಣಿಯುವುದು)

೫೮ ಪದ—ಏಕತಾಳ ೪

ವಿಶ್ವೇಶಾ, । ವಿಶ್ವನಾಯಕಾ । ವಿಶ್ವನಾಥ ಶಿವ । ತವ ಶರಣಂ ।
ಹರನೇ ಕುಣಿಯೆಂ । ದೂ—ಗಿರಿಜಾ । ವರನೇ ಕುಣಿಯೆಂ । ದು— ।
ತತೋಂಗತೋ ತ । ತ್ರದೀಂಗ ತೋ । ತದ್ಧಿ ಕಿತಾ । ತೋಂಗುತಕಾ ।
ಧಿಕಿತಕ ತಾಥೈತಾ—ತೋಂಗುತಕದದಿಗಿಣ ತೋಂಗ ತೈತಾ—
ತೈತತ್ರೋಂಗುತಕದದಿಗಿಣತೋ—
ಇಂದು,ಧರನಾ । ಸುಡಿಯಾ ಕೇಳಿ । ಚಂದ,ದಿ, ಎಡ । ತೊಡೆಯನಾಳಿ ।
ಎಂದೂ ಶ್ರೀಸ, । ದಾಶಿವನೊ । ಳೊಂದಾಗಿರಲು, । ಪೇಳಲೆ ನಾರಿ ॥

ತದೀಂ, ತಕದೀಂ । ಕಿಟತಕ ತರಿಕಿಟ । ತಕ್ಕಿಟಾಂ
ದಿಂದತ್ತಾಂ ತದಿಗಣ । ತೋ— (ಮೂರು ಸಲ) ॥ ೧೨೧ ॥

(ಈಶ್ವರ ಪಾರ್ವತಿ ಹೊರಟು ಹೋಗುತ್ತಾರೆ)

ಸ್ತ್ರೀವೇಷ ಹೊರಡಿಸುವುದು

(ರಂಗಸ್ಥಳಪ್ರವೇಶದ್ವಾರಕ್ಕೆ ತೆರೆಹಿಡಿಯುತ್ತಾರೆ. ಭಾಗವತರು ಕೆಳಗಿನ 'ಚಂದಭಾಮ ಪದ'ವನ್ನು ಹಾಡುವಾಗ ತೆರೆಯೆತ್ತಲಾಗುವುದು. ಮೂರು ಸ್ತ್ರೀವೇಷಗಳು—ಮಿತ್ರವಿಂದೆ ಮತ್ತು ಸಖಿಯರು-ಪ್ರವೇಶಿಸಿ ಕುಣಿಯುತ್ತಾರೆ.)

೫೯ ರಾಗ ಮಧ್ಯಮಾವತಿ—ಏಕತಾಳ ೩ (ಒಂದು ಖಂಡಕ್ಕೆ ಎರಡು ಆವರ್ತ)

ಚಂದಭಾ—ಮ । ಚಂದಭಾ—ಮ । ಓ ಚಂ—ದ । ಭಾಮ— ।
ಚಂದಿ—ರ । ವದನೆ--ಕೇ । ಳೋ ಚಂ—ದ । ಭಾಮ— ॥ ಪಲ್ಲವಿ ॥

ಇಂದೆ—ನ್ನ । ಮನೆಗೆ—ನೀ । ಚಂದ—ದಿ । ಕರ, ತಾ,ರೆ ।
ಮಂದ—ಯಾ । ನೆ ಸದಾ— । ನಂದ—ಸಾ । ಗರನೆ— ॥ ೧೨೨ ॥

ತಿತ್ತಿತ್ತೈ

,ತುಂ । ಬಿಗು । ರುಳಿನ । ಬಾಲೆ । ತಾ,। ಳಿತಾ । ಧರದ । ಮೇಲೆ (?) ।
,ಇಂ । ಬುದೋ । ರಿ ಯೆ । ನ್ನೊಡನೆ ।,ಇಂ । ಗಿತ । ಪೇ,। ಳೆ— ॥ ೧೨೩ ॥

೬೦ ರಾಗ ಶಂಕರಾಭರಣ—ಅಷ್ಟತಾಳ ೧

ರಂಗನ್ಯಾ । ತಕೆ ಬಾರ । ನೇ—ಅಂ । ಗನಾಮಣಿ ॥ ಪಲ್ಲವಿ ॥

ರಂಗನ್ಯಾ । ತಕೆ ಬಾರ । ತಿಂಗಳಾ । ಯಿತು ಪೂರ ।
ಬೆಳ್ದಿಂಗಳ್ । ಬಿಸಿಲಾಯಿ । ತೆ—ಅಂ । ಗನಾಮಣಿ ॥ ೧೨೪ ॥

ಜಾಜಿಮ । ಲ್ಲಿಗೆ ಹೂವು । ದೂಜಿಯಂ । ತಾಯಿತು ।
ಭೋಜನ । ವಿಷವಾಯಿ । ತೆ—ಅಂ । ಗನಾಮಣಿ ॥ ೧೨೫ ॥

ಬಾಲೆ ನೀ । ಪೋಗಿ ಗೋ । ಪಾಲನ । ಕರತಾರೆ ।
ಭಾಲೇಂದು । ಧರಸಖ । ನ—ಅಂ । ಗನಾಮಣಿ ॥ ೧೨೬ ॥

ಜಲಜಲೋ । ಚನೆ ಕೇಳೆ । ಛಲಕೆ ನ । ಲ್ಲನೊಳ್ಪೇಳೆ ।
ಮನಸು ಮಾ । ರಗೆ ಸೂರೆ । ಕ್ಷಣದೊಳಾ । ಯಿತು ನೀರೆ ।
ವಿನಯವ । ಬಿಡಲಾರೆ । ವನಿತೆ ನೀ । ಕರತಾರೆ ॥ ೧೨೭ ॥

೬೧ ಏಕತಾಳ ೪

ಒಂದಿರುಳಿ । ಸಂಭೋಗ । ಇಂದ್ರಲೋಕ । ವಾಯಿತಾಗ ।
ಸಿಂಧುಗಂಭೀ । ರನ ಜೇಗ । ಸುಂದರವದನೆ । ತೋರಿಸೀಗ ॥ ೧೨೮ ॥

ಆಡಿದ ಮಾ । ತುಗಳೆಲ್ಲ । ಮೋಡಿಯೊಳ್ । ಮರೆತನಲ್ಲ ।
ನೋಡಿನಿಸು । ದಯವಿಲ್ಲ । ಬೇಡಿಕೊಂಡ । ರೂ ಬರಲಿಲ್ಲ ॥ ೧೨೯ ॥

ಬುದ್ಧಿ ಚಂಚ । ಲಿಸಿತಲ್ಲಿ । ಪದ್ಮಗಂಧಿ । ನೀನೇ ಬಲ್ಲೆ ।
ಸದ್ದಿಲ್ಲದೆ । ಪೋಗಿ ನೀನೀ । ಸುದ್ದಿಯೆಲ್ಲ । ಪೇಳ್ವುದಲ್ಲೆ ॥ ೧೩೦ ॥

೬೨ ರೂಪಕತಾಳ, ತಿತ್ತಿತ್ತೈ

ಚಾರನೇತ । ಕೆನ್ನ ಮನೆಗೆ । ಮಾರಜನಕ । ನು— ।
ನೀರೆ ನಿನಗೆ । ಸರಿಯೇ ಪೇಳೀ । ವಾರಿಜಾಕ್ಷ । ನು— ॥ ಪಲ್ಲವಿ ॥

ವಾರಿಜಾಸ್ತ್ರ । ನೆನ್ನ ಮನವ । ಸೂರೆಗೊಂಡ । ನು— ।
ವಾರಣೇಂದ್ರ । ಗಮನೆ ತಡೆಯ । ಲಾರೆ ವ್ಯಥೆಯ । ನು— ॥
ಮಾರಿತೆನ್ನ । ವಿರಹತಾಪ । ಆರಿಗೊರೆವೆ । ನು— ।
ತೋರಿಸಿದಕು । ಪಾಯ ಮುಂದೆ । ದಾರಿಕಾಣೆ । ನು— ॥ ೧೩೧ ॥

ಕರಗಿಹೋಯಿ । ತೆನ್ನ ಮನಸು । ಸ್ಮರನ ಬಾಧೆ । ಗೆ— ।
ನಿರತ ನಂಬಿ । ದವಳೊಳಿನಿತು । ಪರಿಯೆ ನೀರ । ಗೆ—॥
ಕರುಣವಿಲ್ಲ । ವೇನೆ ದಾಸ । ವರ ಕುಠಾರ । ಗೆ— ।
ಸರಸವಲ್ಲ ।ಮಾಳ್ಪ ಬಗೆಯು । ತರುಣಿ ಸುಮ್ಮ । ಗೆ— ॥ ೧೩೨ ॥

ಇಂದುವದನೆ । ನಿತ್ಯ ಶೀಘ್ರ । ದಿಂದ ಬರುವ । ನು— ।
ಎಂದಿನಂಥ । ಗುಣದ ಪರಿಯ । ನಿಂದು ಕಾಣೆ । ನು— ॥.
ಬಂದು ಸ್ವಪ್ನ । ದಲ್ಲಿ ಮೊಗವ । ನಿಂದು ತೋರ । ನು— ।
ಇಂದಿರೇಶ । ಗಿನಿತು ಪಂಥ । ವೆಂದು ತಿಳಿಯೆ । ನು— ॥ ೧೩೩ ॥

೬೩ ಆದಿತಾಳ

ಶ್ಯಾ—ಮ ಸುಂದರನ ।,ಮೋಹಿಸಿ । ಕರ ತಾರೆ ।
ಕಾ,ಮಿ,ನೀಮಣಿಯೆ ನೀ । ರೆ— ॥
ಕಾಮ,ನ ಬಾಧೆ,ಗೆ ।, ನಾಮನ । ತಡೆಯಲಾರೆ ।
ಪ್ರೇಮ,ದಿ ತೋ,ರೆ ನೀ । ಕಾಮ,ಜ । ನಕನ ॥ ೧೩೪ ॥

ಮಲ್ಲರ ಮರ್ದ,ನ |,ಪೂತ,ನಿ | ಶೋ,ಷಣ |
ಖುಲ್ಲ ಕಂಸನ ಕ |,ಯ್ಯಾರೆ ಕೊಂ | ದವನ || ೧೩೫ ||

೬೪ ಚೂರ್ಣಿಕೆ

ಓ ಭಾಮಾ ಬಾರೇ | ಮಾತನಾಡಮ್ಮಯ್ಯಾ ಮಾತನಾಡೇ |
ಅಹಮ್ಮಯ್ಯ | ಆಹಕ್ಕಯ್ಯ | ಅಹೋ ಫುಲ್ಲೋಪಮ |
ಆಹ ಚಕೋರಾಕ್ಷಿ | ಎನ್ನ ಪ್ರಾಣನಾಥನಾದ | ಆ ವೇಣು
ಗೋಪಾಲನ್ನ ತೋರೇ | ಕೊಂಡು ಬಾರೇ—ಸಹಿಸಲಾರೇ— || ೧೩೬ ||

(ಭಾಗವತರೊಡನೆ ಮುಖ್ಯಸ್ತ್ರೀವೇಷವೂ ದನಿಗೂಡಿಸಿ ಈ ಚೂರ್ಣಿಕೆ ಹೇಳುತ್ತಿರುವಾಗ ಹಾಸ್ಯಗಾರನು 'ಗೊಲ್ಲಮಾಧವ'ನ ವೇಷದಲ್ಲಿ ಬಂದು—)

ಗೊಲ್ಲಮಾಧವ—
ಅಹಮ್ಮಯ್ಯಾ, ಆಹಕ್ಕಯ್ಯಾ, ಏ ಚಿಕ್ಕಯ್ಯಾ, ಎಲೇ ಗುಳ್ಳೋಪಮಾ, ಹೊಟ್ಟೆನೋಯ್ತದೇನಮ್ಮಯ್ಯಾ ?

ಭಾಮ—
ಏ ಮಾಧವಾ, ಎನ್ನ ಪ್ರಾಣನಾಥನಾದ ಶ್ರೀ ವೇಣುಗೋಪಾಲನ್ನ ಕಾಣಲಿಲ್ಲ ವೇನೋ ಮಾಧವಾ ?—(ದೀನಸ್ವರದಲ್ಲಿ)

ಮಾಧವ—
ಓಹೋ ! ಇದೇ ಹೊಟ್ಟೆನೋವೋ ? ಸರೇ ಸರಿ, ಹಾಗಾದರೆ ಅಂಥಾ ನಮ್ಮ ವೇಣುಗೋಪಾಲ ಶ್ರೀ ಕೃಷ್ಣಸ್ವಾಮಿಯ ಕೇಳಲಿಕ್ಕೆ ನೀನ್ಯಾರೇ ? ನಿನ್ನ ಪೆಸರೇನೆ ಓ ಭಾಮ ?

ಮಿತ್ರವಿಂದೆ—
ಅಷ್ಟಮಸ್ತ್ರೀಯರೊಳಗೆ ಅತಿ ಮುಖ್ಯಳಾದಂಥಾ ಶ್ರೀ ರಾಧಾಮಿತ್ರವಿಂದೆ ಯಲ್ಲವೆ ಮಾಧವಾ ?

ಮಾಧವ—
ಅಂಥಾ ಮಿತ್ರವಿಂದೆ ಹೌದಾಗಿದ್ರೆ ಆ ಕೃಷ್ಣಸ್ವಾಮಿಯ ಅಂದ, ಚಂದ, ನೋಟ, ನಟನೆ, ಜೆಡಗು, ಬಿನ್ನಾಣ, ವಿಲಾಸ, ವಿಭ್ರಮಂಗಳನ್ನ ಗ್ರಂಥ ಕ್ರಮಾಗತವಾಗಿ ಎಂದುಕೊಳ್ಳೇ—ಓ ಭಾಮ ||

೬೫ ಜೊರ್ಣಿಕೆ ಶ್ಲೋಕ

ಮಿತ್ರವಿಂದೆ—

ಕಿರುಜಡೆಯ ಮುಕುಟಧಾರಿ । ಕೃಷ್ಣ ಕೌಸ್ತುಭಧಾರಿ ।
ಗರುಡನಾ ಹೆಗಲನೇರಿ । ಬಾರನೇ ಹೊಂತಕಾರಿ ॥ ಏ ಮಾಧವಾ—
ನಗಧರನನಗಲಿ ನಾನು । ಹ್ಯಾಗೆ ಜೀವಿಸಲಿ ಯಿನ್ನು ।
ಸೊಗಸು ಗರುವಂತ ನೀನು । ನಿಮ್ಮವನ ತೋರಿಸಿನ್ನು ॥ ೧೩೭ ॥
ತುರುಗಳನು ಕಾವ ದೇವ । ತೋರನ್ಯಾಕೀಗ ರೂವ ।
ಮುರಳಿಯಾ ಧ್ವನಿಯ ಕೇಳಿ । ಮಾರುಕೊಂಡಿರ್ದೆ ಬಾಳಿ ॥ ೧೩೮ ॥

(ಕುಣಿಯುತ್ತಾಳೆ)

ತಾಧಿಮಿ ತರಿತಕ ತರಿಧಿಮಿ ತೈತಾ ಧಿಮಿತೈ ತಕತ ಧಿತಕ ದಿಣ್ಣಾಂ ।
ತಕತರಿಕಿಟ ತಕ್ಕುಧಿಕ್ಕುತಾ ತಕ್ಕಿಟ ಕಿಟತಕ । ತಾಧಿಮಿತ್ಯಾತಕ
ತೈಧಿಮಿತ್ಯಾತಕ ತಾಧಿಮಿತಾಂ (ತಧಿಗಿಣತೋ) ॥

ಮಾಧವ—

ಓ ಭಾಮಾ, ಅಂಥ ಸ್ವಾಮಿಯನ್ನು, ತೆರೆಯುಮರೆಯನ್ನೇ ಹೊರಟುಬಂದದ್ದಾದರೆ ತೋರಿಸಿಕೊಟ್ಟೇಯಾ ? ಅಹಮ್ಮಯ್ಯಾ, ಅಹಕ್ಕಯ್ಯಾ, ಅಹೋ ಚಕೋರಾಕ್ಷಿ, ಆಹೋ ಪಲ್ಲವಪಾಣಿ—ತೆರೆಮರೆಯನ್ನೇ ಹೊರಟು ಕಣ್ವಪುರಕ್ಕೆ ಬಂದರೆ ಆ ಸ್ವಾಮಿಯನ್ನು ನಾನೂ ನೀನೂ ಕೂಡಿ ಹುಡುಕಾಡುವಣಂತೆ, ಓ ಭಾಮಾ.

೬೬ ಏಕತಾಳ (ಹಾಡುತ್ತಾನೆ ಕುಣಿಯುತ್ತಾನೆ)

ಬಾರೇಯು । ಲಲಿತಾಂ । ಗಿ—ಸ । ನ್ಮೋಹನಾಂಗಿ । ಬಾರೇಯಾ—
ತೋ ತೋ ದಿಮಿತಾ ಹುತಕಿಟ ದಿಮಿ ತೋತೋ ಧಿಮಿತಾ ॥

(ಅಷ್ಟರಲ್ಲಿ ಇನ್ನು ಐದುಮಂದಿ ಸ್ತ್ರೀವೇಷಗಳು—ಅವಕ್ಕೆ ಇಂದುವದನೆಸ್ತ್ರೀವೇಷಗಳೆಂದು ಕರೆಯುವ ರೂಢಿ—ಬಂದು ಸೇರಿ ಮಾಧವನೊಂದಿಗೆ ಈ ಕೋಲಾಟಪದ ಹಾಡುತ್ತಾ ಕುಣಿಯುತ್ತಾರೆ.)

೬೭ ಏಕತಾಳ ೧

ಕೋಲೂ । ಕೋಲೆನ್ನಿ । ರೋ— । ರನ್ನದಾ । ಕೋಲೋ— ॥ ಪಲ್ಲವಿ ॥
ಗೋಪಿ,ಯ । ಕಂದನೆನಿಸಿ । ಗೋಪಾಲ । ರೆಲ್ಲ ಕೂಡಿ ।
ಶ್ರೀಪ,ತಿ । ಕರದಿ ದಿವ್ಯ । ಚಪ್ಪ,ಳೆ । ಗೆಯ್ಯುಲು ।
ಕೋಲೂ । ಕೋಲೆನ್ನಿ । ರೋ— । ಚೆಳ್ಳಿಯಾ । ಕೋಲೋ— ॥ ೧೩೯ ॥

ನೂತ,ನಂ | ಗಿಯ ತೊಟ್ಟು | ಪೀತಾಂಬ | ರವನುಟ್ಟು |
ಜಾತಿ,ಮಾ | ಣಿಕ್ಯದ | ಹರಳು, ಪ್ರ | ಜ್ವಲಿಸುತ್ತ |
ಕೋಲೂ | ಕೋಲೆನ್ನಿ | ರೋ— | ಚಿನ್ನದಾ | ಕೋಲೋ— || ೧೪೦ ||

ಶಿರದೊ,ಳು | ಮುಡಿ ಚಂದ | ಉರದೊ,ಳು | ಶ್ರೀ,ಗಂಧ |
ಬೆರಳಿ,ಗಿ | ಟ್ಟುಂ,ಗುರ | ಹರಳು,ಶೋ | ಭಿಸುತಿರೆ |
ಕೋಲೂ | ಕೋಲೆನ್ನಿ | ರೋ— | ಗಂಧದಾ | ಕೋಲೋ— || ೧೪೧ ||

ಕೊರಳೊ,ಳು | ಮಣಿಸರ | ಕರದೊ,ಳು | ಕಂಕಣ |
ಚರಣ, ಲಂ | ದುಗೆ ಗೆಜ್ಜೆ | ಝಣಝು,ಣ | ರೆನುತಿರೆ |
ಕೋಲೂ | ಕೋಲೆನ್ನಿ | ರೋ— | ಪಂಚದಾ | ಕೋಲೋ— || ೧೪೨ ||

ನೇತ್ರ,ಕ | ಮಲದಳ | ಗಾತ್ರ,ಸು | ಕೋಮಳ |
ಧಾತ್ರಿ,ಜ | ಠರದಲ್ಲಿ | ಧರಿಸಿ,ದ | ಣಿದ ಚಿಣ್ಣ |
ಕೋಲೂ | ಕೋಲೆನ್ನಿ | ರೋ— | ಬಣ್ಣದಾ | ಕೋಲೋ— || ೧೪೩ ||

ಕರ್ಣ,ದ | ಕುಂಡಲ | ಸ್ವರ್ಣ,ದ | ಉಡುದಾರ |
ಕಣ್ವ,ಪು | ರದಿ ನಿಂತ | ಸಣ್ಣ, ಗೋ | ಪಾಲಕೃಷ್ಣ |
ಕೋಲೂ | ಕೋಲೆನ್ನಿ | ರೋ— | ಹೂವಿನ | ಕೋಲೋ— || ೧೪೪ ||

(ಇದಾದೊಡನೆಯೇ ಭಾಗವತರು ಕೆಳಗಿನ ವೃತ್ತವನ್ನು ಹಾಡುತ್ತಲೇ ಚೆಂಡೆಮದ್ದಳೆಕಾರರು 'ಧೀಂಗಿಣ' ಹೊಡೆಯಲಾಗಿ ಶ್ರೀ ಕೃಷ್ಣನ ವೇಷ ತೆರೆಯಿಲ್ಲದೆ ಓಡಿಬಂದು ಕುಣಿಯುವುದು)

### ೬೮ ಶಾರ್ದೂಲವಿಕ್ರೀಡಿತವೃತ್ತ

ಕಸ್ತೂರೀತಿಲಕಂ ಲಲಾಟಫಲಕೇ ವಕ್ಷಸ್ಥಳೇ ಕೌಸ್ತುಭಂ |
ನಾಸಾಗ್ರೇ ನವಮೌಕ್ತಿಕಂ ಕರತಲೇ ವೇಣುಂ ಕರೇ ಕಂಕಣಂ |
ಸರ್ವಾಂಗೇ ಹರಿಚಂದನಂ ಚ ಕಲಯನ್ ಕಂಠೇ ಚ ಮುಕ್ತಾವಲೀ |
ಗೋಪಸ್ತ್ರೀಪರಿವೇಷ್ಟಿತೋ ವಿಜಯತೇ ಗೋಪಾಲಚೂಡಾಮಣಿಃ || ೧೪೫ ||

### ೬೯ ರಾಗ ಕಾಂಭೋಜಿ—ಅಷ್ಟತಾಳ ೧

ಚಿಕ್ಕಪ್ರಾ | ಯದ ಬಾಲೆ | ಚದುರೆ ನಿ | ನ್ನಂಗವು |
,ಮರೆವು | ದೇ— | ನೆ— | —ಮುದ |
ಉಕ್ಕಿದಾ | ನೆಯ ಬಲು | ಸೊಬಗಿನ | ಶೃಂಗಾರ |
,ಮರೆವು | ದೇ— | ನೆ— || ೧೪೬ ||

ವಾರಿಜ । ಗಂಧಿ ವಾ । ರಿಜದಳ । ಲೋಚನೆ ।
,ಮರೆವು । ದೇ— । ನೆ— । —ಹೊಂತ ।
ಕಾರಿ ಸಿಂ । ಹದ ಮರಿ । ಏನೆ ನಿ । ನ್ನಂದವು ।
,ಮರೆವು । ದೇ— । ನೆ— । — ॥ ೧೪೭ ॥

(ಮೇಲಿನ ಮೊದಲನೇ ಪದ್ಯಕ್ಕೆ ಎರಡನೇ ಮುಗಿತಾಯದ ಬಿಡಿತಿಗೆಯಿಲ್ಲ, ಕೂಡಲೇ ಎರಡನೇ ಪದ್ಯವನ್ನು ಎತ್ತಿಕೊಳ್ಳುವುದು. ಕೊನೆಯ ಮುಗಿತಾಯಕ್ಕೆ ಮೊದಲೇ ಕೃಷ್ಣನೂ ಅವನ ಹಿಂದೆ ಅಷ್ಟಮ ಸ್ತ್ರೀಯರೂ ಹೊರಟುಹೋಗುವುದರಿಂದ ಆ ಮುಗಿತಾಯಕ್ಕೆ 'ಗೊಲ್ಲಮಾಧವ' ನೊಬ್ಬನೇ ಕುಣಿಯುವುದು. ಅದಾದೊಡನೆ ಕೆಳಗಿನ ಪದ್ಯವನ್ನು ಹಾಡುತ್ತಿರುವಾಗ ಮುಖ್ಯಸ್ತ್ರೀ ವೇಷವೂ (ಮಿತ್ರವಿಂದೆ) ಒಂದು ಸಖೀ ಸ್ತ್ರೀವೇಷವೂ ಪ್ರವೇಶಿಸಿ ಮಾಧವನ ಜೊತೆಯಲ್ಲಿ ಕುಣಿತಕ್ಕೆ ಸೇರಿಕೊಳ್ಳುತ್ತಾರೆ—)

೭೦ ಚೌತಾಳ, ತಿತ್ತಿತ್ತೈ ೬

ಮಾಯ,ಗಾ । ರ,ನು, । ನೀ, । ನೇ, ।
ಮಹಿ,ಮನು, । ನೀ, । ನೇ, । — ।
ತೋಯ, ಜಾಂ । ಬ,ಕ, । ನು, । ಉ, ।
ದಾ,ರನು, । ನೀ, । ನೇ — । — (ಪುನಃ ತಿತ್ತಿತ್ತೈ ತಾಳದಲ್ಲಿ) ॥ ಪಲ್ಲವಿ ॥

ಕಾ,ಯಜ, । ಪಿ,ತ, । ಲೊ,ಕೆ, । ನಾ,ಥ ಶ್ರೀ । ಹ,ರಿ, । ಯೇ— ।
ಶ್ರೀಯರಸ, । ಚೆನ್ನಿಗ, । ರಾಯ ಮೂ । ರು,ತಿ, । ಯೇ— ॥ ೧೪೮ ॥

ಸುರ,ಪಸು, । ತ,ನ, । ಕೊಂ,ದು, । ಬಂದ ಮುಚು । ಕುಂ, । ದ,ನ, ।
ಮರೆ, ಹೊಕ್ಕು । ಸು,ಡಿ, । ಸಿ—ದೆ, । ಕಾಲಯು, । ವ,ನ, । ನ— ॥
ಉರು,ಳಿಸಿ । ದೈ—, । ವಿಷ್ಟ, । ರದಿಂದ । ಕೌ ರ, । ವ,ನ, ।
ಕರೆ,ದು ಆ । ದ,ರಿ, । ಸಿ,ದೆ, । ಶರ,ಣ ವಿ, । ದು,ರ, । ನ— ॥ ೧೪೯ ॥

(ಏಕತಾಳ ೩)

ಚರಣಾ । ಭರಣಾ । ಶರಣಾ । ಕರುಣಾ ।
ಧುರದೊಳು । ತರಣಿಯ । ಮರೆಯನು । ಸ್ಮರಿಸಿ— ।
ವರನರ । ಕರಶರ । ವರದಲಿ । ಸೈಂಧವ ।
ಶಿರವ ತ । ರಿದ ಬಹು । ದುರುಳರ । ಕೆಡಹಿದ ॥ ೧೫೦ ॥

(ಕೆಳಗಿನ ಚರಣಗಳನ್ನು ಅಷ್ಟತಾಳದಲ್ಲಿ, ಪಲ್ಲವಿ ತಿತ್ತಿತ್ತೈಯಲ್ಲಿ)

ಪದವ್ರಜ । ಗೊಲಿದು ಶಿ । ಲೆಯ ಪೆ । ಣ್ಣಸಗಿದೆ ।

ಒದಗಿ ನೀ । ರೊಳಗೆ ಬೆ । ಟ್ಟವನು ತೇ । ಲಿಸಿದೆ— ।
ಮದವುುಖ । ರನು ಕೊಡ । ಲಿಂದ ಸೀ । ಳಿಸಿದೆ— ।
ಕದನದೊ । ಳಿಳಿದ ವಾ । ನರರನೆ । ಬ್ಬಿಸಿದೆ— ॥
ಚದುರಾ । ಮಧುರಾ । ಸದರಾ । ನೇ ನೀ ।
ತ್ರಿದಶನ । ಗರ್ಗ್ಯೆ । ದಿದ ಪಿತೃ । ಗಳ ತಾ ।
ನೊದಗಿದ । ಧರೆಯೊಳು । ದರುಶನ । ಪಡೆದೆ— ।
ಮುದದೊಳು । ಮುಪಿಗಳು । ಪಿದ ಕಮ । ನೀಯನೆ ॥ ೧೫೧ ॥

೭೧ ರಾಗ ಕಲ್ಯಾಣಿ—ಅಷ್ಟತಾಳ ೨ (ದಶಾವತಾರಸ್ತುತಿ)

ಸಲಹೊ ಸ । ದಾನಂದ । ನೆ—ಲ । ಕ್ಷ್ಮೀಶನೆ ॥ ಪಲ್ಲವಿ ॥
ನಂದನಂ । ದನ ಮುನಿ । ವೃಂದವಂ । ದಿತ ಶ್ರುತಿ ।
ತಂದ ಶ್ರೀ । ಗಾಧಿಕ । ನೆ—ಲ । ಕ್ಷ್ಮೀಶನೆ ॥ ೧೫೨ ॥
ಸಾಧುಸ । ಚ್ಚರಿತ ವಿ । ನೋದ ಬೋ । ಧಾಗಮ್ಯ ।
ನಾದ ಕ । ಚ್ಛಪರೂಪ । ನೆ—ಲ । ಕ್ಷ್ಮೀಶನೆ ॥ ೧೫೩ ॥
ಸರಸಿರು । ಹಾಕ್ಷ ಸಂ । ತತ ಸಕ । ಲಾನಂದ ।
ವರಾಹಗೆ । ನಮೋ ಎಂಬೆ । ನೆ—ಲ । ಕ್ಷ್ಮೀಶನೆ ॥ ೧೫೪ ॥
ಆ ಮಹಾ । ಬಲಿಯಿಂದ । ಭೂಮಿಯ । ನೆಳೆತಂದ ।
ವಾಮನ । ನಮೊ ಎಂಬೆ । ನೆ—ಲ । ಕ್ಷ್ಮೀಶನೆ ॥ ೧೫೫ ॥
ರಾಮಣೀ । ಯಕರೂಪ । ನಾ ಮಹಾ । ತ್ಮ ಪರಶು ।
ರಾಮ ನ । ಮೋ ಯೆಂಬೆ । ನೆ— ಲ । ಕ್ಮೀಶನೆ ॥ ೧೫೬ ॥
ಕೋಮಲ । ಕಾಯ ಸು । ನಾಮಸು । ಪ್ರಿಯ ಸೀತಾ ।
ರಾಮ ನ । ಮೋ ಯೆಂಬೆ । ನೆ—ಲ । ಕ್ಷ್ಮೀಶನೆ ॥ ೧೫೭ ॥
ಹಾಲು ಬೆ । ಣ್ಣೆಯ ತಿಂದ । ಮೇಲು ಗೋ । ಪಿಯ ಕಂದ ।
ಶ್ರೀಲೋಲ । ಶರಣೆಂಬೆ । ನೆ—ಲ । ಕ್ಷ್ಮೀಶನೆ ॥ ೧೫೮ ॥
ಭಕ್ತವ । ತ್ಸಲ ಬಹು । ಶಕ್ತ ಪ । ರಾಕ್ರಮ ।
ಕಲ್ಕ್ಯ ನ । ಮೋ ಯೆಂಬೆ । ನೆ—ಲ । ಕ್ಷ್ಮೀಶನೆ ॥ ೧೫೯ ॥

೭೨ ರಾಗ ಸಾವೇರಿ— ಏಕತಾಳ ೪ (ವಿಲಂಬಿತ, ದ್ರುತ)

ಬಾರೊ ಬಾರೊ । ಮುದ್ದು ನೀರ । ಮಾರ—ನ । ಟ್ಟುಳಿಗಾರ ।
ಬಾರೋ, ಬಾ । ರಯ್ಯ ನೀರ । ನೇ—ಇಂ । ದೆನ್ನ ಮನೆಗೆ ॥

ಕೃಷ್ಣ,ಯ್ಯ । ಮನೆಗೆ ಬಾ । ರಂಗ,ಯ್ಯ । ಮನೆಗೆ ಬಾ ।
ಬಾರೋ, ಬಾ । ಮುದ್ದು ನೀರ । ನೆ— ॥ ಪಲ್ಲವಿ ॥

ನಿನ್ನೆ ಮೊನ್ನೆ । ಬರುತೇನೆಂದು । ಎನ್ನ ವಂಚಿಸಿ । ಪೋದೆಯಾ ।
ಎನ್ನ, ಠಕ್ಕಿಸಿ । ಪೋ,ದೆಯಾ ನೀ । ನೆನ್ನ ಸಂಚಿಸಿ । ಪೋ,ದೆಯಾ ॥
ನಿನ್ನ ಬಿಟ್ಟು ನಾ । ನಿರುವವಳಲ್ಲ । ಮುನ್ನ ಹೋ । ದ್ರೆ ಕರ ।
ತರುವವರಿಲ್ಲ ॥ ೧೬೦ ॥

ಚಂಚಲಕಿಷ್ಟು । ಕಾರಣವೇನು । ಮುಂಚೆ ಕೊಟ್ಟಿರುವುದು । ಕೈಯಲೆ ಹೊನ್ನು ।
ಪಂಚಬಾಣನ । ಟ್ಟುಳಿಯಾ ಬಾಧೆಗೆ । ಮಂಚಕಾಗಿ ನಡೆ । ನಡೆಯೋ
ಮನೆಗೆ ॥ ೧೬೧ ॥

ಕಣ್ಣ ಸನ್ನೆಲಿ, । ಕರೆದೇಯಾ । ಸಣ್ಣವಳೆಂದು, । ತೊರೆದೇಯಾ ।
ಬಣ್ಣದಿಂದ ಕೊಡು । ಮನಸಾ । ಭೀಷ್ಟವ । ಕಣ್ವಪುರದ ಶ್ರೀ ।
ಗೋಪಾಲಕೃಷ್ಣ ॥ ೧೬೨ ॥

೬೩ ಜಂಪೆತಾಳ

ನೀಲಮೇ । ಘಾಂಗನಿಗೆ । ನಿಜಶರಣ । ಸಂಗನಿಗೆ ।
ಕಾಲಭಯ । ನಾಶನಿಗೆ । ಕಮಲಾಕ್ಷ । ಗೆ— ॥
ಬಾಲಾರ್ಕ । ಶತಕೋಟಿ । ಭಾಸ ಪ್ರ । ಕಾಶನಿಗೆ ।
ಮೂಲೋಕ । ದೊಡೆಯನಿಗೆ । ಮುರವೈರಿ । ಗೆ— ॥ ೧೬೩ ॥

ಕಾಮಪಿತ । ನಾದವಗೆ । ಕಡುಚೆಲ್ವ । ಮಾಧವಗೆ ।
ಸಾಮಗಾ । ನವಿಲೋಲ । ಸರ್ವೇಶ । ಗೆ— ॥
ವಾಮದೇ । ವನ ಮಿತ್ರ । ವಸುದೇವ । ಪುತ್ರನಿಗೆ ।
ಶ್ರೀಮಹಾ । ಗೋವಿಂದ । ಗೋಪಾಲ । ಗೆ— ॥ ೧೬೪ ॥

ವರಾಹಾವ । ತಾರನಿಗೆ । ದುರಿತಸಂ । ಹಾರನಿಗೆ ।
ಪರಶಿವನ । ಮಿತ್ರ ಪಾ । ವನಚರಿತ । ಗೆ— ॥
ಧರೆಯೊಳ । ತ್ಯಧಿಕವಹ । ವರ ಕಣ್ವ । ಪುರದೊಳಗೆ ।
ಸ್ಥಿರವಾಗಿ । ನೆಲಸಿರುವ । ಶ್ರೀ ಕೃಷ್ಣ । ಗೆ— ॥
ಮಂಗಲಂ । ಜಯ ನೀಲ । ಮೇಘಾಂಗ । ಗೆ— ॥ ೧೬೫ ॥

೬೪ ರಾಗ ಆನಂದಭೈರವಿ—ಆದಿತಾಳ

ತೋರಿಸೇ ಪ್ರಿಯನ ವಿರಹ । ತಾಳ,ಲಾ । ರೆನಮ್ಮಯ್ಯ ॥ ಪಲ್ಲವಿ ॥

ಸರಸವಾಡುತ ಮನ |,ಕರಗಿಸಿ | ಪೋದ ಕಾಣೆ |
ಭರವಸ ನಂಬಿನಾ | ಮರುಳಾದೆ | ಎಲೆ ಜಾಣೆ || ೧೬೬ ||

ಪರಿಪರಿ ಸಟನೆಗ | ಳರಿಸಿ ಮೇ | ಲ್ಪರಿದ ತಾ |
ಪರಿಕಿಸಿ ನೋಡಿ ನಾ | ನರಿಯದಂ | ದದಿ ಪೋದ ||
ಕರ್ಣ (ವರ್ಣ ?) ಭೂಷಣಗಳ | ವರ್ಣಿಸಿ | ಚರಿತ (?) |
ಕಣ್ವಪುರೀಶ ಗೋ | ಪಾಲನ | ಕರತಾ || ೧೬೭ ||

೬೫ ರಾಗ ಗೌಳಮಲಹರಿ—ಅಷ್ಟತಾಳ

ಇಂದೂ ಕೊ | ಳಲ ಧ್ವನಿ | ಕೇಳುತಿ | ದೆ—ಶ್ರೀ ಗೋ |
ವಿಂದ ಬಂ |,ದನೆಂದು | ಹೇಳುತಿ | ದೆ—ಸಖಿ ||
ಒಂದುಗೂ | ಡಲು ಮನ | ಸಾಗುತಿ | ದೆ—ದಿವ್ಯ |
ಗಂಧದ | ತಂಗಾಳಿ | ಬೀಸುತಿ | ದೆ— ||
ಕಂದರ್ಪ | ನಟ್ಟುಳಿ | ಯಿಂದ ನಾ | ಮರುಗುವೆ |
ವೃಂದಾ,| ವನದಿಂದ | ಬಂದನೊ | ಶ್ರೀಕೃಷ್ಣ || ೧೬೮ ||

ನಳಿನಮು | ಖಿಯರ ಮೋ | ಹಿಪ ಸುಗು | ಣ—ಇಂಥ |
ಚೆಲುವರುಂ | ಟೇ,ಸಖಿ | ಮಹಿತಗು | ಣ— ||
ಘಳಿಲನೆ | ಬಂದು ಗೋ | ಕುಲದಲ್ಲಿ | ನಲಿಯುತ್ತ |
ಸುಲಲಿತ | ದಿಂದ ಚೆಂ | ಡಾಡುವ | ಶ್ರೀಕೃಷ್ಣ || ೧೬೯ ||

ಕಸ್ತೂರಿ | ಪರಿಮಳ | ಎಸೆಯುತಿ | ದೆ—ಮಾರ |
ನಸ್ತ್ರದಿ | ತನುಮನ | ಕುದಿಯುತಿ | ದೆ— ||
ಮುತ್ತಿನ | ಹಾರ ಭಾ | ರಾಗುತಿ | ದೆ—ಪುರು |
ಷೋತ್ತಮ | ಬಹನೆಂದು | ಕಾಯುತಿ | ದೆ—ಸಖಿ ||
ಚಿತ್ತಚಂ | ಚಲದಿಂದ | ಹೊತ್ತುಹೋ | ಗದು ಕಾಣೆ |
ಹತ್ತಿರ | ಕೈತಂದು | ನಿತ್ತನೋ | ಶ್ರೀಕೃಷ್ಣ || ೧೭೦ ||

ನೀಲನಿ | ಭಾಂಗನ | ನೋಡುವೆ | ನು—ವನ |
ಮಾಲಿಯೊ | ಳಿಷ್ಟವ | ಬೇಡುವೆ | ನು— ||
ಕೇಳಮೇ | ಳದೊಳೊಡ | ಗೂಡುವೆ | ನು—ವನ |
ಮಾಲಿಯೊ | ಳಿಷ್ಟವ | ಬೇಡುವೆ | ನು—ಇಂಥ ||

ಲೀಲೆಯ | ಲಾಲಿಸಿ | ಕೇಳಿ ಷೇ | ಳುವರಸು |
ಪಾಲಿಪ | ಹರಿಹರಾ | ತ್ಮಕನಾದ | ಶ್ರೀ ಕೃಷ್ಣ || ೧೭೧ ||

೭೬ ರಾಗ ಬೇಗಡೆ—ತ್ರಿವುಡೆ ಅಷ್ಟತಾಳ

ಮರೆಯಲಿ | ನ್ನೆಂತವ | ನ—ಎ | ನ್ನಿನಿಯನ || ಪಲ್ಲವಿ ||
ಮರೆತಿರಿಸು ಸಖಿ | ಕೇಳವನ ಸ್ಮರ | ಸುರತಭೋಗರ | ಹೋತ್ಸಹದಿ ಸುರ |
ಪುರದ ವರ ಸಾ | ಮ್ರಾಜ್ಯಪದವಿಯ | ಸರಿವಿನೋದವ | ತೋರಿಸುವವನ
|| ಅನುಪಲ್ಲವಿ ||

ಫುಲ್ಲಲೋ | ಚನೆ ನೀ ಕೇ | ಳೆ—ಪ್ರಿ | ಯನ ಠಾವು |
ಸುಳ್ಳಲ್ಲ | ದಿಟದಿ ಬಾ | ಲೆ— |
ಬಲ್ಲವ—ಕ್ರೀ | ಡಿಪ ವಿನೋದಗ | ಳೆಲ್ಲವ—ಸಮ | ರತಿಗೆ ಸರಿಸಮ |
ನಿಲ್ಲುವ—ನೋ | ಯಿಸದೆ ಮುದ್ದಿಪ | ಗಲ್ಲನ—||
ಮೆಲ್ಲನಲುಗಿಸಿ | ಭುಲ್ಲವಿಸಿ ಮನ | ಸೊಲ್ಲಿನಲಿ ಪ್ರತಿ | ಯಿಲ್ಲೆನಿಪ ಸಿರಿ |
ವಲ್ಲಭನ ಮನ | ದಲ್ಲಿ ನೆನೆದರೆ | ಘಲ್ಲಿಸುವುದೆದೆ | ಝುಲ್ಲೆನುತ ಸಖಿ || ೧೭೨ ||

ಮಡದಿರ | ನ್ನಳೆ ನೀ ಕೇ | ಳು—ವ | ಲ್ಲಭ ತನ್ನ |
ತೊಡೆಯ ಮೇ | ಲೇರಿಸಿ | ದ— |
ನುಡಿಸಿದ—ಸರ | ಸದಲಿ ಮನವೊಡ | ಬಡಿಸಿದ—ಮ | ಲ್ಲಿಗೆ ಸುರಗಿಸರ |
ಮುಡಿಸಿದ—ಕಂ | ಚುಕವ ಸೆರಗನು | ಬಿಡಿಸಿದ— ||
ಉಡಿಮುಡಿಯ ಬೆಡ | ಗಿನಲಿ ಸಡಿಲಿಸು | ತಡಿಗಡಿಗೆ ಸುಖ | ವಡಿಸಲಾಪೆ |
ನ್ನೊಡೆಯನನು ಬಿಡೆ | ಬಿಡೆ ರಮೇಶನ | ಅಡಿಗೆರಗುತಡಿ | ಗಡಿಗೆ
ನುಡಿಸುವೆ || ೧೭೩ ||

ಮುದದಿ ಚ | ಪ್ಪರಮಂಚ | ದಿ—ಕುಳ್ಳಿ | ತಮರ್ದಪ್ಪಿ |
ಮುದುಡಿ ಮು | ದ್ದಿಸಿ ಮೋಹ | ದಿ— |
ಒದಗುತ—ವ | ಸ್ತ್ರಾಭರಣಗಳ | ಹುದುಗುತ ಮದ | ವೇರಿ ತಲೆಯನ |
ಗುದಿಸುತ—ಸ್ಮರ | ವಿರಹದಲಿ ಬಲು | ಕೆದಕುತ— |
ಮೃದುಕುಚವ ಪಿಡಿ | ದಧಿಕಹರುಷದಿ | ಎದೆಯೊಳಡರುತ | ಸೊದೆಯನುಣಿಸುತ |
ಹದದಿ ರಮಿಸು | ತ್ತದನು ನೆನೆದರೆ | ಕೆದರುತಿದೆ ಮನ | ಪದುಮನಯನನ
|| ೧೭೪ ||

(ದಶಾವತಾರಸಂವಾದ—ಪ್ರಶ್ನೋತ್ತರ ಪದ್ಯ)

೭೭ ರಾಗ ಆಂದೋಳಿ—ಅಷ್ಟತಾಳ ೧, ೨

ಗಳಿಗೆಗೊಂ । ದೊಂದು ರೂ । ಪ—ಧ । ರಿಸಿ ಬಂದು ।
ಪರಿಹರಿ । ಸುವಸು ತಾ । ಪ— ।
ಕರಿರಾಜ । ವರದ ನೋ । ಡಿದೆಬಂದ । ಕಾಣಕ್ಕ ।
ಪರಮಾತ್ಮ । ವಿಶ್ವರೂ । ಪ— ॥ ೧೭೫ ॥

ಹರಿಯೊಂದು । ದಿವಸದೊ । ಳು—ಬೀ । ದಿಯು ಮೇಲೆ ।
ತಿರಳುತ್ತ । ಹರುಷದೊ । ಳು— ॥
ಪರಿಪರಿ । ಯವತಾರ । ತೋರುತ್ತ । ಲಿರೆ ಕಂಡು ।
ತರುಣಿಯೊ । ರ್ವಳು ಕೇಳ್ದ । ಳು— ॥ ೧೭೬ ॥

ಅಕ್ಕ ನೋ । ಡಿವನ್ಯಾವ । ನೆ—ಗು । ರುತುಗಳು ।
ಸಿಕ್ಕವು । ಬಲ್ಲೆ ಏ । ನೆ— ॥
ಚಿಕ್ಕಪ್ರಾ । ಯದೊಳೀತ । ಚೊಕ್ಕ ಜ । ಲವ ನೋಡಿ ।
ಸೊಕ್ಕುವ । ಬಗೆಗಳೇ । ನೆ— ॥ ೧೭೭ ॥

ಪಾತಕಿ । ಖಳತಮ । ಸು—ವೇ । ದವ ಕದ್ದು ।
ಪಾತಾಳ । ಕಿಳಿಯೆ ತಾ । ನು— ॥
ಆತನ । ಭೇದಿಸಿ । ನೀತಿವೇ । ದವ ತಂದ ।
ಖ್ಯಾತ ಮ । ತ್ಸ್ಯನೆ ಯಿವ । ನು— ॥ ೧೭೮ ॥

ಚಂದವ । ನೋಡಕ್ಕ । ಯ್ಯ—ಪಾ ।, ದ ನಾಲ್ಕ ।
ರಿಂದ ಶೋ । ಭಿಪ ಮೂಲ । ವ— ॥
ಮಂದರ । ಗಿರಿಯ ನೋ । ಡುವ ಪರಿ । ಏನದ ।
ರಂದವ । ನುಡಿ ದಮ್ಮ । ಯ್ಯ— ॥ ೧೭೯ ॥

ಸುರರಿಗೆ । ಅಮೃತವ । ನು—ಸಾ । ಧಿಸಲಾಗಿ ।
ಶರಧಿಯ । ಮಥನವ । ನು— ॥
ಹರುಷದಿ । ಗೆಯ್ಯಲು । ಗಿರಿಪೊತ್ತು । ನಿಂದಂಥ ।
ಗರುವ ಕೂ । ರುಮನಿವ । ನು— ॥ ೧೮೦ ॥

ಬಲು ಉದ್ದ । ಮೋರೆಗ । ಳೆ—ನೋ । ಡಕ್ಕವ್ವ ।
ಹೊಳೆವಂಥ । ದಾಡೆಗ । ಳೆ— ॥
ಇಳೆಯುನ । ಗಿದು ಮಣ್ಣ । ಕೆದರುವ । ಪರಿಯೇನು ।
ತಿಳಿದಿದ್ದ । ರೆನಗೆ ಪೇ । ಳೆ— ॥ ೧೮೧ ॥

ಧೂರ್ತದಾ | ನವನೊರ್ವ | ನು—ಭೂ | ಮಿಯನೆಲ್ಲ |
ಸುತ್ತಿಕೊಂ | ಡೊಯ್ಯೆ ತಾ | ನು— ||
ಮತ್ತೆ ಭೇ | ದಿಸಿ ತಂದು | ಪೃಥ್ವಿಯ | ಸಲಹಿದ |
ಕರ್ತ ಕೊ | ರುಮನಿವ | ನು— || ೧೮೨ ||

ಕಡುಭಯ | ವಾಗುವ | ದ—ನೋ | ಡಕ್ಕನ್ವ |
ಘುಡುಘುಡಿ | ಸುತ ಬಹ | ದ— ||
ಪಿಡಿದಿದೆ | ಕರದೊಳು | ಕರುಳು ಮಾಂ | ಸಗಳನ್ನು |
ಸುಡಿ ಬೇಗ | ಯಾರೆಂಬು | ದ— || ೧೮೩ ||

ದುರುಳ ಹಿ | ರಣ್ಯಕ | ನು—ಶ್ರೀ | ಹರಿಯೆಂಬ |
ತರಳನ | ಹೊಯ್ಯೆ ತಾ | ನು— ||
ಪರಿಕಿಸಿ | ಕಂಭದೊಳ್ | ಜನಿಸಿ ಖ | ಳನ ಕೊಂದ |
ನರಸಿಂಹ | ನೋಡಿವ | ನು— || ೧೮೪ ||

ಉಟ್ಟಿಹ | ವೇಷ್ಟಿಯ | ನು—ಜಿ | ರಳಿನೊಳ |
ಗಿಟ್ಟ ಪ | ವಿತ್ರವ | ನು— ||
ನಿಷ್ಠೆಯ | ತೇಜದಿ | ದೃಷ್ಟಿಯೊಳ್ | ಬೆಳಗುವ |
ಪುಟ್ಟ ಬ್ರಾ | ಹ್ಮಣನ್ಯಾವ | ನೆ— || ೧೮೫ ||

ಕಲಿ ಕಟ್ಟ | ರಾಜ್ಯವ | ನು—ಆ | ಳುವ ಬಲಿ |
ಯೊಳು ಬೇಡಿ | ದಾನವ | ನು— ||
ಇಳೆಯ ಮೂ | ರಡಿಮಾಡಿ | ಇಳುಹಿ ಪಾ | ತಾಳಕ್ಕೆ |
ನಲಿವ ವಾ | ಮನನಿವ | ನು— || ೧೮೬ ||

ಜಡೆಗಡ್ಡ | ಗಳ ಜೆಳೆ | ಸಿ—ನೋ | ಡಕ್ಕವ್ವ |
ಕೊಡಲಿ ಕ | ಯ್ಯೊಳು ಧರಿ | ಸಿ— ||
ಸಡಗರ | ದಲಿ ಝಳ | ಪಿಸುತ ಹುಂ | ಕರಿಸುವ |
ಕಡುಪರಾ | ಕ್ರಮಿ ಯಾವ | ನೆ— || ೧೮೭ ||

ಧರೆಗೆ ಭಾ | ರವು ಹೆಚ್ಚ | ಲು—ದೂ | ರನೆ ಕೇಳಿ |
ಕೆರಳುತ್ತ | ರೋಷದೊ | ಳು— ||
ದುರುಳ ಕ್ಷಾ | ತ್ರರ ಕೊಂದು | ಕ್ಷಮೆಯ ಸಂ | ತಯ್ಸಿದ |
ಪರಶುರಾ | ಮನೆ ಯಿವ | ನು— || ೧೮೮ ||

ಘನ ಕಾಂತಿ । ಯುಳ್ಳವ । ನು—ನೋ । ಡಕ್ಕವ್ವ ।
ಇವನಂತ । ರಂಗವ । ನು— ॥
ಧನುಶರ । ಕರದೊಳು । ವಿನಯದಿ । ಪಿಡಿದಿಹ ।
ಜನನಾಥ । ನಿವನಾವ । ನೆ— ॥ ೧೮೯ ॥

ದಶರಥ । ಸುತನೆನಿ । ಸಿ—ತಾ । ಟಕಿಮುಖ್ಯ ।
ಅಸುರರ । ಸಂಹರಿ । ಸಿ— ॥
ಅಸಮ ರಾ । ವಣನ ಕು । ಲವನೆ ಸಂ । ಹರಿಸಿದ ।
ಕುಶಲ ರಾ । ಘವನಿವ । ನು— ॥ ೧೯೦ ॥

ಸಾಲಿನಾ । ಭರಣವ । ನು—ಅ । ಕ್ಕವ್ವ ನೋಡೆ ।
ನೀಲವ । ರ್ಣದ ಮೆಯ್ಯ । ನು— ॥
ಫಾಲದ । ತಿಲಕ ನೀ । ಲಾಂಬರ । ದುಡಿಗೆ ವಿ ।
ಶಾಲನ । ಯನ ನ್ಯಾವ । ನೆ— ॥ ೧೯೧ ॥

ಗೋಕುಲ । ಪತಿಸುತ । ನು—ಪೂ । ತನಿಮುಖ್ಯ ।
ಲೋಕದೈ । ತ್ಯರ ಕೊಂದ । ನು— ॥
ರಾಕೇಂದು । ಮುಖಿಯರ । ಮೋಹಿಸಿ । ತುರುಗಾಯ್ವ ।
ಲೋಕನಾ । ಯಕ ಕೃಷ್ಣ । ನು— ॥ ೧೯೨ ॥

ಉತ್ತಮ । ನೇ ಇವ । ನು—ನೋ । ಡಕ್ಕವ್ವ ।
ಬತ್ತಲೆ । ನಿಂತಿಹ । ನು— ॥
ಚಿತ್ತ ನಾ । ಚುತಲಿದೆ । ಕಡುಹುಚ್ಚ । ನಾರಿವ ।
ವಿಸ್ತರಿ । ಸೆನಗದ । ನು— ॥ ೧೯೩ ॥

ಸತಿಪತಿ । ವ್ರತಬಲ । ದಿ—ತ್ರಿ । ಪುರದೈತ್ಯ ।
ಪತಿಯಾಳು । ತ್ತಿರೆ ಲೋಕ । ದಿ— ॥
ಅತಿಕೃತ್ರಿ । ಮದಿ ಪೋಗಿ । ಪತಿವ್ರತಾ । ಧರ್ಮವ ।
ಹತಗೈದ । ಬುದ್ಧನಿ । ವ— ॥ ೧೯೪ ॥

ತುರಗವ । ನೇರಿಹ । ನು—ನೋ । ಡಕ್ಕವ್ವ ।
ಮೆರೆವ ಸಿ । ಪಾಯಿ ತಾ । ನು— ॥

ಕರದೊಳು । ಖಡುಗವ । ತಿರುಹುತ್ತ । ಮೀಸೆಯ ।
ಹುರಿಗೈವ । ನಿವನಾವ । ನೆ— ॥ ೧೯೫ ॥

ಸೊಕ್ಕಿದ । ಬಲು ಮ್ಲೇಚ್ಛ । ರು—ಜ । ಗವ ಗೋ, ।
ಳಿಕ್ಕಿ ವ । ಶವ ಗೈದ । ರು— ॥
ಛಕ್ಕನೆ । ಬಂದು ಮ । ತ್ತವರ ಸಂ । ಹರಿಸಿದ ।
ಕಲ್ಕ್ಯಮೂ । ರುತಿಯುವ । ನು— ॥ ೧೯೬ ॥

ಆತಗೆ । ಜಯಮಂಗ । ಳಂ—ನೋ । ಡಕ್ಕ ಮ ।
ತ್ರೀತಗೆ । ಶುಭಮಂಗ । ಳಂ— ॥
ಈತಗೆ । ಜಯ ಶುಭ । ದಾತಗೆ । ಮ್ಮನು ಕಾಯ್ವ ।
ನಾಥಗೆ । ಜಯಮಂಗ । ಳಂ— ॥ ೧೯೭ ॥

(ಕೆಳಗಿನ ಪದ್ಯ ಹೇಳಿಕೊಂಡು ಹಾಸ್ಯಗಾರ ಬರುತ್ತಾನೆ)

೭೮ ಏಕತಾಳ ೧

ಹೂವ ತಾರೊ । ಹೂವ ತಾರೊ । ಮಾಲೆಗಾರ । ಣ್ಣ—ನಿನ್ನ ।
ಹೂವಿ,ನ । ಬೆಲೆಯ ಹೇಳೆ । ಬೈಲೂರ ಚಿ । ಣ್ಣ— ॥
ಉದುರು ಉದುರು । ಮಲ್ಲಿ,ಗೆ । ಚದುರ'ವರ್ಣದ । ಕೇದಿ,ಗೆ ।
ಜಗಜ್ಯೋತಿ । ಯೆಂಬುದೆರಡು । ತಾಣದೀವಿ । ಗೆ— ॥ ೧೯೮ ॥
ಚಿತ್ತರದ । ಬೊಂಬೆ—ಇ । ನ್ನಿತ್ತ ಬಾರೆ । ತುಂಬೆ, ಏ । ತುಂ,ಬೇ . . . .

(ಕೆಳಗಿನ ಪದ್ಯ ಹಾಡಿಕೊಂಡು ಅಭಿನಯದಿಂದ ಕುಣಿಯುತ್ತಾನೆ)

೭೯ ನವರೋಜು—ಏಕತಾಳ ೪

ಆಹಾ, ಇಂ । ಥವನಲ್ಲಿ ಸ್ನೇ । ಹವೇ ಸ । ಖಿ— ।
ದೇಹ ಒಂದೆಂ । ದು ಮಾತಾಡಿ । ಮೋಹಿಸಿ ವಂ । ಚನೆ ಮಾಡಿ । ಆಹ್ಹಾ—
ನಿನ್ನಾಣೆ ಮು । ಸ್ಸಂಜೆಗಿಂದು । ಚೆನ್ನಾಗಿ ಬ ।ರುವೆನೆಂದು ।
ಕಣ್ಣ, ನೀ । ರನ್ನೆ ಒರಸಿ । ಕೆನ್ನೆಗೆ ಮು । ತ್ತಿಟ್ಟು ಪೋದ ॥
ಹೆಣ್ಣಿನ ಮಗ । ನಾಗಿ ಹುಟ್ಟ । ಕನ್ನಡಜಾ । ಣೆಯ ಕೈಮುಟ್ಟ ।
ಮುನ್ನೂರು ದೇ । ವ್ರಾಣೆ ಕೊಟ್ಟು । ಬನ್ನೂರು ಕ । ಟ್ಟೆಲಿ ಬಿಟ್ಟ ॥
ಅಂಥಾ, ಇಂ । ಥವನಲ್ಲಿ । ಸ್ನೇಹವೇ । —ಛೀಛೀ ।
ಸ್ನೇಹವೇ ಸ । ಖೀ— ॥ ೧೯೯ ॥

(ಆಮೇಲೆ ಭಾಗವತರ ಪದ್ಯ)

೮೦ ಏಕತಾಳ ೩

,ಹೋಗಿ । ಹೇಳಮ್ಮ । ,ಬೇಗದಿಂ । ದವಗೆ— ॥ ಪಲ್ಲವಿ ॥

ಹೋಗಿ ಹೇ । ಳಮ್ಮ ಹೊತ್ತು । ,ಹೋಗದಿ । ನ್ನೆನಗೆ— ।
ಭೋಗಿಶ । ಯನು ಬಾ । ,ರನೆ ಎನ್ನ । ಮನೆಗೆ— ॥ ೨೦೦ ॥

,ಕಣ್ಣಮು । ಚ್ಚಲು ನಿದ್ರೆ । ,ಬಾರದಿಂ । ದೆನಗೆ— ।
,ಬಣ್ಣಿಸಿ । ಮಾತಾಡ । ಸೇರದಿಂ । ದೆನಗೆ— ॥ ೨೦೧ ॥

,ಹೆಣ್ಣು ಸ । ಣ್ಣವಳೆಂದು । , ಕಡುದಯೆ । ಬೀ,ರಿ— ।
,ಕಣ್ವಪು । ರೀಶ ಬ । ,ರಲಿ ಒಂದು । ಬಾರಿ— ॥ ೨೦೨ ॥

(ಸ್ತ್ರೀವೇಷಗಳು ಹೊರಟುಹೋಗುವುವು)

(ಸ್ತ್ರೀವೇಷಗಳು ಹೊರಟುಹೋದ ಮೇಲೆ ಸಾಂಪ್ರದಾಯಿಕವಾಗಿ ರಾಮನ ಒಡ್ಡೋಲಗವಾಗುವುದು. ಇದು ಪ್ರಸಂಗದ ಕಥೆಗೆ ಸಂಬಂಧಿಸಿದ್ದಲ್ಲ. ಆಡುವ ಪ್ರಸಂಗ ಯಾವುದೇ ಆಗಿದ್ದರೂ ಸಭಾಲಕ್ಷಣದಲ್ಲಿ ಒಮ್ಮೆ ರಾಮನ ವೇಷ ಬರುವುದು 'ರಂಗಸ್ಥಳ ಸಂಪ್ರದಾಯ'. ಇದಕ್ಕೆ 'ರಂಗಾವತಾರ'ವೆನ್ನುತ್ತಾರೆ. ಆಗ ಮೊದಲಾಗಿ ಭಾಗವತರು ಕ್ರಮದಂತೆ ಹಾಡಲಿಕ್ಕಿರುವ ವೃತ್ತಗಳು ಹೀಗಿವೆ:

೮೧ ಶಾರ್ದೂಲವಿಕ್ರೀಡಿತ

ಪ್ರಾಪ್ತಾನಂತಘನಶ್ರಿಯಃ ಪ್ರಿಯತಮಃ ಶ್ರೀ ರೋಹಿಣೀಜನ್ಮನೋ ।
ವಂಚಿಕ್ಷ್ಮಾವರ ವೀರಕೇರಳವಿಭೋ ರಾಜ್ಞಃ ಸ್ವಸೋಃ ಸೂನುನಾ ।
ಶಿಷ್ಯೇಣ ಪ್ರವರೇಣ ಶಂಕರಕವೇ ರಾಮಾಯಣಂ ತನ್ಯತೇ ।
ಕಾರುಣ್ಯೇನ ಕಥಾಗುಣೇನ ಕವಯಃ ಶೃಣ್ವಂತು ತತ್ ಕರ್ಣಯೋಃ ॥ ೨೦೩ ॥

ಧಾತ್ರೀಗುತ್ತಮಕಣ್ವನಾಮಪುರದಿಂ ನಿಂತಿರ್ದ ಶ್ರೀ ಕೃಷ್ಣನಾ ।
ಸತ್ಪಾದಾಂಬುಜದಿವ್ಯನಾಮಬಲದಿಂದೀ ಪಾರ್ವತೀನಂದನಂ ।
ಬತ್ತೀಸಾಕೃತಿ ರಾಗ ತಾಳವಿಧದಿಂ ರಾಮಾಯಣಂ ಪೇಳ್ವುದಾ ।
ಭಕ್ತಿಧ್ಯಾನದಿ ಕೇಳ್ದು ಪುಣ್ಯಕಥೆಯಂ ಸಂತೋಷಮಂ ಮಾಳ್ಪುದು ॥ ೨೦೪ ॥

ರಾಮಂ ಶ್ಯಾಮಾಭಿರಾಮಂ ರವಿಶಶಿನಯನಂ ಕೋಟಿಸೂರ್ಯಪ್ರಕಾಶಂ ।
ದಿವ್ಯಂ ದಿವ್ಯಾಸ್ತ್ರಪಾಣಿಂ ಶರಮುಖಜಲಧಿಂ (?) ಚಾರುಕೋದಂಡಹಸ್ತಂ ।

ಕಾಲಂ ಕಾಲಾಗ್ನಿರುದ್ರಂ ರಿಪುಭಯಶಮನಂ ವಿಘ್ನವಿಚ್ಛೇದದಕ್ಷಂ
ಭೀಮಂ ಭೀಮಾಟ್ಟಹಾಸಂ ರಘುಕುಲತಿಲಕಂ ರಾಮಚಂದ್ರಂ ನಮಾಮಿ||೨೦೫||

ಥಾಪೈತಕತಾ— (ಚೆಂಡೆಮದ್ದಳೆಕಾರರು ವೇಷ ಬರಮಾಡುವ 'ಧೀಂಗಿಣ' ಹೊಡೆಯುವಾಗ ರಾಮನ ವೇಷವು ತೆರೆ ಹಿಡಿಯದೆ ಕುಣಿದಾಡಿಕೊಂಡು ಬರುವುದು.)

೮೨ ಪದ್ಯ—ಏಕತಾಳ ೩ (ವಿಲಂಬಿತ)

ಆಡು । —ತಾ ।ಡುತ, । ಬಂದ, । ನೋಡೆ । —ಶ್ರೀ । ರಾಮ, । ಚಂದ್ರ ||
ನೋಡುವ । ರಿಗೆ ದಯ । ಮಾಡುವ । ಗುಣನಿಧಿ । ಬೇಡುವ । ರಿಗೆ ಕೈ ।
ನೀಡುತ । ವರವ || ಪಲ್ಲವಿ ||

ಮಲ್ಲಿ । —ಗೆ । ಹೂವಿ, । ನಂಥಾ । ಮೆಯ್ಯ । —ಪರಿ । ಮಳಿಸುವ । ನಯ್ಯ ।
ಫುಲ್ಲ । —ಲೋ । ಚ,ನ, । ಕಾಮ, । ನಯ್ಯ— ||
ಕಲ್ಲಾ । ಗಿ ಬಿದ್ದ । ಹಲ್ಯೆಯ । ಸಲಹಿದ । ಕಲ್ಯಾಣಾಂ ।
,ಗ ಭೂ । ವಲ್ಲಭ । ರಾಮ || ೨೦೬ ||

(ರೂಪಕತಾಳ)

ಹೇ, ಕಮಲ । ಜಾತವಿನುತ । ಸುಮನಸಾದಿ । ವಂದಿತ ।
ಕಮಲನಯನ । ವಿಮಲರೂಪ । ಸಾಕೇತಾಧಿ । ಪ— || ೨೦೭ ||

ಮಣಿಮುಕುಟಾ । ಲಂಕಾರ, । ದಿನಮಣಿವಂ । ಶಕುಮಾರ ।
ವಿನತಜನಂ । ದಿತಪಾದ, । ದೇವರದೇ । ವ ವಿನೋದ || ೨೦೮ ||

(ರಾಮನ ವೇಷ ಆಸನವನ್ನೇರಿ ಕುಳಿತುಕೊಳ್ಳುವುದು)

ಹಾಸ್ಯಗಾರ—

ಆಹೋ ಹೋ-ಹೋ, ಸಬ್ರು ಮಾಡು ಸಬ್ರು ಮಾಡಯ್ಯ. ಭೋ ಪರಾಕ್ರಮಶಾಲಿಯೇ ಸ್ವೈ. ಹಂಗಾದ ಮೇಲೆ ಶೃಂಗಾರವಾಗಿ, ಎಳೆ ಮೀಸೆ ಹೊಂತಕಾರನಾಗಿ, ನಾವಾಡುವಂಥ ರಂಗಸ್ಥಳದಲ್ಲಿ ಬಂದು ಪುಡಿಹಾರಿಸಿ ಮಂಡಿಸಿಬಿಟ್ಟಿದ್ದೀಯಲ್ಲಾ. ಅಂಟನೋ, ಬಂಟನೋ, ಚಾರಕನೋ, ಜೋರಕನೋ (ಚಾಕರನೋ, ಜೋಕರನೋ) ತಳವಾರನೋ, ಜಟ್ಟಿಗನೋ, ಗಟ್ಟಿಗನೋ, ಗುಳಿಗನೋ ಯಾರ್ಲೇಉ ?

ರಾಮ—

ಅಯೋಧ್ಯಾಪಟ್ಟಣಕ್ಕೆ ಯಾರೂಂತ ಕೇಳ್ತಿದ್ದಿ ?

ಹಾಸ್ಯಗಾರ—

ಶ್ರೀ ರಾಮರಾಜಾಂತ ಕೇಳಿದ್ದೇವೆ, ಆದ್ರೆ—ರಾಜರು ಆನೆ, ಕುದುರೆ, ಒಂಟೆ, ರಥ, ಗಿಥ, ಮಂದಿ, ಮಾರ್ಬಲ ಸಮೇತ ಹೊರಟುಬರ್ತಾರೆ. ನಿನ್ನ ಪಡಿಬಿಡಾರ ಎಲ್ಲ್ಯಂಟು ?

ರಾಮ—

ಎಲ್ಲಾ ತಯಾರಾಗಿರ್ತಾರೆ.

ಹಾಸ್ಯಗಾರ—

ಆದದ್ದಿಲ್ದೆಹೋದ್ರೆ ಯಿಾಟು ತಯಾರು ಮಾಡಬೇಕಲ್ಲ ? ಈ ಕೈಯಲ್ಲೇನಿದು, ಕತ್ತಿ ? ಆ ಕೈಯಲ್ಲಿ—ಢಾಲು ?

ರಾಮ—

ಶರಕೋದಂಡಗಳು.

ಹಾಸ್ಯ—

ಸರಕು—ದಂಡ—ಗಳು, ಒಳ್ಳೇಸಾಧಕಬಲ್ಲ್ಯಾ, ಹನ್ನೆರಡೊರ್ಷ ಸಾಧಕಾ ಮಾಡಿ ಮನೇಲಿದ್ದ ಮುದುಕೀಟೊಂಕ ಮುರಿದವನೇ ಮೆಚ್ಚಿದೆ; ಈಗ ಜಟ್‌ಪಟ್, ಬಂದಂಥಾ ಕಾರ್ಯಾಕಾರಣ ?

ರಾಮ—

ಲೋಕೋದ್ಧಾರಕ್ಕಾಗಿ ಬಂದಿರ್ತೇವೆ, ಮುಂದೆ ಮಾಡತಕ್ಕಂಥ ಕಾರ್ಯಗಳು ಅನೇಕ ಇರುತ್ತವೆ.

(ಭಾಗವತರು ಕೆಳಗಿನ ಪದ್ಯ ಹಾಡುವುದು, ರಾಮನ ವೇಷವೂ ಹಾಸ್ಯಕಾರನೂ ಜೊತೆಯಲ್ಲಿ ಕುಣಿಯುವುದು)

೮೩ ರಾಗ ಕೇದಾರಗೌಳ—ಏಕತಾಳ ೮

ದೇವ ದೇ । ವ— । ದಯಾಸಾಂ । ದ್ರ— ।
ಭಾವಿಸೆ । ನಾ— । ಮುದದಿಂ । ದ ॥ ೨೦೯ ॥

ನಂಬಿದವ । ರಾ— । ನಂದದಿಂ । ದ— ।
ಬೆಂಬಿಡ । ದೇ— । ಪೊರೆವ ಧೀ । ರ ॥ ೨೧೦ ॥

ಕರುಣನಿ । ಧೇ— । ಕರಿವರ ।ದ— ।
ಉರಗಶ । ಯ— । ಗರುಡರ । ಥ— ॥ ೨೧೧ ॥

ಮುರಮಥ | ಸ — | ಸಿರಿಯುರ | ಸ _ |
ಪೊರೆಯೆ | ಸ್ನ— | ಗುರುರಾ | ಯ— || ೨೧೨ ||

ಕುಂದರದ | ನಾ — | ನಂದಶರ | ಧೇ— |
ವಂದಿಸುವೆ | ಗೋ— | ವಿಂದ ಸಲ | ಹೋ— || ೨೧೩ ||

೮೪ ಪದ, ಭೈರವಿ—ಏಕತಾಳ ೩

ಪಾಹಿ ರ | ಘೊತ್ತಮ | ರಾಮ— | — ದೇವ |
ಪರಮದ | ಯಾಳೋ | ರಾಮ— || ೨೧೪ ||

ದಶರಥ | ನಂದನ | ರಾಮ— | —ದೇವ |
ಅಯೋಧ್ಯಾ | ಪಾಲಕ | ರಾಮ— || ೨೧೫ ||

ಪಟ್ಟಾಭಿ | ಷೇಕವಿ | ರಾಮ— | — ದೇವ |
ರಾವಣ | ಮರ್ದನ | ರಾಮ— ||
ಜಯ ಜಯ | ನಂದನ | ರಾಮ— || ೨೧೬ ||

(ರಾಮನ ವೇಷ ಹಾಸ್ಯಕಾರ ಸಮೇತ ಹೊರಟುಹೋಗುವುದು. ಆಮೇಲೆ ಸಮಯಾವಕಾಶವಿದ್ದಂತೆ, ಕೆಲವೊಂದು ಕಟ್ಟುಹಾಸ್ಯಗಳನ್ನು ಪ್ರಯೋಗಿಸುವುದುಂಟು—ಆಚಾರ್ರ ಹಾಸ್ಯ, ಜಂಗಮರ ಹಾಸ್ಯ, ರಾಂಬೈರಾಗಿ ಹಾಸ್ಯ, ಒತ್ತೆಬೈರಾಗಿ ಹಾಸ್ಯ, ಹಿಂಡು ಬೈರಾಗಿ ಹಾಸ್ಯ, ವಾಲೆಕಾರರ ಹಾಸ್ಯ, ಊರ ಮಡಿವಾಳನ ಹಾಸ್ಯ, ತೆಂಕ (ಮಲೆಯಾಳ) ಮಡಿವಾಳನ ಮೂಕ ಹಾಸ್ಯ, ಅಂಡುಕುಟ್ಟ ಹಾಸ್ಯ, ಕೊರವಂಜಿ ಹಾಸ್ಯ, ಸಿಂಗರಪಾಟು ಹಾಸ್ಯ, ಇತ್ಯಾದಿ. ಸಭಾಲಕ್ಷಣ ಗ್ರಂಥದಲ್ಲಿ ವಿಸ್ತಾರವಾಗಿ ಗದ್ಯರೂಪದಲ್ಲಿರುವ ಅವುಗಳನ್ನೆಲ್ಲ ವಿಸ್ತರಭಯದಿಂದ ಪ್ರಕೃತ ಕೈಬಿಟ್ಟು, ಕೊನೆಯದಾದ ಅರಿಪ್ಪಾವಿನಾಟದ ಪದ್ಯಗಳನ್ನೂ 'ಬೋಯಿಬ್ರಾಣ' (ಬೋಯಿ = ಬೆಸ್ತ ; ಬ್ರಾಣ = ಬ್ರಾಹ್ಮಣ) ಹಾಸ್ಯದ ಕೊನೆಯಲ್ಲಿರುವ ಒಂದು 'ದಿಬ್ಬಣಗರ ಸೋಬಾನೆ' ಹಾಡನ್ನೂ ಕೆಳಗೆ ಕೊಡಲಾಗಿದೆ.)

ಅರಿಪ್ಪಾವಿನಾಟದ ಪದ್ಯಗಳು

೮೫ ವೃತ್ತ (ಹಳೆಮಲೆಯಾಳಿ ಭಾಷೆ)

ಚೂರಿಯಾ ಕುಲತ್ತಿಲೆಂದೀ | ಚುಮುಗ ರಾಜೇಂದ್ರನೆನ್ನಾನ್ |
ಬಾರಿಯಕ್ಕಳಿಯುಡನ್ ತಾನ್ | ವೇಂಟಿಯಾ ಜೈದಿ ವರೆಣಂ |
ವೀರಿಯಾನ್ನವೆಳತ್ ನಾರೀ | ಆರಿಯಾ ಕದೆಯಲ್‌ವಡ |
ಅರುದಿನಂ ಕಾಪುತಾನೇ | . . . .

೮೬ ಪದ—ಏಕತಾಳ

ಬಾಳೋಡು | ಪಾಡಿಜ್ಜೈಲ | ದೇ—ಏ | ಕನ್ನಿಗಾರ |
ಮಾರ್‌ಮಾಲ | ತ್ತೊಂದಿನಾ, | ನೆ— ||

ಕಟ್ಟ್ಸಾರಿ । ಕ್ಕೊಂಡು ನೀ । ಯುಂ ಹೈ । ಕೈವೆಡಿಚ್ಚಾಲ್ ।
ಕಟ್ಟವರ್ । ಕಂಗಳೊಡ । ತ್ಯಾ— ॥
ನೆಟ್ಟನ್ನಾ । ಯೊಡರುಡ । ತ್ಯಾ—ಏ । ಲರಿವೈಯಾ ।
ಎಡುತ್ತುಕ್ಕೊಂ,। ಡೋಡಿ ಪೋ,।ಯ— ॥
ಚಂದ್ರಮು,। ಕ್ಕಳ್ ಕಣ್ಣಿ । ಯಾ — ॥
ಎಡುತ್ತುಕ್ಕೊಂ, । ಡೋಡಿ ಪೋ,। ಯ— ॥
ಎವನಡಾ । ಇಂಗೆ ವ । ನ್ನಾ ಯೆನ್ನುಡೇ । ಕ್ಕಣವನೋಡೆ ।
ಬವನ್ನತ್ತಿ । ಲೇರಿವ । ನ್ನ— ।
ಅಂದವ, । ರರಿವರುಂ,। ಡಾ— । — ।
. . . . . . . . . . . . . . . . . . ।
ಅವಗಡಾ । ಮಾಗುತ । ನ್ನೆಯವನೆ ಞಾನ್ । ಕಣ್ಣಿಲ್ ಕಂಡಾಲ್ ।
ಆಡಿತ್ತೋಡಿ । ಯೋಡಿ ವ । ನ್ನಾಲ್ — ।
ಅಪ್ಪೋ,ಡಿ । ಕೊಲ್ಲುವೇನ್ । ಞಾನ್ — ॥

### ೮೭ ರಾಗ ತೋಡಿ—ಏಕತಾಳ

ಚಂದಣ ಕ್ಕ । ಸ್ತೂರಿ ಪೂಶಿ । ಬೊಟ್ಟಣಿ । ತ್ತಾನ್ — ।
ಕುಂದಮಿಲ್ಲ । ಕ್ಕೈವೆಡಿತ್ತ್ಯಾ । ಲಂಬು ವಾಡ್ । ತ್ತಾನ್— ।
ಸೌಂದರಿಯಾ । ರಿಯನ್ ರಾಜಾ । ಚುಮುಗಂ ನ್ನಡ । ತ್ತಾನ್— ।
ತದ್ದಿ ಕಿತಕ ತೋಂ,ಗದಿಕಿತಕ । ತದ್ದಿ ಕಿತಕ । ತೋಂ,ಗದಿಗಿತಕ ।
ತಾತ್ತೈತಾದಿತ್ತಾ ದದಿಗಿಣತೋ— ॥ — ತಾಧಿಮಿತಕ ।

(ಚಪ್ಪುರವಾಂಚ, ದ್ರುತ)

ತಿರುವೆಯಾಲ್ । ಭೋಜರಾಜ ।
ಮೆರುವೆಯಾ । ಕ್ಕಟ್ಟಲೋಡೆ ।
ಮಣ್ಣನ್ ತೂಣಿ । ಲೆಡುತ್ತುವಡಾ ।
ಅರುವೈಯೂಡಿ । ಕ್ಕಪ್ಪಾಲನ್ ।
ಅಪ್ಪೋ,ರಿ । ಕ್ಕೊಲ್ಲುವೇನ್ । ಞಾನ್— ॥

### ೮೮ ಚೂರ್ಣಿಕೆ

ವೇಶಿಪ್ಪೋನವ್ । ಭೋಜರ್ಮಗಳೇ । ಇಳಿಂದು
ಕ್ಕೊಂಡು ವಂದೇ । ದಮು ಮಾಂಶಿಮಾಂ (?) ।

ಮಂದಾಮಾರು । ತನ್ನೆ ಪಾತಾ । ಳಂತಂನೆ, । ತೊಂಡಿನಾನೇ ।
ವೇಶಿಪ್ಪೋನಮ್ । ಭೋಜರ್ಮಗ । ಳೇ— ॥

೮೯ ಪದ—ಆದಿತಾಳ

ನೆಟ್ಟನೆ ಜೇದೆ ಭೋಜರಾಜನ್ । ಕುವರಿ ಆರುಂ । ಅರಿಯಾ ಮೇಲೆ ।
ತಾನೇ ಭೋಜರಾಜನ್ ಕುವರಿ । ಎನ್ನೊಳು । ತ್ರಂಟರೊಂಡು ।
ಮೋಪಕನ್ನಿಗಾರ— ॥
ತಾದಿಮಿತಕದಿಂದತ್ತಾಂ . . . . . . (ಮುಂದೆ ಗ್ರಂಥಪಾತ)

(ಬೋಯಿಬ್ರಾಹ್ಮಣ ಹಾಸ್ಯದಲ್ಲಿ ಅವನಿಗೂ ಭಾಗವತರಿಗೂ ನಡೆಯುವ ಸಂಭಾಷಣೆ, ಹೊಟ್ಟೆ ಹುಣ್ಣಾಗುವ ನಗುಪಾಟಲಿನ ಮಾತುಗಳು. ಸ್ಥಳವೆಲ್ಲಿ ಎಂದು ಕೇಳಿದರೆ 'ಕುರ್ಚಿಪಳ್ಳ' (ಮಂಜೇಶ್ವರಕ್ಕೆ ಸಮೀಪ)ವೆನ್ನುತ್ತಾನೆ. ಎಲ್ಲಿಂದೆಲ್ಲಿಗೆ ಪ್ರಯಾಣವೆಂದು ಕೇಳಿದರೆ "ಮಂಗ್ಳೂರಿಂದ ಕಾಸರೋಡಿಗೆ ಒಂದು ಗುತ್ತು, ಅಲ್ಲಿಂದ ಕಣ್ಣಾನೂರಿಗೆ ಒಂದು ಗುತ್ತು, ಅಲ್ಲಿಂದ ಕೊಚ್ಚಿಗೆ ಒಂದು ಗುತ್ತು" ಎನ್ನುತ್ತಾನೆ. ಸುದೀರ್ಘವಾದ ಈ ಸಂಭಾಷಣೆಯ ಕೊನೆಗೆ ಭಾಗವತನು, 'ಒಂದು ಪಾಟು ಹೇಳ್ತೀರೋ ಉಪಾಧ್ಯರೇ' ಎಂದು ಕೇಳುತ್ತಾನೆ. 'ಎಂಥಾ ಪಾಟು'—ಎಂದು ಬ್ರಾಹ್ಮಣ ಕೇಳಿದ್ದಕ್ಕೆ ಭಾಗವತನು 'ಮದುವೆಪಾಟು ಹೇಳಿ' ಎನ್ನುತ್ತಾನೆ. ಆಗ ಹಾಸ್ಯಕಾರನು ತಂಬೂರಿ (ಏಕನಾದ) ಹಿಡಿದುಕೊಂಡು ಬಂದಿರುತ್ತಾನೆ. ಆ ಶ್ರುತಿಗೆ ಬ್ರಾಹ್ಮಣ ಹೇಳುವ ದಿಬ್ಬಣಿಗರ ಹಾಡು.)—

೯೦ ಸೋಬಾನೆ

ಮುತ್ತು ಬೇಕೆ, ಚಪ್ಪರಕೆ, ಮುತ್ತು ಬೇಕೆ ಚಾವಡಿಗೆ ।
ಮುತ್ತು ಬೇಕೆ, ಮಗಳ, ಮದುವೇಗೆ— ।
ಮದುವೇಗೆಂದವಳಪ್ಪ, ಮುತ್ತಿನ ಹಡಗ, ತರಿಸಿದ— ॥ ಸೋಬಾನೆ ॥

ಚಿನ್ನ ಬೇಕೇ ಚಪ್ಪರಕೆ, ಚಿನ್ನ ಬೇಕೆ ಚಾವಡಿಗೆ ।
ಚಿನ್ನ ಬೇಕೆ, ಮಗಳ, ಮದುವೆಗೆ— ।
ಮದುವೆಗೆಂ,ದವಳಪ್ಪ, ಚಿನ್ನದ, ಹಡಗ, ತರಿಸಿದ— ॥ ಸೋಬಾನೆ ॥

ಉದ್ದಿನ, ಗದ್ದೆಲಿ ಇದ್ದೆವು ನಮ್ಮ ದಿಬ್ಬ,ಣ ।
ಬುದ್ಧಿವಂತ ಮಾವನ ಬರಹೇಳಿ— ।
ಬರಹೇಳಿ ನಮಗೊಪ್ಪುವ ಮೂಡಣುಪ್ಪರಿಗೆ, ಸಮಲಲಿ— ॥ ಸೋಬಾನೆ ॥

ಹೆಸರಿನ ಗದ್ದೆಲಿ ಪಸರಿದೆ ನಮ್ಮ ದಿಬ್ಬಣ ।
ಹೆಸರುಳ್ಳ ಮಾವನ ಬರಹೇಳಿ— ।
ಬರಹೇಳಿ ನಮಗೊಪ್ಪುವ ತೆಂಕಣುಪ್ಪರಿಗೆ ಸಮಲಲಿ— ॥ ಸೋಬಾನೆ ॥

ಬಂದರೆ ಕೇಳುವರಿಲ್ಲ ನೊಂದರೆ ನುಡಿವವರಿಲ್ಲ ।
ಬಂದಿರೇ ಯೆಂಬಮಾತು ಮೊದಲಿಲ್ಲ— ।
ಮೊದಲಿಲ್ಲ ಬೀಯಗರೆ ನೊಂದೆವಿಂದಿನ ದಿನದಲ್ಲಿ— ॥ ಸೋಬಾನೆ ॥

ಬಂದಿರೇ ಅಕ್ಕಗಳಿರ ಬಂದಿರೇ ಅಮ್ಮಗಳಿರ ।
ಬಂದಿರೇ ದಿನದ ಬಿಸಿಲಲ್ಲಿ— ।
ಬಿಸಿಲಲಿ ನಿಮ್ಮ ಮಕ್ಕಳಿಗೆ ಪಾನಕಪನಿಯಾರ ಕೊಡಿಸ್ಯೇವು—॥ ಸೋಬಾನೆ ॥

ಹತ್ತಿ ಬೆಟ್ಟ ತುಳಿದು (ಇಳಿದು) ಕಾಲ್ಗಳು ನೊಂದವು ।
ಹತ್ತು ಕೊಪ್ಪರಿಗೆ ಬಿಸಿನೀರು— ।
ಬಿಸಿನೀರ್ನಿಂಬೇಹಣ್ಣು ಬೇಗದಿಂದೆಮಗೆ ಬರಲಿಲ್ಲ— ॥ ಸೋಬಾನೆ ॥

ನೊಂದಿರಕ್ಕಗಳಿರ ನೊಂದಿರಮ್ಮಗಳಿರ ।
ನೊಂದಿರಿಂದಿನದ ಹಗಲಲ್ಲಿ— ।
ಹಗಲಲಿ ಬಂದವರಿಂಗೆ ಬೊಂಡ ಸಕ್ಕರೆಯ ಕೊಡಿಸ್ಯೇವು ॥ ಸೋಬಾನೆ ॥

ಸಿರಿಮಹಾ । ಲಕ್ಷ್ಮೀದೇವಿ । ಲಾಸನೆ । ಜಯ ಜಯ ।
ನಿರತಸು । ಧಾಬ್ಧಿನಿ । ವಾಸನೆ । ಜಯ ಜಯ ।
ಸುರಮುನಿ । ಮಾನಸ । ಹಂಸನೆ । ಜಯ ಜಯ ।
ಪರಮ,ಪೂ । ರು,ಷ,।ನೇ—। ಹ,ಸೆ—। ಗೇ— । ಳು ॥ ಸೋಬಾನೆ ॥

೯೧ ಮಂಗಲಪದ, ರಾಗ—ಸೌರಾಷ್ಟ್ರ ಏಕತಾಳ ೩

ಮಂಗಳ । ಜಯಜಯ । ಮಂಗಳ । ಜಯಜಯ ।
ಮಂಗಳ । ಜಯ ಪರ । ಮೇಶನಿ । ಗೆ— ॥ ಪಲ್ಲವಿ ॥

ಅಂಗಜ । ಹರನಿಗೆ । ಮಂಗಲ । ಕರನಿಗೆ ।
ಸಂಗೀತ । ಗಾನವಿ । ಲೋಲನಿ । ಗೆ— ॥
ಗಂಗೆಯ । ಶಿರದೊಳು । ಧರಿಸಿ ಮೆ । ರೆವ ಮಹಾ ।
ಲಿಂಗೇ । ಶ್ವರಗೆ ನಿ । ರಾಮಯ ।ಗೆ — ॥ ೨೧೭ ॥

ಭಕ್ತೋ । ದ್ಧಾರಗೆ । ಶಕ್ತ್ಯಾ । ಧಾರಗೆ ।
ಮುಕ್ತಿಸಾ । ಕಾರಗೆ । ಮುನಿನುತ । ಗೆ— ॥
ಭುಕ್ತಿ ಮು । ಕ್ತಿಯನಿತ್ತು । ಭಜಕರ । ಸಲಹುವ ।
ಭಕ್ತೋ । ದ್ಧಾರಗೆ । ಪುರಹರ । ಗೆ— ॥ ೨೧೮ ॥

ಈಶಗೆ । ಇನಶತ । ಭಾಸಗೆ । ದೈತ್ಯವಿ ।
ನಾಶಗೆ । ಸನ್ನುತ । ತೋಷನಿ । ಗೆ— ॥
ರೋಷದಿ । ತ್ರಿಪುರರ । ಸುಟ್ಟುರು । ಹಿದ ಸ ।
ರ್ವೇಶ ಶ್ರೀ । ಸಾಂಬಸ । ದಾಶಿವ । ಗೆ— ॥ ೨೧೯ ॥

ಧಾತ್ರಿಯೊ । ಳಧಿಕವಾ । ಗಿರುವ ಮ । ಧೂರ ಸು ।
ಕ್ಷೇತ್ರದೊ । ಳಗೆ ನೆಲ । ಸಿರುವವ । ಗೆ— ॥
ಕರ್ತೃ ಶ್ರೀ । ಲಕ್ಷ್ಮೀ । ವೆಂಕಟಾ । ಚಲನ ಸ ।
ನ್ಮಿತ್ರ ಶಂ । ಕರ ವಿ । ಘ್ನೇಶ್ವರಿ । ಗೆ— ॥ ೨೨೦ ॥

ಮಂ — ಗ । ಲಂ ಜಯ । ಮಂ— ಗ । ಲಂ— ॥

ಇಂತೀ ಸಭಾಲಕ್ಷಣಂ ಸಂಪೂರ್ಣಂ ಮಂಗಲಮಹಾ

# ಕ್ಲಿಷ್ಟಶಬ್ದಾರ್ಥ

(ಸಂ--ಸಂಸ್ಕೃತ; ತ್ಭ-ತದ್ಭವ; ತು-ತುಳು; ಮ--ಮಲೆಯಾಳಂ;
ಹಿಂ-ಹಿಂದಿ; ಇಂ-ಇಂಗ್ಲಿಷು; ನಾ-ನಾಮಪದ; ಕ್ರಿ-ಕ್ರಿಯಾಪದ)

ಅಂಗ--ಕಾರ್ಯಭಾರ, ಸನ್ನಾಹ
ಅಂಗವಣೆ-ಪರಾಕ್ರಮ, ಯುದ್ಧಕೌಶಲ್ಯ
ಅಂತರಿಲ್ಲದ-ಅನುಪಮವಾದ, ನಿರಾತಂಕವಾದ
ಅಂತರಿಸು-ಸಹಿಸು, ತಡೆದುಕೊಳ್ಳು
ಅಂತ್ರ--ತ್ಭ. ಅಂತರ, ಸರ್ತಿ
ಅಗರಜ-ತ್ಭ. ಅಗ್ರಜ
ಅರ್ಗಳಿಯ-ಬೊಬ್ಬಿಡುವ, ಗರ್ಜಿಸುವ
ಅಘುರಟ್ಟ-ಧೈರ್ಯಶಾಲಿ, ಪರಾಕ್ರಮಿ
ಅಟಕಟಿಸು-ಮುಂದೊತ್ತಿ ಅಣೆದುಬರು
ಅಟ್ಟೆ-ಅಸ್ಥಿಪಂಜರ
ಅಡಕು (ತು)-ಕ್ರಿ. ಎಸೆ, ಕಳೆದುಬಿಡು
ಅಯಚಿಸು (ಮ)-ಕಳುಹಿಸು, ರವಾನಿಸು
ಅರಿ(ತು)-ಕ್ರಿ.ಹನಿಯು, ತೊಟ್ಟಿಕ್ಕು, ಸ್ರವಿಸು
ಅರೆ-ನಾ. ಕಲ್ಲು, ಕ್ರಿ. ಮರ್ದಿಸು
ಅಸಡ್ಡೆ-ಉಪೇಕ್ಷೆ, ಅಲಕ್ಷ್ಯ

ಆಣೆ-ತ್ಭ. ಆಜ್ಞೆ
ಆತುಗೊಳ್ಳು-ಇದಿರಿಸು, ಪ್ರತಿಭಟಿಸು
ಆಸರು (ತು)-ಬಾಯಾರಿಕೆ
ಆದು-ಆಯ್ದುಕೊಂಡು
ಆಳು-ನೀರಿನಲ್ಲಿ ಮುಳುಗು

ಇಂಗಡಲು-ಕ್ಷೀರಸಮುದ್ರ
ಇಡು-ಧರಿಸಿಕೊಳ್ಳು, ಹಾಯ್ಕು, ಹೊಡೆ, ಎಸೆ, ತೊಡಿಸು
ಇಡುಕು-ಕ್ರಿ. ಎಸೆ, ಬೀಳಿಸು
ಇನಿಂಕ್ (ತು)-ನಿನಗೆ

ಈಸರ-ಇಷ್ಟರ, ಈ ವಿಧದ; ತ್ಭ. ಈಶ್ವರ

ಉಡಾಪಿ-ಥಟ್ಟನೆ ತಾಳದ ಗತಿ ಬದಲಾಯಿಸುವುದು
ಉದಾಸೀನ-ಆಲಸ್ಯ, ಉಪೇಕ್ಷೆ
ಉದ್ದುರುಟುತನ-ಒರಟುತನ, ಹಟಮಾರಿತನ
ಉಪ್ಪರಿಸು-ಉಬ್ಬು, ಮೇಲಕ್ಕೆ ಬರು
ಉಪ್ಪರಿ-ಉಕ್ಕಿ ಮೇಲಕ್ಕೆ ಬರುವುದು, (ಮ. ಉಪ್ಪು + ಇಱಿ)
ಉರುಬೆ-ಉಪಟಳ, ಆಕ್ರಮಣ

ಎಡಪೂರು-ಕಾಸರಗೋಡು ತಾಲೂಕಿನಲ್ಲಿ ಒಂದು ಪ್ರಸಿದ್ಧ ಶಿವಕ್ಷೇತ್ರ
ಎಡೆಮಾಡು-ಊಟಕ್ಕೆ ಎಲೆ ಹಾಕಿ ಬಡಿಸು
ಎನಕು-ಎನ್ನಬೇಕು
ಎಸಗಿತು-ಸಂಪ್ರಾಪ್ತವಾಯಿತು, ಅಕಸ್ಮಾತ್ ಸಂಭವಿಸಿತು.
ಎಳಸಲಾರದು-ಎಬ್ಬಿಸಲಿಕ್ಕೆ ಬಾರದು, ಕೀಳಲಿಕ್ಕೆ ಅಸಾಧ್ಯವಾದುದ್ದು

ಏನ್ (ತು)-ನಾನು

ಒಟ್ಟು-ರಾಸಿಹಾಕು
ಒಡವೆ-ಆಭರಣ
ಒಡ್ಡರು-ಮಣ್ಣಿನ ಕೆಲಸದವರು
ಒದಗು-ಸಕಾಲಕ್ಕೆ ಬಂದು ಸೇರು, ನೆರವಾಗು, ವೃದ್ಧಿಗೊಳ್ಳು
ಒಪ್ಪ-ಚಂದ, ಚೊಕ್ಕ
ಒಸಗೆ-ಸಂಭ್ರಮದ ವಾರ್ತೆ, ಉಡುಗೊರೆ ಉಚಿತ್ರ
ಒಸೆ-ಕದ್ದು ಸುಳಿದಾಡು (ಮ. ಒಜಿ) ಮರೆಯಲ್ಲಿ ಹೊಂಚುಹಾಕು

ಒಸರಿಕೆ-ಶ್ರೇಣಿ, ಸಮೂಹ

ಕಂಪಣ-ಒಂದು ಆಯುಧವಿಶೇಷ
ಕಕ್ಕುಲಿತೆ-ಕಳವಳ, ಸಖೇದಾಶ್ಚರ್ಯ
ಕನಪು (ತು)-ಕಷ್ಟ, ಕೋಟಲೆ
ಕಣಿ-ಅದೃಷ್ಟ ಹೇಳುವ ಕೊರವಿಹೆಂಗಸು
ಕಬ್ಬಿ (ತು. ಕಬ್ಬು)-ಕರುಬಿ, ಹಿಂಜರಿದಂತೆ ನಟಿಸಿ, ಅಡಗಿ
ಕರೆಹ-ಹಾಲು ಕರೆಯುವಿಕೆ, ಕರೆಯುವ ಎಮ್ಮೆದನ
ಕಸರಿಕೆ-ಒಡಕು, ಮತ್ಸರ, ಮನಃಕ್ಲೇಶ
ಕಾರಗರ-ತ್ಭ. ಕಾರಾಗೃಹ, ಸೆರೆಮನೆ
ಕಾರಣೀಕ-ದೈವೀಶಕ್ತಿಯುಳ್ಳ
ಕುಕ್ಕೆನಗರ-ಘಾಟಿ ಸುಬ್ರಹ್ಮಣ್ಯ ಕ್ಷೇತ್ರ
ಕುಡುಮುಪುರ-ಧರ್ಮಸ್ಥಳ ಕ್ಷೇತ್ರ
ಕುನಿಸಿ-ಕುಗ್ಗಿಸಿ, ಗಿಡ್ಡಮಾಡಿ
ಕುರುಕು (ತು)-ಮರವನ್ನು ಅಲುಗಾಡಿಸು
ಕುರುಜು-(ತು.ಗುರುಜಿ),ಜೀದಿ ಅಲಂಕಾರಕ್ಕೆ ಎತ್ತರಿಸಿ ಕಟ್ಟುವ ವಸ್ತ್ರದ ಗುಡಿ (ಇಂ.ಟವರ್)
ಕುಳೀರ-ಸಂ. ಕರ್ಕಟಕರಾಶಿ
ಕೆಡಗು-ಬಸವಳಿದು ಬೀಳು, ಸೋತುಬೀಳು
ಕೇಣ-ಯುಕ್ತಿ, ಕಸುವು
ಕೊಡಸಿಗೆ-ತ್ಭ. ಕುಟಜ, ಕೊಡಗಸೆ ಮರ
ಕೊಪ್ಪು-ಮೇಲು ಕಿವಿಯ ಆಭರಣ
ಕೊಯ್ಯ-ಕೊಯ್ಯಲಿಕ್ಕಾಗಿ
ಕೊಸರು-ಸಂಕಟ, ಆತಂಕ
ಕೋಡಿಮುಟ್ಟ (ತು)-ತುದಿವರೆಗೆ
ಕೋಲ (ತು)-ದೈವ ಕುಣಿಸುವ ಆರಾಧನೆ
ಕೋವಿ-ಹೊಗೆನಳಿಗೆ, ಗುಡಿಗುಡಿ ಸೇದುವ ಕೊಳವಿ

ಖಗಾಶ್ವ-ಗರುಡವಾಹನ, ವಿಷ್ಣು
ಖರೆ (ಮ)-ನಿಜ, ಸರಿ

ಗಕ್ಕಸ-ತ್ಭ. ಕರ್ಕಶ
ಗಯಾಳಿ-ನಿರ್ದಯಳಾದ ಹೆಂಗುಸು
ಗಾರುಡಿಗ-ವಿಷವೈದ್ಯ

ಗೂಳಿ-ಸರ್ಪ, ವಿಷಜಂತು
ಗೂಳೆಯ-ದಂಡು, ಠಾಣ್ಯ
ಗೆತೊಣು (ತು.)- ಕ್ರಿ. ತೆಗೆದುಕೊಳ್ಳು

ಘೋರಿಸು-ತೀವ್ರಗೊಳಿಸು

ಚಪ್ಪರಿ-ಕ್ರಿ. ಜಗಿದು ತಿನ್ನು
ಚಾಯ-ಬಣ್ಣ, ಮುಖಕಾಂತಿ
ಚಾಲ್ (ಮ)-ಹುಸಿಮಾತು, ವೃಥಾಲಾಪ
ಚಾಲ್ವರಿದು-ಮುಂದೊತ್ತಿ, ಅಹಮಹಮಿಕೆಯಿಂದ
ಚಿನ್ನ-ಆಭರಣ
ಚಿಳ್ಳಿ (ತು)-ಮೊಮ್ಮಕ್ಕಳ ಮಗು
ಚೀನಿವಸ್ತ್ರ-ರೇಷ್ಮೆವಸ್ತ್ರ
ಚೊಟು-ಉಗುರುಗಳಿಂದ ಚಿವುಟು
ಚೌಲಿ-ಮುಂದಲೆಯ ಆಭರಣ—ಮುತ್ತಿನ ಗೊಂಚಲು

ಜಂಗುಲಿ-ಗುಂಪು, ಸಂದಣಿ
ಜಂಬಾರ (ತು)-ಕೆಲಸ, ಊಳಿಗ
ಜಗದುಪತಿ-ತ್ಭ. ಜಗತ್ಪತಿ
ಜರಿ (ತು)-ಮಣ್ಣಿನ ದರೆ, ಕ್ರಿ. ಜಾರಿಬೀಳು, ಕುಸಿ
ಜಾಯೆಗ್ (ತು)-ಯಾಕೆ, ಯಾವುದಕ್ಕಾಗಿ
ಜಾಳಿಸು-ದ್ರವಪದಾರ್ಥದಲ್ಲಿ ಅಂಗೈಯಾಡಿಸು, ಅಂಗೈಯಿಂದ ಸವರು
ಜೋತ್ರೊ (ತು)-ತ್ಭ. ಧೌತವಸ್ತ್ರ, ದೋತಿ, ಉಡುವ ಬಿಳಿಪಂಚೆ
ಜೆಪ್ಪು (ತು)-ಜಜ್ಜು, ಹೊಡೆ

ಝಾಯ-ಜಗಳ, ವಾದವಿವಾದ

ಠಕ್ಕರಿ-ಮೋಸಗೊಳಿಸು
ಠಾಣದೀವಿಗೆ-ತ್ಭ. ಸ್ಥಾನದೀಪಕಾ, ಸ್ತಂಭದೀಪ

ಡೊಂಬಿ-ಹೊಡೆದಾಟ, ಪುಂಡುಗಾರಿಕೆ

ತಂಬಿಲ (ತು)-ದೈವ್ವದ ಅರ್ಚನೆ
ತಡಸು-ಕ್ರಿ. ತಡೆಹಿಡಿ, ನಿವಾರಿಸು, ಒರಸು
ತನುಮಧ್ಯ-ತ್ಭ. ತನ್ಮಧ್ಯ
ತರವಾಡ್ (ಮ)-ಕುಟುಂಬದ ಮನೆ, ಜನ್ಮ
ತಾಕೀತಿ-ಕಟ್ಟಪ್ಪಣೆ
ತಾರಣ-ತರಣೋಪಾಯ, ಪರಿಹಾರ
ತಾಳಿಲ-ತ್ಭ. ಸ್ಥಾಲೀಯ, ಪಲ್ಯ
ತಿಣ್ಣ, ತಿಣ್ಣು-ಭಾರ, ಘನವಾದ ಹೊರೆ
ತಿದ್ದು (ತು)-ಯಥೋಚಿತ ಹಂಚಿಕೊಡು
ತುಲಾಭಾರ-ದೇಹಕ್ಕೆ ಸರಿತೂಗುವ ಹರಕೆ ದ್ರವ್ಯ
ತ್ರೂಳು-ಹೊರಚಿಮ್ಮು
ತೊಡರಿತು-ಕಾಣಿಸಿಕೊಂಡಿತು
ತೊಡು (ತು)-ತಿನ್ನಬೇಕೆಂಬ ಆಸೆ, ಜಿಹ್ವಾಚಾಪಲ್ಯ
ತೊಡೆ-ಕ್ರಿ. ಉಜ್ಜು, ಒರಸು, ಲೇಪಿಸು
ತೋಟ-ತಳ್ಳಿ, ಗೋಜಿ
ತೆಬ್ಬು-ಬಿಲ್ಲಿನ ಹಗ್ಗ, ಸಿಂಜಿಕ ನಿ

ದಕ್ಷಿಣಯಾತ್ರೆ-ಸ್ಮಶಾನದ ಕಡೆಗೆ ಪಯಣ
ದರ್ಪಕ-ಮನ್ಮಥ
ದಿನಿಸು (ತು)-ಸ್ವಭಾವ, ವೈಮಾಟ, ನೋಟ ವರ್ಚಸ್ಸು, ಥೋರಣೆ
ದೀರ್ಘಮನ-ಅತ್ಯುನ್ನದೇಹವುಳ್ಳ
ದುಷ್ಮಂತ (ಹಿಂ)-ಶತ್ರು
ದೇಹರೊಂಕುಳೆ (ತು)-ದೇವರುಗಳನ್ನು

ಧಕ್ಕಡಿಗತನ-ಸಾಹಸ, ದಿಟ್ಟತನ

ನಂದಿಪೂ (ಮ)-ಮಂಜಟಿ ಹೂ, ನಂದಿ ಬಟ್ಟಲ ಹೂ
ನವಾಯ್ತರು-ತುರ್ಕಿ ಮುಸಲ್ಮಾನರು
ನಾಜವಮಾತು-ವಿನೋದಕ್ಕಾಡುವ ಹುಸಿಮಾತು
ನಿಂಜೋಲ (ತು)-ತುಂಬಿಸು
ನಿದಾನಿಸು-ಕಾರಣವನ್ನು ತಿಳಿ, ಮೂಲ ಶೋಧಿಸು
ನಿವಾಳಿ-ತೆಗೆದುಹಾಕಲ್ಪಟ್ಟವಳು, ನೀತಿಭ್ರಷ್ಟಳಾದ ಹೆಂಗುಸು

ನೀಟು-ಸಾಲು; ನೀಟನಲಿ-ಸಾಲಾಗಿ
ನೀತ-ನೀತಿ, ವಿನಯ
ನೀರಡಿಕೆ-ಬಾಯಾರಿಕೆ
ನುಣ್ಣಗಳೆ-ಸಂಪೂರ್ಣ ತಿರಸ್ಕರಿಸು
ನುಸಿ-ಸೊಳ್ಳೆ
ನೆಗ್ಗು-ಮೇಲಕ್ಕೆತ್ತು, ನೆಟ್ಟಗೆ ನಿಲ್ಲಿಸು
ನೆನಿಸು, ನನಿಸು-ಬೆಂಕಿ ಆರಿಸು
ನೆರೆಯದು-ಸರಿತೂಗದು, ಹೊಂದಿಕೆಯಾಗದು
ನೇವಳ-ಚಿನ್ನ ಅಥವಾ ಬೆಳ್ಳಿಯ ಉಡುದಾರ

ಪಂಕ್ತಿರಥ-ದಶರಥ (ಪಂಕ್ತಿ-೧೦)
ಪಂಚ-ತ್ಭ. ವಂಶ-ಬಿದಿರು
ಪತ್ತಡ (ತು)-ಮುಟ್ಟುಬೇಡ (ಪತ್ತು-ಕ್ರಿ. ಮುಟ್ಟು)
ಪದುವಾಯಿ-(ತು. ಪದ್ದೋಯಿ) ಆಭರಣ
ಪನಿವಾರ, ಪನಿಯಾರ (ತು)-ಹೆಸರಬೇಳೆ ಬಾಳೆಹಣ್ಣು ಬೆಲ್ಲ ಬೆರಸಿಮಾಡುವ ಸೀ ಕೋಸಂಬರಿ
ಪರುಶವ-ಆಗ್ರಹ, ತುಡುಕಾಟ
ಪಾಂಚಾಳರು (ಪಂಚಾಳರು)-ಕಬ್ಬಿಣ, ಚಿನ್ನ, ಮರ, ಕಂಚು, ತಾಮ್ರಗಳ ಪ್ರತ್ಯೇಕ ಕೆಲಸಗಾರರು
ಪಾಜ-ತ್ಭ. ಪಾಯಸ
ಪಾತ್ರೊಂಟೇ (ತು)-ಪಾತ್ರದಲ್ಲಿಯೇ
ಪಾರಾಗು-ಕೆಟ್ಟುಹೋಗು
ಪಾಳುಮಾಡು-ನಿರಾತಂಕಗೊಳಿಸು, ಹಂಚಿಕೊಡು
ಪುಳ್ಳಿ (ತು)-ಮೊಮ್ಮಗ ಅಥವಾ ಮೊಮ್ಮಗಳು
ಪುಳುಂಚು (ತು)-ಕೈಬೆರಳುಗಳಿಂದ ಹಿಳಿದು ಹಿಸುಕು
ಪೂರ-ಸಂಪೂರ್ಣವಾಗಿ, ತುಂಬ
ಪೆರಡಿ, ಪೆರಡೆ (ತು. ಪೇರಡ್ಯೆ)-ಹಾಲ್ಬಿಟ್ಟು ಪರಮಾನ್ನ
ಪೆಲೆ (ತು)-ವ್ಯಭಿಚಾರ
ಪ್ರಸ್ತ-ಭೂರಿಭೋಜನಸಮಾರಂಭ

ಬಚ್ಚರು-ತ್ಭ. ಬಚ್ಚ-ವತ್ಸ, ಮಕ್ಕಳು

ಬಟ್ಟಿ (ತು,ಮ)–ಮಣ್ಣು ತುಂಬಿಸಿ ಹೊತ್ತು ಕೊಂಡೊಯ್ಯಲಿಕ್ಕಿರುವ ಕುಕ್ಕೆ
ಬಣ್ಣಗಾರಿಕೆ–ಉಚಿತಧರ್ಮ, ಒಪ್ಪುವ ರೀತಿ
ಬಲಿದಿಹರು–ಬೆಳೆದಿರುವರು
ಬಲಿಮುಖರು–ಕಪಿಗಳು
ಬಾಣನೆಡೆ (ಬಾಣನಡೆ)–ಬಾಣದಿಂದ ಮಾಡಿದ ಸೋಪಾನಮಾರ್ಗ
ಬಾಮ (ತು)–ಆಕಾರ, ವೈಮಾಟ, ನೋಟ, ಸಾದೃಶ್ಯ
ಬಾವಲಿ–ನಡುಕಿವಿಯಲ್ಲಿ ತೂಗಾಡುವ ಆಭರಣ
ಬಿಟ್ಟಿ–ಸಂಬಳವಿಲ್ಲದೆ ದುಡಿಯುವ ಉಚಿತ ಸೇವೆ
ಬಿನ್ನೊತ್ತಲೆ–ತ್ಭ. ವಿಜ್ಞಾಪನ ಪತ್ರ, (ಭಿನ್ನಹ ಪತ್ರ, ಬಿನ್ನವತ್ತಳೆ)
ಬಿಸಮಾಸನ–ತ್ಭ. ಬಿಸರುಹಾಸನ–ಬ್ರಹ್ಮ
ಬೀಯಗ–ಬಾಗಿಲ ಬೀಗ
ಬೀಸುರುಳಿದ–ಬೀಸಿ ಉರುಳಿದ, ಕೆಡೆದು ಬಿದ್ದ
ಬೂಟು (ತು)–ಜಂಭದ ಮಾತು, ಆತ್ಮ ಶ್ಲಾಘನೆ, ಬಡಾಯಿ
ಬೆಳಕೆಣ್ಣೆ–ದೀಪ ಉರಿಸಲಿಕ್ಕಿರುವ ಎಣ್ಣೆ
ಬೇಟ–ಕಾಮಚೇಷ್ಟೆ, ಹುಡುಗಿಯರ ನೋಟ
ಬೇವ–ಬೇಹುಗಾರಿಕೆಯನ್ನು
ಬೈಲಾಸ–ತ್ಭ. ಬಹಿರ್ವಾಸ, ಉತ್ತರೀಯವಸ್ತ್ರ
ಬೊಂಡ (ತು)–ಎಳನೀರು, ಸೀಯಾಳ

ಭಾಳ–ಬಹಳ, ಹೆಚ್ಚು
ಭೋಗ–ಉಪಪತ್ನಿ, ಅಂತಃಪುರದ ಸ್ತ್ರೀ

ಮಂಡಿ–ರಥದಲ್ಲಿ ಕುಳಿತುಕೊಳ್ಳಲಿಕ್ಕಿರುವ ಪೀಠ
ಮಂಡೆ (ತು)–ಮಣ್ಣಿನಿಂದ ಮಾಡಿದ ದೊಡ್ಡ ಪಾತ್ರ
ಮಚ್ಚೆ–ತ್ಭ. ಮಕ್ಷ, ಕಪ್ಪು ಕಲೆ
ಮನ್ನರಧಿಪ–ರಾಜಾಧಿರಾಜ, ಚಕ್ರವರ್ತಿ
ಮನ್ನೆಯರು–ವೀರರು, ಅರಸರು
ಮಾಂತ (ತು)–ಎಲ್ಲ
ಮಾನಿನಿಮಾರ್ (ಮ)–ಸ್ತ್ರೀಜನರು
ಮಾಪು (ತು)–ಹಿಂತಿರುಗು, ಬದಲಾಗಿಸು
ಮಿಸುನಿ–ಪ್ರಕಾಶವುಳ್ಳ (ಚಿನ್ನ, ರತ್ನ)
ಮೀಟು–ಮಿಗಿಲು, ಅತಿಶಯ, ಮೇಲು
ಮುಕ್ಕು (ತು)–ತಿನ್ನು, ಕಬಳಿಸು
ಮುತ್ತಾರ (ತು)–ಮೂರುಸರ್ತಿ
ಮುತ್ತು (ತು)–ನಾಶ, ಅವಸಾನ
ಮುಸು–ಮುಖದ ಮೇಲೆ ಕೂದಲು ಮುಸುಕಿರುವ ಒಂದು ಜಾತಿಯ
ಮೂಳಿ–ಕಿಡುಗೇಡಿ, ಬಾಯ್ಬಡಕಿ
ಮಿಣ್ಣಗೆ–ಸುಮ್ಮನೆ, ಮಿಸುಕಾಡದೆ
ಮೇಗಲ–ಎದೆಯನ್ನು ಮಾತ್ರ ಮುಚ್ಚು
ಕೆ
ದಾರಕ್ಕೆ ಸಿಕ್ಕಿಸುವ ಉಟ್ಟಸೀರೆಯ ಒಂದು
ಮೇರುವೆ–(ಮೇರ್ವೆ) ರಾಜಬೀದಿಯಲ್ಲಿ ಅಲಂಕಾರಕ್ಕೆ ಕಟ್ಟುವ ವಸ್ತ್ರದ ಮೇಲ ಅಥವಾ ಚಪ್ಪರ
ಮೈಲೆ (ತು)–ಅಶುದ್ಧ, ಕೊಳೆ
ಮೊಗದೊಳ್–ಪ್ರಾರಂಭದಲ್ಲಿ, ಮೊದಲ
ಬ
ಮೋಕ್ಷಕಾದ–ಅಸುನೀಗಿದ, ಮುಕ್ತಿಹೊಂ
ಮೋರೆ (ತು)–ಹಣೆ, ಮುಖ

ಯವನಪರಿಮಳ-ಪಾರ್ಸಿಗಂಧ(ಸಂ.ಯಾ

ರಂಗುವಾಲೆ–ಕಿವಿಗೆ ಹಾಕುವ ಬಣ್ಣದ ಓ
(
ರಂಬಿಸುವ–ಗಲಭೆ ಮಾಡುವ, ಬೊಬ್ಬಿಡು
ರಚ್ಚೆ (ತು)–ಕುಚೋದ್ಯ, ನಿಂದೆ, ಅವ
ರಾಕಟೆ–ಹೆಡತಲೆಯ ಆಭರಣ
ರಾಜಸ–ರಾಜಧರ್ಮ, ಪೌರುಷ
ರೂಢಿ–ಭೂಮಿ, ಲೋಕ
ರೋಡು–ಕ್ರಿ.ಸಿಟ್ಟಿಬ್ಬಿಸು, ಹೆಣಗು,ಹೋ

ವರ್ಮ–ಹಗೆತನ, ಗರ್ವ
ವಾಯಿನಿ (ಮ)–ವಾಚಕಿ, ಓದುವವಳು
ವಾರಣೆಸು–ತಡೆಯು, ಪ್ರತಿಭಟಿಸು
ವಾಸಿ, ವಾಶಿ (ಮ)–ಮತ್ಸರ, ಹಗೆತನ,
ವೆಗ್ಗಳ–ಹೆಚ್ಚಳ, ಕಠಿಣ

ಲ್ಲಿ ಒಲೆದಾಡುವ ಆಭರಣ ವಿಶೇಷ ?

–ಶುದ್ಧದಲ್ಲಿ, ಶುಚಿಯಾಗಿ

ರಣೋತ್ತರಕ್ರಿಯೆ, ಊರ್ಧ್ವದೈಹಿಕಕರ್ಮ

–ತ್ಛ. ಸಂಜ್ಞೆ, ಸಂಕೇತ, ಸೂಚನೆ

–ಸಂದುಹೋಯಿತು, ತೀರಿತು

ದೆ–ಕ್ರಿ.ಹೊಡೆ, ಕೊಲ್ಲು, ನಾಶಪಡಿಸು

ಮೇತ–ಸಮಾನ, ಸೇರಿಕೊಂಡ

ಂಗಾಡಿ–ಬಿಲ್ಲು

ಂಗಂ (ಮ)–ತ್ಛ. ಸುಖಂ

ರುಟು–ಸುರುಳಿಸುತ್ತು, ಆಕುಂಚಿಸು

ರ್ವಿಡು–ಉಸಿರಾಡು, ಚೇತರಿಸು

ರುಕು, ಚಟುವಟಿಕೆ

ಗರ

ಯಾಳು

ಸೋಪಸ್ಕರ–ಉಪಾಹಾರದ ಸಲಕರಣೆ, ತಿಂಡಿತಿನಿಸು

ಸೋಹ–ಸೋವನ್ನು, ಅಡಗಿರುವ ಸ್ಥಳವನ್ನು

ಹಗುಳ–ತ್ಛ. ವಕುಲ, ರೆಂಜೆಮರ

ಹಟ್ಟಿ–ತ್ಛ. ಗೋಷ್ಠ, ಗೋಶಾಲೆ

ಹತ್ತಕಡಗ–ಕೈಯಬಳೆ

ಹದರು–ನಾ.ವಿಸ್ತಾರ, ಅಂತರಂತರ

ಹಸನ–ರೀತಿಯನ್ನು (ಹಸನು–ರೀತಿ)

ಹರಿಗೆ–ವೃತ್ತಾಕಾರದ ಥಾಳು, ಹರಿವಾಣ

ಹರಿಬ–ಅವಸ್ಥೆ, ಪಾಡು

ಹಳು–ಕೇಡು, ಮತ್ಸರ, ಗೋಚರ

ಹುಳುಕು–ಹುಡುಕು

ಹೆಡಗೆ–ದೊಡ್ಡ ಕುಕ್ಕೆ

ಹೇರಂಬನಕ್ಕರ–'ಶ್ರೀಗಣಾಧಿಪತಯೇ ನಮಃ' ಎಂಬ ಅಕ್ಷರಾರಂಭವಾಕ್ಯ

ಹೊಲ್ಲೆಹ–ಹೊಲೆಕೆಲಸ, ಕೆಡುಕು

## ಒಪ್ಪೋಲೆ

| ಪುಟ | ಪಙ್ಕ್ತಿ | ತಪ್ಪು | ಒಪ್ಪು |
|---|---|---|---|
| ೩ | ೭ | ಕೊಟ್ವಾರಕರಕರ | ಕೊಟ್ವಾರಕರ |
| ೮ | ೭ | ಹಲಬುತಿರೆ | ಹಲುಬುತಿರೆ |
| ೯ | ೭ | ಬಲ್ಲೆದರಯು | ಬಲ್ಲಿದೆರೆಯು |
| ೧೦ | ೭ | ನೇಮುನ | ನೇಮುವ |
| ೧೫ | ೬೧ | ನಂತವೊ | ನಂತನೊ |
| ೧೫ | ೬೨ | ದಶರಶ | ದಶರಥ |
| ೧೫ | ೬೩ | ಬಾಧವರ | ಬಾಂಧವರ |
| ೧೫ | ೬೪ | ದ್ಯರೆಗೆಂದು | ದ್ಯರಿಗೆಂದು |
| ೧೫ | ೬೪ | ಸಾಮಿಪ್ಯದಿ | ಸಾಮೀಪ್ಯದಿ |
| ೧೬ | ೬೮ | ರಚಿಪೆ | ರಚಿಸೆ |
| ೧೬ | ೭ | ಅಮುರಿರಿಂ | ಅಮರರಿಂ |

| ಪುಟ | ಪದ್ಯ | ತಪ್ಪು | ಒಪ್ಪ |
|---|---|---|---|
| ೧೭ | ೭೨ | ಶಶರಥ | ದಶರಥ |
| ೨೪ | ೧೦೦ | ಅಯಿದ್ದ ಸೆವ್ರ | ಅಯಿದ್ದ ದೆವು |
| ೩೩ | ೧೪೬ | ನಿಮೆಲ್ಲರ | ನಿಮ್ಮೆಲ್ಲರ |
| ೩೩ | ೧೪೭ | ಪಿಡಿಲಸಂತೆ | ಸಿಡಿಲಿನಂತೆ |
| ೩೭ | ೧೬೫ | ಶಾಮು | ರಾಮು |
| ೧೦೧ | ೨೦೮ | ನದಿಗಳಂ | ಗಂಗೆಯಂ |
| ೧೦೭ | ವ | ಇಂತಿಂದೆ | ಇಂತೆಂದ |
| ೧೨೨ | ೩೨೭ | ಬಹ್ಮಚರ್ಯ | ಬ್ರಹ್ಮಚರ್ಯ |
| ೧೨೨ | ೩೩೦ | ಚೆನ್ನನೋಡೆಂದು | ಬೆನ್ನಸೋಡೆಂದು |
| ೧೫೯ | — | ಅಷ್ಟತಾಳ ೩೪ | ಅಷ್ಟತಾಳ ೨ |
| ೧೬೭ | ಟ | ದಂಗಳಿಂ | ಪಳಂಗಳಿಂ |
| ೧೭೧ | — | ತ್ರಿವುಡೆತಾಳ | ರೂಪಕತಾಳ |
| ೧೭೬ | ೭೩ | ಅಷ್ಟತಾಳ | ಮಟ್ಟೆತಾಳ |
| ೧೮೦ | ೨೪೪ | ಪತಿಯೊಡನೆ | ಸತಿಯೊಡನೆ |
| ೧೯೮ | ೨೪ | ಶತಬಲ | ಶತಬಲಿ |
| ೨೧೭ | ೧೩೧ | ಸತಿಯುಸು | ಸತಿಯರನ್ |
| ೨೪೨ | ೨೬೨ | ಬಿಚ್ಚಿ | ಕಚ್ಚಿ |
| ೨೬೩ | ೬೫ | ವಿವಿಲ್ಲದೆ | ವಿಲ್ಲದೆ |
| ೨೬೪ | ೭೧ | ವಿಸ್ತ್ರಾರ | ವಿಸ್ತಾರ |
| ೨೬೪ | ೭೧ | ಶಾಸ್ತ | ಶಾಸ್ತ್ರ |
| ೨೭೭ | ೧೩೮ | ತಂಡು | ತಂದು |
| ೨೮೩ | ೧೭೩ | ನೆಲವದಿಂತು | ನೆಲವದಿರಿತು |
| ೨೮೬ | ೧೮೩ | ಕೆಲಸವಿಡು | ಕೆಲಸವಿದು |
| ೨೮೮ | ೧೯೬ | ಬಳಿಂದ | ಬಳಿಯಿಂದ |
| ೨೯೫ | ೪ | ದಗಲುದ | ದಗಲುವ |
| ೩೩೩ | ೨೦೧ | ಗೆಲುವೆನೆಂದು | ಗೆಲುವನೆಂದು |
| ೩೩೪ | ೨೦೮ | ಗೆದ್ದನುಜಸೊಡ | ಗೆದ್ದನುಜನನೊಡ |
| ೩೫೧ | — | ವಿಭೀಷಣ___ | ದೇವತೆಗಳು.__ |
| ೩೯೫ | ೧೦೦ | ಪಗೆಯವರಿಗೆ | ಪಗೆಯವರ್ಬೆಡ |
| ೪೪೦ | ೩೬೭ | ಮರಳು | ಮರುಳು |
| ೫೩೬ | ೧೨೧ | ದಂತೀದ್ರಂ | ದಂತೀಂದ್ರಂ |
| ೫೭೭ | ೩೭೮ | ಬೆನಿಗೆ | ಬೆನ್ನಿಗೆ |
| ೫೯೩ | ೪೭೯ | ಆಮ । ದಿವ್ಯ | ಆ ಮಹಾ । ದಿವ್ಯ |
| ೬೧೪ | ೫೮ | ಸ್ತ್ರಿಷ್ಟಂತಿ | ಸ್ತ್ರಿಷ್ಠಂತಿ |
| ೬೧೯ | ೮೧ | ನಿರಚರ | ನಿಶಿಚರ |